# ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ : ಒಂದು ಸಮಾಜಶಾಸ್ತ್ರೀಯ ಅಧ್ಯಯನ



ಪಿಹೆಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಲಾದ
ಮಹಾಪ್ರಬಂಧ

ಸಂಶೋಧಕರು
**ಪ್ರಶಾಂತ್ ಹೆಚ್.ಡಿ.**
ಸಮಾಜಶಾಸ್ತ್ರ ಅಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



ಮೇ, ೨೦೦೨

# ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ : ಒಂದು ಸಮಾಜಶಾಸ್ತ್ರೀಯ ಅಧ್ಯಯನ

ಪಿಹೆಚ್.ಡಿ.ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಲಾದ
ಮಹಾಪ್ರಬಂಧ



ಸಂಶೋಧಕರು
**ಪ್ರಶಾಂತ್ ಹೆಚ್.ಡಿ.**
ಸಮಾಜಶಾಸ್ತ್ರ ಅಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಮೇ, ೨೦೦೨

25



# ಮಾರ್ಗದರ್ಶಕರ ದೃಢೀಕರಣ ಪತ್ರ

---

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಮಹಾಪ್ರಬಂಧವನ್ನು ಶ್ರೀ. ಪ್ರಶಾಂತ್.ಹೆಚ್.ಡಿ. ಅವರು ನನ್ನ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ಸಿದ್ಧಪಡಿಸಿದ್ದಾರೆಂದು ದೃಢೀಕರಿಸುತ್ತೇನೆ. ಈ ಮೊದಲು ಈ ಮಹಾಪ್ರಬಂಧವನ್ನು ಭಾಗಶಃವಾಗಿಯಾಗಲೀ ಪೂರ್ಣವಾಗಿಯಾಗಲೀ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವ ಡಿಪ್ಲೊಮೋ ಪದವಿಗೆ ಯಾವ ಭಾಷೆಯಲ್ಲಿಯೂ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ: ೩೧.೦೫.೨೦೦೨

(ಆರ್.ಇಂದಿರಾ)
ಪ್ರಾಧ್ಯಾಪಕರು
ಸಮಾಜಶಾಸ್ತ್ರ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ-೫೭೦ ೦೦೬

# ಘೋಷಣೆ

ಈ ಸಂಶೋಧನಾ ಮಹಾ ಪ್ರಬಂಧವನ್ನು ನಾನು ಸ್ವತಂತ್ರವಾಗಿ ಡಾ. ಆರ್. ಇಂದಿರಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಅಲ್ಲದೆ ಇದಕ್ಕೆಂತ ಮುಂಚೆ ಈ ಸಂಶೋಧನಾ ಮಹಾಪ್ರಬಂಧದ ಯಾವುದೇ ಭಾಗವನ್ನಾಗಲೀ ಇತರ ಯಾವುದೇ ವಿಶ್ವವಿದ್ಯಾನಿಲಯದ ಪದವಿಗೆ ಅಥವಾ ಡಿಪ್ಲೊಮೋ ಪರೀಕ್ಷೆಗೆ ಯಾವುದೇ ಭಾಷೆಯಲ್ಲಾಗಲಿ ಸಲ್ಲಿಸಿಲ್ಲವೆಂದು ಈ ಸಂದರ್ಭದಲ್ಲಿ ಪ್ರಮಾಣ ಪೂರ್ವಕವಾಗಿ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: ೩೧.೦೫.೨೦೦೨

(ಪ್ರಶಾಂತ ಹೆಚ್.ಡಿ.)
ಅಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬.

# ಕೃತಜ್ಞತೆಗಳು


♦ ನನ್ನ ಸಂಶೋಧನೆಗೆ ವಿಷಯವನ್ನು ಸೂಚಿಸಿ, ಮಾರ್ಗದರ್ಶನವನ್ನು ನೀಡಿ ಮಹಾ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನೆರವು, ಸಹಕಾರ ಮತ್ತು ಪ್ರೋತ್ಸಾಹವನ್ನು ನನ್ನ ಅಧ್ಯಯನದ ಪ್ರತಿ ಹಂತದಲ್ಲೂ ನೀಡಿದ ನನ್ನ ವಿದ್ಯಾಗುರುಗಳೂ ಮೇಲ್ವಿಚಾರಕರೂ ಆದ ಪ್ರೊ. ಆರ್. ಇಂದಿರಾ ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳು ಮೊದಲಿಗೆ ಸಲ್ಲಬೇಕು.

♦ ನನ್ನ ಅಧ್ಯಯನಕ್ಕೆ ಹೆಚ್ಚಿನ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರೊ. ಎಚ್.ಜೆ.ಲಕ್ಕಪ್ಪ ಗೌಡ ಅವರಿಗೆ.

♦ ಅಧ್ಯಯನ ಸಂದರ್ಭದಲ್ಲಿ ಸೂಚನೆ ಮತ್ತು ಎಚ್ಚರಿಕೆಯನ್ನು ನೀಡಿದ ಕುಲಸಚಿವರಾದ ಪ್ರೊ. ಕೆ.ವಿ. ನಾರಾಯಣ ಅವರಿಗೆ ಹಾಗೂ ಅಧ್ಯಯನಾಂಗದ ನಿರ್ದೇಶಕರದ ಪ್ರೊ. ಹಿ.ಚಿ.ಬೋರಲಿಂಗಯ್ಯ ಅವರಿಗೆ. ಅಧ್ಯಯನ ಸಂದರ್ಭದಲ್ಲಿ ನೆರವು ನೀಡಿ ಸಹಕರಿಸಿದ ಲಂಬಾಣಿ ತಾಂಡಾಗಳ ನಾಯಕರುಗಳಿಗೆ ಹಾಗೂ ಮಾಹಿತಿ ಒದಗಿಸಿದ ಎಲ್ಲಾ ಕುಟುಂಬಗಳಿಗೂ ಹೃತ್ಪೂರ್ವಕವಾದ ಕೃತಜ್ಞತೆಗಳು.

♦ ನನ್ನ ಅಧ್ಯಯನಕ್ಕೆ ಸಹಕಾರ ನೀಡಿದ ಅಭಿವೃದ್ಧಿ ಅಧ್ಯಯನ ವಿಭಾಗದ ಎಲ್ಲಾ ಸ್ನೇಹಿತರಿಗೆ.

♦ ಅಧ್ಯಯನ ಸಂದರ್ಭದಲ್ಲಿ ನೆರವು ನೀಡಿ ಸಹಕರಿಸಿದ ಗ್ರಂಥಾಲಯ ಸಿಬ್ಬಂದಿ ವರ್ಗಕ್ಕೆ.

♦ ಈ ಮಹಾ ಪ್ರಬಂಧವನ್ನು ಅಂದವಾಗಿ ಸಿದ್ಧಪಡಿಸಿಕೊಟ್ಟ ಗಣೇಶ್ ಕಂಪ್ಯೂಟರ್ಸ್ ಸ್ನೇಹಿತರಿಗೆ.

♦ ನನ್ನ ಸಂಶೋಧನೆಯ ಕೊನೆಯ ಹಂತದಲ್ಲಿ ವಾತ್ಸಲ್ಯದಿದ ಹೆಚ್ಚಿನ ಸಹಕಾರ, ಪ್ರೋತ್ಸಾಹ ನೀಡಿದ ನನ್ನ ಕುಟುಂಬವರ್ಗದವರಿಗೆ ಹೃತ್ಪೂರ್ವಕವಾದ ಕೃತಜ್ಞತೆಗಳು.

♦ ಅಧ್ಯಯನಕ್ಕೆ ಸಹಕರಿಸಿದ ಎಲ್ಲಾ ಆತ್ಮೀಯ ಸ್ನೇಹಿತರಿಗೆ

ನನ್ನ ತುಂಬು ಹೃದಯದ ಕೃತಜ್ಞತೆಗಳು

ಪ್ರಶಾಂತ .ಹೆಚ್.ಡಿ.

## ಪರಿವಿಡಿ

# ಕೋಷ್ಟಕಗಳ ಪಟ್ಟಿ

# ಅಧ್ಯಾಯ ೧

## ಪ್ರಸ್ತಾವನೆ

ಲಂಬಾಣಿಗಳ ಚಾರಿತ್ರಿಕ ಹಿನ್ನೆಲೆ
ಸಮಕಾಲೀನ ಸ್ಥಾನ
ಕರ್ನಾಟಕದಲ್ಲಿ ಲಂಬಾಣಿಗಳ ವಾಸಸ್ಥಾನ ಮತ್ತು ಜನಸಂಖ್ಯೆ
ಲಂಬಾಣಿಗಳ ಬಗ್ಗೆ ದೊರೆಯುವ ಕೆಲವು ಪ್ರಮುಖ ಮಾಹಿತಿ ಮೂಲಗಳು
ಅಧ್ಯಯನದ ಅವಶ್ಯಕತೆ ಮತ್ತು ಪ್ರಾಮುಖ್ಯತೆ
ಅಧ್ಯಯನದ ಉದ್ದೇಶಗಳು
ಅಧ್ಯಯನ ನಡೆದಿರುವ ಪ್ರದೇಶದ ಹಿನ್ನೆಲೆ
ಸಂಶೋಧನಾ ಮಾದರಿ
ಮಾಹಿತಿ ಸಂಗ್ರಹಣೆ
ಕ್ಷೇತ್ರಕಾರ್ಯದ ಅನುಭವ
ಮಹಾಪ್ರಬಂಧದಲ್ಲಿ ಬರುವ ಅಧ್ಯಾಯಗಳು

# ಅಧ್ಯಾಯ - ೧

# ಪ್ರಸ್ತಾವನೆ

ಸಾಮಾಜಿಕ ಚಿಂತನೆಯಲ್ಲಿ ಸಾಮಾಜಿಕ ಬದಲಾವಣೆಗೆ ಅಥವಾ ಪರಿವರ್ತನೆಗೆ ಬಹಳ ಮಹತ್ವವಿದೆ. ಬಹುಕಾಲದಿಂದಲೂ ಸಾಮಾಜಿಕ ಪರಿವರ್ತನೆಗೆ ಸಂಬಂಧಿಸಿದ ಪ್ರಶ್ನೆಗಳು ತತ್ವಜ್ಞಾನಿಗಳನ್ನು ಮತ್ತು ಸಾಮಾಜಿಕ ಚಿಂತಕರನ್ನು ಗೊಂದಲಕ್ಕೀಡುಮಾಡಿವೆ. ಸಾಮಾಜಿಕ ಪರಿವರ್ತನೆಗೆ ಕಾರಣಗಳಾವುವು, ಅದರ ಗುರಿ-ಅಂತ್ಯ ಯಾವುದು, ಎಂಬ ಪ್ರಶ್ನೆಗಳಂತೂ ಸಮಾಜ ವಿಜ್ಞಾನಿಗಳಿಗೆ ಇಂದಿಗೂ ಬಗೆಹರಿಯದ ಸವಾಲುಗಳೇ ಆಗಿವೆ. ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯು ಸರಳವಾದುದಲ್ಲ, ಅದು ಸಂಕೀರ್ಣವಾದುದು. ಈ ಪ್ರಕ್ರಿಯೆಯ 'ಒಳ ಹೊರಗನ್ನು', ಆದಿ-ಅಂತ್ಯವನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳುವುದು ಸುಲಭವಾದುದಲ್ಲ. ಅದು ವಿವಿಧ ರೂಪಗಳಲ್ಲಿ, ವಿವಿಧ ಕಾರಣಗಳಿಂದಾಗಿ, ವಿವಿಧ ವಿಧಾನಗಳಲ್ಲಿ ಸಂಭವಿಸಬಹುದು. ಸಾಮಾಜಿಕ ಬದಲಾವಣೆ ಪ್ರಗತಿಶೀಲವಾಗಿರುವಂತೆ ಪ್ರತಿಗಾಮಿಯೂ ಆಗಿರಬಹುದು. ಶಾಶ್ವತ ಸ್ವರೂಪದ್ದಾಗಿರುವಂತೆ, ಅಲ್ಪಕಾಲಿಕವೂ ಆಗಿರಬಹುದು. ನಿಯೋಜಿತವಿದ್ದಂತೆ ಅನಿಯೋಜಿತವಾಗಿರಬಹುದು. ಹೀಗೆ ಸಾಮಾಜಿಕ ಬದಲಾವಣೆಯು ವಿವಿಧ ಮಾದರಿಗಳಲ್ಲಿ ಉಂಟಾಗುವ ಸಾಧ್ಯತೆ ಪ್ರತಿಯೊಂದು ಸಮಾಜದಲ್ಲಿಯೂ ಇದೆ.

ಸಮಾಜವು ನಿತ್ಯ ಪರಿವರ್ತನಾಶೀಲವಾದುದು. ಎಲ್ಲಾ ಸಮಾಜಗಳು ಬದಲಾವಣೆಗಳನ್ನು ಆಹ್ವಾನಿಸುತ್ತವೆ. ಆದಿವಾಸಿ, ಅಲೆಮಾರಿ ಗ್ರಾಮೀಣ ಹಾಗೂ ನಗರ, ಆಧುನಿಕ - ಹೀಗೆ ಪ್ರತಿಯೊಂದು ಸಮಾಜದಲ್ಲಿಯೂ ಬದಲಾವಣೆ ಉಂಟಾಗುತ್ತಿರುತ್ತದೆ. ಆದರೆ ಬದಲಾವಣೆಯ ಗತಿಶೀಲತೆ ಮಾತ್ರ ಸಮಾಜದಿಂದ ಸಮಾಜಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಹಾಗೆಯೇ ಒಂದೇ ಸಮುದಾಯದ ಜನರು ವಿವಿಧ ಪ್ರದೇಶಗಳಲ್ಲಿ ವಾಸಿಸುವಾಗ ಬದಲಾವಣೆಯ ಗತಿಶೀಲತೆಯು ವ್ಯತ್ಯಾಸಗೊಳ್ಳುತ್ತದೆ. ಅಂತೆಯೇ, ಒಂದೇ ಸಮಾಜದ ವಿವಿಧ ಭಾಗಗಳಲ್ಲಿ ವ್ಯತ್ಯಾಸಗಳಾಗುತ್ತಾ ಆದಿವಾಸಿ, ಅಲೆಮಾರಿ ಸಮಾಜಗಳಲ್ಲಿ ಬದಲಾವಣೆಯು ನಿಧಾನಗತಿಯದ್ದಾಗಿದ್ದರೆ, ಗ್ರಾಮೀಣ ಸಮಾಜದಲ್ಲಿ ಸ್ವಲ್ಪ ಸಾಧಾರಣ ಗತಿಯದಾಗಿದ್ದು ನಗರ ಸಮಾಜದಲ್ಲಿ ತೀವ್ರಗತಿಯದ್ದಾಗಿರಬಹುದು. ಹೀಗೆ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಯು ವಿವಿಧ ಮಾದರಿಗಳಲ್ಲಿ ಕಂಡುಬರುವುದು ಸ್ವಾಭಾವಿಕವಾಗಿದ್ದರೂ ಸಾಮಾಜಿಕ ಚಿಂತಕರಿಗೆ ಇಂದೂ ಸಹ ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗದ ಸಾಮಾಜಿಕ ಪ್ರಕ್ರಿಯೆಯಾಗಿದೆ. ಈ ಹಿನ್ನೆಲೆಯಲ್ಲಿ ಲಂಬಾಣಿ ಸಮುದಾಯದಲ್ಲಿ ಉಂಟಾಗುತ್ತಿರುವ ಸಾಮಾಜಿಕ ಬದಲಾವಣೆಯನ್ನು ಚರ್ಚಿಸಲು ಪ್ರಸಕ್ತ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

**ಲಂಬಾಣಿಗಳ ಚಾರಿತ್ರಿಕ ಹಿನ್ನೆಲೆ**

ಲಂಬಾಣಿಗಳು ಕರ್ನಾಟಕಕ್ಕೆ ವಲಸೆ ಬಂದ ಅಲೆಮಾರಿ ಗುಂಪು. ೧೯ನೇ ಶತಮಾನದ ೭೦ರ ದಶಕದವರೆಗೂ ಇವರು ಅಲೆಮಾರಿಗಳಾಗಿಯೇ ಜೀವನ ನಡೆಸುತ್ತಿದ್ದರೆಂಬುದು ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ. ಲಂಬಾಣಿಗಳ ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ಹಿನ್ನೆಲೆಗಳು ಇವರ ಚರಿತ್ರೆ, ಸಾಮಾಜಿಕ-ಆರ್ಥಿಕ, ಜೀವನ ಶೈಲಿಯನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿವೆ.

ಲಂಬಾಣಿಗಳು ಸಾಂಪ್ರದಾಯಿಕವಾಗಿ ಎತ್ತಿನ ಬಂಡಿಗಳನ್ನು ನಡೆಸುತ್ತ ಸರಕು ಸಾಗಿಸುತ್ತಿದ್ದರು. ಇವರನ್ನು ಹಲವಡೆ 'ವನಚಾರಿ' (ಕಾಡಿನಲ್ಲಿ ಅಲೆದಾಡುವವರು) ಲಂಬಾಡ, ಲಮಾನಿ ಹಾಗೂ ಲಂಬಾನಿ ಎಂದು ಕರೆಯುತ್ತಾರೆ. ಇದರಲ್ಲಿ ಮೊದಲನೆ ಶಬ್ದವನ್ನು ಬಿಟ್ಟು ಉಳಿದ ಶಬ್ದಗಳು ಸಂಸ್ಕೃತದ 'ಲವಣ' ಎಂಬ ಶಬ್ದದಿಂದ ಬಂದಿದೆ. ಲವಣ ಎಂದರೆ ಉಪ್ಪು ಎಂದರ್ಥ. ಇದು ಅವರ ಮೂಲಭೂತ ವಾಣಿಜ್ಯ ವ್ಯಾಪಾರದ ಒಂದು ಸರಕಾಗಿತ್ತು (ನಂಜುಂಡಯ್ಯ ಮತ್ತು ಐಯ್ಯರ್, ೧೯೨೮ : ೧೩೫-೧೩೬). ಬಂಜಾರ ಎಂಬ ಲಂಬಾಣಿಗಳ ಇನ್ನೊಂದು ಹೆಸರು ಕೂಡ ಸಂಸ್ಕೃತದ 'ವನಚಾರ' (ಕಾಡಿನಲ್ಲಿ ಅಲೆದಾಡುವವರು ಎಂದರ್ಥ) ಎಂಬ ಪದದಿಂದ ಬಂದಿರಬಹುದು. ಲಂಬಾಣಿ ಪದದ ನಿಷ್ಪತ್ತಿಯ ಬಗ್ಗೆ ಹೆಚ್ಚಿನ ಚರ್ಚೆಯನ್ನು ಮುಂದುವರಿಸುವುದಿಲ್ಲ. ಏಕೆಂದರೆ ಲಂಬಾಣಿ ಪದದ ನಿಷ್ಪತ್ತಿಯ ಬಗ್ಗೆ ಈಗಾಗಲೇ ಹೆಚ್ಚಿನ ಅಧ್ಯಯನಗಳು ನಡೆದಿವೆ (ಖಂಡೋಬಾ, ೧೯೯೧; ಚಿದಾನಂದ ಮೂರ್ತಿ, ೧೯೭೦; ಸಣ್ಣರಾಮ, ೧೯೯೯; ನಂಜುಂಡಯ್ಯ ಮತ್ತು ಐಯ್ಯರ್, ೧೯೨೯; ಥರ್ಸ್ಟನ್; ೧೯೦೯).

ಅಲೆಮಾರಿ ಸಮುದಾಯಗಳಲ್ಲಿ ಬಹಳಷ್ಟು ಸಮುದಾಯಗಳು ತಮ್ಮ ವಂಶಾನುಕ್ರಮವನ್ನು/ಪೂರ್ವಜರನ್ನು ರಜಪೂತರು ಎಂದು ನಂಬಿದ್ದಾರೆ. ಹೀಗೆ ನಂಬಿರುವ ಸುಮಾರು ೩೬ ಅಲೆಮಾರಿ ಮತ್ತು ಅರೆ-ಅಲೆಮಾರಿ ಗುಂಪುಗಳು ಕಂಡುಬರುತ್ತವೆ. ಪ್ರಾಸಂಗಿಕವಾಗಿ ಇದು ರಜಪೂತರ ೩೬ ವಂಶದೊಂದಿಗೆ ಸಮೀಕರಿಸುತ್ತದೆ. ಅವುಗಳನ್ನು 'ರಾಯಲ್ ರೇಸ್' ಎಂದು ತೋಡ್ (೧೯೫೭) ಅವರು ಉಲ್ಲೇಖಿಸುತ್ತಾರೆ. ಇದಲ್ಲದೆ ಹಿಂದು ಧರ್ಮಶಾಸ್ತ್ರದಲ್ಲಿ ಈ ರೀತಿಯೇ ನಮೂದಾಗಿದೆ. ಲಂಬಾಣಿ/ಬಂಜಾರ ಸಮುದಾಯಕ್ಕೆ ಸಮಾನ ರೂಪದ ಸಮುದಾಯಗಳಾದ ಕಂಜರ್ ಭಟ್ಸ್, ಹಬುರ, ನಾಥ, ಸ್ನಸಿ, ಬೈರಿಯ, ಮಘಲ್, ಬ್ಯುರಿಯ, ದೋಸದಾ, ಗಾದುಲಿಯೊ ಲೋಹರ್, ಇತ್ಯಾದಿ. ಈ ಎಲ್ಲಾ ಗುಂಪುಗಳು ರಜಪೂತ ವಂಶದ ಮೂಲದವರೆಂದು ಗುರುತಿಸಿಕೊಳ್ಳುತ್ತವೆ. ಈ ಮೂಲದ ಗುಂಪಿನ ಜನರು ಅಲ್ಲಾವುದ್ದೀನ್ ಖಿಲ್ಜಿಯ (೧೨೯೬- ೧೩೧೬) ಪ್ರಭುತ್ವದ ಭಯದಿಂದ ಹಾಗೂ ಮಹಾರಾಣ ಪ್ರತಾಪ ಸಿಂಗನು ಮೊಗಲ್ ಚಕ್ರವರ್ತಿ ಅಕ್ಬರ್‌ನಿಂದ (೧೫೬೮-೧೫೭೯) ಸೋತ ನಂತರ ಮೇವಾಡ ಪ್ರದೇಶವು (ಇಂದಿನ ರಾಜಸ್ಥಾನದ ಒಂದು ಪ್ರದೇಶ) ಪರಕೀಯರಿಂದ ಬಿಡುಗಡೆಯಾಗುವವರೆಗೂ, ಹಿಂತಿರುಗುವುದಿಲ್ಲವೆಂದು ಪ್ರಮಾಣ ಮಾಡಿ ಅರಣ್ಯಕ್ಕೆ ಹೋಗುತ್ತಾರೆ. ಅರಣ್ಯಕ್ಕೆ ಹೋದ ಸಮುದಾಯಗಳಲ್ಲಿ ಲಂಬಾಣಿ ಸಮುದಾಯವು ಒಂದು. ಅರಣ್ಯಕ್ಕೆ ಹೋದಂದಿನಿಂದ ಈ ಸಮುದಾಯ ಮುಸ್ಲಿಂ ಸಮುದಾಯಗಳ ಜೊತೆ ಸಂಬಂಧವನ್ನು ಅಷ್ಟಾಗಿ ಹೊಂದಿರಲಿಲ್ಲ. ಮೇಲೆ ತಿಳಿಸಿದ ಸಮುದಾಯದ ಜನರು ರಜಪೂತ ಸಂಬಂಧವನ್ನು ಪುರಾಣ ಹಾಗೂ ಜನಪದ ಕಥೆಗಳಿಂದ ನಾವು ಕ್ಷತ್ರಿಯ ವರ್ಣಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ. ಇದನ್ನು ಗೌತಮ (೧೯೮೩: ೧೬-೧೭) ಅವರು ಕ್ಷತ್ರೀಕರಣ ಎಂದು ಗುರುತಿಸಿದ್ದಾರೆ.

ಸಂಸ್ಕೃತದ ಲೇಖಕ ದಂಡಿಯು (ಸುಮಾರು ೬ನೇ ಶತಮಾನ) ತನ್ನ ಕೃತಿ ದಶ ಕುಮಾರ ಚರಿತ್ರೆಯಲ್ಲಿ (ಹೆಸರಿನ ಮೂಲಕವಲ್ಲದಿದ್ದರೂ) ಲಂಬಾಣಿಗಳನ್ನು (೫ನೇ ಪರಿಚ್ಛೇದದಲ್ಲಿ) ಉಲ್ಲೇಖಿಸುತ್ತಾರೆ. ಇದರಿಂದ ಲಂಬಾಣಿಗಳು ಪ್ರಾಚೀನ ಬುಡಕಟ್ಟು ಸಮುದಾಯಗಳಲ್ಲಿ ಒಂದು ಎಂದು ನಾವು ಹೇಳಬಹುದು. ಲಂಬಾಣಿಗಳು ಪ್ರಾಚೀನ ಕಾಲದಿಂದಲೂ ಜೀವನೋಪಾಯಕ್ಕಾಗಿ ಧಾನ್ಯಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಎತ್ತಿನ ಬಂಡಿಯ ಮೂಲಕ ಸಾಗಾಣಿಕೆ ಮಾಡುತ್ತಿದ್ದರು. ಇವರ ಪ್ರಾಚೀನ ವೃತ್ತಿಯನ್ನು ಉಲ್ಲೇಖಿಸಿ 'ಸೇವಾ ಅಲೆಮಾರಿಗಳು' ಎಂದು ಗುಂಡಪೆಲ್ಲಾ, (೧೯೯೧: ೨೯೭-೩೦೦) ಅವರು ಗುರುತಿಸಿದ್ದಾರೆ. ಬಂಜಾರರು ದೇಶದೆಲ್ಲೆಡೆಗೆ ಯಾವ ಭಾಗದಿಂದ ಪ್ರಸರಿಸಿದರು ಎಂಬುದನ್ನು ನಿಖರವಾಗಿ ಗುರುತಿಸುವುದು ಕಷ್ಟ. ಇದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಪುರಾಣ ಮತ್ತು ಐತಿಹಾಸಿಕ ದಾಖಲಾತಿಗಳ ಸಹಾಯದಿಂದ ಇವರ ಜನ್ಮಭೂಮಿ ಉತ್ತರ-ಮಧ್ಯ ಭಾರತ ಮತ್ತು ಭಾಗಶಃ ರಾಜಸ್ಥಾನದ ಮೇವಾರ ಪ್ರದೇಶದಿಂದ,

ದೇಶದ ಎಲ್ಲಾದಿಕ್ಕುಗಳಿಗೂ ಪ್ರಸರಿಸಿರಬಹುದೆಂದು ಹೇಳಬಹುದು. ಉತ್ತರಕ್ಕೆ ಕಾಶ್ಮೀರದವರೆಗೂ ದಕ್ಷಿಣದಲ್ಲಿ ದಖನ್ ಮತ್ತು ಅದರಾಚೆಗೂ ಪೂರ್ವದಲ್ಲಿ ಉತ್ತರ ಪ್ರದೇಶದ ಪೂರ್ವದವರೆಗೂ ಪ್ರಸರಿಸಿದ್ದಾರೆ (ನಂಜುಂಡಯ್ಯ ಮತ್ತು ಐಯ್ಯರ್, ೧೯೨೮: ೧೨೮ - ೧೩೬). ಇದರಿಂದ ನಮಗೆ ಗೋಚರವಾಗುವುದು ಇವರು ಮಿಶ್ರ ಕುಲಕ್ಕೆ ಸೇರಿದ್ದಾರೆ ಎಂಬುದು. ಇವರು ದೆಹಲಿ ಚಕ್ರವರ್ತಿಗಳು ದಕ್ಷಿಣ ಭಾರತದ ಜೊತೆ ಯುದ್ಧ ಮಾಡುತ್ತಿದ್ದ ಸಂದರ್ಭದಲ್ಲಿ ಮೊಘಲರು ಮತ್ತು ಆಫ್ಘನರ ಸೈನ್ಯಕ್ಕೆ ಸರಕು ಸಾಗಾಣಿಕೆದಾರರಾಗಿದ್ದರು (ಗ್ಯಾರಿಯರ್‌ಸನ್ ೧೯೬೮ :೨೫೬). ಇವರು ಚಕ್ರಾಧಿಪತ್ಯದ ಸೈನ್ಯಕ್ಕೆ ಯಾವುದೇ ಭಯ, ಬೆದರಿಕೆಯಿಲ್ಲದೆ ನಂಬಿಕೆಯಿಂದ ಸಾಮಗ್ರಿಗಳನ್ನು ಪೂರೈಸುವ ಸೇವೆಯಲ್ಲಿ ತೊಡಗಿದ್ದರು. ಆ ಸಮಯದಲ್ಲಿ ಅವರು ನೆಲೆಗೊಳ್ಳದೆ ಅಲೆಮಾರಿಗಳಾಗಿದ್ದರು (ಫೇರಿಸ್ಟ್, ೧೬೧೨; ಕ್ರಫೋರ್ಡ್, ೧೭೮೨; ಬ್ರಿಗ್ಸ್, ೧೮೮೯; ಸ್ಕಾರ್ಲೆಟ್ ಎಪ್ಸ್‌ಟೈನ್, ೧೮೮೩).

ಬ್ರಿಗ್ಸ್ (೧೮೮೯) ಅವರ ಪ್ರಕಾರ ಲಂಬಾಣಿಗಳ ಬಗ್ಗೆ ಇರುವ ತುಂಬಾ ಹಿಂದಿನ ಉಲ್ಲೇಖವನ್ನು ತಾರೀಖ್-ಇ-ಖಾನ್ ಮತ್ತು ಜಹಾನ್-ಇ-ನಿಯಾಮತಾಲ್ಲಿ, ಪರ್ಷಿಯನ್ ಭಾಷೆಯಲ್ಲಿ ೧೬೧೨ರಲ್ಲಿ ಬಿಜಾಪುರದ ಕಾಶೀಮ್ ಫಾರೀಶತ್ ಅವರು ಬರೆದಿರುವ ಕೃತಿಯಲ್ಲಿ ಕಾಣಬಹುದು. ಇದರಲ್ಲಿ ಉಲ್ಲೇಖವಾಗಿರುವ ವಿಷಯವೆಂದರೆ ೧೪೧೭ ಮತ್ತು ೧೫೦೪ರಲ್ಲಿ ಬಿಜಾಪುರದಲ್ಲಿ ನಡೆದ ಬಹಳ ದೊಡ್ಡ ಘಟನಾವಳಿ ಅದರ ಒಟ್ಟು ಸಾರಾಂಶ ಹೀಗಿದೆ: "೧೪೧೭ನೇ ವರ್ಷದಲ್ಲಿ ಒಂದು ದೊಡ್ಡ ಬಂಜಾರರ ಗುಂಪನ್ನು,ಅವರ ದನಗಳ ಜೊತೆಗೆ ಬಹಮನಿ ಸಹೋದರ ಫಿರೋಜ್-ಷಾ-ಬಹಮನಿಯು ಗೌಪ್ಯವಾಗಿ ಹಿಡಿದಿಟ್ಟಿದ್ದನು. ಇವರು ಬಹಮನಿ ರಾಜಧಾನಿಗಳಾದ ಗುಲ್ಬರ್ಗ ಮತ್ತು ದಖನ್ ವಿರುದ್ಧ ದಂಗೆ ಏಳಬಹುದೆಂದು ಅವನು ಗ್ರಹಿಸಿದ್ದನು" (ನಂಜುಂಡಯ್ಯ ಮತ್ತು ಐಯ್ಯರ್, ೧೯೨೮: ೧೩೮). ಲಂಬಾಣಿಗಳನ್ನು ಹಿಡಿದಿಟ್ಟ ದುರ್ಬಲತೆಯು ಸುಲ್ತಾನನಿಗೆ ಯುದ್ಧದಲ್ಲಿ ತೊಡಗಿದ್ದ ದಂಡಿಗೆ ಉಂಟಾದ ಸಮಸ್ಯೆಯಿಂದ ತಿಳಿಯಿತು. ಲಂಬಾಣಿಗಳ ಮಹತ್ವವನ್ನು ನಂತರದಲ್ಲಿ ತಿಳಿದು, ಹಜೀಮ್ ಹ್ಯೂಮಐನ್ ಜೊತೆ ಲಂಬಾಣಿಗಳನ್ನು ಸರಕು ಪೂರೈಕೆಯ ಉದ್ದೇಶಕ್ಕಾಗಿ ಕಳುಹಿಸಿಕೊಡುತ್ತಾನೆ (ಗ್ಯಾರಿಯರ್‌ಸನ್, ೧೯೬೮). ಮೊಗಲರ ಸೈನ್ಯ ದಕ್ಷಿಣದ ಮೇಲೆ ದಂಡೆತ್ತಿ ಬಂದ ಸಮಯದಲ್ಲಿ ಲಂಬಾಣಿಗಳು ಸೈನ್ಯಕ್ಕೆ ಬೇಕಾಗುವ ಸರಕುಗಳನ್ನು ಸುರಕ್ಷಿತವಾಗಿ ಗುಡ್ಡಗಾಡುಗಳ ಕಠಿಣ ಹಾದಿಯಲ್ಲಿ ಹಳಿ ಇಲ್ಲದ ರೈಲಿನಂತೆ ಅತ್ಯಂತ ವೇಗವಾಗಿ ಸಾಗಿಸುತ್ತಿದ್ದರಿಂದ ಮೊಗಲರ ದೊರೆ ಮತ್ತು ಸೇನಾಧಿಪತಿಗಳ ವಿಶ್ವಾಸಕ್ಕೆ ಪಾತ್ರರಾದರು. ಇವರ ಸೇವೆಯನ್ನು ಗುರುತಿಸಿ ಅನೇಕ ಸೌಲಭ್ಯ ಹಾಗೂ ವಿಶೇಷ ಗೌರವ ಸ್ಥಾನಗಳನ್ನೂ ನೀಡಲಾಗಿತ್ತು. ಇಬ್ಬರು ಲಂಬಾಣಿ ನಾಯಕರುಗಳಾದ ಬಾಂಗಿ ಮತ್ತು ಚಾಂಗಿ ಒಟ್ಟಿಗೆ ೧,೮೦,೦೦೦ ಜಾನುವಾರುಗಳನ್ನು ಹೊಂದಿದ್ದರೆ, ಇವರ ವಿರೋಧಿ ಭಗವಾನ್‌ದಾಸನು ಕೇವಲ ೫೦,೦೦೦ ದನಗಳನ್ನು ಹೊಂದಿದ್ದನು. ಹೀಗೆ ಲಂಬಾಣಿಗಳ ಸಹಕಾರದಿಂದ ಮೊಗಲರು ದಕ್ಷಿಣ ಭಾರತವನ್ನು ಗೆದ್ದು ೧೭ನೇ ಶತಮಾನದ ಕೊನೆಯವರೆಗೂ ತಮ್ಮ ಪ್ರಾಬಲ್ಯವನ್ನು ದಕ್ಷಿಣ ಭಾರತದಲ್ಲಿ ಹೊಂದಿದ್ದರು. ಕೆಲವು ಲಂಬಾಣಿಗಳು ಆ ಸಮಯದಲ್ಲಿ ದಖನ್ ಮತ್ತು ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ನೆಲೆಗೊಂಡರು. ೧೮ನೇ ಶತಮಾನದಲ್ಲಿ ಮರಾಠರು ಸತಾರದಲ್ಲಿ, ಪೇಶ್ವೆಯವರು ಪೂನಾದಲ್ಲಿ ಮತ್ತು ನಿಜಾಮರ ಹೈದರಾಬಾದ್‌ನಲ್ಲಿ ಆಡಳಿತ ನಡೆಸುತ್ತಿದ್ದಾಗ, ಇವರು ಸೇವೆ ಸಲ್ಲಿಸುತ್ತಿದ್ದರು. ನಂತರ ಬ್ರಿಟಿಷರಿಗೆ ಮೈಸೂರು ಯುದ್ಧದಲ್ಲಿ (೧೭೯೨ ಮತ್ತು ೧೭೯೯) ಹಾಗೂ ಮರಾಠರೊಂದಿಗೆ ನಡೆದ ಯುದ್ಧಗಳಲ್ಲಿ (೧೮೦೦ - ೧೮೧೮) ಸರಕು, ಸಾಮಗ್ರಿಗಳನ್ನು ಪೂರೈಸುವ ಮೂಲಕ ಬ್ರಿಟಿಷರು ಜಯಗಳಿಸುವಲ್ಲಿ ಮಹತ್ವದ ಪಾತ್ರವನ್ನು ಲಂಬಾಣಿಗಳು ವಹಿಸಿದ್ದಾರೆ (ನಂಜುಂಡಯ್ಯ ಮತ್ತು ಐಯ್ಯರ್, ೧೯೨೮; ಕ್ರಫೋರ್ಡ್, ೧೭೮೨: Vol. II: ೯೦).

ಲಂಬಾಣಿಗಳ ಹಿಂದಿನ ಅನನ್ಯತೆಯ ಬಗ್ಗೆ ಯಾವುದೇ ಭಿನ್ನಭಿಪ್ರಾಯವಿಲ್ಲ. ಕಾರಣ ಅಲೆಮಾರಿ ಪ್ರವೃತ್ತಿ ಇವರನ್ನು ಭಾರತದ ಜಿಪ್ಸಿ ಗುಂಪುಗಳೊಂದಿಗೆ ಸೇರಿಸಿದೆ (ನರಸಿಂಹ ಅಯ್ಯಂಗಾರ್, ೧೮೫೩). ಬಂಜಾರರು ಮೂಲತಃ ಉತ್ತರ-ಪಶ್ಚಿಮ ಭಾರತದ ಆರ್ಯ ಜಿಪ್ಸಿ ಗುಂಪಿಗೆ ಸೇರಿರಬಹುದು. ಇವರ ಮೂಲದವರನ್ನು ಮಧ್ಯ-ದಕ್ಷಿಣ ಯುರೋಪಿನಲ್ಲಿ ಹಾಗೂ ಅಮೇರಿಕನ್ನರಲ್ಲಿ ಗುರುತಿಸಬಹುದು (ಐಯ್ಯರ್ ಸಿ.ಪಿ. ಆರ್. ೧೯೬೨: VII - IX; ಶೇರ್ ಸಿಂಗ್ ಶೇರ್, ೧೯೬೬). ಇದಕ್ಕೆ ವಿರುದ್ಧವಾಗಿ ಚಮನ್‌ಲಾಲ್ ಅವರ ಹೇಳಿಕೆ "ನನ್ನ ಪ್ರಬಂಧವಾದ ಜಿಪ್ಸಿಗಳು ಭಾಗಶಃ ಘಜನಿ ಮಹಮ್ಮದನು ದಂಡೆತ್ತಿ ಲೂಟಿ ಮಾಡಿದ ವಸ್ತುಗಳನ್ನು ಸಾಗಿಸುವ ಜೀತದಾಳುಗಳಾಗಿರಬೇಕು. ಇವರು ಸೈನ್ಯದ ಒಂದು ಭಾಗವಾಗಿ, ಸೈನಿಕರಾಗಿ ಕೆಲಸ ಮಾಡುತ್ತಿದ್ದರು". ಹೀಗಾಗಿ ಇವರು ಅಲೆಮಾರಿ ಲಂಬಾಣಿಗಳನ್ನು ಜಿಪ್ಸಿ ಎಂಬ ಜನಾಂಗವಾಚಕದಿಂದ ಗುರುತಿಸುವುದು - ಇವರು ಈಜಿಪ್ಟ್ ಸಂಬಂಧವನ್ನು ಹೊಂದಿದ್ದರು ಎಂದು ಹೆಚ್ಚಿನ ಜನ ಭಾವಿಸಿಕೊಂಡು ಜಿಪ್ಸಿಗಳು ಭಾರತದ ಮೂಲದವರೆಂದು ಗುರುತಿಸಿ ಇದೇ ಪದವನ್ನು ಇನ್ನೂ ಉಪಯೋಗಿಸುತ್ತಿದ್ದಾರೆ (ಚಮನ್‌ಲಾಲ್, ೧೯೬೨).

ಬ್ರಿಟಿಷ್ ಪ್ರವಾಸಿಗರು ಮತ್ತು ಅಧಿಕಾರಿಗಳು ಲಂಬಾಣಿಗಳ ಪ್ರಾಮಾಣಿಕತೆ ಹಾಗೂ ಸಾಹಸಿ ಗುಣಗಳನ್ನೂ ಸರಕನ್ನು ಸಾಗಾಣಿಕೆ ಮಾಡುವುದರಲ್ಲಿ ಅವರಿಗಿದ್ದ ಚಾತುರ್ಯವನ್ನು ತುಂಬಾ ಶ್ಲಾಘಿಸಿದ್ದಾರೆ (ಕ್ಯಾಂಪ್‌ಬೆಲ್, ೧೮೮೪; ಥರ್ಸ್ಟನ್, ೧೯೦೯). ಲಂಬಾಣಿಗಳ ಸಂಪರ್ಕ ಮಾಧ್ಯಮವು ಕೇವಲ ಯುದ್ಧಕಾಲದಲ್ಲಿ ಮಾತ್ರವಲ್ಲದೆ ಶಾಂತಿ ಕಾಲದಲ್ಲಿಯೂ ಹೆಚ್ಚಿನ ಮಹತ್ವವನ್ನು ಪಡೆದಿತ್ತೆಂದು ಹೇಳಿದ್ದಾರೆ. ಇವರು ಸಾಮಾನ್ಯ ಜನರ ಜೊತೆಗೂ ವ್ಯಾವಹಾರಿಕ ಸಂಬಂಧವನ್ನು ಇಟ್ಟುಕೊಂಡಿದ್ದರು ಎಂದು ತಿಳಿದುಬರುತ್ತದೆ. ಲಂಬಾಣಿಗಳು ಧಾನ್ಯ, ಉಪ್ಪು, ತೆಂಗಿನಕಾಯಿ, ಸಾಂಬಾರ ಪದಾರ್ಥಗಳು, ಹತ್ತಿ, ಎಣ್ಣೆ, ಇತ್ಯಾದಿಗಳನ್ನು ಶಾಂತಿ ಕಾಲದಲ್ಲಿ ಸಾಗಿಸುತ್ತಿದ್ದರು. ಇವರು ತುಂಬಾ ಪ್ರಯೋಜನಕಾರಿಯಾಗಿ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೂ ಕರಾವಳಿ ಪ್ರದೇಶದಿಂದ ಬಯಲು ಪ್ರದೇಶಕ್ಕೂ ಸರಕು-ಸರಂಜಾಮುಗಳನ್ನು ಸಾಗಿಸುವ ಸಂಪರ್ಕ ಮಾಧ್ಯಮವಾಗಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದ್ದರು (ಕ್ರಫೋರ್ಡ್, ೧೬೪೨, Vol II: ೯೦, ಬುಚ್ಚನ್, ೧೮೦೭, Vol - II: ೧೪೪ - ೧೮೭೧ ).

೧೮೯೧ರ ಜನಗಣತಿಯು ಲಂಬಾಣಿಗಳು ಹೈದ್ರಾಬಾದ್, ಬಾಂಬೆ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದರು ಎಂದು ತಿಳಿಸುತ್ತದೆ. ಅಲ್ಲದೆ ೧೩ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹಾಗೂ ರಾಜ್ಯಗಳಲ್ಲಿಯೂ ಇವರು ಕಂಡುಬಂದಿದ್ದಾರೆ. ಹೀಗೆ ಇವರ ಜನಸಾಂದ್ರತೆಯು ೧೯ನೇ ಶತಮಾನದ ಕೊನೆಯ ಭಾಗದವರೆಗೂ ದಖನ್ ಪ್ರಾಂತ್ಯ ಮತ್ತು ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಕೇಂದ್ರೀಕೃತವಾಗಿತ್ತು. ಇದು ಇವರಿಗೆ ತಮ್ಮ ಸಾಂಪ್ರದಾಯಿಕ ಸ್ವಾಭಾವಿಕತೆ, ಆಚರಣೆಗಳು ಹಾಗೂ ಭಾಷೆಯನ್ನು ಭಿನ್ನವಾಗಿ ಹಿಡಿದಿಟ್ಟುಕೊಳ್ಳಲು ಸಹಕಾರಿಯಾಗಿತ್ತು (ಗ್ರಾರಿಯರ್ ಸನ್, ೧೯೬೮).

ಬ್ರಿಟಿಷರು ನೇರ ಆಡಳಿತವನ್ನು ಭಾರತದಲ್ಲಿ ಪ್ರಾರಂಭಿಸಿದ ಮೊದಲ ಹಂತದಲ್ಲಿ ಯಾಂತ್ರಿಕ ಸಾರಿಗೆ ಮತ್ತು ರೈಲ್ವೆಯನ್ನು ಪ್ರಾರಂಭಿಸುವ ಮೂಲಕ ರಸ್ತೆಗಳನ್ನು ಅಭಿವೃದ್ಧಿ ಪಡಿಸಿದರು. ಇದರಿಂದ ಲಂಬಾಣಿಗಳು ಪಾರಂಪರಿಕವಾಗಿ ದನ ಮತ್ತು ಬಂಡಿಯ ಮೂಲಕ ನಡೆಸಿಕೊಂಡು ಬಂದಿದ್ದ ಸರಕು ಸಾಗಾಣಿಕೆಯನ್ನು ಕೈ ಬಿಡಬೇಕಾಯಿತು. ರಸ್ತೆಗಳಲ್ಲಿ ಸರಕುಗಳ ರಕ್ಷಣೆ ಮತ್ತು ಯಾಂತ್ರಿಕ ವಾಹನಗಳ ಬಳಕೆ ಹೆಚ್ಚಾಗಿದ್ದರಿಂದ ಲಂಬಾಣಿಗಳಿಗೆ ಒಳಪ್ರದೇಶಗಳಲ್ಲಿ ಸಿಗುತ್ತಿದ್ದ ಸಾಗಾಣಿಕೆಯ ಕೆಲಸ ಭಾಗಶಃ ನಿಂತು ಹೋಯಿತು. ಹೀಗಾಗಿ ಲಂಬಾಣಿಗಳು ಜೀವನೋಪಾಯಕ್ಕಾಗಿ ಅರಣ್ಯಗಳತ್ತ ಗಮನ ನೀಡಿ ಬೇಟೆ ಯಾಡುವ, ಮರಗಳನ್ನು ಕಡಿಯುವ ಮತ್ತು ಅರಣ್ಯ ಉಪ-ಉತ್ಪನ್ನಗಳನ್ನು ಸಂಗ್ರಹಣ ಮಾಡುವ ಮೂಲಕ ಜೀವನ ನಿರ್ವಹಿಸ ತೊಡಗಿದರು. ಆದರೆ ಇದು ಅವರಿಗೆ ಜೀವನಕ್ಕೆ ಸಾಕಾಗುವಷ್ಟು ಆದಾಯವನ್ನು

ನೀಡುವಲ್ಲಿ ವಿಫಲ ವಾಗಿತ್ತು. ಇವರು ಅನಕ್ಷರಸ್ಥರಾಗಿದದಿಂದ ಯಾವುದೇ ತರಬೇತಿ ಪಡೆದ ವೃತ್ತಿ ಕೌಶಲ್ಯತೆ ಅವರಿಗಿರಲಿಲ್ಲ. ಜೊತೆಗೆ ಆರ್ಥಿಕವಾಗಿ ಹಿಂದುಳಿದಿದ್ದ ಇವರು ಜೀವನೋಪಾಯಕ್ಕೆ ಬೇರೆ ಬೇರೆ ಉಪವೃತ್ತಿ ಅಥವಾ ಉದ್ಯೋಗಗಳನ್ನು ಪಡೆದುಕೊಳ್ಳುವಲ್ಲಿ ಯಾವುದೇ ಅವಕಾಶಗಳು ದೊರಕದೆ ಇದ್ದುದ್ದರಿಂದ, ಕ್ರೂರ ಅಪಹರಣ ಮತ್ತು ದರೋಡೆಕೋರರಾಗಿ ೧೯ನೇ ಶತಮಾನದ ಮಧ್ಯ ಭಾಗದಲ್ಲಿ ಕಂಡುಬರುತ್ತಾರೆ (ಬುಚ್ಚನ್, ೧೮೦೭, :Vol. II; ದುಬ್ಬಾಯಿಸ್, ೧೯೩೬ ). ಸಾಮಾನ್ಯವಾಗಿ ಇವರ ವಸತಿಗಳು ಎತ್ತರದ ಸ್ಥಳಗಳಲ್ಲಿ ಶತ್ರುಗಳು ಸುಲಭವಾಗಿ ಪ್ರವೇಶಿಸಲಾಗದ ಆಯಕಟ್ಟುಗಳಲ್ಲಿ, ತಾವು ಕೊಳ್ಳೆ ಅಥವಾ ದರೋಡೆ ಮಾಡಿಕೊಂಡು ಬೇಗನೆ ಹಿಂದಕ್ಕೆ ಬರ ಬಹುದಾದ ಪ್ರದೇಶಗಳಲ್ಲಿ ಬೇರೆ ಬೇರೆ ಜಾತಿಗೆ ಸೇರಿದ ರೈತಾಪಿ ಜನರ ಸಣ್ಣಪಾಳೆ ಅಥವಾ ಹಳ್ಳಿಗಳಿಗೆ ಸೇರಿದಂತೆ ಇರುತ್ತಿದ್ದವು.

ಲಂಬಾಣಿಗಳು ತಮ್ಮ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಡುವುದರ ಬಗ್ಗೆ ಆಸಕ್ತಿ ಹೊಂದಿರಲಿಲ್ಲ (ಕ್ಯಾಂಪ್‌ಬೆಲ್, ೧೮೮೩). ಇವರನ್ನು ಪ್ರೇರೇಪಿಸಿ ವಿದ್ಯಾವಂತರನ್ನಾಗಿ ಮಾಡಲು ಸಾಧ್ಯವೇ ಇಲ್ಲ ಎಂದು ಬ್ರಿಟಿಷ್ ಆಡಳಿತಗಾರರು ಪರಿಗಣಿಸಿದರು. ಇವರ ದುಷ್ಕೃತ್ಯಗಳನ್ನು ತಡೆಯಲು ಪೋಲಿಸರ ಹದ್ದಿನ ಕಣ್ಣನ್ನು ಯಾವಾಗಲೂ ಇರಿಸಲಾಗಿತ್ತು. ಅಲ್ಲದೇ  ನ್ಯಾಯಾಲಯಗಳು ಅತ್ಯಂತ ಕಠೋರವಾದ ಶಿಕ್ಷೆಯನ್ನು ಕೃತಕವಾಗಿ ಜಾರಿಗೊಳಿಸುತ್ತಿದ್ದವು. ಕೊನೆಗೆ ಅಪರಾಧ ಅಥವಾ ದುಷ್ಕೃತ್ಯಗಳನ್ನು ಮಾಡುವ ಸಮುದಾಯಗಳ ಜೊತೆ ಲಂಬಾಣಿಗಳನ್ನು 'ಅಪರಾಧಿ ಬುಡಕಟ್ಟು' ಕಾಯ್ದೆ ೧೮೭೧ರಲ್ಲಿ ಸೇರಿಸಿ, ಅಪರಾಧಿ ಬುಡಕಟ್ಟು ಎಂದು ಪರಿಗಣಿಸಿದರು.

ಈ ಎಲ್ಲಾ ಪರಿಣಾಮಗಳಿಂದ ಲಂಬಾಣಿಗಳ ಸಾಂಪ್ರದಾಯಿಕ ಆದಾಯದ ಅಥವಾ ಆರ್ಥಿಕ ಮೂಲ ಕುಗ್ಗಿ, ಢಕಾಯಿತಿ ನಿಂತು ಹೋಗಿದ್ದ ರಿಂದ ಲಂಬಾಣಿಗಳು ಬೇರೆ ಆದಾಯದ ಮೂಲಗಳನ್ನು ಬಲವಂತವಾಗಿ ಹುಡುಕಿಕೊಳ್ಳಬೇಕಾಯ್ತು. ಅರಣ್ಯಗಳಲ್ಲಿ, ರೈತರ ಹೊಲ ಗದ್ದೆಗಳಲ್ಲಿ ಕೂಲಿಗಳಾಗಿ ಅಥವಾ ಇತರ ಕೂಲಿ ಹಾಗೂ ಸೇವಾ ಕೆಲಸಗಳನ್ನು, ತಮ್ಮ ಮನಸಾಕ್ಷಿಗೆ ವಿರುದ್ಧವಾಗಿ, ಯಾವುದೇ ಸಾಂಪ್ರದಾಯಿಕ ಸಾಂಸ್ಕೃತಿಕ ಹಿನ್ನೆಲೆ ಇಲ್ಲದೆ ಮಾಡಬೇಕಾಯಿತು. ೧೯ನೇ ಶತಮಾನದ ಕೊನೆಯ ಭಾಗದಿಂದ ಮತ್ತು ೨೦ನೇ ಶತಮಾನದ ಪ್ರಾರಂಭದಿಂದ ಲಂಬಾಣಿಗಳು ಅಪರಾಧಿ ಕೆಲಸಗಳನ್ನು ಬಿಟ್ಟು ಕಾನೂನಿಗೆ ಬದ್ಧರಾಗಿ ನಡೆದುಕೊಳ್ಳುತ್ತಿದ್ದರೂ  ಉತ್ತರ ಕರ್ನಾಟಕದಲ್ಲಿ ಅಲೆಮಾರಿ ಲಂಬಾಣಿಗಳ  ಮೇಲೆ ಪೋಲಿಸರ ಕಣ್ಗಾವಲು ಈಗಲೂ ಇದೆ (ಹಿಂದಿನಂತೆ). ಇವರ ಮೇಲೆ ಗೋವು, ಮಹಿಳೆ ಮತ್ತು ಮಕ್ಕಳ ಅಪಹರಣ, ಖೋಟಾ ನಾಣ್ಯಗಳ ಸಾಗಾಣಿಕೆ, ಡಕಾಯಿತಿ ಇತ್ಯಾದಿ ಅಪರಾಧಗಳನ್ನು ಹೊರಿಸಲಾಗಿದೆ (ಎಂಥೋವನ್, ೧೯೨೨). ಈ ಎಲ್ಲಾ ಕಾರಣಗಳಿಂದ ಕೊನೆಗೆ ಇವರು ವ್ಯವಸಾಯಕ್ಕೆ ನೆಲೆಹೋಗಬೇಕಾಯಿತು. ಇದು ಲಂಬಾಣಿಗಳ ಇತಿಹಾಸದ ಯಾವುದೇ ಕಾಲದಲ್ಲಿ ಉದ್ಯೋಗವಾಗಿಲ್ಲದಿದ್ದರೂ, ಅದನ್ನು ಮಾಡಲೇ ಬೇಕಾದ ಪರಿಸ್ಥಿತಿ ಬಂದಿತು (ಮುಂಬೈ ಸರಕಾರ, ೧೮೮೯; ಥರ್ಸ್ಟನ್, ೧೯೦೯; ಮ್ಯಾಕ್ ಗ್ರೇಗೋರ್ ೧೯೧೨; ಪೂಲನ್ನೈ, ೧೯೫೭). ಇದೇ ಸ್ವರೂಪದ ಇತಿಹಾಸವನ್ನು ಹೊಂದಿದ ೧೯೦೧-೧೯೨೧ರ ಕಾಲಾವಧಿಯಲ್ಲಿ ವ್ಯವಸಾಯದಲ್ಲಿ ನೆಲೆನಿಂತ ಅನೇಕ ಬುಡ ಕಟ್ಟುಗಳು ಮಧ್ಯಭಾರತದಲ್ಲಿವೆ. ಅವೆಂದರೆ ಬಿಲ್ಲ, ಭಿಲ್ಲಾಲ, ಗೊಂಡಾ, ಸೋಹಾರಿಯೊ, ಇತ್ಯಾದಿ (ಸಕ್ಸೇನಾ, ೧೯೬೪).

೧೯೪೭ರ ನಂತರ ಭಾರತ ಸರಕಾರ ಹಿಂದಿನ ಸರಕಾರಗಳ ನೀತಿ ನಿಯಮಗಳನ್ನು ಬದಲಾಯಿಸಿ, ಅಪರಾಧಿ ಬುಡಕಟ್ಟು ಕಾಯ್ದೆಯನ್ನು ೧೯೪೯ರಲ್ಲಿ ಹಿಂದಕ್ಕೆ ಪಡೆಯಿತು. ಈ ಮೂಲಕ ಇವರನ್ನು ಅಪರಾಧಿ ಬುಡಕಟ್ಟು ಎಂದು ಪರಿಗಣಿಸುವುದನ್ನು ಬಿಟ್ಟು, ಎಲ್ಲಾ ಸಾಮಾಜಿಕ ಸ್ಥಾನಗಳನ್ನು ಇವರಿಗೂ ನೀಡಿತು. ಇತರೆ ಸಮುದಾಯಗಳಂತೆ ಜೀವನ ನಡೆಸಲು ಅನುವು  ಮಾಡಿಕೊಟ್ಟಿತು. ಲಂಬಾಣಿಗಳ ಉತ್ತಮೀಕರಣಕ್ಕಾಗಿ, ವಿಶೇಷವಾಗಿ ಇವರನ್ನು 'ಎಕ್ಸ್-ಕ್ರಿಮಿನಲ್' ಎಂದು ಪ್ರತ್ಯೇಕ ವರ್ಗವಾಗಿ ಗುರುತಿಸಿ 'ಇತರೆ ಹಿಂದುಳಿದ ವರ್ಗ' ಎಂದು ಪರಿಗಣಿಸಿತು.

ಪರಿಶಿಷ್ಟ ಪಂಗಡವೆಂದು ಹಿಂದೆ ಗುರುತಿಸಿದ್ದ ಸಮುದಾಯಗಳ ಜೊತೆ ಹೊಸ ಗುಂಪುಗಳನ್ನು ಸೇರಿಸುವಾಗ ಅಸಮಾನತೆಯಿಂದ ಅವೈಜ್ಞಾನಿಕವಾಗಿ ವರ್ಗೀಕರಿಸಿ ಲಂಬಾಣಿಗಳನ್ನು ಪರಿಶಿಷ್ಟ ಪಂಗಡ ಎಂದು ಗುರುತಿಸಲಾಗಿದೆ. ಇತರ ಪರಿಶಿಷ್ಟ ಪಂಗಡಗಳಂತೆ ಹಿಂದುಳಿದು, ಸಮಾಜದಿಂದ ನಿರಾಕಾರಿಸಲ್ಪಟ್ಟ ಬುಡಕಟ್ಟುಗಳ ಜೀವನ ಮಟ್ಟವನ್ನು ಸುಧಾರಿಸಲು ಹಲವು ವಿಶೇಷ ಅವಕಾಶಗಳನ್ನು ನೀಡಿದಂತೆ ಇವರಿಗೂ ಅವಕಾಶಗಳನ್ನು ಕಲ್ಪಿಸಲಾಯಿತು. ಕರ್ನಾಟಕದ (ಏಕೀಕರಣದ ನಂತರ) ಆಡಳಿತಕ್ಕೆ ಒಳಪಡುವ ಪ್ರದೇಶದಲ್ಲಿ ಲಂಬಾಣಿಗಳನ್ನು ಪರಿಶಿಷ್ಟ ಪಂಗಡ ಎಂದು ಗುರುತಿಸಲಾಗಿತ್ತು. ಆದರೆ ಹಿಂದಿನ ಮೈಸೂರು ಸರಕಾರದಲ್ಲಿ ಇವರನ್ನು ಪರಿಶಿಷ್ಟ ಜಾತಿಯೆಂದು ಗುರುತಿಸುತ್ತಿದ್ದರು. ಈ ರೀತಿಯ ತಾರತಮ್ಯಕ್ಕೆ ಆಡಳಿತಗಾರರು ನೀಡುವ ವಿಶ್ಲೇಷಣೆ, ಒಂದು ಸಮುದಾಯದ ಹಿಂದುಳಿದಿರುವಿಕೆಯನ್ನು ಗುರುತಿಸುವಾಗ ಅವರು ವಾಸಿಸುವ ಭೌಗೋಳಿಕ ಪ್ರದೇಶವನ್ನು ಪ್ರಮುಖವಾಗಿ ಪರಿಗಣಿಸಲಾಗುತ್ತದೆ . ಆದರೆ ಈ ದೃಷ್ಟಿಕೋನವು ಅವೈಜ್ಞಾನಿಕವಾದುದು.

**ಸಮಕಾಲೀನ ಸ್ಥಾನ**

ಆಡಳಿತದ ಅವೈಜ್ಞಾನಿಕ ತಾರತಮ್ಯತೆಯಿಂದ ಕೂಡಿದ ವರ್ಗೀಕರಣದಿಂದ ಕೆಲವು ಸಮುದಾಯಗಳಿಗೆ (ಲಂಬಾಣಿಗಳಂತಹ) ಅನ್ಯಾಯವಾಗಿದೆ. ಇದು ನಮ್ಮ ಸಂವಿಧಾನದ ಮೂಲ ಉದ್ದೇಶ ಮತ್ತು ಆಶೋತ್ತರಗಳಿಗೆ ವಿರುದ್ಧವಾದುದ್ದು ಎಂದು ಹಿಂದುಳಿದ ಬುಡಕಟ್ಟು ಪಂಗಡಗಳ ಅಭಿವೃದ್ಧಿಗೆ ಯೋಜನೆಯನ್ನು ರೂಪಿಸಲು ಭಾರತದ ಯೋಜನಾ ಆಯೋಗದಿಂದ ೧೯೬೬ ರಲ್ಲಿ ನೇಮಿಸಲಾದ ಸಮಿತಿ ಅಭಿಪ್ರಾಯಪಟ್ಟಿತ್ತು. ಈ ಸಮಿತಿಯು ಇದುವರೆಗಿನ "ಅಸಂಗತ ವರ್ಗೀಕರಣದ ತಾರತಮ್ಯದಿಂದ ಕೂಡಿದ ಅನ್ಯಾಯವನ್ನು ಸರಿಪಡಿಸಲು ಒಂದು ವೈಜ್ಞಾನಿಕವಾದ ಅಧ್ಯಯನ ನಡೆಸಿ ಬುಡಕಟ್ಟುಗಳ ವರ್ಗೀಕರಣ ಮಾಡಬೇಕು" ಎಂದು ಸರಕಾರಕ್ಕೆ ತನ್ನ ವರದಿಯನ್ನು ನೀಡಿತು (ಯೋಜನೆ ಆಯೋಗ, ಎನ್. ಡಿ:೯). ಅಸಂಗತ ವರ್ಗೀಕರಣವನ್ನು ಮಾರ್ಪಡಿಸುವ ಉದ್ದೇಶದಿಂದ ಕರ್ನಾಟಕ ಸರಕಾರವು ತನ್ನ ತಪ್ಪನ್ನು ಸರಿಪಡಿಸಿಕೊಂಡು ಲಂಬಾಣಿಗಳನ್ನು ಪರಿಶಿಷ್ಟ ಜಾತಿಗಳ ಪಟ್ಟಿಗೆ ೧೯೭೭ ಜುಲೈನಲ್ಲಿ ಸೇರಿಸಿತು. ಇದು ಲಂಬಾಣಿಗಳಿಗೆ ತಮ್ಮ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಉನ್ನತೀಕರಣಕ್ಕೆ ಅನೇಕ ಹೊಸ ಅವಕಾಶಗಳನ್ನು ಕಲ್ಪಿಸಿಕೊಟ್ಟಿತು.

ಇಂದು ಹೆಚ್ಚಿನ ಲಂಬಾಣಿ ಜನರು ಕೃಷಿ ಹಾಗೂ ಇತರೆ ಕೂಲಿಗಳಾಗಿ ನೆಲೆಗೊಂಡಿದ್ದರೂ, ಕೆಲವರು (ರಾಜಸ್ಥಾನದ ಪಶ್ಚಿಮದಲ್ಲಿ) ತಮ್ಮ ಸಾಂಪ್ರದಾಯಿಕ ಸಾಗಾಣಿಕೆ ಹಾಗೂ ಉಪ್ಪು ಮಾರಾಟ ಮಾಡಿ ಅಲೆಮಾರಿಗಳಂತೆ ಸಾಂಪ್ರದಾಯಿಕ ಜೀವನ ಮುಂದುವರಿಸಿದ್ದಾರೆ. ಆದರೆ ಈ ರೀತಿಯ ಗುಂಪುಗಳು ತಮ್ಮ ಗೋವುಗಳಿಗೆ ಸಾಕಾಗುವಷ್ಟು ಹುಲ್ಲುಗಾವಲುಗಳು ದೊರಕುತ್ತಿಲ್ಲವಾದ ಕಾರಣ ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಮುಂದುವರಿಸಲು ಹೆಣಗಾಡುತ್ತಿರುವಂತಹ ಪರಿಸ್ಥಿತಿಯೂ ಇದೆ (ಮಲ್ಹೋತ್ರಾ, ಬೋಸ್, ೧೯೬೩).

ಲಂಬಾಣಿಗಳು ಈಗಲೂ ಅನೇಕ ಜಾತಿಗಳು ವಾಸಿಸುವ ಗ್ರಾಮದ ಹೊರಗೆ ಪ್ರತ್ಯೇಕ ತಾಂಡಗಳಲ್ಲಿ ವಾಸಿಸುತ್ತಿದ್ದಾರೆ. ಈ ಸಮುದಾಯದಲ್ಲಿ ನಾಲ್ಕು ಪಿತೃ ಪ್ರಧಾನ ಗೋತ್ರಗಳಿವೆ. ಅವುಗಳ ಹೆಸರುಗಳು ರಜಪೂತ ಮೂಲದಿಂದ ಬಂದಿದೆ. ಅವುಗಳೆಂದರೆ-ರಾಥೋಡ, ಚೌವಾಣ್, ಪವಾರ, ವಡಾತ್ಯ. ಇವರಲ್ಲಿ ಹೆಚ್ಚಿನ ಜನರು ಕೂಲಿಕೆಲಸಗಾರರಾಗಿ, ಅರಣ್ಯ ಉಪ-ಉತ್ಪನ್ನಗಳ ಸಂಗ್ರಹಣೆ ಮಾಡುವವರಾಗಿ ದುಡಿಯುತ್ತಿದ್ದಾರೆ. ಕೆಲವರು ಮಾತ್ರ ಸ್ವಂತ ಕೃಷಿ ಭೂಮಿ ಹೊಂದಿ ಸಾಗುವಳಿ ಮಾಡುತ್ತಿದ್ದರೆ, ಮತ್ತಷ್ಟು ಜನರು ಬೇರೆಯವರ ಕೃಷಿ ಭೂಮಿಯನ್ನು ಗೇಣಿಮಾಡಿ ಜೀವನ ನಡೆಸುತ್ತಿದ್ದಾರೆ. ಇವರಲ್ಲಿ ಯಾರು ತಮ್ಮ ಆದಾಯಕ್ಕೆ ಕೃಷಿಕೂಲಿಯನ್ನು ಮತ್ತು ಅರಣ್ಯ ಉಪ-ಉತ್ಪನ್ನಗಳ ಸಂಗ್ರಹಣೆಯನ್ನು

ಅವಲಂಬಿಸಿದ್ದಾರೋ ಅವರು ಅತ್ಯಂತ ಬಡತನದಲ್ಲಿದ್ದಾರೆ. ಕೃಷಿ ಸಾಗುವಳಿ ಮಾಡಿ ಜೀವನ ನಡೆಸುವವರು ಸ್ವಲ್ಪಮಟ್ಟಿಗೆ ಉತ್ತಮ ಆರ್ಥಿಕಸ್ಥಿತಿ ಹೊಂದಿದ್ದಾರೆ. ಇವರಲ್ಲಿ ಕೆಲವರು ಆದಾಯಕ್ಕಾಗಿ ವಿವಿಧ ಬಗೆಯ ವೃತ್ತಿಯನ್ನು ಮಾಡುವುದರಿಂದ ಮೇಲ್ಮುಖ ವೃತ್ತಿ ಚಲನೆಯನ್ನು ಸಾಧಿಸಿದ್ದಾರೆ. ಅವುಗಳೆಂದರೆ–ಶಾಲಾ ಶಿಕ್ಷಕರಾಗಿ, ಪೋಲೀಸ್ ಪೇದೆಗಳಾಗಿ, ಗುಮಾಸ್ತರಾಗಿ ಹಾಗೂ ಕೆಳದರ್ಜೆಯ ವೃತ್ತಿಯಲ್ಲಿ ಸರಕಾರಿ ಮತ್ತು ಖಾಸಗಿ ಸಂಘ ಸಂಸ್ಥೆಗಳಲ್ಲಿ ಉದ್ಯೋಗದಲ್ಲಿದ್ದಾರೆ. ಲಂಬಾಣಿ ಸಮುದಾಯದಲ್ಲಿ ಕೆಲವರು ಮಾತ್ರವೇ ಆಡಳಿತಾಧಿಕಾರಿಗಳಾಗಿ ಹಾಗೂ ಇತರ ಪ್ರತಿಷ್ಠಿತ ವೃತ್ತಿಗಳಲ್ಲಿದ್ದಾರೆ. ಭಾಷೆಯ ಮಟ್ಟಿಗೆ ಹೇಳುವುದಾದರೆ ಲಂಬಾಣಿಗಳು ರಾಷ್ಟ್ರದ ಅನೇಕ ಭಾಗಗಳಲ್ಲಿ ತಮ್ಮ ಮಾತೃಭಾಷೆಯ ಸೊಗಡನ್ನು ಸ್ವಲ್ಪ ಮಟ್ಟಿಗೆ ಕಳೆದುಕೊಂಡು ತಾವು ವಾಸಿಸುವ ಪ್ರದೇಶದ ಲಂಬಾಣೇತರ ಸ್ಥಳೀಯ ಸಮುದಾಯದ ಜನರ ಭಾಷೆಗಳನ್ನು ಉಪಯೋಗಿಸುತ್ತಿದ್ದಾರೆ. ಇವರ ಜನಸಾಂದ್ರತೆ ಹೆಚ್ಚಾಗಿ ಕೇಂದ್ರಿಕೃತವಾಗಿರುವ ಪ್ರದೇಶದಲ್ಲಿ ತಮ್ಮ ಭಾಷೆಯ ಸೊಗಡನ್ನು ಸ್ವಲ್ಪಮಟ್ಟಿಗೆ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ (ಗ್ರಿಯರ್‌ಸನ್, ೧೯೬೮). ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಲಂಬಾಣಿಗಳು ತಮ್ಮ ಭಾಷೆಯನ್ನು ಉಳಿಸಿಕೊಳ್ಳಲು ಯಶಸ್ವಿಯಾಗಿದ್ದರೂ ಅದು ಕನ್ನಡ, ಉರ್ದು, ಮರಾಠಿ, ಗುಜರಾತಿ, ಮಾರ್ವಾಡಿ, ತೆಲುಗು ಭಾಷೆಯ ಪದಗಳಿಂದ ತುಂಬಿಹೋಗಿದೆ (ಥರ್ಸ್ಟನ್, ೧೯೦೯; ಎಂಥೋವನ್, ೧೯೨೨). ಹೀಗಾಗಿ ಇವರಲ್ಲಿ ಹೆಚ್ಚಿನವರು ದ್ವಿಭಾಷಿಕರು ಅಥವಾ ಇನ್ನೂ ಹೆಚ್ಚಿನ ಭಾಷೆಗಳನ್ನು ಮಾತನಾಡಬಲ್ಲರು.

**ಕರ್ನಾಟಕದಲ್ಲಿ ಲಂಬಾಣಿಗಳ ವಾಸಸ್ಥಾನ ಮತ್ತು ಜನಸಂಖ್ಯೆ**

ಲಂಬಾಣಿಗಳು ಸಾಮಾನ್ಯವಾಗಿ ಊರುಗಳಿಂದ ಪ್ರತ್ಯೇಕವಾಗಿಯೇ ನೆಲೆಸಿರುವ ತಾಂಡಕ್ಕೆ ಆ ಸಮೀಪದ ಊರುಗಳ ಹೆಸರೇ ಇರುತ್ತದೆ. ಅವುಗಳೇ ಇಂದು ಅಧಿಕೃತ ಹೆಸರುಗಳಾಗಿ ಬಳಕೆಯಲ್ಲಿವೆ. ಉದಾಹರಣೆಗೆ - ನಾಗಲಾಪುರ ಗ್ರಾಮದ ಬಳಿಯಲ್ಲಿರುವ ತಾಂಡಕ್ಕೆ ನಾಗಲಾಪುರ ತಾಂಡವೆಂತಲೂ, ಸಂಕಲಾಪುರದ ಬಳಿಯಲ್ಲಿರುವ ತಾಂಡಕ್ಕೆ ಸಂಕಲಾಪುರ ತಾಂಡವೆಂತಲೂ ಮರಿಯಮ್ಮನಹಳ್ಳಿಯ ಬಳಿಯಿರುವ ತಾಂಡಕ್ಕೆ ಮರಿಯಮ್ಮನಹಳ್ಳಿ ತಾಂಡ ಎಂದೂ ಕರೆಯುತ್ತಾರೆ. ವಿಶೇಷವೆಂದರೆ ತಾಂಡಗಳು ಸ್ವತಂತ್ರವಾಗಿ ನೆಲೆಯಾಗಿದ್ದರೂ ಆಯಾ ಊರಿನ ಕೊಪ್ಪಲುಗಳಾಗಿಯೇ ಪರಿಗಣಿಸಲ್ಪಡುತ್ತವೆ.

ಕರ್ನಾಟಕದಲ್ಲಿ ಲಂಬಾಣಿಗಳ ಜನಸಂಖ್ಯೆ ಖಚಿತವಾಗಿ ಎಷ್ಟು ಎಂಬುದು ಜನಗಣತಿಯ ಯಾವುದೇ ವರದಿಯಲ್ಲಿ ಸ್ಪಷ್ಟವಾಗಿ ಸಿಗಲಾರದು. ಆದರೆ ಹಾವನೂರು ವರದಿಯ ಪ್ರಕಾರ ಕರ್ನಾಟಕದಲ್ಲಿ ಇವರ ಒಟ್ಟು ಜನಸಂಖ್ಯೆ ೩,೫೩,೮೮೨ ಎಂದು ಉಲ್ಲೇಖಿಸಲಾಗಿದೆ (೧೯೭೫). ಇದೂ ಕೂಡ ೧೯೭೧ರ ಜನಗಣತಿಯ ವರದಿಯನ್ನೇ ಅವಲಂಬಿಸಿ ಮಾಡಿದ ಅಂದಾಜು ಪಟ್ಟಿ ಆಗಿದೆ.

ಕರ್ನಾಟಕದಲ್ಲಿ ವಾಸವಾಗಿರುವ ಲಂಬಾಣಿಗಳ ಜನಸಂಖ್ಯೆ ವಿವಿಧ ಜಿಲ್ಲೆಗಳಲ್ಲಿ ಈ ರೀತಿ ಇದೆ (ಹಾವನೂರು ೧೯೭೫; ಸಂ–೨) ಬೆಂಗಳೂರು-೧೩,೯೨೯, ಕೋಲಾರ-೩೮೫೯, ತುಮಕೂರು-೧೬,೬೩೭, ಚಿಕ್ಕಮಗಳೂರು-೧೭,೮೫೩, ಚಿತ್ರದುರ್ಗ- ೩೮,೧೩೮, ಹಾಸನ-೧೦,೪೬೨, ಮಂಡ್ಯ-೨೧೯, ಮೈಸೂರು-೧೪೧೭, ಶಿವಮೊಗ್ಗ-೫೦,೬೨೭, ಬಳ್ಳಾರಿ-೩೫,೭೮೦, ಕೊಡಗು - ೨೩೩, ದಕ್ಷಿಣ ಕನ್ನಡ-೧೧, ಬೆಳಗಾವಿ -೨೯೨೭, ಬಿಜಾಪುರ - ೪೪,೬೬೩, ಧಾರವಾರ-೨೯,೫೫೬, ಉತ್ತರ ಕನ್ನಡ-೪೧೮೧, ಬೀದರ-೧೦,೯೩೯, ಕಲಬುರ್ಗಿ-೫೭,೮೨೦, ರಾಯಚೂರು-೧೭,೬೩೨, ಒಟ್ಟು ೩,೫೩,೮೮೨. ಇದರಿಂದ ನಮಗೆ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿಯೂ ಲಂಬಾಣಿಗಳು

ವಾಸವಾಗಿದ್ದಾರೆ ಎಂದು ತಿಳಿದುಬರುತ್ತದೆ. ಮೈಸೂರು, ಮಂಡ್ಯ, ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ವಾಸವಾಗಿದ್ದು, ಕಲಬುರ್ಗಿ, ಶಿವಮೊಗ್ಗ, ಬಳ್ಳಾರಿ, ಚಿತ್ರದುರ್ಗ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ ಎಂಬುದು ತಿಳಿದುಬರುತ್ತದೆ.

**ಲಂಬಾಣಿಗಳ ಬಗ್ಗೆ ದೊರೆಯುವ ಕೆಲವು ಪ್ರಮುಖ ಮಾಹಿತಿ ಮೂಲಗಳು**

ಲಂಬಾಣಿ ಕರ್ನಾಟಕದಲ್ಲಿ ವಾಸವಾಗಿರುವ ಪರಿಶಿಷ್ಟ ಬುಡಕಟ್ಟಿನ ಸಮುದಾಯಗಳಲ್ಲಿ ಒಂದು. ವಿಶಿಷ್ಟ ಸಾಂಸ್ಕೃತಿಕ ಪರಂಪರೆಯ ಈ ಜನರು ತಮ್ಮನ್ನು ತಾವು 'ಗೋರಮಾಡಿ', 'ಗೋರವಂಟ', 'ಗೋರ', 'ಬಂಜಾರ'ಗಳೆಂದೂ ಕರೆದುಕೊಳ್ಳುತ್ತಾರೆ (ಥರ್ಸ್ಟನ್,೧೯೦೯). ಭಾರತದ ಉದ್ದಗಲಕ್ಕೂ ಹರಡಿರುವ ಇವರನ್ನು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬಂಜಾರ, ಬಂಜಾರಿ, ವನಚಾರಿ, ಲಂಬಾಡಿ, ಲಬಾಡ, ಮುಂತಾದ ೨೭ ಹೆಸರುಗಳಿಂದ ಗುರುತಿಸಲಾಗುತ್ತದೆ (ನಂಜುಂಡಯ್ಯ ಮತ್ತು ಐಯ್ಯರ್ ೧೯೨೮). ಇಡೀ ಭಾರತದಲ್ಲಿ ಪಸರಿಸಿರುವ ಇವರಿಗೆ ಬೇರೆ ಬೇರೆ ಕಸುಬುಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಹೆಸರುಗಳು ಬಂದಿವೆ. ಅವರ ಭಾಷೆ ಮತ್ತು ಮಹಿಳೆಯರ ವೇಷಭೂಷಣಗಳು ಇವರನ್ನು ಸಮುದಾಯದ ಒಳಗೇ ಬಂಧಿಸುವ ಸೂತ್ರಗಳಾಗಿವೆ. ತಮ್ಮ ವೇಷಭೂಷಣಗಳು, ಆಚಾರ ವಿಚಾರಗಳಿಂದ ಪ್ರತ್ಯೇಕತೆಯನ್ನು ಕಾಯ್ದುಕೊಂಡು ತಮ್ಮದೇ ಸಾಂಸ್ಕೃತಿಕ ಹಿನ್ನೆಲೆಯನ್ನು ಇಟ್ಟುಕೊಂಡು ಪ್ರತ್ಯೇಕವಾದ ತಾಂಡಗಳಲ್ಲಿ ವಾಸಿಸುತ್ತಾ ಬಂದಿದ್ದಾರೆ. ಸಾಂಸ್ಕೃತಿಕ ವಿಕಾಸದ ಹಿನ್ನೆಲೆಯಿಂದ ಸಮಾಜ ವಿಜ್ಞಾನಿಗಳ ಅಧ್ಯಯನಗಳಲ್ಲಿ ಲಂಬಾಣಿಗಳನ್ನು ಬುಡಕಟ್ಟಿನ ಜನರೆಂದು ಸಾಮಾನ್ಯವಾಗಿ ಪರಿಗಣಿಸಲಾಗುತ್ತದೆ. ಹೀಗಾಗಿ ಕೇವಲ ಲಂಬಾಣಿ ಜನರಿಗೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳನ್ನು ಮಾತ್ರ ಈ ಸಮೀಕ್ಷೆಯಲ್ಲಿ ಪರಿಗಣಿಸಲಾಗಿದೆ.

ಎಂಥೋವನ್ (೧೯೨೨) ಅವರು ತಮ್ಮ ಪುಸ್ತಕದಲ್ಲಿ ಲಂಬಾಣಿಗಳ ಬಗ್ಗೆ ಈ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಲಂಬಾಣಿಗಳ ಸಾಂಪ್ರದಾಯಿಕ ಆದಾಯದ ಮೂಲ ಕುಗ್ಗಿ, ಡಕಾಯಿತಿ ನಿಂತು ಹೋದುದ್ದರಿಂದ ಲಂಬಾಣಿಗಳು ಬೇರೆ ಬೇರೆ ಆದಾಯ ಮೂಲಗಳಿಗೆ ಬಲವಂತವಾಗಿ ತಳ್ಳಲ್ಪಟ್ಟರು. ಅರಣ್ಯಗಳಲ್ಲಿ, ರೈತರ ಹೊಲ ಗದ್ದೆಗಳಲ್ಲಿ ಕೂಲಿಗಳಾಗಿ ಮತ್ತು ಇತರೆ ಸಾಮಾನ್ಯ ಕೂಲಿ ಮತ್ತು ಸೇವಾ ಕೆಲಸವನ್ನು, ಮನಶಕ್ತಿಗೆ ವಿರುದ್ಧ, ಯಾವುದೇ ಸಾಂಪ್ರದಾಯಿಕ ಸಾಂಸ್ಕೃತಿಕ ಹಿನ್ನೆಲೆ ಇಲ್ಲದೆ ಮಾಡಬೇಕಾಯಿತು. ೧೯ನೇ ಶತಮಾನದ ಕೊನೆಯ ಭಾಗದಿಂದ ಮತ್ತು ೨೦ನೇ ಶತಮಾನದ ಪ್ರಾರಂಭದಿಂದ ಲಂಬಾಣಿಗಳು ಅಪರಾಧಿ ಕೆಲಸಗಳನ್ನು ಬಿಟ್ಟು ಕಾನೂನಿಗೆ ಬದ್ಧರಾಗಿ ಇತರೆ ನಾಗರೀಕರಂತೆ ನಡೆದುಕೊಳ್ಳುತ್ತಿದ್ದರೂ, ಉತ್ತರ ಕರ್ನಾಟಕದಲ್ಲಿ ಅಲೆಮಾರಿ ಲಂಬಾಣಿಗಳ ಮೇಲೆ ಪೋಲಿಸರು ಕಣ್ಗಾವಲು ಈಗಲೂ ಇದೆ (ಹಿಂದಿನಂತೆ). ಇವರ ಮೇಲೆ ಗೋವು, ಮಹಿಳೆ ಮತ್ತು ಮಕ್ಕಳ ಅಪಹರಣ, ಖೋಟಾ ನ್ಯಾಣಗಳ ಸಾಗಾಣಿಕೆ, ಡಕಾಯಿತಿ, ಇತ್ಯಾದಿ ಆರೋಪಗಳನ್ನು ಹೊರಿಸಲಾಗಿದೆ ಎಂದು ಗುರುತಿಸಿದ್ದಾರೆ. ಆದಾಯದ ಬೇರೆ ಮಾರ್ಗವಿಲ್ಲದೆ ಕೊನೆಗೆ ಲಂಬಾಣಿಗಳು ವ್ಯವಸಾಯದಲ್ಲಿ ನೆಲೆ ಹೋಗಬೇಕಾಯಿತು, ಇದು ಲಂಬಾಣಿಗಳ ಇತಿಹಾಸದ ಯಾವುದೇ ಕಾಲದಲ್ಲಿ ಉದ್ಯೋಗವಾಗಿಲ್ಲದಿದ್ದರೂ, ಅದನ್ನು ಮಾಡಲೇ ಬೇಕಾದ ಪರಿಸ್ಥಿತಿ ಬಂದಿತ್ತು ಎಂದು ಥರ್ಸ್ಟನ್ (೧೯೦೯) ಅವರು ಸಹ ಗುರುತಿಸಿದ್ದಾರೆ.

ನಂಜುಂಡಯ್ಯ ಮತ್ತು ಐಯ್ಯರ್ (೧೯೨೮) ಅವರ "ದಿ ಮೈಸೂರ್ ಟ್ರೈಬ್ಸ್ ಅಂಡ್ ಕ್ಯಾಸ್ಟ್" ಗ್ರಂಥದಲ್ಲಿ ಲಂಬಾಣಿ ಜನರನ್ನು ದೇಶದ ವಿವಿಧ ಭಾಗಗಳಲ್ಲಿ ಯಾವ ಯಾವ ಹೆಸರುಗಳಿಂದ ಕರೆಯಲಾಗುತ್ತದೆ ಎಂಬುದಕ್ಕೆ ಸಂಬಂಧಿಸಿದಂತೆ ಈ ರೀತಿ ಗುರುತಿಸಿದ್ದಾರೆ. ಲಂಬಾಣಿ/ಬಂಜಾರರು ಸಾಂಪ್ರದಾಯಿಕವಾಗಿ ಎತ್ತಿನ ಬಂಡಿಗಳನ್ನು ನಡೆಸುತ್ತ ಸರಕು ಸಾಗಿಸುವವರಾಗಿದ್ದರು. ಇವರನ್ನು ದೇಶದ ಹಲವೆಡೆ 'ವನಚಾರಿ' (ಕಾಡಿನಲ್ಲಿ ಅಲೆದಾಡುವವರು) ಲಂಬಾಡ, ಲಂಮಾನಿ ಮತ್ತು ಲಂಬಾನ ಎಂದು ಕರೆಯುತ್ತಾರೆ. ಇದರಲ್ಲಿ ಮೂರನೆಯ ಶಬ್ದವನ್ನು ಬಿಟ್ಟು ಉಳಿದ ಶಬ್ದಗಳು ಸಂಸ್ಕೃತದ 'ಲವಣ' ಎಂಬ ಶಬ್ದದಿಂದ ಬಂದಿದೆ. ಲವಣ ಎಂದರೆ ಉಪ್ಪು ಎಂದರ್ಥ. ಇದು ಅವರ ಸಾಂಪ್ರದಾಯಿಕ ಮೂಲ ವಾಣಿಜ್ಯ ವ್ಯಾಪಾರದ ಒಂದು ಸರಕಾಗಿತ್ತು ಎಂದು ಗುರುತಿಸಿದ್ದಾರೆ.

ಚಿದಾನಂದಮೂರ್ತಿ (೧೯೭೦) ಅವರು ಲಂಬಾಣಿ ಜನ ಮತ್ತು ಭಾಷೆ ಎಂಬ ಲೇಖನದಲ್ಲಿ, ಈ ಜನರ ಇತಿಹಾಸ, ಧಾರ್ಮಿಕತೆ, ಗಾದೆ, ನ್ಯಾಯಪದ್ಧತಿ ಹಾಗೂ ಭಾಷೆಯನ್ನು ಸ್ಥೂಲವಾಗಿ ಚರ್ಚಿಸಿದ್ದಾರೆ. ಈ ಲೇಖನವು ಅನೇಕ ದೃಷ್ಟಿಕೋನಗಳನ್ನು ಒಳಗೊಂಡಿದ್ದರು ಲಂಬಾಣಿ ಭಾಷೆಯನ್ನು ಲೇಖಕರು ಪ್ರಮುಖ ವಿಷಯವಾಗಿ ಚರ್ಚಿಸಿದ್ದಾರೆ. ರಾಥೋಡ್ (೧೯೭೧) ಅವರು, ಲಂಬಾಣಿ ಭಾಷೆ, ಅದರ ವ್ಯಾಕರಣ ಹಾಗೂ ರಾಜಸ್ಥಾನಿ ಮತ್ತು ಹಿಂದಿಯೊಡನೆ ಆ ಭಾಷೆಯ ಸಂಬಂಧ ಎಂಬ ಪಿ.ಎಚ್.ಡಿ. ಮಹಾಪ್ರಬಂಧವು ಪ್ರಮುಖವಾಗಿ ವ್ಯಾಕರಣ ಅಂಶಗಳಿಂದ ಕೂಡಿದ್ದರೂ, ಇನ್ನಿತರ ಸಾಂಸ್ಕೃತಿಕ, ಸಾಮಾಜಿಕ, ಅಂಶಗಳು ಇದರಲ್ಲಿಲ್ಲ. ಅಲ್ಲದೆ ರಾಜಸ್ಥಾನಿಯ ಉಪಭಾಷೆ ನಿಕಟವಾದ ಸಂಬಂಧ ಇರುವುದನ್ನು ಲೇಖಕರು ಪ್ರತಿಪಾದಿಸಿದ್ದಾರೆ.

ಖಂಡೋಬಾ (೧೯೯೧) ಅವರು, 'ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ'ದಲ್ಲಿ ಈ ಜನರ ಬಗ್ಗೆ ವಿವರಣಾತ್ಮಕವಾದ ಮಾಹಿತಿಗಳು ದೊರಕುತ್ತವೆ. ಲಂಬಾಣಿಗಳ ಮೂಲಸ್ಥಾನ, ದಕ್ಷಿಣಕ್ಕೆ ವಲಸೆ, ಜನಸಂಖ್ಯೆ, ಕಸುಬು, ಕಲೆ, ಕುಲ/ಗೋತ್ರ ಹಾಗೂ ಸಂಸ್ಕಾರಗಳಿಗೆ ಸಂಬಂಧಿಸಿದಂತೆ ಅಧ್ಯಯನ ಕೈಗೊಂಡಿದ್ದಾರೆ. ಈ ಜನರ ಸಾಮಾಜಿಕ ವ್ಯವಸ್ಥೆ, ಕೌಟುಂಬಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಜನಪದ ಹಾಗೂ ಇನ್ನು ಮುಂತಾದ ವಿಷಯಗಳನ್ನು ವಿವರಿಸಿದ್ದಾರೆ. ಮಾನವಶಾಸ್ತ್ರೀಯ ಮತ್ತು ಸಮಾಜಶಾಸ್ತ್ರೀಯ ಅಂಶಗಳನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಂಡಿದ್ದರೂ ಸಹ ಜನಪದೀಯ ಆಕರಗಳನ್ನು ಹೆಚ್ಚು-ಹೆಚ್ಚು ಬಳಸುವ ಮೂಲಕ ಲೇಖಕರು ಜನಪದೀಯ ಅಂಶಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿರುತ್ತಾರೆ. ಇವರ ಅಧ್ಯಯನಕ್ಕೂ ಕೊನೆಯಲ್ಲಿ ಸಂಶೋಧಕರು ಲಂಬಾಣಿಗಳ ಮೀಸಲಾತಿ ಬಗೆಗೆ ವಿವರಿಸಿರುವ ಶಿಫಾರಸ್ಸಿಗೂ ಯಾವುದೇ ತಾರ್ಕಿಕವಾದ ಸಂಬಂಧವಿಲ್ಲ.

ಹೀಗೆ ಈ ಜನರ ಭಾಷೆ ಜನಪದ ಗಾದೆಗಳು ಇನ್ನು ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ೧೯೭೦, ೮೦, ೯೦ ರ ದಶಕಗಳಲ್ಲಿ ಹೆಚ್ಚು-ಹೆಚ್ಚು ಲೇಖನಗಳು ಬಂದಿವೆ. ಇಂತಹ ಅಧ್ಯಯನಗಳಲ್ಲಿ ಲೇಖಕರು ಅಥವಾ ಸಂಶೋಧಕರು ಜನಪದೀಯ ಅಂಶಗಳಿಗೆ ಹೆಚ್ಚು ಮಹತ್ವ ನೀಡಿರುವುದನ್ನು ನಾವು ಗಮನಿಸಬಹುದು. ಹೀಗಾಗಿ ಈ ಜನರ ಬಗೆಗೆ ಈವರೆಗೆ ಅಧ್ಯಯನ ನಡೆಸಿರುವ ವಿದ್ವಾಂಸರು ಹಾಗೂ ಸಂಶೋಧಕರುಗಳು ಲಂಬಾಣಿ ಜನರನ್ನು ಜನಪದ ಆಕರ್ಷಣೆಯಿಂದ, ಇದು ವಿಶೇಷ ಸಮುದಾಯವೆಂದು ಪರಿಗಣಿಸಿ ಅಧ್ಯಯನ ನಡೆಸಿದ್ದಾರೆ. ಆದರೆ ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಈ ಜನರ ಬಗೆಗೆ ನಡೆದಿರುವ ಅಧ್ಯಯನಗಳು ಅತ್ಯಂತ ವಿರಳ ಎಂದು ಹೇಳಬಹುದು.

ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಲಂಬಾಣಿ ಸಾಮಾಜಿಕ ರಚನೆಯಲ್ಲಿ ಉಂಟಾಗುತ್ತಿರುವ ಪರಿವರ್ತನೆಯನ್ನು ಗಮನಿಸಿ ಕ್ರಮಬದ್ಧವಾಗಿ, ವೈಜ್ಞಾನಿಕ ಅಧ್ಯಯನಮಾಡಲು ಪ್ರಯತ್ನಿಸಲಾಗಿದೆ.

**ಈವರೆಗೆ ನಡೆದಿರುವ ಕೆಲವು ಮುಖ್ಯ ಅಧ್ಯಯನಗಳ ಸಮೀಕ್ಷೆಯಲ್ಲಿ ಕಂಡುಬಂದ ಪ್ರಮುಖ ಅಂಶಗಳು.**

೧. ಇದುವರೆಗೆ ನಡೆದಿರುವ ಅಧ್ಯಯನಗಳು ಒಂದೇ ಶಿಸ್ತಿಗೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದು ತಿಳಿದುಬರುತ್ತದೆ.

೨. ಅಧ್ಯಯನಗಳು ಲಂಬಾಣಿ ಜನರ ಜಾನಪದ ಹಾಗೂ ಐತಿಹಾಸಿಕ ಅಂಶಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದು.

೩. ಲಂಬಾಣಿ ಸಾಮಾಜಿಕ ರಚನೆಯಲ್ಲಿ ಉಂಟಾಗುತ್ತಿರುವ ಬದಲಾವಣೆಯ ಬಗೆಗೆ ಕಾರ್ಯಕಾರಣ ಸಂಬಂಧವನ್ನು ಸ್ಪಷ್ಟವಾಗಿ ಗುರುತಿಸದೆ ಇರುವುದು.

೪. ಆಧುನಿಕ - ಸಾಮಾಜಿಕ ಸಂಸ್ಥೆಗಳ ಪ್ರಭಾವ ಮತ್ತು ಪರಿಣಾಮದಿಂದ ಉಂಟಾಗುತ್ತಿರುವ ಬದಲಾವಣೆಯನ್ನು ಗುರುತಿಸುವಲ್ಲಿ ಬಹುಮಟ್ಟಿಗೆ ಸಫಲವಾಗಿಲ್ಲದಿರುವುದು.

೫. ಆರ್ಥಿಕ ಅಭಿವೃದ್ಧಿಯಿಂದ ಲಂಬಾಣಿಗಳ ಸಾಮಾಜಿಕ ಸಂಸ್ಥೆಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ವಿಶ್ಲೇಷಣೆಗೆ ಒಳಪಡಸದೆ ಇರುವುದು.

**ಅಧ್ಯಯನದ ಅವಶ್ಯಕತೆ ಮತ್ತು ಪ್ರಾಮುಖ್ಯತೆ**

ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರ ಅಧ್ಯಯನಕಾರರು ಸಮುದಾಯಗಳ ಬಗ್ಗೆ ನಡೆಸಿದ ಸಾಂಪ್ರದಾಯಿಕ ಅಧ್ಯಯನಗಳಲ್ಲಿ ಇಂದು ಸ್ವಲ್ಪ ಮಟ್ಟಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ತಾಂತ್ರಿಕ ಬದಲಾವಣೆಗಳನ್ನು ಕಾಣಬಹುದು. ಹೊಸ ಸ್ವಾತಂತ್ರ ರಾಷ್ಟ್ರ- ರಾಜ್ಯಗಳು ಆಧುನೀಕರಣ ಮತ್ತು ಆರ್ಥಿಕ ಅಭಿವೃದ್ಧಿಯಿಂದ ಅನೇಕ ಬಗೆಯ ಸಾಮಾಜಿಕ ಬದಲಾವಣೆಗಳನ್ನು ಕಂಡಿವೆ (ಡಾಲ್ಟನ್, ೧೯೭೦-೭೨). ನಮ್ಮ ಅಧ್ಯಯನದ ಆಸಕ್ತಿಯು ಈ ಕ್ಷೇತ್ರವೇ ಆಗಿರುತ್ತದೆ. ಈ ಆಸಕ್ತಿಯು ನಮಗೆ ಇತ್ತೀಚಿನದಾದರೂ ನಾವು ಅಧ್ಯಯನ ಮಾಡಬೇಕಾದ ಸಮಸ್ಯೆ ತುಂಬಾ ಸಂಕೀರ್ಣವಾಗಿದೆ. ಸಾಂಪ್ರದಾಯಿಕ ಅಧ್ಯಯನಕಾರರ ಆಸಕ್ತಿ ದೇಶೀಯ ಆರ್ಥಿಕ ಸಂಘಟನೆಗಳ ಕಾರ್ಯವೈಖರಿಯನ್ನು ಸಮಕಾಲೀನ ಸಂದರ್ಭದ ಸಾಂಸ್ಕೃತಿಕ ಚೌಕಟ್ಟಿನಲ್ಲಿ, ವಸಾಹತುಶಾಹಿ ಸಂದರ್ಭದ ಸಾಮಾಜಿಕ ಸನ್ನಿವೇಶವನ್ನು ಅರ್ಥಮಾಡಿಕೊಳ್ಳುವುದಾಗಿತ್ತು. ಆದರೆ ಆಧುನೀಕರಣ ಪ್ರಕ್ರಿಯೆಯಲ್ಲಿ ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳ ಆಸಕ್ತಿ ಸುಧಾರಣಾತ್ಮಕವಾಗಿ ಒಂದು ನಿರ್ದಿಷ್ಟ ಅಭಿವೃದ್ಧಿಯನ್ನು ಸಾಧಿಸುವುದು. ಈ ಹಿನ್ನೆಲೆಯಲ್ಲಿ ಹೊಸ ಅಧ್ಯಯನ ಕ್ಷೇತ್ರ ಹಳೆಯ ಸಾಂಸ್ಕೃತಿ ಚೌಕಟ್ಟಿನ ಅಧ್ಯಯನಗಳಿಗಿಂತ ಸ್ವಲ್ಪ ಭಿನ್ನವಾಗಿವೆ. ಇತ್ತೀಚೆಗೆ ಹಳ್ಳಿಗಳು, ಸಮುದಾಯಗಳು ಹೊಸ ಅವಕಾಶಗಳಿಂದ, ಹೊಸ ಹೊಸ ಅನುಭವಗಳನ್ನು ಆದಾಯದ ಹೆಚ್ಚಳದಲ್ಲಿ, ಹೊಸ ಉತ್ಪಾದನಾ ಚಟುವಟಿಕೆಗಳಿಂದ ಉತ್ಪಾದನೆಯಲ್ಲಿ ಉಂಟಾಗಿರುವ ಹೆಚ್ಚಳ, ಹೊಸ ಸಂಘ ಸಂಸ್ಥೆಗಳು ನೀಡಿರುವ ಸೌಲಭ್ಯಗಳಿಂದ, ಹೊಸ ಸಾಂಸ್ಕೃತಿಕ ಸಾಧನೆಗಳನ್ನು ಅವಲೋಕಿಸಿದರೆ ರಾಜ್ಯ ಮತ್ತು ರಾಷ್ಟ್ರಗಳು ಹೊಸ ಆರ್ಥಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಸುಲಭಗೊಳಿಸಿವೆ. ಇದನ್ನು ತುಂಬಾ ಸೂಕ್ಷ್ಮವಾಗಿ ಗುರುತಿಸುವುದಾದರೆ

ಅಭಿವೃದ್ಧಿ ಚಟುವಟಿಕೆಗಳು ಮೇಲಿನಿಂದ ಕೆಳಮುಖವಾಗಿ ಬರುತ್ತಿರುವುದು ತಿಳಿಯುತ್ತದೆ. ಲಂಬಾಣಿಗಳ ಬಗೆಗಿನ ಈ ಸಂಶೋಧನೆಯು ಹೊಸ ಅಧ್ಯಯನ ಕ್ಷೇತ್ರದ ಬಗೆಗಿನ ಉತ್ಸಾಹವೆನಿಸಿದರೂ ಈ ನಿಟ್ಟಿನಲ್ಲಿ ಒಂದು ಸಣ್ಣ ಹೆಜ್ಜೆ ಎಂಬುದು ಈ ಅಧ್ಯಯನದ ಆಶಯ.

ಸಮುದಾಯ ಬಗೆಗಿನ ಅಧ್ಯಯನಗಳು ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರ ಶಿಸ್ತುಗಳಲ್ಲಿ ತಮ್ಮದೇ ಪ್ರಾಮುಖ್ಯತೆ ಹೊಂದಿವೆ. ಏಕೆಂದರೆ ಇಂದಿನ ಶೀಘ್ರಗತಿಯ ಬದಲಾವಣೆಯ ವ್ಯಾಪಕತೆ ಲಂಬಾಣಿಗಳಂತಹ ಹಲವು ಸಮುದಾಯಗಳ ಸಾಂಪ್ರದಾಯಿಕ ಜೀವನ ಶೈಲಿಯನ್ನು ಬದಲಾಯಿಸಿಬಿಡುವ ಸಾಧ್ಯತೆಯಿದೆ. ಹೀಗಾಗಿ ನಶಿಸಿಹೊಗುತ್ತಿರುವ ಗುಂಪುಗಳ ಸಂಸ್ಕೃತಿಯ ಉತ್ತಮ ಗುಣಗಳನ್ನು ಪುನರ್ ಸಂಪಾದನೆ ಮಾಡಿ ವಿಶ್ಲೇಷಿಸುವ ಅವಶ್ಯಕತೆಯಿದೆ. ಅಲ್ಲದೆ ಲಂಬಾಣಿ ಜನರಿಗೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಹೆಚ್ಚಿನ ಅಧ್ಯಯನಗಳು ಈ ಜನರ ಜನಪದ ಸಂಪ್ರದಾಯ, ಆಚಾರ-ವಿಚಾರ, ಕಲೆ, ನಂಬಿಕೆಗಳು ಮೌಲ್ಯಗಳು, ಸಂಸ್ಕಾರ ಪದ್ಧತಿ ಇನ್ನೂ ಮುಂತಾದ ವಿಷಯಗಳ ಬಗ್ಗೆ ಜನಪದೀಯ ದೃಷ್ಟಿಕೋನದಿಂದ ಕೈಗೊಂಡ ಅಧ್ಯಯನಗಳೇ ಆಗಿವೆ. ಈ ಜನರ ಸಂಸ್ಕೃತಿ, ವೃತ್ತಿ, ವ್ಯಾಪಾರ, ಹೀಗೆ ಇನ್ನೂ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಮಾನವಶಾಸ್ತ್ರೀಯ ದೃಷ್ಟಿಕೋನದಿಂದ ಅಧ್ಯಯನಗಳು ನಡೆದಿವೆ (ಥರ್ಸ್ಟನ್, ೧೯೦೯; ಎಂಥೋವನ್, ೧೯೨೨; ನಂಜುಂಡಯ್ಯ ಮತ್ತು ಐಯ್ಯರ್, ೧೯೨೮; ಖಂಡೋಬಾ, ೧೯೮೮, ೧೯೯೧). ಆದರೆ ಇದುವರೆಗೆ ನಡೆದಿರುವ ಎಲ್ಲಾ ಅಧ್ಯಯನಗಳು ಲಂಬಾಣಿ ಜನರನ್ನು (ಸಮುದಾಯ) ಬೇರೆ - ಬೇರೆ ದೃಷ್ಟಿಕೋನದಿಂದ ನೋಡದ ಏಕಶಿಸ್ತೀಯ ದೃಷ್ಟಿಕೋನದಿಂದ ಅಧ್ಯಯನ ಮಾಡುವುದಕ್ಕೆ ಸೀಮಿತಗೊಂಡಿವೆ. ಹೀಗಾಗಿ ಈ ಜನರ ಸಾಮಾಜಿಕ ರಚನೆಯಲ್ಲಿ ಬರುವ ಮತ್ತು ಸಂಸ್ಥೆಗಳ ಸಮಷ್ಟಿಯಲ್ಲಿ ಉಂಟಾಗುತ್ತಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿವರ್ತನೆಗಳನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ. ಹಾಗಾಗಿ ಲಂಬಾಣಿ ಜನರನ್ನು ಕುರಿತು ಮುಖ್ಯವಾಗಿ ಸಮಾಜಶಾಸ್ತ್ರೀಯ ನೆಲೆಯಲ್ಲಿ ಅಧ್ಯಯನ ನಡೆಸುವುದು ಅಗತ್ಯ ಮತ್ತು ಅವಶ್ಯವಾಗಿದೆ.

ಇಂದು ಲಂಬಾಣಿಗಳಂತ ಅನೇಕ ಹಿಂದುಳಿದ ಸಮುದಾಯಗಳ ಜನರು ತಮಗೆ ಸಂಬಂಧಪಟ್ಟ ಹಾಗೂ ಸಂಬಂಧಪಡದ ವಿಷಯಗಳು ಒಂದಕ್ಕೊಂದು ಅಡ್ಡೈಯಿಸುವಾಗ ಸಂಭವಿಸುವ ಒತ್ತಡದಿಂದ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಪಡುತ್ತಿದ್ದಾರೆ. ಸ್ಥಿತ್ಯಂತರಗಳು ಕೇವಲ ಗುಣಾತ್ಮಕವಾದ ಬದಲಾವಣೆಗಳನ್ನು ತರದೆ ನಕಾರಾತ್ಮಕ ಬದಲಾವಣೆಗಳನ್ನು ಜೊತೆ ಜೊತೆಯಲ್ಲಿ ತರುತ್ತಿವೆ. ಕರ್ನಾಟಕ ರಾಜ್ಯ ಸರ್ಕಾರವು ೧೯೭೭ರ ಜುಲೈನಲ್ಲಿ ಲಂಬಾಣಿಗಳನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಿತು. ಇದು ಲಂಬಾಣಿಗಳಿಗೆ ಅನೇಕ ಹೊಸ ಅಭಿವೃದ್ಧಿ ಕಾರ್ಯಕ್ರಮಗಳನ್ನು ಉಪಯೋಗಿಸಿಕೊಳ್ಳಲು ಅವಕಾಶ ಕಲ್ಪಿಸಿತು. ಉದಾಹರಣೆಗೆ: ಶೈಕ್ಷಣಿಕ ಸೌಲಭ್ಯಗಳು, ಆರೋಗ್ಯ ಕಾರ್ಯಕ್ರಮ, ಕೃಷಿ ದರಕಾಸ್ತು ಭೂಮಿಯನ್ನು ಸರಕಾರದಿಂದ ಪಡೆದುಕೊಳ್ಳುತ್ತಿರುವುದು, ರಿಯಾಯಿತಿ ಸಾಲ-ಸೌಲಭ್ಯ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮ - ಹೀಗೆ ಅನೇಕ ಸೌಲಭ್ಯ ಸವಲತ್ತುಗಳನ್ನು ಪಡೆದುಕೊಳ್ಳಲು ಲಂಬಾಣಿಗಳಿಗೆ ಆಸ್ಪದವಾಯಿತು. ಈ ರೀತಿಯ ಹೊಸ ಕಾರ್ಯಕ್ರಮಗಳ ಜೊತೆ ಹೊಂದಾಣಿಕೆ ಮಾಡಿಕೊಳ್ಳುವಾಗ, ಅವರು ಮಾನಸಿಕ-ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳಿಗೆ ಒಳಗಾಗಿದ್ದಾರೆ. ಈ ರೀತಿಯ ಒತ್ತಡದಿಂದ ಉಂಟಾದ ಸ್ಥಿತ್ಯಂತರ ಸಂಕ್ರಮಣ ಸಂದರ್ಭದಲ್ಲಿ ಮಾನಸಿಕ-ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಒಂದು ಮತ್ತೊಂದರಲ್ಲಿ ತೊಡರಿಸಿಕೊಂಡಿವೆ. ಹೀಗೆ ತೊಡರಿಸಿಕೊಂಡಿರುವ ಸಾಂಸ್ಕೃತಿಕ-ಸಾಮಾಜಿಕ ಸಂದರ್ಭವನ್ನು ಆಸ್ಕರ್ ಲೀವಿನ್ಸ್ ಅವರ, 'ಕಲ್ಚರ್ ಆಫ್ ಪಾವರ್ಟಿ', (೧೯೫೯;೧೯೬೮) ಎಂಬ ಪರಿಕಲ್ಪನೆಯಿಂದ ಹಾಗೂ ಹೋಲಮ್‌ಬರ್ಗ್ (೧೯೬೦) ಅವರ ಅಕೌಂಟ್ ಆಫ್ ದಿ ಸಿನಾರಿಯೋ ಆಫ್ ಈಸ್ಟರ್ನ್ ಬೋಲಾವಿಯೋ ಎಂಬ ಚಿಂತನೆಗಳ ಸಹಾಯದಿಂದ ನಮ್ಮ ಚಿಂತನೆಗಳನ್ನು ಸೂಕ್ಷ್ಮಗೊಳಿಸಿಕೊಂಡು ಲಂಬಾಣಿಗಳ ಸಾಮಾಜಿಕ, ಸಾಂಸ್ಕೃತಿಕ ಸಂಬಂಧವನ್ನು ಅಧ್ಯಯನ ಮಾಡುವ ಅವಶ್ಯಕತೆಯಿದೆ.

## ಪ್ರಸಕ್ತ ಅಧ್ಯಯನದ ಉದ್ದೇಶಗಳು

ಲಂಬಾಣಿ ಸಮುದಾಯದಲ್ಲಿ ಉಂಟಾಗಿರುವ ಸಾಮಾಜಿಕ ಬದಲಾವಣೆಯನ್ನು ಚರ್ಚಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಆರ್ಥಿಕ ಬದಲಾವಣೆಯಿಂದ ಇವರ ಸಾಂಪ್ರದಾಯಿಕ ಸಂಸ್ಥೆ, ಸಾಂಸ್ಕೃತಿಕ ಆಚಾರಣೆ, ಮೌಲ್ಯಗಳು, ನಂಬಿಕೆ ಇನ್ನೂ ಮುಂತಾದ ಸಾಮಾಜಿಕ ವ್ಯವಸ್ಥೆಗಳಲ್ಲಿ ಉಂಟಾಗಿರುವ ಬದಲಾವಣೆಯನ್ನು ಗೋಚ್ (೧೯೫೨), ಶಾರ್ಪ (೧೯೫೨), ಬೈಲಿ (೧೯೫೭) ಮತ್ತು ಎಪಿಸ್ಟನ್ (೧೯೬೨). ಇವರುಗಳು ಗುರುತಿಸಿರುವ ಮಾದರಿಯಲ್ಲಿ ಅಭ್ಯಸಿಸಲು ಉದ್ದೇಶಿಸಲಾಗಿದೆ. ಯಾವುದೇ ಸಮಾಜದಲ್ಲಿ ಆರ್ಥಿಕ ಅಂಶ ಹಾಗೂ ಆರ್ಥಿಕೇತರ ಅಂಶಗಳ ಮಧ್ಯೆ ಇರುವ ಸಂಬಂಧ ತುಂಬಾ ಸಂಕೀರ್ಣವಾದುದ್ದು. ಅದನ್ನು ಒಂದು ರೀತಿಯಲ್ಲಿ ಆರ್ಥಿಕ ಚಲನೆಯ ರಚನಾಕ್ರಮದ ಚೌಕಟ್ಟಿನಲ್ಲಿ ಚರ್ಚಿಸಿದರೆ, ಮತ್ತೊಂದು ರೀತಿಯಲ್ಲಿ ಲಂಬಾಣಿಗಳ ಜೀವನ ಶೈಲಿಯನ್ನು, ಅವರ ಸಾಮಾಜಿಕ ಸಾಂಸ್ಕೃತಿಕ ಸಂಬಂಧದ ಹಿನ್ನಲೆಯಲ್ಲಿ ಚರ್ಚಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಲಂಬಾಣಿಗಳ ಸಾಮಾಜಿಕ–ಸಾಂಸ್ಕೃತಿಕ ರಚನಾಕ್ರಮವನ್ನು ಮತ್ತು ಆರ್ಥಿಕ ಅಭಿವೃದ್ಧಿ ಸ್ಥಿತಿಗತಿಗಳನ್ನು ಸಮಾಜಶಾಸ್ತ್ರದ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗಿದೆ. ಅಲ್ಲದೆ ಈ ಅಧ್ಯಯನವು ಕೇವಲ ಸಮಾಜಶಾಸ್ತ್ರೀಯ ದೃಷ್ಟಿಕೋನಕ್ಕೆ ಒಳಪಡದೆ ಸಾಮಾಜಿಕ ಮಾನವಶಾಸ್ತ್ರ ಅಧ್ಯಯನ ಶಿಸ್ತಿಗೂ ಬದ್ಧವಾಗಿದೆ (ಮೇಲಿನೊಸ್ಕಿ; ೧೯೨೨, ೧೯೪೪; ಫೋರ್ಡ್, ೧೯೩೪; ಟ್ಯಾಕ್ಸ್, ೧೯೫೩; ರಡ್‌ಕ್ಲಿಫ್ ಬ್ರೌನ್, ೧೯೬೪; ಮತ್ತು ಫಿರ್ತ, ೧೯೬೫). ನಮ್ಮ ಅಧ್ಯಯನದ ಮುಖ್ಯ ಗುರಿ ಸಮಾಜ ಮತ್ತು ಆರ್ಥಿಕ ಅಂಶಗಳ ಪರಸ್ಪರ ಸಂಬಂಧಗಳ ಬಗ್ಗೆ ಸೂಕ್ಷ್ಮವಾದ ಜ್ಞಾನವನ್ನು ಪಡೆದುಕೊಳ್ಳುವುದು. ಇದು ಸ್ಥಿರ ರೂಪದ ಅಭಿವೃದ್ಧಿ ಕಾರ್ಯಕ್ರಮಗಳಿಂದ ಸಮಾನರೂಪದ ಸಮುದಾಯಗಳಲ್ಲಿ ಉಂಟಾಗಬಹುದಾದ ಸಾಮಾಜಿಕ ಬದಲಾವಣೆಯನ್ನು ಗುರುತಿಸಲು ಉಪಯುಕ್ತವಾಗುವುದು. ಪ್ರಸಕ್ತ ಅಧ್ಯಯನದ ಮಾಹಿತಿ ಸರಕಾರಗಳಿಗೆ ಆರ್ಥಿಕ ಅಭಿವೃದ್ಧಿ ಯೋಜನೆಯನ್ನು ರೂಪಿಸಲು ಸಹಕಾರಿಯಾಗುತ್ತದೆ ಎಂದೂ ಆಶಿಸಲಾಗಿದೆ.

ಸುಮಾರು ಒಂದು ಶತಮಾನದ ಹಿಂದೆ ಲಂಬಾಣಿಗಳು ಸಣ್ಣಪುಟ್ಟ ವ್ಯಾಪಾರ ಮಾಡುತ್ತ ಅಲೆಮಾರಿಗಳಾಗಿದ್ದರು. ಆದರೆ ಈಗ ಅವರ ಸಂಪ್ರಾದಾಯಿಕ ಆರ್ಥಿಕ ಚಟುವಟಿಕೆಯಲ್ಲಿ ಉಂಟಾಗಿರುವ ಬದಲಾವಣೆಯಿಂದ ಶಾಶ್ವತವಾಗಿ ನೆಲೆಗೊಳ್ಳುತ್ತಿದ್ದಾರೆ. ಇದರ ಪರಿಣಾಮವಾಗಿ ಇವರಲ್ಲಿ ಆರ್ಥಿಕ ಬದಲಾವಣೆಯಿಂದ ಸಾಮಾಜಿಕ ಜೀವನ ಶೈಲಿಯು ಸ್ಥಿತ್ಯಂತರಕ್ಕೆ ಒಳಪಡುತ್ತಿದೆ. ಲಂಬಾಣಿಗಳು ಅಲೆಮಾರಿ ಬದುಕಿನಿಂದ ಶಾಶ್ವತ ನೆಲೆಗೆ ಸ್ಥಿತ್ಯಂತರಗೊಳ್ಳುವ ಸಂಕ್ರಮಣ ಕಾಲಕ್ಕೆ ಹೊಂದಾಣಿಕೆ ಮಾಡಿಕೊಳ್ಳುವಾಗ ಎದುರಿಸಿದ ಸಮಸ್ಯೆಗಳನ್ನು, ಅವರು ಅನುಭವಿಸಿದ ಹಾಗೂ ಅನುಭವಿಸುತ್ತಿರುವ ಸಾಮಾಜಿಕ ಪ್ರಕ್ರಿಯೆಯ ಮಾರ್ಪಾಡುಗಳನ್ನು ಚರ್ಚಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ಲಂಬಾಣಿಗಳು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆನಿಂತ ಸಮುದಾಯಗಳ ಜೊತೆ ನಿರಂತರವಾಗಿ ನಿಕಟ ಸಂಪರ್ಕವನ್ನು ಹೊಂದಿದ್ದಾರೆ. ಆದರೂ ಸಹ ತಮ್ಮದೆ ಆದ ಪ್ರತ್ಯೇಕ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ನಿರಂತರತೆಯನ್ನು ಉಳಿಸಿಕೊಳ್ಳುವಾಗ, ಎದುರಾಗುತ್ತಿದ್ದ ಸಮಸ್ಯೆಗಳನ್ನು ಚರ್ಚಿಸುವುದು ಈ ಅಧ್ಯಯನ ಉದ್ದೇಶಗಳಲ್ಲಿ ಒಂದು. ಲಂಬಾಣಿಗಳು ಉತ್ತರ–ಮಧ್ಯ ಭಾರತದ ಮೇವಾರ ಪ್ರದೇಶದಿಂದ ಇಂದಿನ ರಾಜಸ್ಥಾನದ ಒಂದು ಪ್ರದೇಶ) ಕರ್ನಾಟಕ್ಕೆ ವಲಸೆ ಬಂದಾಗ 'ಮೇವಾರಿ' ಸಂಸ್ಕೃತಿಯನ್ನು ತಮ್ಮ ಜೊತೆ ತಂದಿದ್ದಾರೆ. ಲಂಬಾಣಿಗಳು ಬೇರೆ-ಬೇರೆ ಜಾತಿ ಗುಂಪುಗಳ ವಿವಿಧ ಪ್ರಾದೇಶಿಕ ಸಂಸ್ಕೃತಿಗೆ ತೆರೆದುಕೊಂಡಿದ್ದಾರೆ. ಕೆಲವು ಪ್ರಾದೇಶಿಕ ಸಾಂಸ್ಕೃತಿಕ ಗುಣಲಕ್ಷಣಗಳನ್ನು ರೂಢಿಸಿಕೊಂಡಿದ್ದರೂ, ತಮ್ಮದೇ ಸಾಂಸ್ಕೃತಿಕ ಅನನ್ಯತೆಯನ್ನು ಭಿನ್ನವಾದ ಸಾಂಸ್ಕೃತಿಕ ಪರಿಸರದ ಮಧ್ಯದಲ್ಲಿ ವಾಸಿಸುತ್ತಿದ್ದರೂ ಉಳಿಸಿಕೊಂಡಿದ್ದಾರೆ. ಇಂದು ಲಂಬಾಣಿಗಳು ಅನೇಕ ಬದಲಾವಣೆಗಳನ್ನು ಅನುಭವಿಸುತ್ತಿದ್ದಾರೆ. ಅವರ

ಸಾಂಪ್ರದಾಯಿಕ ಸಾಂಸ್ಕೃತಿಕ ಸಂಸ್ಥೆಗಳು ಗಣನೀಯವಾಗಿ ರೂಪಾಂತರಗೊಂಡಿವೆ. ಇಷ್ಟಾದರೂ ಲಂಬಾಣಿ ಜನರು ತಮ್ಮ ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಉಳಿಸಿಕೊಂಡಿದದ್ದಾರೆಯೇ ಎಂಬುದನ್ನು ಅಭ್ಯಸಿಸುವುದು ಕೂಡ ಪ್ರಸ್ತುತ ಅಧ್ಯಯನದ ಉದ್ದೇಶ. ಲಂಬಾಣಿಗಳನ್ನು ಅಧ್ಯಯನ ವಿಷಯವನ್ನಾಗಿ ಆಯ್ಕೆ ಮಾಡಲು ಪ್ರೇರೇಪಿಸಿದ ಹಿನ್ನೆಲೆಯನ್ನು ಇಲ್ಲಿ ನೀಡಲಾಗಿದ್ದು. ಪ್ರಸಕ್ತ ಅಧ್ಯಯನದ ನಿರ್ದಿಷ್ಟ ಉದ್ದೇಶಗಳನ್ನು ಈ ಕೆಳಗೆ ಸೂಚಿಸಿದೆ :

- ಲಂಬಾಣಿಗಳ ಸಾಮಾಜಿಕ ಮತ್ತು ಆರ್ಥಿಕ ಸಂಸ್ಥೆಗಳ ನಡುವಿನ ಸಂಬಂಧವನ್ನು ಗುರುತಿಸುವುದು.
- ಆರ್ಥಿಕ ಬದಲಾವಣೆಯಿಂದ ಲಂಬಾಣಿಗಳ ಸಾಂಪ್ರದಾಯಿಕ ಸಾಮಾಜಿಕ ಸಂಸ್ಥೆಗಳಲ್ಲಿ ಮತ್ತು ವ್ಯವಸ್ಥೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಅಭ್ಯಸಿಸುವುದು.
- ಲಂಬಾಣಿಗಳ ಆರ್ಥಿಕ ಸಾಮಾಜಿಕ ಸ್ಥಿತಿಗಳನ್ನು ಸುಧಾರಿಸಲು ಸರಕಾರದ ಕಾರ್ಯಕ್ರಮಗಳನ್ನು ಪರಿಶೀಲಿಸುವುದು.
- ಲಂಬಾಣಿಗಳ ಸಾಂಪ್ರದಾಯಿಕ ಸಾಂಸ್ಕೃತಿಕ ಸಂಸ್ಥೆಗಳು ರೂಪಾಂತರಗೊಂಡಿವೆಯೇ ಎಂಬುದನ್ನು ಪರಿಶೀಲಿಸುವುದು.
- ಆರ್ಥಿಕ ಸಂಬಂಧದಿಂದ ಸಾಮಾಜಿಕ ಸಂಘಟನೆ, ಸಾಮಾಜಿಕ ನಿಯಂತ್ರಣ ಮತ್ತು ಧರ್ಮ - ಇವುಗಳಲ್ಲಿ ಉಂಟಾಗಿರುವ ಬದಲಾವಣೆಯನ್ನು ಅಧ್ಯಯನ ಮಾಡುವುದು.
- ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳನ್ನು ಅಧ್ಯಯನ ಮಾಡುವುದು.
- ಆರ್ಥಿಕ ಬದಲಾವಣೆಯಿಂದ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಎದುರಾಗುವ ಸಮಸ್ಯೆಗಳನ್ನು ಗುರುತಿಸುವುದು.
- ಲಂಬಾಣಿಗಳು ತಮ್ಮ ಸಾಂಸ್ಕೃತಿಕ ನಿರಂತರತೆಯನ್ನು ಕಾಪಾಡಿಕೊಂಡು ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಅಧ್ಯಯನ ಮಾಡುವುದು.

**ಅಧ್ಯಯನ ನಡೆದಿರುವ ಪ್ರದೇಶದ ಹಿನ್ನೆಲೆ**

ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯು ತನ್ನದೇ ಆದ ಐತಿಹಾಸಿಕ ಹಾಗೂ ಭೌಗೋಳಿಕ ಹಿನ್ನೆಲೆಯನ್ನು ಹೊಂದಿದೆ. ೧೯೯೧ರ ಜನಗಣತಿಯ ಪ್ರಕಾರ ಈ ಜಿಲ್ಲೆಯ ಒಟ್ಟು ಜನಸಂಖ್ಯೆ ೧೮, ೯೦೦೯೨. ಇದರಲ್ಲಿ ಪುರುಷರು, ೯, ೬೧, ೯೮೯; ಮಹಿಳೆಯರು ೯,೨೮,೧೦೩. ಇದರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಕ್ರಮವಾಗಿ ೩,೬೫,೧೫೩೪ ಮತ್ತು ೧,೬೬,೬೯೩ ಇದೆ. ಬಳ್ಳಾರಿ ಜಿಲ್ಲೆಯು ಕರ್ನಾಟಕದಲ್ಲಿ ಅತ್ಯಂತ ಕಡಿಮೆ ಮಳೆ ಬೀಳುವ ಪ್ರದೇಶವಾಗಿದ್ದರೂ ಹೊಸಪೇಟೆ ಮತ್ತು ಸಿರಗುಪ್ಪ ತಾಲ್ಲೂಕುಗಳು ೧೯೬೦ರ ನಂತರ (ತುಂಗಭದ್ರ ಅಣೆಕಟ್ಟಿನ ಕೆಲಸ ಪೂರ್ಣಗೊಂಡ ನಂತರ) ನೀರಾವರಿಗೆ ಒಳಪಟ್ಟಿತು. ಈ ಜಿಲ್ಲೆಯಲ್ಲಿ ಕೃಷಿಯೇ ಆರ್ಥಿಕ ಚಟುವಟಿಕೆಯ ಮೂಲವಾಗಿದ್ದರೂ, ಕೃಷಿಯೇತರ ಚಟುವಟಿಕೆಗಳು ಆರ್ಥಿಕ ವ್ಯವಸ್ಥೆಯಲ್ಲಿ ತನ್ನದೇ ಆದ ಪ್ರಾಬಲ್ಯವನ್ನು ಸಾಧಿಸಿದೆ. ಪ್ರಮುಖ ಕೃಷಿಯೇತರ ಚಟುವಟಿಕೆಗಳೆಂದರೆ ಗಣಿಗಾರಿಕೆ, ಸಣ್ಣ ಹಾಗೂ ದೊಡ್ಡ ಪ್ರಮಾಣದ ಕೈಗಾರಿಕೆಗಳು, ವ್ಯಾಪಾರ ಇತ್ಯಾದಿ.

ಬಳ್ಳಾರಿ ಜಿಲ್ಲೆಯಲ್ಲಿ ಎರಡು ಸಾಮಾಜಿಕ ವರ್ಗಗಳು ಕಣ್ಣಿಗೆ ಎದ್ದು ಕಾಣುವಂತಹು. ಒಂದು ಅತ್ಯಂತ ಕೆಳವರ್ಗ ಮತ್ತೊಂದು ಅತ್ಯಂತ ಮೇಲ್ವರ್ಗ. ಇತ್ತೀಚಿನ ದಿನಗಳಲ್ಲಿ (೧೯೬೦-೭೦ ನಂತರ) ಮಧ್ಯಮವರ್ಗ ಈ ಜಿಲ್ಲೆಯಲ್ಲಿ ಹುಟ್ಟಿಕೊಳ್ಳಲು ಪ್ರಾರಂಭಿಸಿತು ಎಂದು ಕೆಲವರ ಅಭಿಪ್ರಾಯ. ಇದಕ್ಕೆ ಮುಖ್ಯ ಕಾರಣಗಳು ಎಂದರೆ ಗಣಿಗಾರಿಕೆ, ಕೈಗಾರಿಕೀಕರಣ, ನೀರಾವರಿ ವ್ಯವಸ್ಥೆ ಮತ್ತು ವ್ಯಾಪಾರ.

ಈ ಜಿಲ್ಲೆಯು ೧೯೯೭-೯೮ರಲ್ಲಿ ಆದಾಯ ತೆರಿಗೆ ಇಲಾಖೆಯ ಸ್ವಯಂ ಘೋಷಿತ ಆದಾಯ ತೆರಿಗೆ ಯೋಜನೆಯಲ್ಲಿ ಕರ್ನಾಟಕದಲ್ಲೇ ಅತ್ಯಂತ ಹೆಚ್ಚಿನ ಆದಾಯ ತೆರಿಗೆ ನೀಡಿದ ಜಿಲ್ಲೆ ಇದಾಗಿದೆ. ಈ ಅಂಶದಿಂದ ನಮಗೆ ತಿಳಿದುಬರುವುದೇನೆಂದರೆ ಬಳ್ಳಾರಿ ಜಿಲ್ಲೆಯಲ್ಲಿ ವಾಸ್ತವಾಗಿ ಬಡತನದ ರೇಖೆಗಿಂತ ಕೆಳಗಿರುವ ಜನರು ಹೆಚ್ಚಾಗಿದ್ದರೂ, ಆದಾಯ ತೆರಿಗೆ ನೀಡುವಲ್ಲಿ ಪ್ರಥಮ ಸ್ಥಾನ ಹೊಂದಿರುವುದು. ಇದರಿಂದ ಮೇಲ್ವರ್ಗ ಮತ್ತು ಕೆಳವರ್ಗಗಳ ನಡುವೆ ಹೆಚ್ಚಿನ ಅಂತರ ಇರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಇದೇನೆ ಇದ್ದರೂ ಗಣಿಗಾರಿಕೆ, ಕೈಗಾರಿಕೀಕರಣ ಮತ್ತು ನೀರಾವರಿ ವ್ಯವಸ್ಥೆಗಳು ಒಟ್ಟು ಬಳ್ಳಾರಿ ಜಿಲ್ಲೆಯ ಸಾಮಾಜಿಕ ರಚನೆಯನ್ನು ಸಂಪೂರ್ಣ ಬದಲಾಯಿಸಲಾಗದಿದ್ದರೂ, ತನ್ನದೇ ಪ್ರಭಾವ ಮತ್ತು ಪರಿಣಾಮವನ್ನು ಈ ಪ್ರದೇಶದಲ್ಲಿ ಮೂಡಿಸಿದೆ.

ಬಳ್ಳಾರಿ ಪ್ರದೇಶದ ಸಿರಗುಪ್ಪ ಹಾಗೂ ಹೊಸಪೇಟೆಯ (ಹಂಪಿಯ) ಕೆಲವು ಭಾಗಗಳು ೧೨ನೇ ಶತಮಾನದ ಪೂರ್ವದಿಂದಲೇ ಕೃಷಿಯನ್ನು ನೀರಾವರಿ ವ್ಯವಸ್ಥೆಗೆ ಒಳಪಟ್ಟಿತ್ತು ಎಂದು ಹಂಪಿ ಶಾಸನಗಳಿಂದ ತಿಳಿದುಬರುತ್ತದೆ. ಆದರೆ ೧೯೬೦ರಲ್ಲಿ ತುಂಗಭದ್ರ ಅಣೆಕಟ್ಟಿನ ಕೆಲಸ ಸಂಪೂರ್ಣಗೊಂಡ ನಂತರ ಹೊಸಪೇಟೆ ತಾಲ್ಲೂಕಿನ ಉತ್ತರ-ಪೂರ್ವಭಾಗ ಹೆಚ್ಚು ಕಡಿಮೆ ಸಂಪೂರ್ಣವಾಗಿ ನೀರಾವರಿಯಾಗಿದೆ. ಆಧುನಿಕ ನೀರಾವರಿ ವ್ಯವಸ್ಥೆಯಿಂದ ಕೃಷಿಯಲ್ಲಿ ಉಂಟಾದ ಹೆಚ್ಚಿನ ಆದಾಯ ಮತ್ತು ಉತ್ಪಾದನೆ ಕೃಷಿಯನ್ನು ನೇರವಾಗಿ ಆಧಾರಿಸಿದ್ದ ಸಮುದಾಯದ ಜನರು ಕೃಷಿಯೇತರ ವೃತ್ತಿಯಲ್ಲಿ, ಉದಾಹರಣೆಗೆ ಸಣ್ಣಕೈಗಾರಿಕೆ, ವ್ಯಾಪಾರ, ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಿತು. ಇದು ಅವರ ಸಾಂಪ್ರದಾಯಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯಲ್ಲಿ ಪರಿವರ್ತನೆಗಳನ್ನು ಉಂಟುಮಾಡಿತು. ಈ ಪರಿವರ್ತನೆ ಕೇವಲ ಕೃಷಿ ಆಧಾರಿತ ಸಮುದಾಯಗಳಲ್ಲಿ ಹಾಗೂ ನೀರಾವರಿ ವ್ಯವಸ್ಥೆ ಇರುವ ಪ್ರದೇಶಗಳಲ್ಲಿ ಮಾತ್ರ ಉಂಟಾಗಲಿಲ್ಲ. ಕೃಷಿಯನ್ನು ಪರೋಕ್ಷವಾಗಿ ಅವಲಂಬಿಸಿದ್ದ ಭೂರಹಿತ ಕೃಷಿಕಾರ್ಮಿಕರು ಹಾಗೂ ನೀರಾವರಿ ವ್ಯವಸ್ಥೆ ಇರುವ ಸುತ್ತ ಮುತ್ತಲಿನ ಪ್ರದೇಶದಲ್ಲಿ ಗೇಣಿದಾರ ಹಾಗೂ ಜಾಜಮಾನಿ ಸಂಬಂಧದಿಂದ ಬದುಕುತ್ತಿದ್ದ ಸಮಾಜದ ಅಂಚಿನ ಸಮುದಾಯಗಳ ಸಾಂಪ್ರದಾಯಿಕ ವ್ಯವಸ್ಥೆ ಮತ್ತು ಸಂಸ್ಥೆಗಳ ಮೂಲಭೂತ ಪರಿವರ್ತನೆಗೂ ಕಾರಣವಾಯಿತು. ಈ ರೀತಿಯ ಪರಿವರ್ತನೆಗೆ ಒಳಗಾದ ಅನೇಕ ಸಮುದಾಯಗಳಲ್ಲಿ ಲಂಬಾಣಿ ಸಮುದಾಯದ ಜನರು ಪ್ರಮುಖವಾಗಿ ಈ ಪ್ರದೇಶದಲ್ಲಿ ಕಂಡುಬರುತ್ತಾರೆ. ಕೃಷಿಯನ್ನು ಪರೋಕ್ಷವಾಗಿ ಅವಲಂಬಿಸಿ, ಭೂರಹಿತ ಕೃಷಿಕಾರ್ಮಿಕರಾಗಿ, ಭೂ ಒಡೆಯರಾಗಿ, ಗೇಣಿದಾರರಾಗಿ ತಳಮಟ್ಟದ ಕೆಲಸಗಳಲ್ಲಿ ಇವರು ಹೆಚ್ಚಾಗಿ ದುಡಿಯುತ್ತಿದ್ದಾರೆ.

ಕೈಗಾರಿಕೀಕರಣ ಮತ್ತು ನೀರಾವರಿ ವ್ಯವಸ್ಥೆ ಎರಡು ಪ್ರಮುಖ ಅಭಿವೃದ್ಧಿಯ ಸೂಚಕಗಳು, ಮೊದಲ ಹಂತದಲ್ಲಿ ಗುಣಾತ್ಮಕ ಬದಲಾವಣೆಗಳನ್ನು, ನಂತರದಲ್ಲಿ ಅನೇಕ ನಕಾರಾತ್ಮಕ ಬದಲಾವಣೆಗಳನ್ನು ಉಂಟುಮಾಡಿದೆ ಎಂಬುದು ವಾಸ್ತವ. ಸಾಮಾಜಿಕ ರಚನೆಯಲ್ಲಿ ಇವು ಅನೇಕ ಬದಲಾವಣೆಯನ್ನು ಹುಟ್ಟುಹಾಕಿದವು. ಇದು ಕೇವಲ ಒಂದು ಪ್ರದೇಶಕ್ಕೆ / ಸಮುದಾಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ.

ಅಂತೆಯೇ ಒಂದೇ ಸಮಾಜದ, ವಿವಿಧ ಪ್ರದೇಶದಲ್ಲಿ ಬದಲಾವಣೆಯ ಪ್ರಕ್ರಿಯೆಯು ವ್ಯತ್ಯಾಸಗೊಳ್ಳುತ್ತದೆ. ಇದೇ ರೀತಿ ಒಂದೇ ಸಮುದಾಯದ ಜನರು ಒಂದೇ ಪ್ರದೇಶದ ವಿವಿಧ ಭೌಗೋಳಿಕ ಭಾಗಗಳಲ್ಲಿ ವಾಸಿಸುವಾಗ ಬದಲಾವಣೆಯ ಗತಿಶೀಲತೆ ವ್ಯತ್ಯಾಸಗೊಳ್ಳುವಂತೆಯೂ ಮಾಡಿತು. ಈ ಹಿನ್ನೆಲೆಯಲ್ಲಿ ಹೊಸಪೇಟೆ ತಾಲ್ಲೂಕಿನ ಎರಡು ತಾಂಡಗಳನ್ನು ಬೇರೆ ಬೇರೆ ಗ್ರಾಮದ ಭೌಗೋಳಿಕ ಪ್ರದೇಶಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ನೀರಾವರಿ ವ್ಯವಸ್ಥೆಯ ಅಭಿವೃದ್ಧಿ ಒಟ್ಟಿಗೆ ನಡೆದಿರುವುದು ಹೊಸಪೇಟೆ ತಾಲ್ಲೂಕಿನಲ್ಲಿ ಮಾತ್ರ. ಸಿರುಗುಪ್ಪ ತಾಲ್ಲೂಕಿನಲ್ಲಿ ನೀರಾವರಿ ವ್ಯವಸ್ಥೆ ಹೆಚ್ಚಾಗಿ ಅಭಿವೃದ್ಧಿ ಹೊಂದಿದ್ದರೂ ಕೈಗಾರಿಕೀಕರಣ ಹೆಚ್ಚಾಗಿ ನಡೆದಿಲ್ಲ ಎಂದು ಹೇಳಬಹುದು. ಸಂಡೂರು ತಾಲ್ಲೂಕಿನಲ್ಲಿ ಗಣಿಗಾರಿಕೆ ಮತ್ತು ಕೈಗಾರಿಕೀಕರಣ ಹೆಚ್ಚಿನ ಪ್ರಮಾಣದಲ್ಲಿ ಉಂಟಾಗಿದ್ದರೂ ಕೃಷಿಗೆ ಈ ತಾಲ್ಲೂಕಿನ ಜನರು ಹೆಚ್ಚುಕಡಿಮೆ ಮಳೆಯನ್ನೇ ಅವಲಂಬಿಸಿದ್ದಾರೆ. ಇನ್ನುಳಿದ ತಾಲ್ಲೂಕುಗಳಲ್ಲಿ ಕೃಷಿ ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿ ಹೊಂದಿದ್ದರೂ, ಅದಕ್ಕೆ ಮಳೆ ಮತ್ತು ಸಣ್ಣ ನೀರಾವರಿಯನ್ನೇ ಜನರು ಅವಲಂಬಿಸಿದ್ದಾರೆ. ಹೀಗಾಗಿ ಕೈಗಾರಿಕೀಕರಣ, ಬೃಹತ್ ಕೃಷಿ ನೀರಾವರಿ ಹಾಗೂ ಕೃಷಿಯೇತರ ಚಟುವಟಿಕೆಗಳು ಒಟ್ಟೊಟ್ಟಿಗೆ ಉಂಟಾಗಿರುವುದು ಹೊಸಪೇಟೆ ತಾಲ್ಲೂಕಿನಲ್ಲಿ ಮಾತ್ರ. ಇವುಗಳು ಈ ತಾಲ್ಲೂಕಿನ ಸಾಮಾಜಿಕ ರಚನೆಯಲ್ಲಿ ಹಲವು ಬದಲಾವಣೆಗಳನ್ನು ಹುಟ್ಟು ಹಾಕಿತ್ತು. ಅಲ್ಲದೇ ಸಮಾಜದ ಅಂಚಿನಲ್ಲಿದ್ದ ಸಮುದಾಯಗಳ ಸಾಮಾಜಿಕ ಚಲನೆಗೂ ಕಾರಣವಾಗಿದೆ.

ಅಧ್ಯಯನ ನಡೆಸಿದ ಜಿಲ್ಲೆಯಲ್ಲಿ ಇರುವ ಏಳು ತಾಲ್ಲೂಕಿನಲ್ಲಿ ಒಟ್ಟು ೬೮ ಲಂಬಾಣಿ ತಾಂಡಗಳಿವೆ. ಪ್ರತಿ ತಾಲ್ಲೂಕಿನಲ್ಲಿರುವ ತಾಂಡಗಳನ್ನು ಗುರುತಿಸುವುದಾದರೆ, ಸಿರುಗುಪ್ಪ ತಾಲ್ಲೂಕಿನಲ್ಲಿ - ಒಂದು ತಾಂಡ, ಬಳ್ಳಾರಿ ತಾಲ್ಲೂಕಿನಲ್ಲಿ - ಮೂರು, ಸಂಡೂರು ತಾಲ್ಲೂಕಿನಲ್ಲಿ - ಐದು, ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ - ಹತ್ತು, ಕೂಡ್ಲಿಗಿ ತಾಲ್ಲೂಕಿನಲ್ಲಿ - ಹದಿನಾರು, ಹಡಗಲಿ ತಾಲ್ಲೂಕಿನಲ್ಲಿ- ಇಪ್ಪತ್ತೇಳು ಮತ್ತು ಹೊಸಪೇಟೆ ತಾಲ್ಲೂಕಿನಲ್ಲಿ - ಆರು ತಾಂಡಗಳು ಅಧಿಕೃತವಾಗಿ ನೆಲೆಗೊಂಡಿರುವುದು ತಿಳಿದುಬರುತ್ತದೆ. ಈ ಮೇಲಿನ ಅಂಕಿ ಅಂಶಗಳಿಂದ ತಿಳಿಯುವ ವಿಷಯವೆಂದರೆ ಬಳ್ಳಾರಿ ಜಿಲ್ಲೆಯ ಪಶ್ಚಿಮ-ದಕ್ಷಿಣ ಭಾಗಕ್ಕೆ ಹೆಚ್ಚಿನ ಲಂಬಾಣಿ ತಾಂಡಗಳು ಇರುವುದು ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿಗೆ ಸೀಮಿತವಾಗಿರುತ್ತದೆ.

**ಸಂಶೋಧನಾ ಕ್ಷೇತ್ರ**

ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ಎರಡು ತಾಂಡಗಳನ್ನು ಮಾತ್ರ ಆಯ್ಕೆಮಾಡಲಾಗಿದೆ. ತಾಂಡಾ ಎಂದರೆ ಲಂಬಾಣಿಗಳು ವಾಸ ಮಾಡುವ ಸ್ಥಳ. ಅಧ್ಯಯನಕ್ಕಾಗಿ ಆಯ್ಕೆ ಮಾಡಿದ ತಾಂಡಗಳೆಂದರೆ ನಾಗಲಾಪುರ ತಾಂಡ ಮತ್ತೊಂದು ಮರಿಯಮ್ಮನಹಳ್ಳಿ ತಾಂಡ. ಈ ಎರಡು ತಾಂಡಗಳು ಹೊಸಪೇಟೆ ತಾಲ್ಲೂಕಿನ ಉತ್ತರ- ಪೂರ್ವ ಭಾಗದಲ್ಲಿ ನೆಲೆಗೊಂಡಿವೆ. ಎರಡೂ ತಾಂಡಗಳು ತುಂಗಭದ್ರಾ ಆಣೆಕಟ್ಟಿನ ಹಿಂಭಾಗದಲ್ಲಿ ಇರುವುದರಿಂದ ಬೃಹತ್ ನೀರಾವರಿ ವ್ಯವಸ್ಥೆ, ಅಧ್ಯಯನಕ್ಕೆ ಒಳಪಡಿಸಿದ ಎರಡೂ ತಾಂಡದ ಪ್ರದೇಶಗಳಲ್ಲಿ ಇಲ್ಲವಾಗಿದೆ. ಆದರೆ ಹೊಸಪೇಟೆ ತಾಲ್ಲೂಕಿನ ದಕ್ಷಿಣ ಭಾಗವು, ಎಂದರೆ, ಕಂಪ್ಲಿ ಮತ್ತು ಹೊಸಪೇಟೆ ಭಾಗಗಳು ಸಂಪೂರ್ಣವಾಗಿ ನೀರಾವರಿ ವ್ಯವಸ್ಥೆ ಇರುವ ಪ್ರದೇಶವಾಗಿದೆ. ನಾಗಲಾಪುರ ತಾಂಡದಲ್ಲಿ ಒಟ್ಟು ಒಂದು ನೂರು ಮನೆಗಳಿವೆ ಮತ್ತು ಇಲ್ಲಿನ ಜನಸಂಖ್ಯೆ ಆರುನೂರ ಐವತ್ತು (೬೫೦). ಈ ತಾಂಡದಲ್ಲಿ ಹೆಚ್ಚಿನ ಜನರು ಆದಾಯಕ್ಕೆ

# ಅಧ್ಯಯನ ನಡೆಸಿದ ತಾಂಡಗಳ ನಕ್ಷೆ



ಕೃಷಿಯನ್ನೇ ನೇರವಾಗಿ ಅವಲಂಬಿಸಿದ್ದಾರೆ. ನಾಗಲಾಪುರ ತಾಂಡವು ಕಂದಾಯ ಗ್ರಾಮದಿಂದ (ರೆವಿನ್ಯೂ ವಿಲೇಜ್) ಒಂದು ಕಿ.ಮಿ., ಗ್ರಾಮ ಪಂಚಾಯಿತಿ ಕೇಂದ್ರ ಸ್ಥಾನದಿಂದ ಒಂದು ಕಿ.ಮಿ. ಮತ್ತು ತಾಲ್ಲೂಕು ಕೇಂದ್ರದಿಂದ ೩೫ ಕಿ.ಮಿ. ದೂರದಲ್ಲಿ ನೆಲೆಗೊಂಡಿದೆ. ಮರಿಯಮ್ಮನ ಹಳ್ಳಿ ತಾಂಡವು ತುಂಗಭದ್ರ ಅಣೆಕಟ್ಟಿನ ಹಿನ್ನೀರಿಗೆ ಸ್ವಲ್ಪ ದೂರದಲ್ಲಿ ಇದೆ. ಈ ಎರಡು ತಾಂಡಗಳ ಜನರು ಕೃಷಿಗೆ ಸಣ್ಣ ಪ್ರಮಾಣದ ನೀರಾವರಿ ಹಾಗೂ ಮಳೆಯನ್ನೆ ಅವಲಂಬಿಸಿದ್ದಾರೆ. ಕೃಷಿ ಚಟುವಟಿಕೆಯೇ ಅಲ್ಲದೆ, ಗಣಿಗಳಲ್ಲಿ ಕೂಲಿ, ರೈಲ್ವೆ ಲೋಡಿಂಗ್ ಕೆಲಸ, ಸಣ್ಣಪುಟ್ಟ ವ್ಯಾಪಾರ ಮುಂತಾದ ಕೃಷಿಯೇತರ ಚಟುವಟಿಕೆಗಳಲ್ಲಿಯೂ ಕೆಲವರು ತೊಡಗಿಸಿಕೊಂಡಿದ್ದಾರೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಒಟ್ಟು ಆರುನೂರು ಮನೆಗಳಿವೆ ಮತ್ತು ಇಲ್ಲಿನ ಜನಸಂಖ್ಯೆ ಮೂರು ಸಾವಿರದ ಐದುನೂರ ಒಂದು (೩೫೦೧). ಈ ತಾಂಡವನ್ನು ಕಂದಾಯ ಗ್ರಾಮವೆಂದು ಗುರುತಿಸಲಾಗಿದ್ದು, ಗ್ರಾಮಪಂಚಾಯಿತಿ ಕೇಂದ್ರಸ್ಥಾನದಿಂದ ಒಂದು ಕಿ.ಮಿ., ತಾಲ್ಲೂಕು ಕೇಂದ್ರದಿಂದ ಹದಿನೆಂಟು ಕಿ.ಮಿ. ದೂರದಲ್ಲಿ ಈ ತಾಂಡ ನೆಲೆಗೊಂಡಿದೆ.

ಎರಡೇ ತಾಂಡಗಳನ್ನು ಅಧ್ಯಯನಕ್ಕೆ ಒಳಪಡಿಸಲು ಹಲವು ಕಾರಣಗಳಿವೆ. ೧೯೭೦ರ ನಂತರ ಬಳ್ಳಾರಿ ಜಿಲ್ಲೆಗೆ ಕೈಗಾರೀಕರಣದ ಉದ್ದೇಶಕ್ಕಾಗಿ ಹರಿದುಬಂದ ಬಂಡವಾಳದ ಮೊತ್ತ ಸುಮಾರು ಒಂದು ಲಕ್ಷದ ಐವತ್ತು ಸಾವಿರ ಕೋಟಿ ರೂಪಾಯಿಗಳಿಗೂ ಹೆಚ್ಚು. ಅಲ್ಲದೆ, ೨೦೨೦ರ ಹೊತ್ತಿಗೆ ಇನ್ನು ೫೦ ಸಾವಿರ ಕೋಟಿ ರೂಪಾಯಿಗಳಿಗೂ ಹೆಚ್ಚು ಬಂಡವಾಳ ಕೈಗಾರಿಕೀಕರಣದ ಉದ್ದೇಶಕ್ಕೆ ಬರುವ ಸಾಧ್ಯತೆ ಇದೆ. ಬೃಹತ್ ಬಂಡವಾಳ ಹೂಡಿಕೆ ವಿಶೇಷವಾಗಿ ಸಂಡೂರು ಮತ್ತು ಹೊಸಪೇಟೆ ತಾಲ್ಲೂಕುಗಳಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಉತ್ಪಾದನೆಯನ್ನು ಹೆಚ್ಚಿಸುವ ಮೂಲಕ ಕೃಷಿಯೇತರ ಚಟುವಟಿಕೆ ಹಾಗೂ ಭೌಗೋಳಿಕ ಪರಿಸರದ ಪರಿವರ್ತನೆಗೆ ಕಾರಣವಾಯಿತು. ಕೈಗಾರೀಕರಣ ನೇರವಾಗಿ ಭೌಗೋಳಿಕ ಪರಿಸರದಲ್ಲಿ ಮಾತ್ರ ಪರಿವರ್ತನೆಗಳನ್ನು ತರಲಿಲ್ಲ. ಇದರ ಒತ್ತಡಗಳು ಮತ್ತು ಪರಿಣಾಮಗಳು ಈ ಪ್ರದೇಶದ ಸಾಮಾಜಿಕ-ಆರ್ಥಿಕ, ರಾಜಕೀಯ ಪರಿಸರದಲ್ಲಿ ಅನೇಕ ಬದಲಾವಣೆಗಳನ್ನೂ ತಂದವು. ಇದು ವಿಶೇಷವಾಗಿ ಸಮಾಜದ ಅಂಚಿನಲ್ಲಿದ್ದ ಸಮುದಾಯಗಳ ಮೇಲೆ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಭಾವ ಮತ್ತು ಪರಿಣಾಮವನ್ನುಂಟುಮಾಡುವ ಮೂಲಕ ಹಲವಾರು ಪರಿವರ್ತನೆಗಳಿಗೆ ಕಾರಣವಾಯಿತು. ಈ ರೀತಿಯ ಒತ್ತಡಗಳ ಕಾರಣದಿಂದಾಗಿ ಈ ಪ್ರದೇಶದಲ್ಲಿ ಸಮಾಜದ ಅಂಚಿನಲ್ಲಿದ್ದ ಸಮುದಾಯದ ಜನರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಬಿಟ್ಟು ಗಣಿಗಳಲ್ಲಿ ಕೂಲಿ, ಕೈಗಾರಿಕೆಗಳಲ್ಲಿ ದಿನಗೂಲಿ, ಅಲ್ಲದೆ ಗಣಿ ಹಾಗೂ ಕೈಗಾರಿಕೆಗೆ ಸಂಬಂಧಿಸಿದ ತಳಮಟ್ಟದ ಕೆಲಸಗಳನ್ನು ಮಾಡಲು ಪ್ರಾರಂಭಿಸಿದರು. ಇದು ಅವರ ಆದಾಯದ ಹೆಚ್ಚಳಕ್ಕೆ ಸ್ವಲ್ಪಮಟ್ಟಿನ ಬೆಂಬಲ ನೀಡಿದರೂ ಅನೇಕ ಸಂದಿಗ್ಧತೆಗಳನ್ನು ಸಾಂಪ್ರದಾಯಿಕ ವೃತ್ತಿ ಆಧಾರಿತ ಸಮುದಾಯಗಳ ಮಧ್ಯ ಹುಟ್ಟುಹಾಕಿತು. ಇದು ಸಮುದಾಯಗಳ ಸಾಂಪ್ರದಾಯಿಕ ಮೂಲ ರಚನೆಗಳನ್ನು ಬದಲಾಯಿಸಿತು. ಇದರಿಂದ ಲಂಬಾಣಿಗಳು ಹೊರತಾಗಲಿಲ್ಲ. ಹೀಗಾಗಿ ಸೂಕ್ಷ್ಮ ಅಧ್ಯಯನ ನಡೆಸುವ ಮೂಲಕ ಯಾವ ರೀತಿಯ ಬದಲಾವಣೆ ಲಂಬಾಣಿ ಸಮುದಾಯದಲ್ಲಿ ಉಂಟಾಗಿದೆ ಎಂಬುದನ್ನು ತಿಳಿಯುವ ಉದ್ದೇಶದಿಂದ ಎರಡೇ ತಾಂಡಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಲಂಬಾಣಿಗಳು ವ್ಯಾಪಕವಾದ ಸಾಮಾಜಿಕ-ಸಾಂಸ್ಕೃತಿಕ-ಆರ್ಥಿಕ ವ್ಯವಸ್ಥೆಗಳ ಒಂದು ಭಾಗವೇ ಎಂದು ಅರ್ಥಮಾಡಿಕೊಳ್ಳಲು (ವುಲ್ಫ್, ೧೯೬೬) ಅವರ 'ಪೆಸೆಂಟ್' ಪರಿಕಲ್ಪನೆಯನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಗ್ರಾಮೀಣ-ನಗರ ಬೇರೆಯೇ, ಒಂದೇ ಎಂಬ ಮುಂದುವರೆದ ದ್ವಂದ್ವತೆಯನ್ನು ಅರ್ಥಮಾಡಿಕೊಳ್ಳಲು ಸ್ವಲ್ಪಮಟ್ಟಿಗೆ ಗ್ರೇಟ್ ಅಂಡ್ ಲಿಟಲ್ ಟ್ರೆಡಿಷನ್‌ನ ಮಧ್ಯಮಗಳು ಸಂಸ್ಕೃತಿ ಪ್ರಸರಣದ ಕಾಲುವೆ (ರೆಡ್ ಫಿಲ್ಡ್ , ೧೯೪೧, ೧೯೫೬; ಸಿಂಗರ್ ೧೯೫೫; ಮರೀಟೋ, ೧೯೫೫) ಈ ಎಲ್ಲಾ ಪರಿಕಲ್ಪನೆಗಳು ನಮಗೆ ಒಂದು ಸಮಾಜದ ಸಾಂಸ್ಕೃತಿಕ ನಿರಂತರತೆ, ಸಾಂಪ್ರದಾಯಿಕ ಸಂಸ್ಥೆಗಳ ಕಾರ್ಯ ಮತ್ತು ಮೌಲ್ಯಗಳನ್ನು ವಿಶ್ಲೇಷಣಾತ್ಮಕವಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗಿವೆ. ಇವುಗಳು ಹೇಗೆ ಇರಲಿ, ಒಟ್ಟಾರೆ ಈ ಅಧ್ಯಯನದ ಮುಖ್ಯ ಉದ್ದೇಶವಾದ ಆರ್ಥಿಕ ಬದಲಾವಣೆಯ ಪ್ರಕ್ರಿಯೆಯ ಒತ್ತಡಗಳಿಂದ ಲಂಬಾಣಿಗಳ ಸಾಂಪ್ರದಾಯಿಕ ಸಂಸ್ಥೆಗಳಲ್ಲಿ ಮತ್ತು ಸಾಮಾಜಿಕ ಜೀವನ ಶೈಲಿಯಲ್ಲಿ ಉಂಟಾಗಿರುವ ಬದಲಾವಣೆಯ ಪ್ರಕ್ರಿಯೆಯನ್ನು ವಿಶ್ಲೇಷಿಸಲು ವೆಬರ್ (೧೯೪೭), ಹೇರಿಸ್ಕೆವಿಟ್ಸ್ (೧೯೫೨), ಪೋಲನ್ಯೆ (೧೯೫೭), ಡಾಲ್ಟನ್ (೧೯೬೧, ೧೯೬೭, ೧೯೭೧), ನಶ್ (೧೯೬೬), ಬೇಲ್ಸ್‌ಶ್ರ (೧೯೬೫), ಲಿಕ್ಲೇರಿ (೧೯೬೨, ೧೯೬೮), ಫಿರ್ತ್ (೧೯೬೭) ಮತ್ತು ಸೋಲ್‌ಟ್ಯಾಕ್ (೧೯೫೩), ಅವರ ಚಿಂತನೆಗಳನ್ನು ಬಳಸಿಕೊಂಡಿದ್ದೇನೆ. ಸಾಮಾಜಿಕ ರಚನೆ ಮತ್ತು ಕಾರ್ಯ ಎನ್ನುವ ಮೂಲಭೂತ ಸಮಾಜಶಾಸ್ತ್ರೀಯ ಪರಿಕಲ್ಪನೆಗಳೂ ಈ ಅಧ್ಯಯನಕ್ಕೆ ಪ್ರೇರಕಾಂಶಗಳಾಗಿವೆ.

**ಮಾಹಿತಿ ಸಂಗ್ರಹಣೆ**

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಹಾಗೂ ಆನುಷಂಗಿಕ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿದೆ. ಸಂಶೋಧನಾ ಮಾಹಿತಿಯನ್ನು ಮೊದಲೇ ತಿಳಿಸಿದಂತೆ ಸಾಮಾಜಿಕ ರಚನೆ ಮತ್ತು ಕಾರ್ಯ ಪರಿಕಲ್ಪನೆಗಳ ದೃಷ್ಟಿಕೋನದಿಂದ ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಪ್ರಾಥಮಿಕ ಮಾಹಿತಿಯನ್ನು ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ ಹೋಬಳಿಯ ನಾಗಲಾಪುರ ಹಾಗೂ ಮರಿಯಮ್ಮನಹಳ್ಳಿ ತಾಂಡಗಳಿಂದ ಪಡೆಯಲಾಗಿದ್ದು, ಲಂಬಾಣಿಗಳ ಚಾರಿತ್ರಿಕ, ಸಾಂಸ್ಕೃತಿಕ, ಸಾಮಾಜಿಕ-ಆರ್ಥಿಕ ವಿಷಯಗಳ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅವಲೋಕನ ಮಾಡುವ ಮೂಲಕ ಸಂಗ್ರಹಿಸಲಾಗಿದೆ. ಅಲ್ಲದೆ, ಮೊದಲೇ ರಚಿಸಿಕೊಂಡ ಪ್ರಶ್ನಾವಳಿಯ ಸಹಾಯದಿಂದ ಗುಂಪು ಚರ್ಚೆ ಹಾಗೂ ಸಂದರ್ಶನಗಳನ್ನು ನಡೆಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಮಾಹಿತಿಯನ್ನು ಸಂಗ್ರಹಿಸುವಾಗ 'ಉದ್ದೇಶಪೂರ್ವ ನಮೂನೆ' ಮಾದರಿಯನ್ನು ಅಳವಡಿಸಿದೆ. ಇದಲ್ಲದೆ ಅನೌಪಚಾರಿಕ ಸಂದರ್ಶನ ಹಾಗೂ ಗುಂಪು ಚರ್ಚೆಗಳಮೂಲಕವೂ ಮಾಹಿತಿಯನ್ನು ಸಂಗ್ರಹಿಸಿರುವುದೇ ಅಲ್ಲದೆ, ಸರಕಾರಿ ಅಧಿಕಾರಿಗಳನ್ನು ಪ್ರತ್ಯೇಕವಾಗಿ ಸಂದರ್ಶಿಸಿ ಅವರಿಂದಲೂ ವಿಷಯ ಸಂಬಂಧಿ ಮಾಹಿತಿಯನ್ನು ಪಡೆಯಲಾಗಿದೆ. ಸೂಕ್ತವೆನಿಸಿದೆಡೆ ಕೇಸ್ ಸ್ಟಡಿ ವಿಧಾನದ ಬಳಕೆಯೂ ಈ ಅಧ್ಯಯನದಲ್ಲಿ ಆಗಿದೆ. ಈ ಅಧ್ಯಯನದಲ್ಲಿ ಸಂಗ್ರಹಿಸಿದ ಬಹಳಷ್ಟು ಮಾಹಿತಿಗಳನ್ನು ಲಂಬಾಣಿಯರ ಜೊತೆ ನೇರವಾಗಿ ನಡೆಸಿದ ಮಾತು ಕತೆಗಳ ಮೂಲಕ ಪಡೆಯಲಾಗಿದೆ. ಮಾಹಿತಿಗಳನ್ನು ಪಡೆದುಕೊಳ್ಳುವಾಗ ಸರಕಾರಿ ಅಧಿಕಾರಿಗಳು, ಸಮಾಜ ಕಾರ್ಯಕರ್ತರು,

ನೆರೆಹೊರೆಯ ಸಮುದಾಯದ ಜನರ ಜೊತೆ ಹಾಗೂ ಲಂಬಾಣಿಗಳ ಜೊತೆ ಹಣಕಾಸಿನ ಸಂಬಂಧ ಹೊಂದಿದ್ದ ಇತರರನ್ನು ಅನೌಪಚಾರಿಕವಾಗಿ ಸಂದರ್ಶಿಸಿ ಚರ್ಚಿಸಿ, ಅದರ ಖಚಿತತೆಯನ್ನು ಆಗಾಗ ತಾಳೆ ನೋಡಿ, ಪುನರ್‌ಪರೀಕ್ಷಿಸುವ (ಕ್ರಾಸ್ ಚೆಕ್ಕಿಂಗ್) ಮೂಲಕ ದೃಢಪಡಿಸಿಕೊಳ್ಳಲಾಯಿತು. ಆನುಷಂಗಿಕ ಮಾಹಿತಿಯನ್ನು ಸರ್ಕಾರಿ, ಅರೆ-ಸರ್ಕಾರಿ ಕಛೇರಿಗಳು ಹೊರ ತಂದಿರುವ ವಿವಿಧ ವರದಿಗಳಿಂದ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಕಛೇರಿಗಳಿಂದಲೂ ಸಂಗ್ರಹಿಸಲಾಗಿದೆ. ಈಗಾಗಲೇ ಲಂಬಾಣಿ ಸಮುದಾಯದ ಬಗ್ಗೆ ಸಂಶೋಧನೆ ನಡೆಸಿ ಹೊರ ತಂದಿರುವ ಪುಸ್ತಕ ಹಾಗೂ ಲೇಖನಗಳಿಂದಲೂ ಸಂಗ್ರಹಿಸಿದೆ. ಮಾಹಿತಿಯನ್ನು ಸಂಗ್ರಹಿಸುವಾಗ ಕ್ರಮವಾಗಿ ಒಂದು ತಾಂಡದಲ್ಲಿ ೧೦೦ ಕುಟುಂಬದಂತೆ ಒಟ್ಟು ೨೦೦ ಕುಟುಂಬಗಳನ್ನು ಮಾದರಿಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಹಿಂದೆಯೇ ತಿಳಿಸಿದಂತೆ ಉದ್ದೇಶಪೂರ್ವಕ ನಮೂನೆಯನ್ನು ಆಧರಿಸಿ, ಕುಟುಂಬಗಳ ಆಯ್ಕೆಯ ಪ್ರಕಿಯೆಯನ್ನು ಕೈಗೊಂಡಿದ್ದು, ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಣೆ ಮಾಡುವಾಗ, ಅಗತ್ಯವಾದ ಮಾಹಿತಿಗಳನ್ನು ಪಟ್ಟಿ ಅಥವಾ ಕೋಷ್ಟಕ ರೂಪದಲ್ಲಿ ನೀಡಲಾಗಿದೆ. ಕೋಷ್ಟಕಗಳನ್ನು ಉಪಯೋಗಿಸದೆ ಇರುವ ಭಾಗಗಳಲ್ಲಿ ಶೇಕಡಾವಾರು ಪ್ರಮಾಣದಲ್ಲಿ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

ಯಾವುದೇ ಒಂದು ಸಮುದಾಯವನ್ನು ಅಧ್ಯಯನ ವಿಷಯವನ್ನಾಗಿ ಹೊಂದಿದಾಗ, ವಿವರಣಾತ್ಮಕ ವಿಧಾನವನ್ನು ಸಹಜವಾಗಿಯೇ ಹೆಚ್ಚು ಆಶ್ರಯಿಸಬೇಕಾಗುತ್ತದೆ. ಸಮುದಾಯ ಅಧ್ಯಯನಗಳಲ್ಲಿ 'ಪರಿಮಾಣಾತ್ಮಕ' ವಿಶ್ಲೇಶಣೆಗಿಂತ 'ಗುಣಾತ್ಮಕ' ವಿಶ್ಲೇಷಣೆಗೇ ಪ್ರಥಮ ಆದ್ಯತೆ ಇರುವುದರಿಂದ ಪ್ರಸಕ್ತ ಅಧ್ಯಯನದಲ್ಲಿ ವಿವರಣೆಗೇ ಹೆಚ್ಚು ಒತ್ತನ್ನು ನೀಡಲಾಗಿದೆ. ಸಾಧ್ಯವಾದ ಮತ್ತು ಸೂಕ್ತವಾದ ಸಂದರ್ಭಗಳಲ್ಲೆಲ್ಲಾ ಮಾಹಿತಿಯನ್ನು ಕೋಷ್ಟಕಗಳ ರೂಪದಲ್ಲಿ ಪ್ರಸ್ತುತಪಡಿಸಲಾಗಿದೆ. ಲಂಬಾಣಿಗಳನ್ನು ಕುರಿತು ಸಮಾಜಶಾಸ್ತ್ರೀಯ ದೃಷ್ಟಿಯಿಂದ ಕೈಗೊಂಡ ವಿಷದವಾದ ಅಧ್ಯಯನಗಳಲ್ಲಿ ಈ ಅಧ್ಯಯನ, ನನಗೆ ತಿಳುವಳಿಕೆಯಿರುವ ಮಟ್ಟಿಗೆ ಮೊದಲನೆಯದಾದ್ದರಿಂದ ಲಂಬಾಣಿಗಳನ್ನು ಕುರಿತಂತೆ ದೊರೆತಿರುವ ಮಾಹಿತಿಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಲಾಗಿದೆ. ಆದುದರಿಂದಲೇ ಈ ಅಧ್ಯಯನದಲ್ಲಿ ವಿವರಣಾತ್ಮಕ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

**ಕ್ಷೇತ್ರಕಾರ್ಯದ ಅನುಭವ**

ಕ್ಷೇತ್ರಕಾರ್ಯದಿಂದ ಮಾಹಿತಿ ಸಂಗ್ರಹಣೆ ಜೀವನದ ವಿಶೇಷ ಅನುಭವಗಳಲ್ಲಿ ಒಂದು. ನನ್ನ ಕ್ಷೇತ್ರಕಾರ್ಯದ ಅನುಭವ ಕೇವಲ ಹರ್ಷದಾಯಕವಾಗಿರದೆ, ಪ್ರಚೋದನಾತ್ಮಕವಾಗಿ, ಅದ್ವಿತೀಯ ಜ್ಞಾನದ ಪ್ರತಿಫಲವಾಗಿತ್ತು. ಈ ಅಧ್ಯಯನವನ್ನು ನಾನು ೧೯೯೭ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಇರುವ ತಾಂಡಗಳನ್ನು ಸಮೀಕ್ಷೆ ನಡೆಸುವ ಮೂಲಕ ಪ್ರಾರಂಭಿಸಿದೆ. ಈ ಸಮೀಕ್ಷೆಯನ್ನು ೧೯೯೭ರ ಮಾರ್ಚ್‌ನಿಂದ ಜುಲೈರವರೆಗೆ ಸುಮಾರು ೧೭ ಲಂಬಾಣಿ ತಾಂಡಗಳಲ್ಲಿ ನಡೆಸಿದೆ. ಮೊದಲ ಹಂತದ ಸಮೀಕ್ಷೆಯಲ್ಲಿ ತಾಂಡಗಳಲ್ಲಿ ಇರುವ ಜನಸಂಖ್ಯೆ, ತಾಂಡಗಳು ಕಂದಾಯ ಗ್ರಾಮದಿಂದ, ಗ್ರಾಮ ಪಂಚಾಯತಿ ಕೇಂದ್ರದಿಂದ ಹಾಗೂ ತಾಲ್ಲೂಕು ಪಂಚಾಯಿತಿ ಕೇಂದ್ರಸ್ಥಾನದಿಂದ ಎಷ್ಟು ದೂರದಲ್ಲಿ ನೆಲೆಗೊಂಡಿವೆ, ಇಲ್ಲಿನ ಜನರು ಬಹು ಜಾತಿ ಗ್ರಾಮಗಳಿಂದ ಪ್ರತ್ಯೇಕವಾಗಿ ಅಥವಾ ಬಹುಜಾತಿಗಳ ನಡುವೆ ವಾಸಿಸುತ್ತಿದ್ದಾರೆಯೇ, ಜೀವನಕ್ಕೆ ಕೃಷಿಯನ್ನು ಅವಲಂಬಿಸಿದ್ದಾರೆಯೇ, ಭೂರಹಿತ ಕೃಷಿಕಾರ್ಮಿಕರೇ ಇತರ ಉದ್ಯೋಗ ಇತ್ಯಾದಿಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಯಿತ್ತು. ವಿಶೇಷವಾಗಿ ವಿಭಿನ್ನ ಭೌಗೋಳಿಕ ಪರಿಸರದಲ್ಲಿ ವಿಭಿನ್ನ ವೃತ್ತಿಗಳನ್ನು ಆಧಾರಿಸಿ ನೆಲೆಗೊಂಡಿರುವ ತಾಂಡವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುವ ಉದ್ದೇಶದಿಂದ ಈ ಸಮೀಕ್ಷೆ ನಡೆಸಲಾಯಿತು. ಸಮೀಕ್ಷೆ ನಡೆಸಿದ ಸಮಯದಲ್ಲಿ

ಮೊದಲಿಗೆ ಲಂಬಾಣಿಗಳಿಗೆ, ಗ್ರಾಮ ಪಂಚಾಯತಿಯ ಕಂದಾಯ ಅಧಿಕಾರಿಗಳಿಗೆ ಹಾಗೂ ಗ್ರಾಮ ಲೆಕ್ಕಿಗರಿಗೆ ನನ್ನಲ್ಲಿ ನಂಬಿಕೆ ಇಲ್ಲದ್ದಿದರಿಂದ ಸರಿಯಾದ ರೀತಿ ನನಗೆ ಅವರುಗಳು ಸ್ಪಂದಿಸಲ್ಲಿಲ್ಲ. ಆರಂಭದಲ್ಲಿ ನನ್ನ ಹಲವು ಪ್ರಯತ್ನಗಳಿಂದ ಒಬ್ಬ ಲಂಬಾಣಿಯಲ್ಲದ ಸ್ನೇಹಿತನ ಮುಖಾಂತರ ಲಂಬಾಣಿಯವರ ವಿಶ್ವಾಸಗಳಿಸುವುದರಲ್ಲಿ ಯಶಸ್ವಿಯಾದೆ. ಸಾಮಾನ್ಯವಾಗಿ ಲಂಬಾಣಿಗಳು ಹೊರಗಿನವರನ್ನು ಸಂಶಯ ದೃಷ್ಟಿಯಿಂದ ಕಾಣುತ್ತಾರಾದರೂ ಅವರು ನನ್ನಲ್ಲಿ ವಿಶ್ವಾಸವಿರಿಸಿದ್ದರು.

ಲಂಬಾಣಿ ಮಾಹಿತಿದಾರರು ಹಾಗೂ ನನ್ನ ನಡುವೆ ವಿಶ್ವಾಸದ ಸಂಬಂಧವನ್ನು ಬೆಳಸಿಕೊಳ್ಳಲು ಸುಮಾರು ಆರು ತಿಂಗಳುಗಳೇ ಬೇಕಾಯಿತು. ಲಂಬಾಣಿಯವರು ತಮ್ಮಲ್ಲಿ ಬಂಜಾರ ಭಾಷೆಯಲ್ಲಿ ಮಾತನಾಡಿಕೊಳ್ಳುತ್ತಾರೆ. ಬಂಜಾರ ಭಾಷೆಯನ್ನು ಮೊದಲಿಗೆ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ. ಆ ಭಾಷೆಯು ತುಂಬಾ ಕಠಿಣವಾದ್ದರಿಂದ ಹಾಗೂ ವ್ಯಾಕರಣದ ಕೊರತೆಯಿಂದ ಸರಿಯಾಗಿ ಅರ್ಥಮಾಡಿಕೊಳ್ಳವಲ್ಲಿ ವಿಫಲವಾದರೂ ಕಾಲಕ್ರಮೇಣ ಭಾಷೆ ಅರ್ಥವಾಗಲಾರಂಭಿಸಿತು. ಲಂಬಾಣಿಗಳು ತಮ್ಮಲ್ಲಿ ಬಂಜಾರ ಭಾಷೆಯಲ್ಲಿ ಮಾತನಾಡಿಕೊಂಡರೂ ಕನ್ನಡವನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಲಂಬಾಣಿಗಳಿಗೆ ಕನ್ನಡವು ಕರ್ನಾಟಕದಲ್ಲಿ ಇತರರ ಜೊತೆ ವ್ಯಾವಹಾರಿಕ ಸಂಪರ್ಕ ಭಾಷೆಯಾಗಿದೆ. ಆದರೂ ಕನ್ನಡವಲ್ಲದೆ, ನನಗೆ ಬಂಜಾರಿ ಭಾಷೆಯೂ ಗೊತ್ತಿದ್ದರೆ ಲಂಬಾಣಿಗಳ ಚಿಂತನೆಗಳನ್ನು, ಭಾವನೆಗಳನ್ನು, ಅರ್ಥ ಮಾಡಿಕೊಳ್ಳಲು ಹೆಚ್ಚು ಸಹಕಾರಿಯಾಗುತ್ತಿತ್ತು. ತಾಂಡಗಳು ಹಳ್ಳಿಯ ಮಧ್ಯಭಾಗದಿಂದ ದೂರದಲ್ಲಿರುತ್ತವೆ. ಹೀಗಾಗಿ ತಾಂಡಗಳಲ್ಲಿ ವಸತಿ ಸೌಕರ್ಯಗಳ ಕೊರತೆಯಿಂದ ನಾನು ತಾಂಡಗಳ ಹತ್ತಿರವಿರುವ ಹಳ್ಳಿಗಳಲ್ಲಿಯೇ ವಾಸಿಸಬೇಕಾಯಿತು.

ಸಾಮಾಜಿಕ ಬದಲಾವಣೆಯನ್ನು ಅಭ್ಯಾಸ ಮಾಡುವಾಗ ನಾವು ಹಲವಾರು ವಿಷಯಗಳತ್ತ ಗಮನವನ್ನು ಕೇಂದ್ರೀಕರಿಸಬೇಕಾಗುತ್ತೆ. ಅನಕ್ಷರಸ್ಥ ಲಂಬಾಣಿಯರು ತಮ್ಮ ಆರ್ಥಿಕ ಚಟುವಟಿಕೆಯ ಬಗ್ಗೆ ಯಾವುದೇ ಲೆಕ್ಕವಿಟ್ಟಿರುವುದಿಲ್ಲವಾದ್ದರಿಂದ ಅವರ ಆರ್ಥಿಕ ಮಟ್ಟವನ್ನು ಅಳೆಯುವುದು ಸುಲಭವಲ್ಲ. ಆದಾಯದ ಮೂಲ, ಲಾಭ, ಖರ್ಚು, ಹೂಡಿಕೆ, ಉಳಿತಾಯ, ಸಂಬಳ, ಬೆಲೆಗಳ ಬಗ್ಗೆ ನಿಖರವಾದ ಮಾಹಿತಿ ಇಲ್ಲದೆ ಆರ್ಥಿಕತೆಯನ್ನು ಅಳೆಯುವುದು ಅಸಾಧ್ಯ. ಅವರು ಈ ಬಗ್ಗೆ ಕೇವಲ ಅಂದಾಜಿನಲ್ಲಿ ಮಾತ್ರ ಹೇಳುತ್ತಾರೆ. ಹಾಗೆಯೇ ಹಲವಾರು ಕಡೆ ಅವರ ದೇಶಿ ಅಳತೆ ತೂಕ ಇತ್ಯಾದಿ ಮಾಪನಗಳನ್ನು, ಚಾಲ್ತಿಮಾಪನಗಳಿಗೆ ಪರಿವರ್ತಿಸಬೇಕಾಯಿತು. ಹೀಗಾಗಿ ಅವರ ಆದಾಯ, ಖರ್ಚು, ಲಾಭ, ನಷ್ಟ, ಹೂಡಿಕೆ, ಉಳಿತಾಯ ಇತ್ಯಾದಿಗಳನ್ನು ಅವರೊಡನೆ ಸುದೀರ್ಘವಾದ ಚರ್ಚೆ ನಡೆಸಿದ ಮೇಲೆ ಅವರ ದೈನಂದಿನ ವಹಿವಾಟು ತೀವ್ರವಾಗಿ ಗಮನಿಸುವುದರ ಮೂಲಕ ಒಂದು ನಿರ್ಧಾರಕ್ಕೆ ಬರಲಾಯಿತು.

ಲಂಬಾಣಿಗಳ ಧಾರ್ಮಿಕ ಆಚರಣೆಗಳನ್ನು ಪರೋಕ್ಷವಾಗಿ ಅವಲೋಕನ ಮಾಡುವ ಮೂಲಕ, ಕೆಲವು ಹಿರಿಯರ ಜೊತೆ ನೇರವಾಗಿ ಚರ್ಚೆ ಮತ್ತು ಮಾತುಕತೆಗಳನ್ನು ಕ್ಷೇತ್ರಕಾರ್ಯದ ಪುಸ್ತಕದಲ್ಲಿ ದಾಖಲಿಸಿಕೊಂಡು ನಂತರ ವಿಶ್ಲೇಷಿಸಿದ್ದೇನೆ. ಇವರ ಆಚರಣೆಗೆ ಸಂಬಂಧಿಸಿದ ಕೆಲವು ಭಾವಚಿತ್ರಗಳನ್ನು ತೆಗೆದುಕೊಂಡಿದ್ದೇನೆ. ಧಾರ್ಮಿಕ ಆಚರಣೆಗಳ ಬಗ್ಗೆ ಮಾಹಿತಿ ಸಂಗ್ರಹಿಸುವಾಗ ಕೆಲವು ಲಂಬಾಣಿಗಳು ವಿರೋಧಿಸಿದರೂ ಹೆಚ್ಚಿನವರು ನನ್ನಲ್ಲಿ ನಂಬಿಕೆ ಇರಿಸಿ ಮಾಹಿತಿ ಸಂಗ್ರಹಣೆಗೆ ಸಹಕರಿಸಿದ್ದರು.

ಲಂಬಾಣಿಗಳಿಗೆ ಭೂಮಿ ಪ್ರಮುಖ ಆದಾಯದ ಮೂಲವಾಗಿರುವುದನ್ನು ಹಲವು ಅಧ್ಯಯನಗಳು ಗುರುತಿಸಿವೆ. ಭೂಮಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸುವಾಗ ಹಲವಾರು ಸಮಸ್ಯೆಗಳು ಮತ್ತು ಅಡೆತಡೆಗಳು ಎದುರಾಗಿ ಬರುತ್ತವೆ. ಈ ಸಮಸ್ಯೆಗಳನ್ನು ತಾಳೆ ಮಾಡುವ ಮೂಲಕ ಆಗಾಗ ಪುನರ್‌ಪರಿಶೀಲಿಸುವುದನ್ನು ನಿರಂತರವಾಗಿ ಮಾಡಿ ಬಗೆಹರಿಸಿಕೊಳ್ಳಲಾಗಿದೆ. ಅನಕ್ಷರಸ್ಥ ಲಂಬಾಣಿಗಳಲ್ಲಿ ತಾವು ಕೃಷಿ ಮಾಡುತ್ತಿರುವ ಸ್ವಂತ ಅಥವಾ ಗೇಣಿ ಭೂಮಿಯ ವಿಸ್ತೀರ್ಣ ಎಷ್ಟು ಇದೆ ಎಂದು ಗೊತ್ತಿರುವುದಿಲ್ಲ. ಕುಟುಂಬದ ಹಿರಿಯರೂ ಕೂಡ ಈ ಬಗ್ಗೆ ಹೆಚ್ಚಿನ ಮಾಹಿತಿ ನೀಡಲು ನಿರಾಕರಿಸುತ್ತಾರೆ. ಇದಕ್ಕೆ ಕಾರಣ ಹೆಚ್ಚು ಭೂಮಿಯಿದೆ ಎಂದು ತಿಳಿದರೆ ಹೆಚ್ಚಿನ

ಕಂದಾಯ ನೀಡಬೇಕಾಗಬಹುದೆಂಬ ಆತಂಕ ಇವರಲ್ಲಿ ಇದೆ. ಭೂಮಿಯ ಒಡೆತನ ಗೇಣಿ ಮುಂತಾದ ವಿಷಯಗಳ ಬಗ್ಗೆ ಮಾಹಿತಿ ನೀಡುವ ಅನ್ಯ ಮೂಲವೆಂದರೆ ಕಂದಾಯ ಇಲಾಖೆಯ ಗ್ರಾಮ ಲೆಕ್ಕಿಗರು ನೀಡುವ ದಾಖಲೆಗಳು. ಆದರೆ ಈ ದಾಖಲೆಗಳು ಗೇಣಿದಾರ, ಭೂಒಡೆಯ ಹಾಗೂ ಸರ್ಕಾರಿ ಇಲಾಖೆಗಳ ಸಿಬ್ಬಂಧಿಗಳ ನಡುವೆ ಇರುವ ಅನಧಿಕೃತ ಸಂಬಂಧಗಳಿಂದಾಗಿ ಭೂ ಹಿಡುವಳಿಯ ಬಗ್ಗೆ ನಿಖರವಾದ ಮಾಹಿತಿಯು ಸರಿಯಾಗಿ ಸರ್ಕಾರಿ ದಾಖಲೆಗಳಲ್ಲಿ ಸಿಗುವುದು ದುಸ್ತರ. ಎರಡನೆಯದಾಗಿ ಭೂ ಹಿಡುವಳಿಯ ಬಗ್ಗೆ ಗೇಣಿದಾರ ಅಥವಾ ಭೂಮಿಯ ಮಾರಾಟಗಾರ ಒಪ್ಪಂದ ಮಾಡಿಕೊಂಡು ದಿನಾಂಕ ಮತ್ತು ಸರ್ಕಾರಿ ದಾಖಲೆಗಳಲ್ಲಿ ದಾಖಲೆಯಾಗುವ ದಿನಾಂಕ ಇವುಗಳ ನಡುವೆಯಿರುವ ಸಮಯದ ಅಂತರ ಸಾಮಾನ್ಯವಾಗಿ ತುಂಬಾ ಹೆಚ್ಚಾಗಿರುವುದು. ಇದಲ್ಲದೆ ಜನರು ಸರಿಯಾದ ಮಾಹಿತಿಯನ್ನು ಸರ್ಕಾರಿ ಅಧಿಕಾರಿಗಳಿಗೆ ಸಲ್ಲಿಸಿದರೂ ವಿಳಂಬ ಮಾಡಿ ಸಲ್ಲಿಸುವುದು, ಹಾಗೆಯೇ ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಮಾಡುವ ಕಾಲ ವಿಳಂಬವೂ ಇದಕ್ಕೆ ಕಾರಣವಾಗಿದೆ. ಆದರೂ, ಇಪ್ಪತ್ತೈದು ವರ್ಷಗಳ ಸರ್ಕಾರಿ ದಾಖಲಾತಿಗಳನ್ನು ಅಭ್ಯಸಿಸುವ ಮೂಲಕ ಭೂ ಹಿಡುವಳಿ ಸ್ವಾಧೀನ ಇತಾದಿ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ.

## ಮಹಾಪ್ರಬಂಧದಲ್ಲಿ ಬರುವ ಅಧ್ಯಾಯಗಳು

ಮಹಾಪ್ರಬಂಧವನ್ನು ನಾಲ್ಕು ಪ್ರಮುಖ ಅಧ್ಯಯನಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಲಂಬಾಣಿ ಸಮುದಾಯದ ಹಿನ್ನೆಲೆ, ಸಮಕಾಲೀನ ಸ್ಥಾನ, ಕರ್ನಾಟಕದಲ್ಲಿ ಲಂಬಾಣಿಗಳ ವಾಸಸ್ಥಾನ ಮತ್ತು ಜನಸಂಖ್ಯೆ, ಅಧ್ಯಯನದ ಉದ್ದೇಶ, ಸಂಶೋಧನಾ ಕ್ಷೇತ್ರ, ಮಾಹಿತಿ ಸಂಗ್ರಹಣೆ ವಿದಾನ, ಸೈದ್ಧಾಂತಿಕ ನೆಲೆಗಟ್ಟು, ಕ್ಷೇತ್ರ ಕಾರ್ಯದ ಅನುಭವ, ಲಂಬಾಣಿಗಳ ಬಗ್ಗೆ ದೊರಕುವ ಪ್ರಮುಖ ಮಾಹಿತಿಗಳ ಸಮೀಕ್ಷೆಯನ್ನು ಮೊದಲನೆ ಅಧ್ಯಯನದಲ್ಲಿ ನೀಡಲಾಗಿದೆ. ಒಟ್ಟಾರೆ, ಮೊದಲನೆ ಅಧ್ಯಾಯವು ಈ ಮಹಾಪ್ರಬಂಧದ ರೂಪು ರೇಷೆ ಎಂದು ಹೇಳಬಹುದು.

ಎರಡನೇ ಅಧ್ಯಾಯವು ಲಂಬಾಣಿಗಳ ಆರ್ಥಿಕ ವ್ಯವಸ್ಥೆ ಮತ್ತು ಬದಲಾವಣೆ ಎಂದಿದ್ದು ಈ ಅಧ್ಯಾಯದಲ್ಲಿ ಸುಮಾರು ೧೫೦ ವರ್ಷಗಳ ಹಿಂದಿನ ಲಂಬಾಣಿಗಳ ಆರ್ಥಿಕ ಜೀವನವು ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಶಕ್ತಿಯಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ ಹೇಗೆ ಉಂಟಾಗಿದೆ ಮತ್ತು ಇವುಗಳ ನಡುವಿನ ಸಂಬಂಧವನ್ನು ಇಲ್ಲಿ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯವು ಆರ್ಥಿಕ ಸ್ಥಿತಿ, ಬಂಧುತ್ವ, ಸಾಮಾಜಿಕ ನಿಯಂತ್ರಣ ಮತ್ತು ಧರ್ಮ ಇವುಗಳಲ್ಲಾಗಿರುವ ಬದಲಾವಣೆಗಳು ಎಂದ್ದಿದೂ ಈ ಅಧ್ಯಾಯವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆ ಭಾಗದಲ್ಲಿ ಸಾಮಾಜಿಕ ಸಂಘಟನೆ ಮತ್ತು ಬದಲಾವಣೆಗಳನ್ನು ಕುರಿತು ಚರ್ಚಿಸಲಾಗಿದೆ. ಎರಡನೇ ಭಾಗದಲ್ಲಿ ಲಂಬಾಣಿಗಳ ಸಾಂಪ್ರದಾಯಿಕ ರಾಜಕೀಯ ಸಂಘಟನೆಯ ಬಗ್ಗೆ ಚರ್ಚಿಸಲಾಗಿದೆ. ಮೂರನೇ ಭಾಗದಲ್ಲಿ ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ. ನಾಲ್ಕನೇ ಬಾಗದಲ್ಲಿ ಲಂಬಾಣಿಗಳ ಲೋಕ ದೃಷ್ಟಿ ಕುರಿತು ಚರ್ಚಿಸಲಾಗಿದೆ. ಮೂರನೇ ಅಧ್ಯಾಯದ ಕೋನೆಯ ಭಾಗದಲ್ಲಿ ಲಂಬಾಣಿಗಳು ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳಲು ಇರುವ ಸಮಸ್ಯೆಗಳ ಬಗ್ಗೆ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಕೆಲವು ವಿಶೇಷವಾದ ಅಥವಾ ಪ್ರಧಾನವೆನೆಸಿಲಾದ ಅಧ್ಯಯನದ ತಥ್ಯವನ್ನು (ಫೈಂಡಿಂಗ್ಸ್) ವ್ಯವಸ್ಥಿತವಾಗಿ ಒಂದರಂತೆ ವಿಶ್ಲೇಷಣೆಮಾಡಿ ಸಾರಾಂಶವನ್ನು ಪಡೆದುಕೊಳ್ಳಲಾಗಿದೆ.

# ಗ್ರಂಥ ಋಣ


ಕೃಷ್ಣಶರ್ಮ ಬೆಟಗೇರಿ. *ನಮ್ಮ ಸಂಸ್ಕೃತಿ ಪರಂಪರೆ*, ಸಮಾಜ ಪುಸ್ತಕಾಲಯ, ಧಾರವಾಡ: ೧೯೬೬.

ಖಂಡೋಬಾ. ಪಿ.ಕೆ. *ಕರ್ನಾಟಕದ ಲಂಬಾಣಿಗಳು, ಒಂದು ಸಾಂಸ್ಕೃತಿಕ ಅಧ್ಯಯನ*, ದಿ ತೇಜಸಿಂಗ್ ರಾಥೋಡ ಸ್ಮಾರಕ ಟ್ರಸ್ಟ್, ಗುಲ್ಬರ್ಗಾ: ೧೯೯೧.

ಚಿದಾನಂದ ಮೂರ್ತಿ, ಎಂ. *ಸಂಶೋಧನ ತರಂಗ*, ಭಾಗ-೨, ಬೆಂಗಳೂರು: ಬೆಂಗಳೂರು ವಿಶ್ವವಿದ್ಯಾಲಯ, ೧೯೭೦.

ನಾಯಕ ಡಿ.ಬಿ. *ಲಂಬಾಣಿ ಸಂಸ್ಕೃತಿ*, ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೪.

ಬಸವರಾಜ, ನೆಲ್ಲಿಸರ. *ಲಂಬಾಣಿಗರು*, ಬೆಂಗಳೂರು: ಐ.ಬಿ.ಎಚ್. ಪ್ರಕಾಶನ, ೧೯೮೦.

ಬಸವರಾಜ ನೆಲ್ಲಿಸರ. *ಲಂಬಾಣಿಗರು ಮತ್ತು ಬಗ್ಗರು*, ಮೈಸೂರು:ಯಕ್ಷ ಪ್ರಕಾಶನ, ೧೯೭೭.

ಬೆನಕನಹಳ್ಳಿ ಜಿ. ನಾಯಕ. *ಲಂಬಾಣಿಗರ ಜನಪದ ಗೀತೆಗಳು*, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೧೯೮೧.

ಸಣ್ಣರಾಮ, *ಲಂಬಾಣಿ ಗಾದೆಗಳು*, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್, ೧೯೮೨.

ಸಣ್ಣರಾಮ, *ಲಂಬಾಣಿ ಸಂಸ್ಕೃತಿ*, ಶಿವಮೊಗ್ಗ: ಮಲೆನಾಡು ಪ್ರಿಂಟರ್ಸ್ ಮತ್ತು ಪ್ರಕಾಶಕರು, ೧೯೯೯.


# References


Aiyer, C.P.R. ***Foreword' to Chamanlal's Gypsies*** (Forgotten Children of India), New-Delhi: Publications Division, Government of India, 1962.

Belshaw, C.S. ***Traditional Exchange and Modern Markets***, Englewood Cliffs:Prentice-Hall, 1965.

Bose, N.K. ***The Scheduled Castes and Tribes and Their Present Condition*** (B.C. Mazumdar Memorial Lectures, University of Calcutta), 1969.

Briggs, John. ***An Account of the Origin, History and Manners ... of Banjaras*** In ***Transactions of the Literary Society of Bombay,*** Vol. I, Bombay: Education Society Press(Orig. edn. 1877).

Buchanan, Francis. ***A Journey from Madras through the Country of Mysore, Canara and Malabar,*** Vols., II and III: London: W.Blumer and Co., 1807.

Campbell, James M. ***Bombay Gazetteer- Karnataka (Kanara)***, Bombay: Government of Bombay Presidency, 1883.

Campbell, James M. ***Bombay Gazetteer- Karnataka (Dharwar)***, Bombay: Government of Bombay Presidency, 1884.

Campbell, James M. ***Bombay Gazetteer- Karnataka (Bijapur)***, Bombay: Government of Bombay Presidency, 1884.

Chamanlal, B. ***Gypsies*** (Forgotten Children of India), New-Delhi : Publications Division, Government of India, 1962.

Christop Van Foser. ***Tribes in India - The Struggle for Survival***, New Delhi : Oxford University Press, 1975.

Committe on Plan Projects (nd.): ***Report of the Study Team on Tribal Development Programmes*** (Mysore), New Delhi: Planning Commission, Government of India.

Craufurd, Q. ***Sketches Chiefly Relating to the History, Religion, Learning, and Manners of the Hindus***, London: Printed for T.Cadale, in the Strand, Second Edn. Vol. II., 1742.

Dalton, George, (ed.). ***Tribal and Peasant Economics***, New York: Natural History Press, 1967.

Dalton, George, (ed.) ***Economic Development and Social Change***. New York: Natural History Press, 1971.

Dalton, George. ***Economic Anthropology and Development***, New York: Basic Books, 1971.

Dubois,A,J.A. ***Hindu Manners, Customs and Ceremonies***, Oxford: Clarendon Press, 1936.

Enthoven, R.E. ***The Tribes and Castes of Bombay***, Vol. II Bombay: Government of Bombay Presidency, 1922.

Epstein, T.S. ***Economic Development and Social Change in South India***, Bombay: Oxford University Press, 1962.

Epstein, T.S. "Productive Efficiency and Customary Systems of Rewards in Rural South India" in R. Firth (ed.) ***Themes in Economic Anthropology***, London: Tavistock Publications, 1967.

Evans-Pritchard, E.E. "Kinship and the Local Community among the Nuer" in A.R. Radcliffe-Brown and D.Forde (ed.) ***African Systems of Kinship and Marriage***, Oxford University Press, 1950.

Firth, Raymond ***Social Change in Tikopia: Restudy of a Polynesian Community after a generation***, London: Allen & Unwin, 1959.

Firth, Raymond. ***Primitive Polynesian Economy***, London: Routledge & Kegan Paul (Orig. edn. 1939), 1965.

Firth, Raymond, (ed). "Themes in Economic Anthropology(A.S.A.monograph No. 6)."London : Tavistock, 1967.

Firth, Raymond. & B.S. Yamey (eds). *Capital, Savings and Credit in Peasant Societies*, London: Allen and Unwin, 1964.

Forde, C.D. *Habitat, Economy, and Society*, London: Mathuen, 1934.

Forde, C.D. & M. Douglas. "Primitive Economics" in H.L. Shapiro (ed.) *Man, Culture, and Society*, Oxford: OUP. 1956.

Foster,G.M. "*The Dyadic Contract: a Model for the Social Structure of a Mexican Peasant Village*" in Potter, et. al. (eds.) Peasant Society (A Reader), Boston: Little Brown & Co., 1967.

Gautam, Mohan K."Itinerant Camping Life to Settled Basti Alliances: The Mechanism of Ethnic Maintenance and Social Organization of the Kanjars of North India" *Eastern Anthropologist*: 36-1, 1983.

Ghurey G.S. *The Scheduled Tribes*, Bombay : Popular Prakashan, 1959.

Govt. of Mysore. Mysore State Gazetter - Bellary Dist., 1972.

Grierson, G.A. *Linguistic Survey of India*. Vol. IX Part III (First Edn. 1907) Delhi : Motilal Banarasidas, 1968.

Gunda, Bella. "The Cultural Ecology and Service Nomads," *Eastern Anthropologist*, 34 - 4, 1981.

Holmberg A.R. *Nomads of the Long Bow*, "The Siriono of Eastern Bolivia" (Simthsonian Institution, Institute of Social Anthropology, Publication No. 10) Repr. Chicago: The University of Chicago Press, 1960.

Ibbetson, D.C. "Report of the Census of Punjab 1881", 1883.

Kamaladevi Chattopadhyaya. *Tribalism in India*, New Delhi : Vikas Publishing House, 1978.

Kanak Mital. *Tribes Identity in changing Industrial Environment - The Santhal Case*, New Delhi: Ashis Publications, 1986.

Kurup Roy A.M.. *Lambadi*. A Scheduled Tribe in A.P. - Census of India - 1961-I part, New Delhi : Govt. of India, 1971.

LeClaire, E.E. *Economic Theory and Economic Anthropology, American Anthropologist*, Vol. 64, 1962.

LeClaire, E.E. & H.K. Schheider. *Economic Anthropology* (A Reading in Theory and Analysis)," New York : Holt, 1968.

Lewis, Oscar. *Five Families: Mexican Case Studies in the Culture of Poverty*, New York : New American Library, 1959.

Lewis, Oscar. *La Vida, Peurto Rican Family in the Culture of Poverty*, New York : Wintage Books, 1968.

Malhotra,S.P. & A.B. Bose. "Problems of Rehabilitation of Nomadic Banjaras of Western Rajasthan," ***Annals of Arid Zone***, Vol.2, No. 1, 1963.

Malinowski, B. ***Argonauts of the Western Pacific***, London : Routledge and Kegan Paul, 1922.

Malinowski, B. ***A Scientific Theory of Culture***. Chapel Hill: NorthCarolina University Press, 1944.

Mead, P.J. and G.L. MacGregor. "Census of India- 1911.: (Bombay),"Bombay: Government of Bombay, 1912.

Nanjundayya, H.V.& L.K. Ananthakrishna Iyer. ***The Mysore Tribes and Castes***, Vol.II," Mysore: University of Mysore Press, 1928.

Narasimhaiyengar, V.N. "Census of India- 1891," Vol. XXV, Mysore Part I-Report, Bangalore: Superintendent, Printing and Stationery, Government of Mysore, 1893.

Nash, Manning. ***Primitive and Peasant Economic Systems***, San Francisco: Chandler, 1966.

Palande. M.R. ***Gazetter of Bombay State (Daharwar District)*** Rev. End. Bombay : Government of Bombay, 1989.

Piddington,R. **Introduction to Social Anthropology**, Vol.II. London: Oliver and Boyd, 1957.

Polanyi, Karl. "The Economy as the instituted process" in Polanyi et.al. (eds.) ***Trade and Markets in Early Empires***, Glencoe: Free Press, 1957.

Pradhan, M.C. ***The Political System of the Jats of Northern India***, Bombay: Oxford University Press, 1966.

Radcliffe-Brown, A.R. ***Structure and Function in Primitive Society***, London: The English Language Book Society and Cohen & West Ltd., 1964.

Redfield, R. ***Folk Culture of Yucatan***, Chicago: Chicago University Press, 1941.

Redfield, R. ***A Village that Chose Progress***, Chan Kom Revisited, "Chicago University Press, 1957.

Redfield, R. ***The Primitive World and Its Transformation***. Ithaca, New York: Cornel University Press (Cornel Paperbacks, tenth ptg., orig.1953.), 1968.

Risley,H. ***The People of India***, London:W.and Thacker & Co., 1915.

Saxena, Rabir Prakash. ***Tribal Economy of Central India***, Calcutta: Firma K.L. Mukhopadhyaya, 1964.

Sharp, Louriston. "Steel Axes for Stone-Age Australians" ***Human Organisation***, Vol.2, 1952.

"Sh[illegible]", Sher Singh. ***The Sikligars of Punjab (A Gypsy Tribe)***, Delhi: Sterling Publishers, 1966.

Singer, Milton "Cultural Pattern of Indian Civilization," ***The Far Eastern Quarterly***, Vol. XV, No.1, 1955.

Singer, Milton. "Text and Context in the Study of Contemporary Hinduism" in Brahma Vidya: ***The Adyar Library Bulletin***, Vol.XXV, 1961.

Tax, Sol. ***Penny Capitalism: 'A Guatemalan Indian Economy***, Washington D.C. : U.S. Government Print. Office, 1953.

Thurston, Edgar. ***Ethnographic Notes in Southern India***, Madras: Government Press (Second Issue), 1907.

Thurston, Edgar. ***Castes and Tribes of Southern India***, Vol. IV, Madras : Government of Madras Press, 1909.

Tod, J. ***Animals and Antiquities of Rajasthan***, London : 1929.

Weber, Max. ***The Theory of Economic and Social Organization*** (Tr.by A.M. Henderson and Talcott Parsons). Glencoe: Free Press, 2nd Edn., 1947.

Wolf, E.R. ***Peasants***. Englewood Cliffs: Prentice Hall, 1966. 22/11/10.

# ಅಧ್ಯಾಯ ೨

## ಲಂಬಾಣಿಗಳ ಆರ್ಥಿಕ ವ್ಯವಸ್ಥೆ -

ಆಸ್ತಿ ಮತ್ತು ಒಡೆತನ

ಉತ್ಪಾದನಾ ಚಟುವಟಿಕೆಗಳ ಸಂಘಟನೆ, ಮನೋಭಾವನೆ ಮತ್ತು ಸಾಮಾಜಿಕ ಸಂಬಂಧ

ಹಂಚಿಕೆ ಮತ್ತು ವಿನಿಮಯ

ಮಾರುಕಟ್ಟೆ ವಿನಿಮಯ

ಕುಟುಂಬದ ಆದಾಯ ಹಾಗೂ ವೆಚ್ಚದ ಮಾದರಿಗಳು

ಸಾಲ, ಉಳಿತಾಯ ಮತ್ತು ಬಂಡವಾಳದ ಕ್ರೋಢೀಕರಣ

ಆರ್ಥಿಕ ಬದಲಾವಣೆಗಳು ಮತ್ತು ಅವುಗಳ ಪರಿಣಾಮಗಳು

ಲಂಬಾಣಿಗಳ ಆರ್ಥಿಕ-ಸಾಮಾಜಿಕ ಸ್ಥಿತಿಗಳನ್ನು ಸುಧಾರಿಸಲು ಸರಕಾರದ ಕ್ರಮಗಳು

## ಅಧ್ಯಾಯ - ೨

## ಲಂಬಾಣಿಗಳ ಆರ್ಥಿಕ ವ್ಯವಸ್ಥೆ - ಬದಲಾವಣೆ

### ಆಸ್ತಿ ಮತ್ತು ಒಡೆತನ

ಈ ಅಧ್ಯಾಯದಲ್ಲಿ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದ ಲಂಬಾಣಿಗಳ ಆರ್ಥಿಕ ವ್ಯವಸ್ಥೆಯ ಪ್ರಧಾನ ಲಕ್ಷಣಗಳನ್ನು ವಿವರಿಸಲಾಗಿದೆ. ಮೊದಲಿಗೆ, ಲಂಬಾಣಿ ಸಮುದಾಯಗಳಲ್ಲಿ ಅಸ್ತಿತ್ವದಲ್ಲಿದ್ದ ಸಾಂಪ್ರದಾಯಿಕ ಆರ್ಥಿಕ ಜೀವನದ ಬಗ್ಗೆ ಬೆಳಕನ್ನು ಚೆಲ್ಲಲಾಗಿದೆ. ಈ ಹಿನ್ನೆಲೆಯಲ್ಲಿ, ಇದೇ ಸಮುದಾಯದಲ್ಲಿ ಕಾಲಾನುಕ್ರಮದಲ್ಲಿ ತಲೆದೋರಿದ ಆರ್ಥಿಕ ಸ್ವರೂಪದ ಬದಲಾವಣೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಆರ್ಥಿಕ ವ್ಯವಸ್ಥೆಯಲ್ಲಿ ಆರ್ಥಿಕ ಸಂಪನ್ಮೂಲಗಳು, ಉತ್ಪಾದನಾ ಚಟುವಟಿಕೆಯ ಸಂಘಟನೆಗಳು, ಹಂಚಿಕೆ, ವಿನಿಮಯ, ಅನುಭೋಗ, ಉಳಿತಾಯ, ಸಾಲ, ಹೂಡಿಕೆ, ಮುಂತಾದ ಉಪ ವ್ಯವಸ್ಥೆಗಳಲ್ಲಿ ಅಂತರ್-ಸಂಬಂಧಗಳು ಕಂಡುಬರುತ್ತವೆ. ಈ ವಿಷಯಗಳನ್ನು ಕುರಿತ ಪ್ರಸ್ತಾವಗಳನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳಿಗೆ ಇಂದು ಕೃಷಿ ಪ್ರಮುಖ ವೃತ್ತಿಯಾಗಿದೆ (ಕೆಲವು ಬಗೆಯ ಗೇಣಿ, ಭೂಹಿಡುವಳಿ ಪದ್ಧತಿಗಳನ್ನು ಇಲ್ಲಿ ರೂಢಿಸಿಕೊಳ್ಳಲಾಗಿದೆ). ಕೂಲಿ ಕೆಲಸ ಇವರ ಆದಾಯದ ದ್ವಿತೀಯ ಮೂಲ. ನಾಗಲಾಪುರದ ಲಂಬಾಣಿಗಳ ಪ್ರಮುಖ ವೃತ್ತಿ ಕೂಲಿ ಕೆಲಸ. ಕೃಷಿ ಇವರ ಆದಾಯದ ದ್ವಿತೀಯ ಮೂಲ ದ್ರವ್ಯ ಸಾಧಕ (ನೋಡಿ ಕೋಷ್ಟಕ-೨.೭ ರಿಂದ ೨.೧೦).

ಹೊಸಪೇಟೆ ತಾಲ್ಲೂಕಿನಲ್ಲಿ ಭೂಮಿ ಪ್ರಧಾನ ಆರ್ಥಿಕ ದ್ರವ್ಯ ಸಾಧಕ. ಲಂಬಾಣಿಗಳು ಸೇರಿಕೊಂಡಂತೆ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರದ ಹಳ್ಳಿಗಳಲ್ಲಿ ಭೂಹಿಡುವಳಿಯ ಹಂಚಿಕೆಯು ವಿವಿಧ ಜಾತಿ ಗುಂಪುಗಳ ನಡುವೆ (ಇತರ ಗ್ರಾಮಸ್ಥರ ನಡುವೆ) ಹೇಗೆ ಇದೆ ಎಂಬ ವಿವರಗಳು, ನಮಗೆ ಉತ್ತಮ ಆರ್ಥಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಹೊಂದಿರುವ ಜಾತಿ ಗುಂಪುಗಳು ಹೆಚ್ಚಿನ ಪ್ರಮಾಣದ ಭೂಒಡೆತನ (ಭೂಹಿಡುವಳಿ) ಹೊಂದಲು ಅವಕಾಶ ನೀಡಿದೆ ಎಂಬುದನ್ನು ಸಾಮಾನ್ಯವಾಗಿ ತಿಳಿಸುತ್ತದೆ.

ಲಂಬಾಣಿಗಳು ಒಂದೇ ಸ್ಥಳದಲ್ಲಿ ನೆಲೆಗೊಂಡ ಕೆಲವು ವರ್ಷಗಳ ನಂತರ, ಕೃಷಿಯನ್ನು ನಿಧಾನವಾಗಿ ಅಳವಡಿಸಿಕೊಂಡವರು. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಇರುವ ಲಂಬಾಣಿಗಳ ಜನಸಂಖ್ಯೆಗೂ ಇವರು ಹೊಂದಿರುವ ಭೂಮಿಯ ಪ್ರಮಾಣಕ್ಕೂ ಬಹಳವಾದ ಅಂತರವಿದೆ. ಹೆಚ್ಚಿನ ಲಂಬಾಣಿಗಳು ಹೊಂದಿರುವ ಭೂಮಿ ಸಾಗುವಳಿ ಮಾಡದೆ ಬೀಳು ಬಿದ್ದ ಬಂಜರು ಭೂಮಿಯಾಗದೆ. ಇದನ್ನು ಇವರು ಕಡಿಮೆ ದರದಲ್ಲಿ ಸುಲಭವಾಗಿ ಕೊಂಡುಕೊಂಡಿದ್ದಾರೆ. ಇವರಲ್ಲಿ ಹೆಚ್ಚಿನ ಉಳಿತಾಯ ಇಲ್ಲದಿದ್ದವರು,

ಜೀವನೋಪಾಯಕ್ಕಾಗಿ ಕೂಲಿ ಮತ್ತು ಸಾಂಪ್ರದಾಯಿಕ ವೃತ್ತಿಗಳಲ್ಲಿ ತೊಡಗಿದ್ದಾರೆ. ಹೀಗಾಗಿ ಹೆಚ್ಚಿನವರು ಕೃಷಿಗೆ ಯೋಗ್ಯವಾದ ಪ್ರಥಮ ದರ್ಜೆಯ ಭೂಮಿಯನ್ನು ಪಡೆಯಲು ಸಾಧ್ಯವಾಗಿಲ್ಲ. ಅಲ್ಲದೆ ೧೯೮೦-೯೦ ದಶಕದಲ್ಲಿ ಸಾಮಾನ್ಯವಾಗಿ ಒಂದು ಎಕರೆ ಭೂಮಿಗೆ ೨೫ ರಿಂದ ೫೦ ಸಾವಿರ ರೂಪಾಯಿಗಳ ಮೌಲ್ಯ ತಗಲುತ್ತಿತ್ತು. ಬೆಲೆ ಇದ್ದಕ್ಕಿದ್ದಂತೆ ಹೆಚ್ಚಾಗಿದ್ದ ಸಂದರ್ಭಗಳೂ ಇವೆ. ಈ ಕಾರಣದಿಂದಾಗಿ ಸುಲಭ ದರದಲ್ಲಿ ದೊರೆಯುವ ಭೂಮಿಯನ್ನೇ ಲಂಬಾಣಿಗಳು ಅರಸಿ ಹೊಗುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಇತರ ಗ್ರಾಮಗಳಲ್ಲಿಯೂ ಕಡಿಮೆ ದರಕ್ಕೆ ಸಿಕ್ಕುವ ಭೂಮಿಯನ್ನು ಹುಡುಕುತ್ತಿದ್ದರು. ಇವರು ಒತ್ತಾಯಪೂರ್ವಕವಾಗಿ ವಲಸೆ ಹೋಗಿ ಬಂಜರಾದ (ಸಾಗುವಳಿ ಮಾಡದ) ಭೂಮಿಯನ್ನು ಇತರೆ ಹಳ್ಳಿಗಳಲ್ಲಿ ಶಾಶ್ವತವಾಗಿ ಪಡೆದುಕೊಂಡಿರುವಂತಹ ನಿದರ್ಶನಗೂ ಇವೆ. ಕೃಷಿ ಮಾಡಬೇಕು ಎಂಬ ಆಕಾಂಕ್ಷೆ, ಆಸಕ್ತಿ ಇರುವವರು ಭೂಮಿಯನ್ನು ಗಳಿಸಿಕೊಳ್ಳಲು ಸಾಧ್ಯವಾಗದೆ ಗೇಣಿ ಆಧಾರಿತ ಬೇಸಾಯದಿಂದಲೇ ತೃಪ್ತಿ ಹೊಂದಬೇಕಾಗಿದೆ. ಗೇಣಿಯನ್ನು ಭೂಮಿಯ ಒಡೆಯ ನಿಲ್ಲಿಸಬಹುದು. ಇನ್ನೂ ಕೆಲವು ಪರಿಸ್ಥಿತಿಗಳಲ್ಲಿ ಗೇಣಿಯ ಆಧಾರಿತವಾಗಿ ಗುತ್ತಿಗೆ ಪಡೆಯುವಾಗ, ಸ್ವಲ್ಪ ಹಣವನ್ನು ಮುಂಗಡವಾಗಿ ಕೊಡುವಾಗ, ಮೋಸ ಮಾಡುವ ಅಥವಾ ಮೋಸ ಹೋಗುವ ಸಾಧ್ಯತೆಗಳಿವೆ. ಈ ರೀತಿಯ ಅನೇಕ ಬಗೆಯ ಸಂದಿಗ್ಧಗಳು ಇಲ್ಲಿನ ಕೃಷಿ ವ್ಯವಸ್ಥೆಯಲ್ಲಿವೆ.

ಇಷ್ಟೆಲ್ಲಾ ಸಮಸ್ಯೆಗಳಿದ್ದರೂ ಕೆಲವು ಲಂಬಾಣಿಗಳು ಕೃಷಿ ಸಾಗುವಳಿಯಲ್ಲಿ ಉತ್ಸಾಹ ತೋರಿಸಿದ್ದಾರೆ. ವಿಶೇಷವಾಗಿ ಭೂಮಿಯನ್ನು ಗಳಿಸುವಲ್ಲಿ ಆರ್ಥಿಕ ಮಿತವ್ಯಯವನ್ನು ತೋರಿದ್ದಾರೆ. ಭೂಮಿಯು ಮಾರುಕಟ್ಟೆಗೆ ಬಂದ ನಂತರ ಧಾರಣ ಶಕ್ತಿ ಹೊಂದಿದ ಲಂಬಾಣಿಗಳು ಅದನ್ನು ಕೊಂಡುಕೊಂಡಿದ್ದಾರೆ. ಇವರ ಉಳಿತಾಯದ ಅಭ್ಯಾಸ, ಭೂಮಿಯ ಮೇಲೆ ವಿನಿಯೋಗಿಸುವ ಪ್ರಕ್ರಿಯೆ, ( ಸಾಂಪ್ರದಾಯಿಕ ವೃತ್ತಿ ಹೆಚ್ಚಿನ ದಿನಗಳು ಜೀವಿಸುವ ಸಾಮರ್ಥ್ಯ ಕಳೆದುಕೊಂಡ ನಂತರ) ಲಂಬಾಣಿಗಳನ್ನು ಕೃಷಿಯಲ್ಲಿ ನೆಲೆ ನಿಲ್ಲುವಂತೆ ಮಾಡಿತು. ಕೆಲವು ವಿಶೇಷ ಪರಿಸ್ಥಿತಿಗಳಲ್ಲಿ ಇದು ವಿವೇಚನೆಯುಳ್ಳ ಮನೋಭಾವದಿಂದ ಕೂಡಿ ಬಹು ಆಯಾಮಗಳಿಂದ ಬರಬಹುದಾದ ಸಂಭಾವನೆಯಲ್ಲಿ ತೊಡಗಿಸಿದಂತೆ ಪ್ರತಿಬಿಂಬಿಸಿತು. ಈ ಬೆಳವಣಿಗೆಯು ಅಲೆಮಾರಿ ಜನರಲ್ಲಿ ಸಾಮಾನ್ಯವಾಗಿ ಕಂಡುಬರುವ, ಕೇವಲ ಆ ದಿನಕ್ಕಾಗಿ ಜೀವನ ನಡೆಸಬೇಕು ಎಂಬ ಮನೋಭಾವನೆಯಲ್ಲಿ ಮಹತ್ವದ ಬದಲಾವಣೆ ತಂದಿತು.

### ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಭೂ ಒಡೆತನ ಮತ್ತು ಭೂ ಹಿಡುವಳಿ

ಮರಿಯಮ್ಮನಹಳ್ಳಿ ತಾಂಡದಲ್ಲಿನ ಭೂ ಒಡೆತನ ಮತ್ತು ಭೂ ಹಿಡುವಳಿಗಳನ್ನು ಕುರಿತಂತೆ ಕೋಷ್ಟಕ ೨.೧ ರಲ್ಲಿ ಮಾಹಿತಿಯನ್ನು ಮೊದಲಿಗೆ ನೀಡಲಾಗಿದೆ .

## ಕೋಷ್ಟಕ ೨.೧

**ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಹೊಂದಿರುವ ಭೂ ಹಿಡುವಳಿ**

| ಕ್ರಮ ಸಂಖ್ಯೆ | ಹಳ್ಳಿಯ ಹೆಸರು | ಮಾಲೀಕರಿಂದಲೆ ಸಾಗುವಳಿಯಾಗುವ ಭೂಮಿ | | ಗೇಣಿ ಆಧಾರಿತ ಸಾಗುವಳಿ ಭೂಮಿ | |
|---|---|---|---|---|---|
| | | ಕುಟುಂಬಗಳು | ಭೂ ವಿಸ್ತೀರ್ಣ | ಕುಟುಂಬಗಳು | ಭೂ ವಿಸ್ತೀರ್ಣ |
| | | | ಎ - ಕು | | ಎ - ಕು |
| ೧ | ಮರಿಯಮ್ಮನಹಳ್ಳಿ | ೩೫ | ೨೨೧ - ೧೦ | ೮ | ೪೦ - ೩೦ |
| ೨ | ಗೊಲ್ಲರಹಳ್ಳಿ | ೧೬ | ೭೫ - ೧೪ | ೪ | ೧೦ - ೦೦ |
| ೩ | ತಿಮ್ಮಾಪುರ | ೭ | ೧೫ - ೦೨ | ೩ | ೯ - ೩೫ |
| ೪ | ಬೈಲಕುಂದಿ | ೨ | ೧೩ - ೦೯ | ೨ | ೬ - ೨೬ |
| ೫ | ಧಾಣಾಪುರ | - | - | ೧ | ೧೧ - ೦೬ |
| | ಒಟ್ಟು | ೬೦ | ೩೨೪ - ೩೫ | ೧೮ | ೭೮ - ೧೭ |

**ಸೂಚನೆ :** ೧. ಎ = ಎಕರೆ , ಕು = ಕುಂಟೆ, ೪೦ ಕುಂಟೆ = ೧ ಎಕರೆ

೨. ಕುಟುಂಬಗಳ ನಡುವೆ ಸ್ವಂತ ಭೂ ಹಿಡುವಳಿ ಕುಟುಂಬಗಳ ೧೬ ಕುಂಟೆಯಿಂದ ೪೫ ಎಕರೆಯವರೆಗೆ ವ್ಯತ್ಯಾಸಗೊಳ್ಳುತ್ತದೆ. ಕುಟುಂಬಗಳ ಸರಾಸರಿ ಹಿಡುವಳಿಯು ೫ ಎಕರೆ ೧೬ ಕುಂಟೆಯಿಂದ ಪ್ರಾರಂಭವಾಗುತ್ತದೆ.

ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳ ಒಡೆತನದಿಂದಲೇ ಸಾಗುವಳಿಯಾಗುತ್ತಿರುವ ಭೂಮಿ ಮತ್ತು ಗೇಣಿ ಆಧಾರಿತವಾಗಿ ಸಾಗುವಳಿಯಾಗುತ್ತಿರುವ ಭೂಮಿಯ ವಿವರಗಳನ್ನು ಕೋಷ್ಟಕ ೨.೧ರಲ್ಲಿ ನೀಡಲಾಗಿದೆ. ಕೆಲವು ಕುಟುಂಬಗಳು ಭೂ ಒಡೆತನದಿಂದ ಸಾಗುವಳಿ ಮತ್ತು ಗೇಣಿ ಆಧಾರಿತ ಸಾಗುವಳಿ, ಈ ಎರಡು ವಿಧದ ಸಾಗುವಳಿ ಪದ್ಧತಿಗಳನ್ನು ಒಂದಕ್ಕಿಂತ ಹೆಚ್ಚಿನ ಗ್ರಾಮಗಳಲ್ಲಿ ಹೊಂದಿವೆ. ಅಧ್ಯಯನಕ್ಕೆ ಒಳಪಡಿಸಿದ ಮರಿಯಮ್ಮನಹಳ್ಳಿ ತಾಂಡದ ೧೦೨ ಕುಟುಂಬಗಳಲ್ಲಿ, ೭೪ ಕುಟುಂಬಗಳ ಪ್ರಾಥಮಿಕ ಅಥವಾ ದ್ವಿತೀಯ ವೃತ್ತಿ ಕೃಷಿಯಾಗಿದೆ. ೧೦೨ ಕುಟುಂಬಗಳಲ್ಲಿ ೬೦ ಕುಟುಂಬಗಳು ೩೨೪ ಎಕರೆ, ೩೫ ಕುಂಟೆ ಭೂಮಿ ಹೊಂದಿವೆ. ಕುಟುಂಬಗಳು ಸರಾಸರಿಯಾಗಿ ೫ ಎಕರೆ ೧೬ ಕುಂಟೆ ಭೂಹಿಡುವಳಿ ಹೊಂದಿವೆ. ೧೮ ಕುಟುಂಬಗಳು ೭೮ ಎಕರೆ ೧೭ಕುಂಟೆ ಭೂಮಿಯನ್ನು ಗೇಣಿ ಆಧಾರಿತವಾಗಿ ಸಾಗುವಳಿ ಮಾಡುತ್ತಿವೆ. ಹೀಗೆ ಸಾಗುವಳಿ ಮಾಡುತ್ತಿರುವ ಭೂಮಿಯು ಮರಿಯಮ್ಮನಹಳ್ಳಿ ಗ್ರಾಮದ ಗಡಿ ಭಾಗದ ಒಳಗೆ ಹಾಗೂ ಇತರೆ ನಾಲ್ಕು ನೆರೆಹೊರೆಯ ಹಳ್ಳಿಗಳಲ್ಲಿ ಇದೆ. ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಭೂ ಒಡೆತನ ಹೊಂದಿರುವ ಶೇಕಡ ೭೮.೧ ರಷ್ಟು ಭೂಮಿಯು ಮರಿಯಮ್ಮನಹಳ್ಳಿ ಗ್ರಾಮದ ಗಡಿಯ ಒಳಗೆ ಇದೆ. ಸಾಗುವಳಿ ಮಾಡದೆ ಇರುವ ಮರಿಯಮ್ಮನ ಹಳ್ಳಿ, ತಾಂಡದ ಲಂಬಾಣಿಗಳಿಗೆ ಭೂಒಡೆತನದ ಬಗ್ಗೆ ಆಸಕ್ತಿ ಇಲ್ಲ. ಆದರೆ ಕೆಲವು ಲಂಬಾಣೇತರ ಸಮುದಾಯಗಳು ಸಾಗುವಳಿ ಮಾಡದೆ ಭೂಮಿಯ ಒಡೆತನವನ್ನು ಹೊಂದಿದ್ದಾರೆ.

ಕೃಷಿಯ ಮೂಲಕ ಆರ್ಥಿಕ ಮುನ್ನಡೆಯನ್ನು ಸಾಧಿಸಲು ಹಲವಾರು ಪೂರಕ ಅಂಶಗಳ ಅವಶ್ಯಕತೆ ಇದೆ. ಅವುಗಳಲ್ಲಿ ಪ್ರಮುಖವಾದುವು ಮಣ್ಣಿನ ಗುಣಮಟ್ಟ, ಪ್ರದೇಶಗಳ ಸ್ವಾಭಾವಿಕ ಗುಣಲಕ್ಷಣಗಳು, ಕುಟುಂಬದ ಸದಸ್ಯರ ಸಂಖ್ಯೆ, ನೀರು ಬಸಿದು ಹೋಗದಂತೆ ನೋಡಿಕೊಳ್ಳುವುದು, ಇತ್ಯಾದಿ. ಇದಲ್ಲದೆ ಭೂ ಒಡೆತನದ ದರ್ಜೆಯನ್ನು (ಪ್ರಮಾಣ) ಪರಿಗಣಿಸಿ ವಿವಿಧ ಬಗೆಯ ಭೂಕಂದಾಯವನ್ನು, ವಿವಿಧ ಮಾದರಿಯ ಭೂಮಿಗಳಿಗೆ ವಿಧಿಸುವುದನ್ನು ಸರಕಾರಿ ದಾಖಲೆಗಳು ಸೂಚಿಸುತ್ತವೆ. ಇದಕ್ಕಿಂತ ಹೆಚ್ಚಾಗಿ ವೈಯಕ್ತಿಕ ಒಡೆತನದ ಒಟ್ಟು ಭೂಪ್ರದೇಶವನ್ನು ಅವಶ್ಯಕವಾಗಿ ಸಾಗುವಳಿ ಮಾಡಬೇಕಾಗಿಲ್ಲ. ಅದು ಕಲ್ಲುಬಂಡೆಗಳಿಂದ ಕೂಡಿದ ಭಾಗವಾಗಿರಬಹುದು ಅಥವಾ ಎತ್ತಿನಗಾಡಿಗಳ ಓಡಾಟಕ್ಕೆ ಬಿಟ್ಟಿರುವ (ಕರಾಬು) ದಾರಿಯಾಗಿರಬಹುದು ಅಥವಾ ಒಂದೇ ಸಮಾನ ನಾಗಿರುವ ಭೂಮಿಯಾಗಿರಬಹುದು.

ಲಂಬಾಣೇತರ ಗುಂಪಿನ ಜನರು ನೆಲೆಗೊಂಡ ನಂತರ ಮರಿಯಮ್ಮನಹಳ್ಳಿಯಲ್ಲಿ ಲಂಬಾಣಿಗಳು ನೆಲೆ ನಿಂತಿರುತ್ತಾರೆ. ಆದ ಕಾರಣ ಲಂಬಾಣಿಗಳಿಗೆ ಸಾಕಾಗುವಷ್ಟು ಕೃಷಿಯೋಗ್ಯ ಭೂಮಿಯು ಈ ಹಳ್ಳಿಯ ಗಡಿಯ ಒಳಗೆ ಸಿಗಲಿಲ್ಲ. ಭೂಮಿಯನ್ನು ಪಡೆದುಕೊಂಡವರು ಅತ್ಯಂತ ಕಡಿಮೆ ಗುಣಮಟ್ಟದ (ಬಂಜರು ಭೂಮಿ) ಭೂಮಿಯನ್ನು ಹೊಂದಿರುವುದರಿಂದಲೇ ತೃಪ್ತಿಪಡಬೇಕಾಯಿತು. ಹೀಗಾಗಿ ಲಂಬಾಣಿಗಳು ಕೃಷಿಭೂಮಿಗಾಗಿ ನೆರೆಹೊರೆಯ ಗ್ರಾಮದ ವ್ಯಾಪ್ತಿಗಳಲ್ಲಿ ಹುಡುಕತೊಡಗಿದರು. ಅಲ್ಲಿಯೂ ಕೂಡ, ಅವರು ಕೃಷಿ ಉಪಯೋಗಕ್ಕೆ ಹೆಚ್ಚು ಯೋಗ್ಯವಲ್ಲದ (ಬೀಳುಬಿದ್ದ) ಭೂಮಿಯನ್ನು ಮಾತ್ರ ಪಡೆದುಕೊಂಡರು. ಮರಿಯಮ್ಮನಹಳ್ಳಿಯ ಲಂಬಾಣಿಗಳು ನೆರೆಹೊರೆಯಲ್ಲಿ ಬರುವ ನಾಲ್ಕು ಗ್ರಾಮಗಳಲ್ಲಿ ಕೃಷಿ ಉದ್ದೇಶಕ್ಕಾಗಿ ಹೊಲಗಳನ್ನು ಅದಲುಬದಲು ಮಾಡಿಕೊಂಡು ಭೂ ಹಿಡುವಳಿ ಮತ್ತು ಸಾಗುವಳಿಯನ್ನು ಹೊಂದಿದ್ದಾರೆ. ಲಂಬಾಣಿ ಕುಟುಂಬಗಳು ಭೂಮಿಯನ್ನು ಬೇರೆ ಗ್ರಾಮಗಳಲ್ಲಿ ಪಡೆದುಕೊಂಡರು. ಆ ಭೂಮಿಯು ಮರಿಯಮ್ಮನ ಹಳ್ಳಿ ತಾಂಡದಿಂದ ದೂರದಲ್ಲಿ ಇದ್ದುದರಿಂದ ಭೂಮಿಯನ್ನು ಪಡೆದುಕೊಂಡ ಕುಟುಂಬಗಳು ಆ ಗ್ರಾಮಗಳಿಗೆ ವಲಸೆ ಹೋಗುವಂಥ ಪರಿಸ್ಥಿತಿ ಸೃಷ್ಟಿಯಾಗಿದೆ. ಕೆಲವು ಕುಟುಂಬಗಳು ಮರಿಯಮ್ಮನಹಳ್ಳಿ ತಾಂಡವನ್ನು ಬಿಟ್ಟು ಸಾಗುವಳಿ ಮಾಡಲು ಮತ್ತೊಂದು ಸ್ಥಳದಲ್ಲಿ (ಸುಮಾರು ಮೂರು ಕಿ.ಮಿ. ನಿಂದ ಹದಿನೆಂಟು ಕಿ.ಮಿ. ದೂರದವರೆಗೂ) ವಲಸೆ ಹೋಗಿ ನೆಲೆಗೊಂಡಿವೆ.

ಒಂದು ನಿರ್ದಿಷ್ಟ ಗ್ರಾಮದ ಜನರು ಭೂ ಒಡೆತನವನ್ನು ಗ್ರಾಮದಲ್ಲಿ ಹೊಂದಿರುವಂತೆ, ಅದೇ ರೀತಿ ಬೇರೆ ಬೇರೆ ಗ್ರಾಮದ ಜನರು ಕೂಡ ಸ್ವಲ್ಪ ಪ್ರಮಾಣದಲ್ಲಿ ಭೂ ಒಡೆತನವನ್ನು ಇತರ ಗ್ರಾಮಗಳಲ್ಲಿಯೂ ಹೊಂದಿದ್ದಾರೆ. ಬುಡಕಟ್ಟು ಗುಂಪುಗಳು (ಬಂಧುತ್ವ ಆಧಾರಿತ) ಹೊಂದ್ದಿದ ಸಹಕಾರಿ ಭೂ ಒಡೆತನ ಪದ್ಧತಿಗೆ ಬದಲಾಗಿ ವೈಯಕ್ತಿಕ ಭೂ ಒಡೆತನ ಹಾಗೂ ಇತರ ಗ್ರಾಮಗಳಲ್ಲಿ ವಾಸಿಸುವ ಮೂಲಕ ಭೂಹಂಚಿಕೆಯನ್ನು ಸಾಧ್ಯಗೊಳಿಸಿವೆ.

ಲಂಬಾಣಿಗಳು ಮರಿಯಮ್ಮನಹಳ್ಳಿಯಲ್ಲಿ ನೆಲೆಗೊಳ್ಳುವುದಕ್ಕಿಂತ ಮೊದಲು ಮತ್ತು ನಂತರದಲ್ಲಿ, ಲಂಬಾಣೇತರ ಜಾತಿ ಗುಂಪಿನ ಜನರು ಹಾಗೂ ಇತರ ಗ್ರಾಮಸ್ಥರು ಕೃಷಿಯೋಗ್ಯವಾದ ಭೂಮಿಯನ್ನು ಹೆಚ್ಚಿನ ಮಟ್ಟಿಗೆ ವಶಪಡಿಸಿಕೊಂಡಿದ್ದರು. ಭೂಮಿಯು ಮಾರುಕಟ್ಟೆಗೆ ಬರಲು ಹಲವಾರು ಕಾರಣಗಳಿವೆ. ಇದರ ಪರಿಣಾಮವಾಗಿ ಆ ಸ್ಥಳಗಳಲ್ಲಿ (ಭೂಮಿ ಇರುವ ಸ್ಥಳದಲ್ಲಿ) ವಾಸಮಾಡುವವರು ಭೂಮಿಯನ್ನು ಕೊಂಡುಕೊಂಡರು. ಆದರೂ ಗ್ರಾಮದ ಬಹುಭಾಗ ಭೂಮಿಯು ಸಾಮಾನ್ಯವಾಗಿ ಆ ಗ್ರಾಮದಲ್ಲಿ ವಾಸಮಾಡುತ್ತಿದ್ದ ಗ್ರಾಮಸ್ಥರದಾಗಿತ್ತು.

ಮರಿಯಮ್ಮನಹಳ್ಳಿ ಗ್ರಾಮದ ಒಟ್ಟು ಭೂ ವಿಸ್ತೀರ್ಣ ೨,೦೫೮ ಎಕರೆ ೧೦ ಕುಂಟೆ. ಇದರಲ್ಲಿ ೧೦೫೫ ಎಕರೆ ೨೬ ಕುಂಟೆ ಭೂಮಿಯು ಸಾಗುವಳಿಗೆ ಯೋಗ್ಯವಾಗಿದೆ. ೧೧೨ ಎಕರೆ ೧೦ ಕುಂಟೆ ಭೂಮಿ ಕಲ್ಲುಬಂಡೆಗಳಿಂದ ಸುತ್ತುವರಿದಿದೆ. ಉಳಿದ ೧೯೦ ಎಕರೆ ೧೪ ಕುಂಟೆ ಭೂಮಿಯು ಕೃಷಿ ಕೆಲಸಕ್ಕೆ ಬಾರದ ಭೂಮಿಯಾಗಿದೆ. ಈ ಭೂಮಿಯನ್ನು ಕೆರೆಗಳು, ಕಟ್ಟೆಗಳು, ಶಾಲೆಗಳು, ರಸ್ತೆಗಳು, ವಸತಿ ಪ್ರದೇಶ, ಕೊಳಚೆ ನೀರಿನ ಕಾಲುವೆಗಳು ಇತ್ಯಾದಿ ಸಾರ್ವಜನಿಕ ಸೌಲಭ್ಯಗಳಿಗೆ ಬಳಸಲಾಗಿದೆ.

## ಕೋಷ್ಟಕ ೨.೨

**ಮರಿಯಮ್ಮನಹಳ್ಳಿ ಗಡಿಯ ಒಳಗೆ ಇರುವ ಕೃಷಿ ಯೋಗ್ಯ ಭೂಮಿಯನ್ನು, ವಾಸವಾಗಿರುವವರು ಮತ್ತು ವಾಸವಾಗದಿರುವವರು ಉಪಯೋಗಿಸುತ್ತಿರುವ ಕ್ರಮ ೧೯೯೮ - ೯೯**

| ಭೂಮಾಲೀಕರು ವಾಸವಾಗಿರುವ ಹಳ್ಳಿಯ ಹೆಸರು | ಭೂಮಾಲೀಕರು ಸಾಗುವಳಿ ಮಾಡದ | | ಮಾಲೀಕರಿಂದಲೇ ಸಾಗುವಳಿ | | ಗೇಣಿ ಆಧಾರಿತ ಸಾಗುವಳಿ | |
|---|---|---|---|---|---|---|
| | ಕುಟುಂಬಗಳು | ವಿಸ್ತೀರ್ಣ | ಕುಟುಂಬಗಳು | ವಿಸ್ತೀರ್ಣ | ಕುಟುಂಬಗಳು | ವಿಸ್ತೀರ್ಣ |
| | | ಎ - ಕು | | ಎ - ಕು | | ಎ - ಕು |
| ೧. ಮರಿಯಮ್ಮನಹಳ್ಳಿಯ ಬಹುಜಾತಿಗಳ ವಲಯ | ೨ | ೪ - ೧೦ | ೩೬ | ೪೦೫- ೩೯ | ೧೨ | ೫೮ - ೧೨ |
| ಮರಿಯಮ್ಮನಹಳ್ಳಿ ತಾಂಡ | - | - | ೩೦೫ | ೨೨೧- ೧೦ | ೮ | ೪೦ - ೩೦ |
| ೨. ½ ಕಿ.ಮಿ. | ೪ | ೧೮ - ೧೧ | ೩೪ | ೧೯೮- ೧೯ | ೫ | ೪೦ - ೩೦ |
| ೩. ಹೊಸಪೇಟೆ ೧೭ ಕಿ.ಮಿ. | ೫ | ೩೨ - ೨೦ | ೨ | ೧೯- ೦೩ | - | - |
| ೪. ಕಂಪ್ಲಿ ೪ ಕಿ.ಮಿ. | - | - | ೫ | ೪೭- ೩೪ | - | - |
| ೫. ತಿಮ್ಮಾಪುರ ೩ ಕಿ.ಮಿ. | - | - | ೪ | ೩೧-೨೦ | - | - |
| ೬. ಶಿವಮೊಗ್ಗ ೨೦೦ ಕಿ.ಮಿ. | ೧ | ೧೩ - ೦೭ | - | - | - | - |
| ೭. ಕೂಡ್ಲಿಗಿ ೩೧ ಕಿ.ಮಿ. | - | - | ೧ | ೧೧- ೧೧ | ೧ | ೩ - ೨೦ |
| ೮. ಹರಪನಹಳ್ಳಿ ೨೯ ಕಿ.ಮಿ. | ೧ | ೯ - ೩೫ | - | - | - | - |
| ೯. ಹಗರಿಬೊಮ್ಮನಹಳ್ಳಿ ೫೨ | ೧ | ೭ - ೧೨ | - | - | - | - |
| ೧೦. ಕೊಪ್ಪಳ ೬೫ ಕಿ.ಮಿ. | ೨ | ೫ - ೧೭ | - | - | - | - |
| ೧೧. ಗದಗ ೧೩೦ ಕಿ.ಮಿ. | ೧ | ೩ - ೨೦ | - | - | - | - |
| ೧೨. ಧಾಣಾಪುರ ½ ಕಿ.ಮಿ. | - | - | ೧ | ೩- ೨೭ | - | - |
| ೧೩. ಗಂಗಾವತಿ ೫೫ ಕಿ.ಮಿ. | ೧ | ೩ - ೧೧ | - | - | - | - |

**ಸೂಚನೆ :** ಒಟ್ಟು ಕೃಷಿ ಯೋಗ್ಯ ಭೂಮಿ ವಿಸ್ತೀರ್ಣ ೧.೦೫೫ ಎಕರೆ ೨೬ ಕುಂಟೆ.

ಮರಿಯಮ್ಮನಹಳ್ಳಿ ತಾಂಡದ ಭೂಮಿಯು ಇತರ ಗ್ರಾಮಸ್ಥರ ನಡುವೆ ಹೇಗೆ ಹಂಚಿಕೆಯಾಗಿದೆ ಎಂಬುದನ್ನು ಕೋಷ್ಟಕ ೨.೨ ರಲ್ಲಿ ನೀಡಲಾಗಿದೆ. ಮರಿಯಮ್ಮನಹಳ್ಳಿ ತಾಂಡದ ಒಟ್ಟು ಭೂಮಿ(೧೦೫೫ ಎಕರೆ ೨೬ ಕುಂಟೆ)ಯ ಮೇಲೆ ಇತರ ೧೨ ಗ್ರಾಮಗಳಿಗೆ ಸೇರಿದ ಜನರು ಒಡೆತನ ಹೊಂದಿದ್ದಾರೆ. ಇವರು ಸುಮಾರು ಅರ್ಧ ಕಿಲೋ ಮೀಟರ್‌ನಿಂದ ೨೦೦ ಕಿಲೋ ಮೀಟರ್ ದೂರದ ಸ್ಥಳಗಳಲ್ಲಿ ವಾಸಿಸುತ್ತಿದ್ದಾರೆ. ಒಟ್ಟು ಭೂಮಿಯಲ್ಲಿ ಶೇಕಡ ೪೦.೧೮ರಷ್ಟು ಭೂ ಒಡೆತನವನ್ನು ತಾಂಡದಲ್ಲಿ ವಾಸಿಸದೆ ಇರುವವರು ಹೊಂದಿದ್ದಾರೆ. ಇದು ಲಂಬಾಣಿಗಳಿಗೆ ಕೃಷಿ ಯೋಗ್ಯ ಭೂಮಿಯ ಕೊರತೆಯನ್ನು ಸೃಷ್ಟಿಸಿ ಅವರನ್ನು ಅನಾನುಕೂಲ ಪರಿಸ್ಥಿತಿಗೆ ತಳ್ಳಿತು. ಅಲ್ಲದೆ ಇದು ಅಂತರ್-ಗ್ರಾಮಗಳ ನಡುವೆ, ಅಂತರ್-ಸಂಬಂಧವುಳ್ಳ ಭೂ ಹಿಡುವಳಿ ವ್ಯವಸ್ಥೆಯನ್ನು ಸೃಷ್ಟಿಸಿತು. ಅಂತರ್-ಗ್ರಾಮದ

ಭೂ ಹಿಡುವಳಿ ವ್ಯವಸ್ಥೆ, ಸಾಮಾಜಿಕ ಆಯಾಮಗಳು ಮತ್ತು ಆರ್ಥಿಕ ಅಂಶಗಳ ನಡುವೆ ಪರಸ್ಪರ ಸಂಬಂಧವಿರುವುದನ್ನು ನಾವು ಕಾಣಬಹುದು. ಈ ಪರಿಸ್ಥಿತಿ ವಿಶಿಷ್ಟವಾದ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಿದೆ. ಅವುಗಳೆಂದರೆ, ಭೂ ಒಡೆಯ-ಗೇಣಿದಾರರ ನಡುವಿನ ಸಂಬಂಧಗಳಲ್ಲಿ ಭಿನ್ನಾಭಿಪ್ರಾಯ, ಇತರ ಗ್ರಾಮಸ್ಥರು ಮರಿಯಮ್ಮನಹಳ್ಳಿಯ ಸಾಂಪ್ರದಾಯಿಕ ಸಂಸ್ಥೆಗಳೊಡನೆ ವ್ಯವಹರಿಸುವ ರೀತಿ, ಬಹುಜಾತಿ ವ್ಯವಸ್ಥೆಯಲ್ಲಿ ಅಡಕವಾಗಿರುವ ಅನೌಪಚಾರಿಕ ಪಂಚಾಯಿತಿಗಳು ಮತ್ತು ಲಂಬಾಣಿ ಪಂಚಾಯಿತಿಗಳ ನಡುವೆ ಕಂಡುಬರುವ ವ್ಯತ್ಯಾಸ - ಈ ಅಂಶಗಳ ಹಿನ್ನೆಲೆಯಲ್ಲಿ ಅಂತರ್-ಗ್ರಾಮಗಳ ಭೂಹಿಡುವಳಿ ವ್ಯವಸ್ಥೆಯಲ್ಲಿ ಹೆಚ್ಚಿನ ಸಾಮಾಜಿಕ-ಆರ್ಥಿಕ ತೊಡಕುಗಳು ಉಂಟಾಗಿವೆ.

**ಲಂಬಾಣಿ ಮತ್ತು ಇತರ ಜಾತಿಗಳ ನಡುವೆ ಇರುವ ಭೂ ಹಿಡುವಳಿಯ ಹಂಚಿಕೆಯಲ್ಲಿ ಅಸಮಾನತೆ**

ಮರಿಯಮ್ಮನಹಳ್ಳಿ ತಾಂಡದಲ್ಲಿ ಇರುವ ಕೃಷಿಗೆ ಯೋಗ್ಯವಾದ ಒಟ್ಟು ಭೂಮಿಯಲ್ಲಿ ಶೇಕಡ ೫೯.೮೨ರಷ್ಟು ಭೂಮಿಯನ್ನು ಅಲ್ಲಿ ವಾಸ ಮಾಡುತ್ತಿರುವವರು ಹೊಂದಿದ್ದಾರೆ. ಆದರೆ ಲಂಬಾಣಿ ಮತ್ತು ಇತರ ಜಾತಿಯ ಗುಂಪಿನ ಜನರ ನಡುವೆ ಭೂಮಿಯ ಹಂಚಿಕೆಯಲ್ಲಿ ಅಸಮಾನತೆ ಇದೆ. ಲಂಬಾಣಿಗಳ ೧೦೨ ಕುಟುಂಬಗಳಲ್ಲಿ, ೨೨೧ ಎಕರೆ, ೧೦ ಕುಂಟೆ (ಶೇಕಡ ೨೦.೯೬ ರಷ್ಟು) ಭೂಮಿ ಇದೆ. ಆದರೆ ಇತರ ಜಾತಿಗಳಿಗೆ ಸೇರಿದ ೫೬ ಕುಟುಂಬಗಳು, ೪೧೦ ಎಕರೆ, ೯ ಕುಂಟೆ (ಶೇಕಡ ೩೮.೮೬ ರಷ್ಟು) ಕೃಷಿ ಭೂಮಿ ಹೊಂದಿದ್ದಾರೆ. ಇದು ಕೃಷಿಯಲ್ಲಿ ಅಸಮಾನ ಪರಿಸ್ಥಿತಿಗಳನ್ನು ಲಂಬಾಣಿ ಮತ್ತು ಲಂಬಾಣೇತರರಲ್ಲಿ ಸೃಷ್ಟಿಸಿದೆ. ಭೂಮಿಯ ಒಡೆತನ ಹೊಂದಿರುವ ಇತರ ಜಾತಿಗಳೆಂದರೆ ಲಿಂಗಾಯತ, ಕುರುಬ, ಬ್ರಾಹ್ಮಣ, ವೈಶ್ಯ ಮತ್ತು ಮಾರವಾಡಿ. ಅಲ್ಲದೆ ಕೆಲವು ಮುಸ್ಲಿಂ ಕುಟುಂಬಗಳೂ ಗ್ರಾಮದಲ್ಲಿ ಭೂಮಿಯನ್ನು ಹೊಂದಿದ್ದಾರೆ. ಇದನ್ನು ಡಿಸೆಂಡಿಂಗ್ ಆರ್ಡರ್‌ನಲ್ಲಿ ಜೋಡಿಸಲಾಗಿದೆ. ಲಂಬಾಣೇತರ ಕುಟುಂಬಗಳಲ್ಲಿ ಸರಾಸರಿ ಭೂ ಹಿಡುವಳಿ ೧೦ ಎಕರೆ, ೩೨ ಕುಂಟೆ. ಹೆಚ್ಚಿನ ಪ್ರಮಾಣದಲ್ಲಿ ಲಂಬಾಣಿಗಳು ಹೊಂದಿರುವ ಭೂಮಿಯ ಗುಣಮಟ್ಟ ಅತ್ಯಂತ ಕಡಿಮೆ ಮಟ್ಟದಾಗಿರುತ್ತದೆ. ಇದು ಇವರಲ್ಲಿ ದೊಡ್ಡ ಪ್ರಮಾಣದ ಆಹಾರ ಸಂಪನ್ಮೂಲಗಳ ಕೊರತೆಯನ್ನು ಉಂಟುಮಾಡಿದೆ. ಇದಲ್ಲದೆ ಪ್ರತಿ ಕುಟುಂಬದ ಭೂ ಹಿಡುವಳಿಯೂ ಒಂದೇ ರೀತಿಯ ಮಣ್ಣಿನ ಗುಣಮಟ್ಟವನ್ನು ಹೊಂದಿಲ್ಲ. ಸಾಮಾನ್ಯವಾಗಿ ಸರಾಸರಿ ಹಿಡುವಳಿಯು ಸಮತಟ್ಟಾಗಿ, ಸ್ವಲ್ಪ ಮಟ್ಟಿಗೆ ಉಬ್ಬು ತಗ್ಗುಗಳಿಂದ ಕೂಡಿದ ಒಣ ಭೂಮಿಯಾಗಿದೆ. ಹೀಗೆ ವಿಭಿನ್ನವಾದ ಬಗೆಯ ಭೂಮಿಗಳನ್ನು ಕಾಣಬಹುದು. ಅಸಮಾನ ಆರ್ಥಿಕ ಪರಿಸ್ಥಿತಿಗಳು ಲಂಬಾಣಿ ಮತ್ತು ಲಂಬಾಣೇತರ ಗ್ರಾಮಸ್ಥರ ನಡುವೆ ಉಂಟಾಗಲು ಲಂಬಾಣಿಗಳು ನಿಧಾನವಾಗಿ ನೆಲೆಗೊಂಡಿದ್ದೇ ಪ್ರಮುಖ ಕಾರಣವಾಗಿತ್ತು[೧]. ಇದಕ್ಕೆ ಸಂಬಂಧ ಸೂಚಕದಂತೆ ಕೃಷಿಯ ಬಗ್ಗೆ ಲಂಬಾಣಿಗಳಲ್ಲಿ ಆಸಕ್ತಿ ಮೂಡಿದ್ದು ನಿಧಾನವಾಗಿಯೇ. ಲಂಬಾಣೇತರರಲ್ಲಿ ಸಮೃದ್ಧಿಯಾಗಿ ಆದಾಯ ಇದ್ದುದರಿಂದ ಭೂಮಿಯು ಮಾರುಕಟ್ಟೆಗೆ ಬಂದ ಸಂದರ್ಭದಲ್ಲಿ ಎಷ್ಟು ಬೇಗನೇ ಸಾಧ್ಯವೋ ಅಷ್ಟು ಬೇಗ ಅದನ್ನು ಕೊಂಡುಕೊಳ್ಳುತ್ತಿದ್ದರು. ಆದರೆ ಅನೇಕ ಲಂಬಾಣಿಗಳಿಗೆ ಭೂಮಿಯನ್ನು ಕೊಂಡುಕೊಳ್ಳಲು ಹಣವಿರಲಿಲ್ಲ. ಆದ್ದರಿಂದ ಕೃಷಿ ಭೂಮಿಯನ್ನು ಕೊಂಡುಕೊಳ್ಳಬೇಕು ಎಂಬ ಆಸಕ್ತಿ ಇದ್ದ ಲಂಬಾಣಿಗಳಿಗೂ ಭೂಮಿ ಸಿಕ್ಕಲಿಲ್ಲ. ಕೊಳ್ಳುವ ಶಕ್ತಿ ಅಥವಾ ಧಾರಣ ಶಕ್ತಿ ಇದ್ದ ಅನೇಕ ಲಂಬಾಣಿಗಳು ಸ್ವಂತ ಭೂಮಿಯನ್ನು ಪಡೆಯಲು ಸಾಧ್ಯವಾಯಿತು.

---

*೧. ಭಾರತದ ಮಧ್ಯ ಭಾಗದಲ್ಲಿ ಕೆಲವು ಬುಡಕಟ್ಟುಗಳು ತುಂಬಾ ನಿಧಾನವಾಗಿ ಕೃಷಿ ಸಾಗುವಳಿಗೆ ತೊಡಗಿಕೊಂಡಿದ್ದರಿಂದಾಗಿ ಅವರಿಗೆ ಸಾಗುವಳಿಗೆ ಉತ್ತಮವಾದ ಭೂಮಿ ದೊರಕದೆ ಇರುವುದನ್ನು ಸಕ್ಸೇನಾ ಅವರು ವರದಿ ಮಾಡಿದ್ದಾರೆ (೧೯೬೫ : ೧೬-೧೭).*

ಎರಡನೇ ಮಹಾಯುದ್ಧದ ನಂತರ ಕೃಷಿ ಉತ್ಪನ್ನಗಳಿಗೆ ಉಂಟಾದ ಹೆಚ್ಚಿನ ಬೇಡಿಕೆ ಕೃಷಿ ಉತ್ಪನ್ನಗಳ ಬೆಲೆಯಲ್ಲಿ ಹೆಚ್ಚಳವನ್ನು ಉಂಟುಮಾಡಿತು. ಇದರಿಂದ ಗೇಣಿ ಆಧಾರಿತವಾಗಿ ಸಾಗುವಳಿ ಮಾಡುತ್ತಿದ್ದವರು ಹೆಚ್ಚಿನ ಆದಾಯ ಮತ್ತು ಉಳಿತಾಯ ಕಂಡರು. ಅಲ್ಲದೇ ಕೂಲಿ ಕೆಲಸಕ್ಕೆ ಬೇಡಿಕೆ ಮತ್ತು ವಾರ್ಷಿಕ ಗುತ್ತಿಗೆ ಆಧಾರದ ಕೆಲಸಗಾರರಿಗೆ ಬೇಡಿಕೆ, ಇವುಗಳೇ ಅಲ್ಲದೆ ಇತರ ಹಲವು ಮಾರ್ಗಗಳಿಂದ ಉಂಟಾದ ಆರ್ಥಿಕ ಸಂಪನ್ಮೂಲದ ಹೆಚ್ಚಳದಿಂದಲೂ ಭೂಮಿಯನ್ನು ಕೊಳ್ಳಲು ಕೆಲವರಿಗೆ ಅನುಕೂಲವಾಯಿತು. ಅಸಮಾನತೆಯಿಂದ ಉಂಟಾಗಿರುವ ಭೂ ಒಡೆತನ ಮತ್ತು ಆರ್ಥಿಕ ಸಂಪನ್ಮೂಲಗಳ ಕೊರತೆ, ಭೂಮಿಯನ್ನು ಕೊಂಡುಕೊಳ್ಳಲು ಅಯ್ಕೆ ಮಾಡುವಾಗ ಲಂಬಾಣಿಗಳು ಇತರ ಜಾತಿಗಳು ಮತ್ತು ಗುಂಪುಗಳೊಡನೆ ಸ್ಪರ್ಧೆಯಲ್ಲಿ ತೊಡಗಬೇಕಾಯಿತು. ಲಂಬಾಣಿಗಳಲ್ಲಿ ಇತರ ಜಾತಿಗಳಿಗಿಂತ ಹೆಚ್ಚು ಮಂದಿ ಕೂಲಿ ಕೆಲಸವನ್ನವಲಂಬಿಸಿದ್ದಾರೆ ಎನ್ನುವುದಕ್ಕೆ ಇದೂ ಒಂದು ಪ್ರಮುಖ ಕಾರಣ. ಲಂಬಾಣಿಗಳಲ್ಲಿ ಕೃಷಿ ಸಾಗುವಳಿ ಮಾಡುವವರ ಸಂಖ್ಯೆ ಕಡಿಮೆ ಇದ್ದು, ಭೂರಹಿತ ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ಇದರಿಂದ ಲಂಬಾಣೇತರ (ತಾಂಡಗಳಿಗೆ ಹತ್ತಿರವಿದ್ದ) ಕೃಷಿಕರು ಲಂಬಾಣಿ ತಾಂಡಗಳಿಂದ ಸಾಕಾಗುವಷ್ಟು ಕೃಷಿ ಕಾರ್ಮಿಕರ ಸೇವೆಯನ್ನು ಬಳಸಿಕೊಳ್ಳಬಹುದಾಗಿದೆ. ಇತರೆ ಜಾತಿಯ ಬಹುಪಾಲು ಕುಟುಂಬಗಳು (ಶೇಕಡ ೪೮) ಪ್ರಾಥಮಿಕ ಆದಾಯಕ್ಕೆ ಕೃಷಿಯನ್ನು ಅವಲಂಬಿಸಿದ್ದರೆ, ಕೇವಲ ಆರು ಕುಟುಂಬಗಳು ಕೂಲಿ ಕೆಲಸ ಅವಲಂಬಿಸಿದ್ದಾರೆ. ೨ ಕುಟುಂಬಗಳು ಸಣ್ಣ ಅಂಗಡಿಗಳನ್ನು ನಡೆಸುತ್ತಿವೆ. ಮರಿಯಮ್ಮನಹಳ್ಳಿ ತಾಂಡದ ೫೦ ಕುಟುಂಬಗಳು ಆದಾಯಕ್ಕೆ ಪ್ರಾಥಮಿಕವಾಗಿ ಕೃಷಿಯನ್ನೇ ಅವಲಂಬಿಸಿವೆ. ೧೪ ಕುಟುಂಬಗಳು ಕೃಷಿಗೆ ಪೂರಕವಾದ ಕೆಲಸದಿಂದ ಆದಾಯ ಪಡೆದುಕೊಳ್ಳುತ್ತಿವೆ. ಉಳಿದ ಕುಟುಂಬಗಳು ಜೀವನೋಪಾಯದ ಅವಶ್ಯಕತೆಗಳನ್ನು ಕೂಲಿಯಿಂದಲೇ ಪಡೆದುಕೊಳ್ಳುತ್ತಿವೆ. ಇವರಿಗೆ ಕೆಲಸ ಕೊಡುವವರು ಇತರ ಜಾತಿ ಗುಂಪುಗಳಿಗೆ ಸೇರಿದವರಾಗಿದ್ದಾರೆ.

ನಾಗಲಾಪುರ ತಾಂಡದಲ್ಲಿ ಇರುವ ಲಂಬಾಣಿಗಳು ಜೀವನೋಪಾಯಕ್ಕೆ ಪ್ರಮುಖವಾಗಿ ಕೂಲಿ ಕೆಲಸವನ್ನೇ ಅವಲಂಬಿಸಿದ್ದಾರೆ. ಅಧ್ಯಯನಕ್ಕೆ ಒಳಪಡಿಸಿದ ೯೯ ಕುಟುಂಬಗಳಲ್ಲಿ ಕೇವಲ ೧೯ ಕುಟುಂಬಗಳು ಜೀವನೋಪಾಯಕ್ಕೆ ನೇರವಾಗಿ ಕೃಷಿಯನ್ನು ಅವಲಂಬಿಸಿವೆ. ೭ ಕುಟುಂಬಗಳು ಕೃಷಿಗೆ ಪೂರಕವಾದ ಕೆಲಸವನ್ನು ಪರೋಕ್ಷವಾಗಿ ಮಾಡಿ ಆದಾಯವನ್ನು ಪಡೆದುಕೊಳ್ಳುತ್ತಿವೆ. ೯ ಕುಟುಂಬಗಳು ನಾಗಲಾಪುರ ಗಡಿಯ ಹೊರಗೆ, ಹೊಸಪೇಟೆ ತಾಲ್ಲೂಕಿನ ಒಳಗೆ ಭೂ ಒಡೆತನ ಮತ್ತು ಸಾಗುವಳಿಯನ್ನು ನೆರೆಹೊರೆಯ ಗ್ರಾಮಗಳಲ್ಲಿ ಸುಮಾರು (೨) ಎರಡು ಕಿಲೋ ಮಿಟರ್‌ನಿಂದ, ೧೦ ಕಿಲೋಮೀಟರ್ ದೂರದಲ್ಲಿ ಹೊಂದಿವೆ. ಇವರು ಆ ಸ್ಥಳಗಳಿಗೆ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಉಪಯೋಗಿಸಿ ಊರಿಗೆ ಬಂದು ಹೋಗಿ ಸಾಗುವಳಿ ಮಾಡುತ್ತಿದ್ದಾರೆ. ಸಾಗುವಳಿ ಚಟುವಟಿಕೆ ಹೆಚ್ಚಾಗಿರುವ ಸಮಯಗಳಲ್ಲಿ ದನದ ಕೊಟ್ಟಿಗೆಗಿಂತ ಸ್ವಲ್ಪ ಉತ್ತಮವೆನಿಸುವ ಕಟ್ಟಡಗಳಲ್ಲಿ ಕೃಷಿ ಸಾಗುವಳಿ ಮಾಡಲು ಬೇಕಾಗುವ ನೇಗಿಲಿನಂತಹ ಅನೇಕ ಸಲಕರಣೆಗಳನ್ನು ಅಲ್ಲಿಯೇ ಇಡುತ್ತಾರೆ. ಸಾಗುವಳಿ ಚಟುವಟಿಕೆ ಇಲ್ಲದ ಸಮಯಗಳಲ್ಲಿ ತಮ್ಮ ತಾಂಡಗಳಲ್ಲಿ ಕೃಷಿ ಸಲಕರಣೆಗಳನ್ನು ಇಟ್ಟುಕೊಂಡಿರುತ್ತಾರೆ. ನಾಗಲಾಪುರ ತಾಂಡದ ಲಂಬಾಣಿಗಳ ಭೂ ಒಡೆತನ ಮತ್ತು ಗೇಣಿ ವಿಧಾನಗಳನ್ನು ಕೋಷ್ಟಕ ೨.೩ ರಲ್ಲಿ ನೀಡಲಾಗಿದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಇರುವಂತೆ ಸಾಗುವಳಿ ಮಾಡದೇ ಭೂ ಒಡೆತನ ಹೊಂದಿರುವ ೨ ಕುಟುಂಬಗಳು ನಾಗಲಾಪುರ ತಾಂಡದ ಲಂಬಾಣಿಗಳಲ್ಲಿಯೂ ಇದೆ. ಒಂದು ಪ್ರಕರಣದಲ್ಲಿ ಮೂರು ಜನ ಅಣ್ಣ ತಮ್ಮಂದಿರು ಕೇವಲ ಎರಡೇ ಎಕರೆ ಭೂಮಿ ಹೊಂದಿದ್ದಾರೆ. ಆದರೆ ಇವರೆಲ್ಲಾ ಸರ್ಕಾರಿ ಸೇವೆಯಲ್ಲಿದ್ದಾರೆ. ಭೂಮಿಯನ್ನು ಗುತ್ತಿಗೆ ಆಧಾರದಲ್ಲಿ ಬೇರೆಯವರಿಗೆ ನೀಡಿದ್ದಾರೆ. ಎರಡನೆಯ ಪ್ರಕರಣದಲ್ಲಿ ವಿಧವೆ ತನ್ನ ಮೂರು ಎಕರೆ ಭೂಮಿಯನ್ನು ಬೇರೆಯವರಿಗೆ ಗುತ್ತಿಗೆ ನೀಡಿರುತ್ತಾರೆ.

ನಾಗಲಾಪುರ ಲಂಬಾಣಿಗಳು ಸಣ್ಣ ಪ್ರಮಾಣದಲ್ಲಿ ಭೂ ಒಡೆತನ ಹೊಂದಿದ್ದಾರೆ. ಹೀಗಾಗಿ ಅವರು ಇತರೆ ಜನರ ಭೂಮಿಯನ್ನು ಗೇಣಿಗೆ ಪ್ರಯತ್ನಪಟ್ಟು ಪಡೆದುಕೊಂಡು ಬುದ್ಧಿವಂತಿಕೆಯಿಂದ ಸಾಕಾಗುವಷ್ಟು ಭೂಮಿಯನ್ನು ಸಾಗುವಳಿ ಮಾಡುತ್ತಿದ್ದಾರೆ.

ಈ ಕೆಳಗಿನ ಅಂಕಿ ಅಂಶಗಳು ಎರಡು ತಾಂಡಗಳ ಭೂ ಮಾಲೀಕರ ವಶದಲ್ಲಿರುವ ಮತ್ತು ಗೇಣಿ ಅಥವಾ ಗುತ್ತಿಗೆದಾರರ ವಶದಲ್ಲಿರುವ ಹಾಗೂ ಲಂಬಾಣಿ ಸಾಗುವಳಿ ಕುಟುಂಬಗಳ ನಡುವೆಯಿರುವ ಭೂಮಿಯ ಹಂಚಿಕೆಯನ್ನು ತಿಳಿಸುತ್ತದೆ.

| ಮಾಲೀಕರೇ ಸಾಗುವಳಿ ಮಾಡುವುದು | | ಗೇಣಿದಾರರೇ ಸಾಗುವಳಿ ಮಾಡುವುದು | | ಗುತ್ತಿಗೆ ಆಧಾರದಲ್ಲಿ ಸಾಗುವಳಿ ಮಾಡುವುದು | | ಬೆಳೆಯನ್ನು ಹಂಚಿಕೊಳ್ಳುವ ಸಾಗುವಳಿ | | ಹೊಸ ಅನುಭೋಗ (ಸಾಗುವಳಿ) | | ಜಾನುವಾರು ಮತ್ತು ಕೆಲಸದ ಹಂಚಿಕೆಯಿಂದ ಮಾಡಿ ಕೊಳ್ಳುವ ಸಾಗುವಳಿ | | ಬಹಳವರ್ಷಗಳಿಂದ ಬಾಡಿಗೆ ರೀತಿಯಲ್ಲಿ ಸಾಗುವಳಿ ಮಾಡುತ್ತಿರುವುದು. | |
|---|---|---|---|---|---|---|---|---|---|---|---|---|---|
| ಮ | ನಾ | ಮ | ನಾ | ಮ | ನಾ | ಮ | ನಾ | ಮ | ನಾ | ಮ | ನಾ | ಮ | ನಾ |
| ೫೦ | ೪ | - | - | ೧೮ | ೮ | ೧೦ | ೧೫ | ೧೦ | - | - | ೨ | ೬ | - |

**ಸೂಚನೆ :** ಮ = ಮರಿಯಮ್ಮನಹಳ್ಳಿ
ನಾ = ನಾಗಲಾಪುರ

ಕೃಷಿ ಭೂಮಿಯ ಕೊರತೆಯಿಂದ ಲಂಬಾಣಿಗಳು ಜೀವನೋಪಾಯಕ್ಕಾಗಿ ಹತ್ತಿರದ ಸಂಬಂಧಿಕರ ಊರುಗಳಿಗೆ ಹೋಗಿ ಭೂಮಿ ಮತ್ತು ಕೂಲಿ ಕೆಲಸಗಳನ್ನು ಹುಡುಕುತ್ತಿದ್ದಾರೆ. ಆದರೂ ನಾಗಲಾಪುರ ತಾಂಡದ ಭೂರಹಿತ ಲಂಬಾಣಿ ಕುಟುಂಬಗಳಿಗೆ, ೧೯೮೭ರಲ್ಲಿ ಸರ್ಕಾರದ ಪುನರ್ವಸತಿಯಿಂದ ಪಕ್ಕದ ತಾಲ್ಲೂಕುಗಳಲ್ಲಿ, ಜಿಲ್ಲಾ ಆಡಳಿತವು ಬೀಳುಬಿದ್ದ (ಕೃಷಿಗೆ ಹೆಚ್ಚು ಯೋಗ್ಯವಲ್ಲದ) ಸರ್ಕಾರಿ ಭೂಮಿಯನ್ನು ದೊರಕಿಸಿಕೊಟ್ಟಿದೆ. ಇದು ಸ್ವಲ್ಪ ಮಟ್ಟಿಗೆ ನಾಗಲಾಪುರದ ಭೂರಹಿತ ಲಂಬಾಣಿಗಳ ಅನಿಶ್ಚಿತತೆಯನ್ನು ಕಡಿಮೆಗೊಳಿಸಿ, ಜೀವನಕ್ಕೆ ಸಾಕಾಗುವಷ್ಟು ನೀಡದಿದ್ದರೂ ಜೀವಿಸುವಂತೆ ಮಾಡಿತು. ಆದರೆ ಭೂಮಿಯನ್ನು ಯಾವುದೋ ಒಂದು ಸ್ಥಳದಲ್ಲಿ ನೀಡುವುದು ಅಷ್ಟು ಪ್ರೋತ್ಸಾಹಕರವಾಗಿರುವುದಿಲ್ಲ. ಏಕೆಂದರೆ ಅದು ಅವರ ಬಂಧುಗಳ ಜೊತೆ ಮತ್ತು ಸಮುದಾಯಗಳ ಜೊತೆಗಿನ ಭಾವನಾತ್ಮಕ ಸಂಬಂಧಗಳನ್ನು ಪ್ರತ್ಯೇಕಿಸುತ್ತಿತ್ತು.

ಮರಿಯಮ್ಮನಹಳ್ಳಿ ತಾಂಡಕ್ಕೆ ಹೋಲಿಸಿದರೆ ನಾಗಲಾಪುರ ತಾಂಡದಲ್ಲಿನ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಭಿನ್ನವಾಗಿದೆ. ಈ ತಾಂಡದಲ್ಲಿ ನಿರೀಕ್ಷೆಗಿಂತ ಹೆಚ್ಚಿನ ಜನ ಬಡತನದಲ್ಲಿದ್ದಾರೆ. ಜೀವನೋಪಾಯಕ್ಕೆ ಸಾಕಾಗುವಷ್ಟು ಭೂಮಿ ಹೊಂದಿಲ್ಲ ಎಂಬ ಭಾವನೆ ನಾಗಲಾಪುರ ತಾಂಡದಲ್ಲಿ ಇದೆ. ಈಗಾಗಲೇ ವಲಸೆ ಹೋಗಿರುವ ೨೪ ಕುಟುಂಬಗಳ ಜೊತೆಗೆ ಇನ್ನೂ ಸುಮಾರು ೪೦ ಕ್ಕೂ ಹೆಚ್ಚಿನ ಲಂಬಾಣಿ ಕುಟುಂಬಗಳು ನೆರೆಹೊರೆಯ ಹಳ್ಳಿ, ತಾಲ್ಲೂಕು ಹಾಗೂ ಜಿಲ್ಲೆಗಳಿಗೆ ವಲಸೆ ಹೋಗಲು ತಯಾರಿ ನಡೆಸಿವೆ. ಈ ಕುಟುಂಬಗಳು ಅತ್ಯಂತ ಬಡತನದಲ್ಲಿ ಇರುವುದರಿಂದ ಹೆಚ್ಚಿನ ಕೃಷಿ ಭೂಮಿಯನ್ನು ಒದಗಿಸಿದರೂ ಪ್ರಯೋಜನವಾಗಲಾರದು. ಕೃಷಿಯ ಆರಂಭಕ್ಕೆ ಬೇಕಾಗುವ ಅಗತ್ಯವಾದ ಬಂಡವಾಳ ಮತ್ತು ಮೇಲುಸ್ತುವಾರಿಗೆ ತಗಲುವ ವೆಚ್ಚ, ಕುಟುಂಬದ ನಿರ್ವಹಣೆಗೆ ಬೇಕಾಗುವ ವೆಚ್ಚಗಳನ್ನು ಹೊಸ ಬೆಳೆ ಬರುವವರೆಗೆ ತಡೆದುಕೊಳ್ಳಲು (ಸಹಿಸಿಕೊಳ್ಳಲು) ಸಾಧ್ಯವಿಲ್ಲ. ಆದುದರಿಂದ ವಲಸೆ ಹೋಗುವ ಕುಟುಂಬಗಳು ಕೃಷಿ ಆರಂಭಕ್ಕೆ ಅಗತ್ಯ

ವಾದ ಬಂಡವಾಳವನ್ನು ಸರ್ಕಾರವೇ ನೀಡಬೇಕು ಎಂಬುದು ಇವರ ಬೇಡಿಕೆಗಳು. ನಷ್ಟ ಸಂಭವಿಸಬಹುದಾದ ಕೃಷಿ ಉದ್ಯಮದಿಂದ ಹೇಗೆ ಕಠಿಣವಾದ ಹಾಗೂ ಅನಿಶ್ಚಿತತೆಯ ದಿನಗಳನ್ನು ಎದುರಿಸಬೇಕು ಎಂದು ಮಾಹಿತಿದಾರರು ಹೇಳುತ್ತಾರೆ. ಅಲ್ಲದೇ ಹೊಸ ಪರಿಸ್ಥಿತಿಯೂ ಈಗ ಇರುವ ಪರಿಸ್ಥಿತಿಗಿಂತ ಅತ್ಯಂತ ನಿಕೃಷ್ಟವಾದ ಬದಲಿ ವ್ಯವಸ್ಥೆಯಾಗಿದೆ ಎಂದು ಅವರು ಅರ್ಥೈಸುತ್ತಾರೆ.

ಇದಕ್ಕೆ ಸೇರಿಕೊಂಡಂತೆ ಬದಲಾದ (೧೫ ಸಣ್ಣ ಪ್ರಮಾಣದ ಕುಟುಂಬಗಳು) ನಾಗಲಾಪುರ ತಾಂಡದಿಂದ ೨೪ ಕುಟುಂಬಗಳು ಕೆಳಗೆ ತಿಳಿಸಿರುವ ಗ್ರಾಮಗಳಿಗೆ ವಲಸೆ ಹೋಗಿವೆ. ಈ ಪಟ್ಟಿಯಲ್ಲಿ ತಿಳಿಸಿರುವ ಗ್ರಾಮಗಳಲ್ಲಿ ಅವರಿಗೆ ಸರ್ಕಾರಿ ಭೂಮಿಯನ್ನು ಮಂಜೂರು ಮಾಡಲಾಗಿದೆ.

**ನಾಗಲಾಪುರ ಲಂಬಾಣಿಗಳು ಭೂಮಿಗಾಗಿ ವಲಸೆ ಹೋಗಿರುವುದು**

| ಇಲ್ಲಿಂದ | ಇಲ್ಲಿಗೆ | ವಲಸೆ ಹೋದ ಕುಟುಂಬಗಳು |
|---|---|---|
| ನಾಗಲಾಪುರ ತಾಂಡದಿಂದ | ಗರಗ | ೧೦ |
| | ಬೈಲುಕುಂದಿ | ೨ |
| | ಗೊಲ್ಲರಹಳ್ಳಿ | ೬ |
| | ಬಸವನದುರ್ಗ | ೪ |
| | ಚಿಕ್ಕಜೋಗಿಹಳ್ಳಿ | ೧ |
| | ದಾಸರಹಳ್ಳಿ | ೧ |
| | | ಒಟ್ಟು ೨೪ |

ನಾಗಲಾಪುರದಿಂದ ವಲಸೆಹೋದ ೨೪ ಲಂಬಾಣಿ ಕುಟುಂಬಗಳು ಭೂಮಿಯನ್ನು ಹುಡುಕುತ್ತಾ ವಲಸೆ ಬಂದಿವೆ. ಆ ಕುಟುಂಬದ ವ್ಯಕ್ತಿಗಳ ಮನೋಭಾವದಿಂದ ಅಥವಾ ವೈಪರೀತ್ಯಗಳಿಂದ (ಸಾಮಾಜಿಕ, ಆರ್ಥಿಕ) ವಲಸೆ ಬಂದಿವೆಯೇ ಎಂಬುದನ್ನು ತರ್ಕಿಸಿದರೆ ವ್ಯತ್ಯಾಸ ಕಂಡುಬರುತ್ತದೆ. ಅತ್ಯಂತ ಆಸಕ್ತಿಯ ವಿಷಯವೆಂದರೆ ಮರಿಯಮ್ಮನಹಳ್ಳಿ ತಾಂಡದಿಂದ ಕೇವಲ ೫ ಲಂಬಾಣಿ ಕುಟುಂಬಗಳು ಮಾತ್ರ ಕೃಷಿ ಭೂಮಿಗಾಗಿ ವಲಸೆ ಹೋಗಿವೆ. ನಾಗಲಾಪುರ ತಾಂಡದ ಲಂಬಾಣಿಗಳನ್ನು ಹೊರ ತಳ್ಳುವ ಅಂಶಗಳು ಹೆಚ್ಚು ಪ್ರಬಲವಾಗಿದ್ದು, ಅದಕ್ಕೆ ಪೂರಕವಾದಂತೆ ಸಮತೋಲನವಿಲ್ಲದ ಬಂಧು ಬಳಗದ ಅಥವಾ ಸ್ಥಳೀಯ ಸಮುದಾಯದ ಭಾವನಾತ್ಮಕ ಸಂಬಂಧಗಳು ದುರ್ಬಲ ವಾಗಿರುವುದು ಹೆಚ್ಚಿನ ಕುಟುಂಬಗಳ ವಲಸೆಗೆ ಕಾರಣವಾಗಿದೆ.

## ಕೋಷ್ಟಕ ೨.೩

**ನಾಗಲಾಪುರದ ಲಂಬಾಣಿ ಕುಟುಂಬಗಳು ಸಾಗುವಳಿ ಮಾಡುತ್ತಿರುವ ಭೂ ವಿಸ್ತೀರ್ಣದ ವರ್ಗೀಕರಣ ಮತ್ತು ಗೇಣಿ ಪದ್ಧತಿಯ ಮಾದರಿಗಳು.**

| ಗೇಣಿಯ ಮಾದರಿ | ಎಕರೆಗಳಲ್ಲಿ ಭೂ ವಿಸ್ತೀರ್ಣದ ವರ್ಗೀಕರಣ | | | | |
|---|---|---|---|---|---|
| | ೧ - ೪ | ೫ - ೯ | ೧೦ - ೧೪ | ೧೫ - ೧೮ | ಒಟ್ಟು |
| ಸ್ವಂತ ಭೂ ಮಾಲಿಕರಿಂದ ಸಾಗುವಳಿ | ೩ | - | - | ೧ | ೪ |
| ಸ್ವಲ್ಪ ಸ್ವಂತದು ಮತ್ತು ಸ್ವಲ್ಪ ಗುತ್ತಿಗೆ ಆಧಾರಿತವಾದುದು | - | - | ೧ | - | ೧ |
| ಗುತ್ತಿಗೆ ಆಧಾರಿತವಾದುದು | ೨ | ೨ | - | - | ೪ |
| ಬೆಳೆಯ ಹಂಚಿಕೆ | ೫ | ೪ | ೧ | - | ೧೦ |

| ಗೇಣಿಯ ಮಾದರಿ | ಎಕರೆಗಳಲ್ಲಿ ಭೂ ವಿಸ್ತೀರ್ಣದ ವರ್ಗೀಕರಣ | | | | |
|---|---|---|---|---|---|
| | ೧ - ೪ | ೫ - ೯ | ೧೦ - ೧೪ | ೧೫ - ೧೮ | ಒಟ್ಟು |
| ಸ್ವಲ್ಪ ಸ್ವಂತದು ಮತ್ತು ಸ್ವಲ್ಪ ಬೆಳೆಯ ಹಂಚಿಕೆ | - | ೨ | - | - | ೨ |
| ಸ್ವಲ್ಪ ಗುತ್ತಿಗೆ ಆಧಾರಿತವಾದದ ಮತ್ತು ಸ್ವಲ್ಪ ಬೆಳೆ ಹಂಚಿಕೆ ಆಧಾರಿತವಾದದು | - | ೧ | ೧ | ೧ | ೩ |
| ಗುತ್ತಿಗೆ ಆಧಾರದಲ್ಲಿ ನೀಡಿರುವುದು | ೨ | - | - | - | ೨ |
| ಒಟ್ಟು | ೧೨ | ೯ | ೩ | ೨ | ೨೬ |

**ಸೂಚನೆ** : ಕುಟುಂಬಗಳ ನಡುವೆ ಸ್ವಂತ ಭೂ ಹಿಡುವಳಿಯು ೧೬ ಕುಂಟೆಯಿಂದ ೧೮ ಎಕರೆಯವರೆಗೆ ವ್ಯತ್ಯಾಸಗೊಳ್ಳುತ್ತದೆ.
ಕುಟುಂಬಗಳ ಸರಾಸರಿ ಹಿಡುವಳಿಯು ೬ ಎಕರೆ ೨ ಕುಂಟೆಗಳು.

ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳ ಕೃಷಿ ವ್ಯವಸ್ಥೆಯ ಸಂಬಂಧವನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದರೆ ಈ ಕೆಳಗಿನ ಅಂಶಗಳು ಗಮನಾರ್ಹವಾಗಿ ಕಂಡು ಬರುತ್ತವೆ. ನಾಗಲಾಪುರ ತಾಂಡದಲ್ಲಿ ಕೃಷಿಯನ್ನು ಅವಲಂಬಿಸಿದ ಕುಟುಂಬಗಳು ೨೬.೩. ಅದೇ ರೀತಿ ಮರಿಯಮ್ಮನಹಳ್ಳಿ ತಾಂಡದಲ್ಲಿ ೬೨.೬. ಆದರೆ ಕೃಷಿಯನ್ನು ಅವಲಂಬಿಸಿರುವ ಎಲ್ಲಾ ಕುಟುಂಬಗಳು ಭೂ ಒಡೆತನವನ್ನು ಹೊಂದಿಲ್ಲ. ಮರಿಯಮ್ಮನಹಳ್ಳಿ ತಾಂಡದ ೧೦೨ ಲಂಬಾಣಿ ಕುಟುಂಬಗಳಲ್ಲಿ, ೬೦ ಕುಟುಂಬಗಳು ತಮ್ಮ ಕುಟುಂಬವನ್ನು ಪೋಷಿಸಲು (ಜೀವನೋಪಾಯಕ್ಕೆ) ಸಾಕಾಗುವಷ್ಟು ಭೂ ಒಡೆತನ ಹೊಂದಿವೆ. ನಾಗಲಾಪುರದ ೯೯ ಲಂಬಾಣಿ ಕುಟುಂಬಗಳಲ್ಲಿ ಕೇವಲ ೪ ಕುಟುಂಬಗಳು ಮಾತ್ರ ಕುಟುಂಬವನ್ನು ಪೋಷಿಸಿಕೊಳ್ಳಲು ಸಾಕಾಗುವಷ್ಟು ಭೂ ಒಡೆತನ ಹೊಂದಿವೆ. ಉಳಿದ ೨೨ ಕುಟುಂಬಗಳು ಗೇಣಿ ಭೂಮಿಯನ್ನು ಅಥವಾ ಇತರರ ಭೂಮಿಯನ್ನು ಆಶ್ರಯಿಸಿವೆ. ಮರಿಯಮ್ಮನಹಳ್ಳಿ ತಾಂಡ ಮತ್ತು ನಾಗಲಾಪುರ ತಾಂಡದಲ್ಲಿ ಇರುವ ಲಂಬಾಣಿ ಕುಟುಂಬಗಳ ಸರಾಸರಿ ಭೂ ಹಿಡುವಳಿಯು ಕ್ರಮವಾಗಿ ೫ ಎಕರೆ ೧೬ ಕುಂಟೆ ಮತ್ತು ೬ ಎಕರೆ ೨ ಕುಂಟೆ.

ಇಲ್ಲಿನ ನಿಜಸ್ಥಿತಿ ಎಂದರೆ ಸಾಗುವಳಿ ಮಾಡುವುದು ಕೂಲಿ ಕೆಲಸಕ್ಕಿಂತ ಹೆಚ್ಚಿನ ಆದಾಯ ತರುತ್ತದೆ ಎಂಬ ಭಾವನೆಯು ಲಂಬಾಣಿಗಳಲ್ಲಿ ಭೂಮಿಯನ್ನು ಹೊಂದಬೇಕು ಎಂಬ ಅಸಕ್ತಿಯನ್ನು ತೀಕ್ಷ್ಣವಾಗಿಸಿದೆ. ಸರ್ಕಾರದ ಅನೇಕ ಸೌಲಭ್ಯ ಮತ್ತು ವಿನಾಯಿತಿಗಳನ್ನು ಪಡೆದುಕೊಳ್ಳಲು ಭೂಮಿ ಬಹುಮುಖ್ಯ ಧಾತುವಾಗಿದೆ. ಇದನ್ನು ಗಮನಿಸಿ ಭೂಮಿಯ ಒಡೆತನ ಹೊಂದಬೇಕೆಂಬ ಲಂಬಾಣಿಗಳ ಆಕಾಂಕ್ಷೆಗೆ ಈ ಅಂಶಗಳು ಕಾರಣವಿರಬಹುದು ಎಂದು ಪರ್ಯಾಲೋಚಿಸಬಹುದು.

ನಾಗಲಾಪುರ ಲಂಬಾಣಿಗಳಲ್ಲಿ ನಮಗೆ ಸಾಕಾಗುವಷ್ಟು ಕೃಷಿ ಭೂಮಿ ಇಲ್ಲ. ಇದಕ್ಕೆ ಮೊದಲಿಗೆ ಇವರಲ್ಲಿ ಭೂಮಿಯ ಬಗ್ಗೆ ಹೆಚ್ಚಿನ ಆಸಕ್ತಿಯಿಲ್ಲದಿರುವುದೇ ಕಾರಣ ಎಂಬ ಅಭಿಪ್ರಾಯವಿದೆ. ಆದರೆ ಅದೇ ಮನೋಭಾವ ಅಥವಾ ಪರಿಸ್ಥಿತಿ ಈಗ ಬದಲಾಗಿದೆ. ಮರಿಯಮ್ಮನ ಹಳ್ಳಿ ಮತ್ತು ನಾಗಲಾಪುರ ತಾಂಡದ ಲಂಬಾಣಿಗಳು ತಾಂಡದಿಂದ ಸ್ವಲ್ಪ ದೂರದಲ್ಲಿ ಇರುವ ಸರ್ಕಾರಿ ಬಂಜರು ಭೂಮಿಯನ್ನು (ವಿಶೇಷವಾಗಿ ಮರಿಯಮ್ಮನಹಳ್ಳಿಯಿಂದ ೩ ಕಿಲೋಮಿಟರ್ ದೂರದಲ್ಲಿ ಇರುವ) ಮಂಜೂರು ಮಾಡಲು ಮನವಿಯನ್ನು ಕಂದಾಯ ಇಲಾಖೆಗೆ ಸಲ್ಲಿಸಿದ್ದಾರೆ. ಆದರೆ ಆ ಭೂಮಿಯನ್ನು 'ಕಾಯ್ದಿಟ್ಟ ಅರಣ್ಯ' ಕಾಯ್ದೆಯಲ್ಲಿ ಸೇರಿಸಿಕೊಳಲಾಗಿದೆ. ಹೀಗಾಗಿ ಅವರ ಮನವಿಯನ್ನು ಸಮ್ಮತಿಸಲು ಸಾಧ್ಯವಾಗಿಲ್ಲ ಎಂದು ಸರ್ಕಾರಿ ಅಧಿಕಾರಿಗಳು ತಿಳಿಸಿರುತ್ತಾರೆ. ಇತ್ತೀಚೆಗೆ ಸರ್ಕಾರ ಇವರಿಗೆ ಈ ತಾಂಡಗಳು ನೆಲೆಗೊಂಡಿರುವ ಪ್ರದೇಶದಲ್ಲಿ ಯಾವುದೇ ಭೂಮಿಯನ್ನು ಮಂಜೂರು ಮಾಡಿಲ್ಲ. ೧೯೭೧ ರ ನಂತರ ನಾಗಲಾಪುರ ತಾಂಡದಲ್ಲಿ ಯಾರೊಬ್ಬ ವ್ಯಕ್ತಿಯೂ ಭೂಮಿಯನ್ನು ಕೊಳ್ಳದಿರುವುದು ಭೂಮಿಯ ಒಡೆತನವನ್ನು ಪಡೆಯಲು ಅವರಿಗೆ ಎಷ್ಟು ಕಷ್ಟವಾಗಿದೆ ಎಂಬುದು ತಿಳಿದುಬರುತ್ತದೆ. ಇನ್ನು ಮುಂದೆ ಕೃಷಿ ಚಟುವಟಿಕೆಗಳಿಗೆ ಪೂರಕವಾಗಿರುವ ಕೆಲವು ಪ್ರಮುಖ ಅಂಶಗಳನ್ನು ಕುರಿತಂತೆ ಮಾಹಿತಿಯನ್ನು ನೀಡಲಾಗಿದೆ.

## ನೀರಾವರಿ

ಕೃಷಿ ಭೂಮಿಗೆ ನೀರು ಅತ್ಯಗತ್ಯವಾಗಿ ಬೇಕಾಗುವ ಸಂಪನ್ಮೂಲ. ಭೂಮಿಯ ಜನಪದ ವರ್ಗೀಕರಣ ಕುಷ್ಕಿ ಮತ್ತು ತರೀಯನ್ನು ನೀರಾವರಿ ಸೌಲಭ್ಯವನ್ನು ಮೂಲವಾಗಿ ಇಟ್ಟುಕೊಂಡು ಮಾಡಲಾಗಿದೆ. ನಾಗಲಾಪುರದ ತಾಂಡ ಪ್ರದೇಶದಲ್ಲಿ ಅತ್ಯಲ್ಪ ನೀರಾವರಿ ಸೌಲಭ್ಯ ಇರುವುದು ತಿಳಿಯುತ್ತದೆ. ೧೯೭೫-೭೭ರಲ್ಲಿ ಸರ್ಕಾರದ ಪಿ.ಡಬ್ಲ್ಯು.ಡಿ. ಇಲಾಖೆಯು ೫ ಲಕ್ಷ ರೂಪಾಯಿ ಖರ್ಚುಮಾಡಿ ಕೆರೆಯನ್ನು ನಿರ್ಮಿಸಿದ್ದಾರೆ. ೧೯೯೮-೯೯ ಸಾಗುವಳಿ ವರ್ಷದಲ್ಲಿ ಒಟ್ಟು ನೀರಾವರಿ ಪ್ರದೇಶ ೨೨೧ ಎಕರೆ ೧೦ ಕುಂಟೆ. ಈ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ಕೇವಲ ೩ ಲಂಬಾಣಿ ಕುಟುಂಬಗಳು ೧೨ ಎಕರೆ ೨೯ ಕುಂಟೆ ಭೂಮಿ ಹೊಂದಿವೆ. ಉಳಿದ ಲಂಬಾಣಿಗಳ ಭೂಮಿಯು ಕೃಷಿಗೆ ಮಳೆಯನ್ನು ಅವಲಂಬಿಸಿದೆ. ಲಂಬಾಣೇತರ ಸಮುದಾಯದವರು ನೀರಾವರಿ ಪ್ರದೇಶದಲ್ಲಿ ಹೊಂದಿರುವ ಭೂ ಹಿಡುವಳಿ ೧೭೧ ಎಕರೆ ೨೫ ಕುಂಟೆ. ಅವರ ಒಟ್ಟು ಭೂ ಹಿಡುವಳಿಯ ಪ್ರಮಾಣ ೪೧೦ ಎಕರೆ ೯ ಕುಂಟೆ. ಈ ಭೂಮಿಯು ಉತ್ತಮ ಮಣ್ಣಿನ ಗುಣಲಕ್ಷಣದಿಂದ ಕೂಡಿದ್ದು, ಕೃಷಿ ಸಾಗುವಳಿಗೆ ಹೆಚ್ಚುಯೋಗ್ಯವಾಗಿದ್ದು, ಅಧಿಕ ಇಳುವರಿ ನೀಡುತ್ತಿದೆ. ನಾಗಲಾಪುರ ತಾಂಡದಲ್ಲಿ

ಲಂಬಾಣಿಗಳು ಸಾಗುವಳಿ ಮಾಡುವ ಭೂಮಿಗೆ ಹೆಚ್ಚಿನ ನೀರಾವರಿ ಸೌಲಭ್ಯ ಇಲ್ಲದಿರುವ ಕಾರಣ ಅವರು ಅನಾನುಕೂಲ ಸ್ಥಿತಿಯಲ್ಲಿ ಇದ್ದಾರೆ.

### ಪ್ರಾಣಿಗಳು

ಕೃಷಿ ಆರ್ಥಿಕತೆಯಲ್ಲಿ ಪ್ರಾಣಿಗಳಿಗೆ ಪ್ರಮುಖವಾದ ಪಾತ್ರವಿದೆ. ಪ್ರಾಣಿಗಳ ಶಕ್ತಿಯಿಂದ ಕೃಷಿ ಸಾಗುವಳಿಯ ಚಟುವಟಿಕೆಯನ್ನು ಮಾಡುವುದು, ಗಾಡಿ ಎಳೆಸುವುದು, ಹಾಲಿನ ಉತ್ಪನ್ನಗಳಿಂದ ಕ್ರೋಡೀಕರಣವಾಗುವ ಬಂಡವಾಳವು ಸರಿಯಾದ ಸಮಯದಲ್ಲಿ ಕೃಷಿಯ ಸಾಗುವಳಿಯಲ್ಲಿ ಸಣ್ಣ ಪುಟ್ಟ ಖರ್ಚುಗಳಿಗೆ ಸಹಾಯಕವಾಗಿದೆ. ಹೀಗೆ ಪ್ರಾಣಿಗಳು ಕೃಷಿ ಸಾಗುವಳಿಯಲ್ಲಿ ಮಹತ್ವದ ಸ್ಥಾನ ಹೊಂದಿವೆ. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಇರುವ ಪ್ರಾಣಿಗಳ ಗಣತಿಯನ್ನು ಕೋಷ್ಟಕ ೨.೪ ರಲ್ಲಿ ನೀಡಲಾಗಿದೆ.

**ಕೋಷ್ಟಕ ೨.೪**

**ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದಲ್ಲಿ ಇರುವ ಪ್ರಾಣಿಗಳ ಸಂಖ್ಯೆ :**

| ಪ್ರಾಣಿಗಳ ಹೆಸರು | | ಮರಿಯಮ್ಮನಹಳ್ಳಿ ತಾಂಡ | | ನಾಗಲಾಪುರ ತಾಂಡ | |
|---|---|---|---|---|---|
| | | ೧೯೯೧ | ೧೯೯೯ | ೧೯೯೧ | ೧೯೯೯ |
| ೧ | ಎತ್ತುಗಳು | ೧೭೦ | ೨೯೬ | ೫೫ | ೭೦ |
| ೨ | ಹಸುಗಳು | ೧೧೫ | ೧೩೧ | ೪೮ | ೧೩೫ |
| ೩ | ಎಮ್ಮೆಗಳು | ೨೧ | ೬೫ | ೧೦ | ೧೮ |
| ೪ | ಆಡು ಮತ್ತು ಕುರಿ | ೧೧೪ | ೧೮೦ | ೬೫ | ೪೫ |
| ೫ | ಕೋಳಿಗಳು | | ೨೦ | | ೧೦ |

ಲಂಬಾಣಿಗಳು ಸಾಂಪ್ರದಾಯಿಕವಾಗಿ ಹಕ್ಕಿಪಕ್ಷಿಗಳನ್ನು (ಕೋಳಿ ಇತ್ಯಾದಿ) ಸಾಕಾಣಿಕೆ ಮಾಡುತ್ತಿರಲಿಲ್ಲ. ಆದರೆ ಇತ್ತೀಚಿಗೆ ಕೆಲವರು ಕೋಳಿಗಳನ್ನು ಸಾಕುತ್ತಿದ್ದಾರೆ. ಹೀಗಾಗಿ ಕೋಷ್ಟಕ ೨.೪ ರಲ್ಲಿ ಯಾವುದೇ ಹಕ್ಕಿ ಪಕ್ಷಿಗಳ ಬಗ್ಗೆ ಹೆಚ್ಚಿನ ಮಾಹಿತಿ ಇರುವುದಿಲ್ಲ. ಎತ್ತುಗಳನ್ನು ಕೃಷಿ ಸಲಕರಣೆಗಳನ್ನು ಎಳೆಯಲು ಉಪಯೋಗಿಸುತ್ತಾರೆ. ಹಸುವು ಸಾಂಪ್ರದಾಯಿಕ ವೃತ್ತಿಗೆ (ಸರಕು-ಸಾಗಾಣಿಕೆಗೆ) ಬೇಕಾಗುವ ಜಾನುವಾರುಗಳನ್ನು ಪೂರೈಸುತ್ತಿದ್ದುದರಿಂದ ಲಂಬಾಣಿಗಳು ಹಸುವನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ಅಲ್ಲದೇ ಹಸುವು ಹಾಲು ಕೊಡುವುದಕ್ಕೂ ಪ್ರಮುಖ ಆದ್ಯತೆ ಇದೆ. ಇದನ್ನು ಪೋಷಿಸುವ ಮುಖ್ಯ ಉದ್ದೇಶ ಹೆಚ್ಚಿನ ಹಾಲಿನ ಉತ್ಪನ್ನ ಮಾಡುವುದಾಗಿದೆ. ಎಮ್ಮೆಗಳನ್ನೂ ಸಹ ಹಾಲಿನ ಉತ್ಪಾದನೆಗೆ ಸಾಕಿದ್ದಾರೆ. ಇವುಗಳಿಂದ ಉತ್ಪತ್ತಿಯಾಗುವ ಉಪ-ಉತ್ಪನ್ನವಾದ ಸಗಣಿ ಗೊಬ್ಬರವನ್ನು ಕೃಷಿಗೆ ಉಪಯೋಗಿಸುತ್ತಾರೆ. ಕೃಷಿ ಭೂಮಿ ಇಲ್ಲದೆ ಇರುವವರು ಇತರೆ ಕೃಷಿಕರಿಗೆ ಇದನ್ನು ಹಣಕ್ಕೆ ಮಾರಾಟ ಮಾಡುತ್ತಾರೆ. ಕುರಿ ಮತ್ತು ಆಡುಗಳು ಇವರ ತಾಂಡಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇವುಗಳೇ ಲಂಬಾಣಿಗಳಿಗೆ ಪ್ರಮುಖ ಆಹಾರದ ಮೂಲವಾಗಿವೆ.

ನಾಗಲಾಪುರದ ತಾಂಡಕ್ಕೆ ಹೋಲಿಸಿದರೆ ಮರಿಯಮ್ಮನಹಳ್ಳಿ ತಾಂಡವು ಪ್ರಾಣಿಗಳ ಹೆಚ್ಚಳಕ್ಕೆ ಆಸಕ್ತಿಯನ್ನು ತೋರಿಸುವುದು ತಿಳಿಯುತ್ತದೆ. ಆದರೂ ಪ್ರಾಣಿಗಳ ಸಂಖ್ಯೆಯಲ್ಲಿ ಉಂಟಾಗಿರುವ ಹೆಚ್ಚಳಕ್ಕೆ ಕುಟುಂಬಗಳ ಸಂಖ್ಯೆ ಹೆಚ್ಚಾಗಿರುವುದು ಕೂಡ ಪರೋಕ್ಷವಾಗಿ ಕಾರಣವಾಗಿದೆ. ನಾಗಲಾಪುರ ತಾಂಡದ ಜನರು ಹಾಲು ಉತ್ಪತ್ತಿ ಮಾಡುವ ಪ್ರಾಣಿಗಳ ಸಾಕಾಣಿಕೆಯಲ್ಲಿ ಹೆಚ್ಚಿನ ಆಸಕ್ತಿ ತೋರಿದ್ದಾರೆ. ಇದಕ್ಕೆ ಕಾರಣ ಹತ್ತಿರದ ಪಟ್ಟಣಗಳಲ್ಲಿ ಹಾಲು ಉತ್ಪನ್ನಗಳಿಗೆ ಹೆಚ್ಚಿನ ಬೇಡಿಕೆ ಮತ್ತು ಮಾರುಕಟ್ಟೆ ಇರುವುದು, ಹಾಗೂ ಸಮೃದ್ಧಿಯಾದ ಮೇವು ದೊರಕುವುದು.

ಲಂಬಾಣಿಗಳಿಗೆ ಜೀವನಕ್ಕೆ ಸಾಕಾಗದ್ದನ್ನು ಸರಿದೂಗಿಸುವ ಉದ್ದೇಶದಿಂದ ಸರ್ಕಾರವು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್‌ಗಳ ಮೂಲಕ ರಿಯಾಯಿತಿ ಹಾಗೂ ಕಡಿಮೆ ಬಡ್ಡಿ ದರದಲ್ಲಿ ಹಾಲು ಕರೆಯುವ ಎಮ್ಮೆ, ಹಸು (ಮರಿಯಮ್ಮನಹಳ್ಳಿ-೧೦, ನಾಗಲಾಪುರ ತಾಂಡ-೮ ಕುಟುಂಬಗಳಿಗೆ) ಮತ್ತು ಎತ್ತಿನ ಗಾಡಿಗಳನ್ನು (ಮರಿಯಮ್ಮನಹಳ್ಳಿ ತಾಂಡದಲ್ಲಿ-೨, ನಾಗಲಾಪುರ ತಾಂಡದಲ್ಲಿ-೨ ಕುಟುಂಬಗಳಿಗೆ) ಕೊಂಡುಕೊಳ್ಳಲು ಸಾಲವನ್ನು ನೀಡಿದೆ. ಇದಕ್ಕೆ ಪೂರಕವಾಗಿ ಹತ್ತಿರದ ಸ್ವಯಂಸೇವಾಸಂಘವು ಸಾಲ ಪಡೆದುಕೊಳ್ಳಲು, ಉತ್ತಮ ತಳಿಯ ಎಮ್ಮೆಗಳನ್ನು ಕೊಂಡುಕೊಳ್ಳಲು ಲಂಬಾಣಿಗಳಿಗೆ ಸಹಾಯ ಮಾಡಿದೆ. ಆದರೆ ಸಾಲ ನೀಡಿದ ಸಂಸ್ಥೆಗಳು ಸಾಲದ ಮರುಪಾವತಿಯೂ ಅತ್ಯಂತ ಕಡಿಮೆ ಮಟ್ಟದಲ್ಲಿ ಇವೆ ಎಂದು ವರದಿ ಮಾಡಿವೆ. ಕಾರಣ ಹಾಲು ನೀಡುವ ಹೊಸ ತಳಿಯ ಕೆಲವು ಎಮ್ಮೆಗಳು ಸತ್ತಿವೆ, ಅಥವಾ ಕೆಲವರು ಅವುಗಳ ನಿರ್ವಹಣೆಗೆ ತುಂಬಾ ಖರ್ಚು ಬರುತ್ತಿದೆ ಎಂದು ಬೇರೆಯವರಿಗೆ ಮಾರಾಟ ಮಾಡಿದ್ದಾರೆ.

ಲಂಬಾಣಿಗಳು ಹಿಂದಿನಿಂದಲೂ ಬಂಡಿ ಎಳೆಯುವುದಕ್ಕಾಗಿ ಮತ್ತು ಹೊರೆ ಹೊರುವುದಕ್ಕೆ ಎತ್ತುಗಳನ್ನು ಉಪಯೋಗಿಸುತ್ತಿದ್ದರು. ಇದರಿಂದ ಇವರ ಸಾಂಪ್ರದಾಯಿಕ ಆರ್ಥಿಕತೆಯಲ್ಲಿ ಎತ್ತುಗಳಿಗೆ ಮಹತ್ವದ ಸ್ಥಾನವಿದೆ. ಅದೇನೆ ಆದರೂ, ಅಂದಿನ ದಿನಗಳಲ್ಲಿ ಇವರು ಪ್ರಾಥಮಿಕವಾಗಿ ಸಾಗಣಿಕೆದಾರರು ಮತ್ತು ಸಣ್ಣ ಪುಟ್ಟ ಮಾರಾಟಗಾರರು ಆಗಿದ್ದರಿಂದ ಜಾನುವಾರುಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವುದು ಇವರ ದ್ವಿತೀಯ ಆದ್ಯತಾ ಕಾರ್ಯವಾಗಿತ್ತು. ಆದರೆ ಇಂದಿನ ದಿನಗಳಲ್ಲಿ ಸಾಗಾಣಿಕೆ ಮತ್ತು ಮಾರಾಟಕ್ಕಿಂತ ಹಾಲು ಮತ್ತು ಕೃಷಿ ಚಟುವಟಿಕೆಯ ಉದ್ದೇಶಕ್ಕಾಗಿ ಜಾನುವಾರುಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ.

ಲಂಬಾಣಿಗಳು ಜಾನುವಾರುಗಳ ಹಿಂಡಿನ ಜೊತೆ ಗಮನಾರ್ಹವಾದ ಸಂಬಂಧವನ್ನು, ಸಾಂಪ್ರದಾಯಿಕ ಸಾಗಾಣಿಕೆ ಮತ್ತು ಮಾರಾಟದಿಂದ ಗುರುತಿಸಿಕೊಂಡಿದ್ದಾರೆ. ರಾಜಸ್ಥಾನದ ಒಳ ಪ್ರದೇಶಗಳಲ್ಲಿ ಬಂಜಾರ ಕುಟುಂಬಗಳು, ಸಾಂಪ್ರದಾಯಿಕ ವೃತ್ತಿಯಾದ ಉಪ್ಪಿನ ಮಾರಾಟದಲ್ಲಿ ತೊಡಗಿರುವವರು ದೊಡ್ಡ ಪ್ರಮಾಣದ ಜಾನುವಾರು ಹಿಂಡನ್ನು ಉಳಿಸಿಕೊಳ್ಳಲು ಕಷ್ಟ ಪಡುತ್ತಿದ್ದಾರೆ. ೧೯೬೦-೬೧ರಲ್ಲಿ ಪಶ್ಚಿಮ ರಾಜಸ್ಥಾನದಲ್ಲಿ ನಡೆಸಿದ ಒಂದು ಅಧ್ಯಯನ ಜಾನುವಾರು ಹಿಂಡುಗಳು ಮೇಯುವ ಭೂಮಿಯ (ಹುಲ್ಲುಗಾವಲು) ಕೊರತೆಯನ್ನು ಬಂಜಾರರು ಎದುರಿಸುತ್ತಿದ್ದಾರೆ ಎಂದು ಗುರುತಿಸಿದೆ. ಅಧ್ಯಯನಕ್ಕೆ ಒಳಪಡಿಸಿದ ಶೇಕಡ ೬೧ರಷ್ಟು ಕುಟುಂಬಗಳು ತಮ್ಮ ಜಾನುವಾರುಗಳನ್ನು ಮೇಯಿಸಲು ತೊಂದರೆ ಎದುರಿಸುತ್ತಿದ್ದಾರೆ ಎಂದು ಗುರುತಿಸಿದೆ (ಮಲ್ಹೋತ್ರ ಮತ್ತು ಬೋಸ್, ೧೯೬೩: ೭೪).

## ಬಳಕೆಯಲ್ಲಿ ಇರುವ ಕೃಷಿ ಸಲಕರಣೆಗಳು

ಬಳಕೆಯಲ್ಲಿ ಇರುವ ಕೃಷಿ ಸಲಕರಣೆಗಳು ವಿಶಿಷ್ಟವಾದ ಭೌತಿಕ ಸಂಸ್ಕೃತಿಯ ಅಂಗ ಭಾಗ. ಯಾವುದೇ ವ್ಯವಸ್ಥೆಯಲ್ಲಿ ಭೌತಿಕ ವಸ್ತುಗಳ ಅಧ್ಯಯನ ಮಾಡದೆ ಅಭೌತಿಕ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಹಾಗೆಯೇ ಬಳಕೆಯಲ್ಲಿ ಇರುವ ಕೃಷಿ ಸಲಕರಣೆಯನ್ನು ಅರ್ಥಮಾಡಿಕೊಳ್ಳದೆ, ಕೃಷಿ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅದೇರೀತಿ ಸಲಕರಣೆಗಳನ್ನು ತಯಾರಿಸುವವರು ಮತ್ತು ಉಪಯೋಗಿಸುವವರು ನಡುವಿನ ಸಾಮಾಜಿಕ ಸಂಬಂಧ, ಸಲಕರಣೆಗಳನ್ನು ತಯಾರಿಸುವ ತಾಂತ್ರಿಕ ಕೌಶಲ್ಯತೆ ಮತ್ತು ಶೈಲಿ ಪ್ರಮುಖವಾಗಿವೆ. ಹಾಗೆಯೇ ತಯಾರಿಸುವವರ ಆಲೋಚನಾ ಕ್ರಮಗಳು ಸಲಕರಣೆಗಳ ರೂಪ ಮತ್ತು ಕಾರ್ಯವಿಧಾನವನ್ನು ನಿರ್ಧರಿಸುತ್ತದೆ.

ಕೃಷಿಯಲ್ಲಿ ಸಲಕರಣೆ ಮತ್ತು ಸಾಮಗ್ರಿಗಳನ್ನು ಬಂಡವಾಳದ ಒಂದು ಬಗೆ ಎಂದೇ ಭಾವಿಸಿಕೊಳ್ಳಬೇಕಾಗುತ್ತದೆ. ಬಂಡವಾಳ-ಉತ್ಪನ್ನ- ಉತ್ಪಾದನಾ ಸಾಧನಗಳು ಆಸ್ತಿಯ ರೂಪಗಳಾಗಿವೆ. ಇದರಿಂದ ಕೃಷಿ ಸಾಮಗ್ರಿಗಳನ್ನು ವಿವರವಾದ ಪಟ್ಟಿ ಮಾಡುವುದರಿಂದ, ಲಂಬಾಣಿಗಳು ಕೃಷಿಯಲ್ಲಿ ಯಾವ ಬಗೆಯ ತಂತ್ರಜ್ಞಾನವನ್ನು ಬಳಸುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಬಹುದು. ಕೃಷಿ ಸಲಕರಣೆಗಳ ವಿನಿಮಯ ಕೂಡ ಕೆಲವು ಬಗೆಯ ಆರ್ಥಿಕ ಸಂಬಂಧಗಳನ್ನು ಸೃಷ್ಟಿಸಿದೆ. ಇವುಗಳಲ್ಲಿ ಪ್ರಮುಖವಾದವು ಲಂಬಾಣಿಗಳ ಸಮುದಾಯದ ಒಳಗೆ, ಬಂಧುತ್ವ ಆಧಾರಿತ ಸಂಬಂಧ, ಹೊರಗೆ ನೆರೆಹೊರೆ, ಆಶ್ರಿತನಿಗೂ-ಆಶ್ರಯದಾತನಿಗೂ ಇರುವ ಸಂಬಂಧ, ಉತ್ಪಾದಕರು ಮತ್ತು ಅನುಭೋಗದಾರರ ನಡುವಿನ ಸಂಬಂಧಗಳು, ಸಾಲಗಾರರು ಮತ್ತು ಸಾಲ ನೀಡುವವರ ನಡುವಿನ ಸಂಬಂಧಗಳು.

ಲಂಬಾಣಿಗಳು ಉಪಯೋಗಿಸುವ ಕೃಷಿ ಸಾಮಗ್ರಿಗಳು ಕೃಷಿ ತಂತ್ರಜ್ಞಾನದ ಸ್ವರೂಪವನ್ನು ನಿರ್ಧರಿಸುತ್ತವೆ ಹಾಗೂ ಹೆಚ್ಚಿನ ಯಾಂತ್ರಿಕ ಶಕ್ತಿ ಇಲ್ಲದೆ ಕುಂಟಿತವಾಗಿರುವುದನ್ನು ಈ ಕೆಳಗಿನ ಅಂಕಿ ಅಂಶಗಳು ಸ್ಪಷ್ಟಪಡಿಸುತ್ತವೆ.

**ಮರಿಯಮ್ಮನಹಳ್ಳಿ ತಾಂಡ ೧೯೯೯ :** ೨೫೦ ನೇಗಿಲಿನಂಥ ಮರದ ಸಾಮಗ್ರಿಗಳು ಇವೆ. ಕುಂಟೆ, ಕೂರಿಗೆ, ಕಳೆ ಕೀಳುವ ಸಲಕರಣೆ, ೨೮ ಎತ್ತಿನಗಾಡಿಗಳು, ೨ ಕಬ್ಬು ಅರೆಯುವ ಗಾಣಗಳು, ೪೦ ಕಬ್ಬಿಣದ ನೇಗಿಲುಗಳು, ೩೦ ಒಕ್ಕಣೆ ಮಾಡಲು ಉಪಯೋಗಿಸುವ ಗುಂಡುಗಳು ಇತ್ಯಾದಿ.

**ನಾಗಲಾಪುರ ತಾಂಡ ೧೯೯೯ :** ೧೫೦ ಕೃಷಿ ಸಾಮಗ್ರಿಗಳು : ೧೫ ಎತ್ತಿನ ಗಾಡಿಗಳು, ೨೦ ಕಬ್ಬಿಣದ ನೇಗಿಲು ಮತ್ತು ೧೦ ಒಕ್ಕಣೆ ಮಾಡಲು ಬಳಸುವ ಗುಂಡುಗಳು ಇತ್ಯಾದಿ.

ಇತರ ಸಣ್ಣಪುಟ್ಟ ಕೃಷಿ ಸಲಕರಣೆಗಳೆಂದರೆ, ಆರುಗೋಲು, ಕಳೆ ತೆಗೆಯುವ ಕತ್ತಿ, ಮಚ್ಚುಗತ್ತಿ, ಕೊಡ್ಲಿ, ಸಲಿಕೆಗಳು (ಗುದ್ದಲಿ), ಪಿಕಾಸಿ ಇತ್ಯಾದಿ. ಇವುಗಳು ಪ್ರತಿನಿತ್ಯದ ಕೃಷಿ ಚಟುವಟಿಕೆಗೆ ಅಗತ್ಯವಾಗಿ ಬೇಕಾಗಿವೆ. ಮರ ಕಡಿಯಲು ಉಪಯೋಗಿಸುವ ಸಲಕರಣೆಗಳು. ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರ ತಾಂಡಗಳಲ್ಲಿ ಕಂಡುಬರುತ್ತವೆ. ಆದರೆ ಇವುಗಳ ಅಂಕಿ ಅಂಶ ಅಗತ್ಯವೆಂದು ನಾನು ಭಾವಿಸಲಿಲ್ಲ.

ಕಬ್ಬಿಣದ ನೇಗಿಲು ಮತ್ತು ಕಬ್ಬಿಣದ ಗಾಣಗಳನ್ನು ಬಿಟ್ಟು ಇತರ ಮರ ಮತ್ತು ಕಬ್ಬಿಣದ ಕೃಷಿ ಸಲಕರಣೆಗಳನ್ನು ಸ್ಥಳೀಯ ಬಡಿಗಗಳು ಮತ್ತು ಕಮ್ಮಾರರು ತಯಾರಿಸಿದ್ದವುಗಳಾಗಿವೆ. ಕಬ್ಬಿಣವನ್ನು ಹತ್ತಿರದ ಪಟ್ಟಣದ ಮಾರುಕಟ್ಟೆಯಿಂದ ಸಾಗುವಳಿದಾರರೆ

ವೈಯಕ್ತಿಕವಾಗಿ ಕೊಂಡುಕೊಂಡು ಬರುತ್ತಾರೆ. ಮರವನ್ನು ಸಾಮಿಲ್ಲುಗಳಿಂದ ಹಾಗು ಹತ್ತಿರದ ಕುರುಚಲು ಕಾಡಿನಿಂದ ತಂದು ಹಸಿ ಆರುವವರೆಗೆ ಮನೆಯಲ್ಲಿ ಇಟ್ಟು ನಂತರ ಬಡಗಿಗಳಿಗೆ ನೀಡುತ್ತಾರೆ. ಉತ್ತಮ ಗುಣಮಟ್ಟದ ಕಬ್ಬಿಣದ ನೇಗಿಲು ಮತ್ತು ಕಬ್ಬು ಅರೆಯುವ ಗಾಣಗಳನ್ನು ಹತ್ತಿರದ ಪಟ್ಟಣದಿಂದ ಕೊಂಡುಕೊಂಡಿದ್ದಾರೆ. ಈ ಅಧ್ಯಯನಕ್ಕೆ ಒಳಪಡಿಸಿದ ಎರಡು ತಾಂಡಗಳಲ್ಲಿ ಯಾವ ಲಂಬಾಣಿಯು ಟ್ರ್ಯಾಕ್ಟರನ್ನು ಹೊಂದಿಲ್ಲ. ಅಲ್ಲದೇ ಯಾವ ಲಂಬಾಣಿ ಸಾಗುವಳಿದಾರರು ಕೃಷಿ ಸಲಕರಣೆಯಲ್ಲಿ ಸ್ವಾವಲಂಬಿಗಳಲ್ಲ. ದೊಡ್ಡ ಮತ್ತು ಮಧ್ಯಮ ಪ್ರಮಾಣದ ಭೂಹಿಡುವಳಿದಾರರು ಹೆಚ್ಚಿನ ಸಂಖ್ಯೆಯಲ್ಲಿ ಕೃಷಿ ಸಲಕರಣೆಗಳನ್ನು ಇಟ್ಟುಕೊಂಡಿದ್ದಾರೆ. ಕೆಲವರು ಪರಸ್ಪರ ಸಹಕಾರದಿಂದ ಕೆಲವು ಕೃಷಿ ಸಲಕರಣೆಗಳನ್ನು ವಿನಿಮಯ ಮಾಡಿಕೊಂಡರೆ, ಕೆಲವರು ಬಾಡಿಗೆಗೆ ಪಡೆದುಕೊಳ್ಳುತ್ತಾರೆ. ಅಲ್ಲದೇ ವಿವಾಹ ಸಂಬಂಧಿ ಹಾಗೂ ರಕ್ತಸಂಬಂಧಿಗಳ ನಡುವೆಯೇ ಕೃಷಿ ಸಲಕರಣೆ ವಿನಿಮಯ ಮಾಡಿಕೊಳ್ಳುವುದನ್ನು ಹಾಗೂ ಬಾಡಿಗೆಗೆ ಪಡೆಯುವುದನ್ನು ಕಾಣಬಹುದು. ಕೆಲವರು ಇತರೆ ಸಮುದಾಯದ ಜನರು ಮತ್ತು ನೆರೆಹೊರೆಯ ಗ್ರಾಮಸ್ಥರ ಜೊತೆ ಕೃಷಿ ಸಲಕರಣೆಗಳನ್ನು ವಿನಿಮಯ ಮಾಡಿಕೊಂಡು ಮತ್ತು ಎರವಲು ಪಡೆದುಕೊಂಡು ಸಾಗುವಳಿ ಮಾಡುತ್ತಿದ್ದಾರೆ.

## ಉತ್ಪಾದನಾ ಚಟುವಟಿಕೆಗಳ ಸಂಘಟನೆ, ಮನೋಭಾವನೆ ಮತ್ತು ಸಾಮಾಜಿಕ ಸಂಬಂಧ

### ಲಂಬಾಣಿಗಳ ವಿಭಿನ್ನ ಕೌಶಲ್ಯತೆ

ಲಂಬಾಣಿಗಳು ಕೃಷಿಯನ್ನು ನಿಧಾನವಾಗಿ ಪ್ರಾರಂಭಿಸಿದರೂ ವಿಶೇಷವಾದ ಪರಿಣಿತಿಯನ್ನು ಕೃಷಿ ಚಟುವಟಿಕೆಯಲ್ಲಿ ಪಡೆದುಕೊಂಡಿದ್ದಾರೆ. ಕೃಷಿಯಲ್ಲಿ ಅವರ ಕೌಶಲ್ಯ, ವ್ಯವಸ್ಥಿತವಾಗಿ ಉಳುಮೆ ಮಾಡುವುದು (ನೇಗಿಲು ಹೊಡೆದು ಸಾಲು ಮಾಡುವುದು), ಮಣ್ಣಿನ ಗುಣ ಲಕ್ಷಣವನ್ನು ಅರ್ಥಮಾಡಿಕೊಂಡು ರಾಸಾಯನಿಕ ಗೊಬ್ಬರ ಉಪಯೋಗಿಸುವುದು, ಬಿತ್ತನೆ ಮಾಡುವುದು, ನೀರಾವರಿ ಉಪಯೋಗ, ಕಳೆ ತೆಯುವುದು, ಕೊಯ್ಲು ಮತ್ತು ಒಕ್ಕಣೆ, ಧಾನ್ಯಗಳನ್ನು ಕೆಡದಂತೆ ಜೋಪಾನವಾಗಿ ತುಂಬಿಡುವುದು ಇವೇ ಮುಂತಾದ ಚಟುವಟಿಕೆಗಳಲ್ಲಿ ಎದ್ದು ಕಾಣುತ್ತದೆ. ಕೃಷಿ ಕಾರ್ಯಾಚರಣೆಯಲ್ಲಿ ಪರಿಸರದ ಗುಣ ಲಕ್ಷಣಕ್ಕೆ ಸರಿಯಾದ ಹೊಂದಾಣಿಕೆ ಮಾಡಿಕೊಳ್ಳುವಂತೆ ಮತ್ತು ಹವಾಗುಣವನ್ನು ಗಮನಿಸಿ ಅದಕ್ಕೆ ತಕ್ಕಂತೆ ಮಣ್ಣು ಮತ್ತು ನೀರನ್ನು ನಿರ್ವಹಣೆ ಮಾಡುವುದರಲ್ಲಿ ವಿಶೇಷವಾದ ಕೌಶಲ್ಯವನ್ನು ಪಡೆದುಕೊಂಡಿದ್ದಾರೆ. ಮಣ್ಣಿನ ಗುಣ ಲಕ್ಷಣಕ್ಕೆ ತಕ್ಕಂತೆ ಬೆಳೆ, ಬೆಳೆಗೆ ತಕ್ಕಂತೆ ರಾಸಾಯನಿಕ ಗೊಬ್ಬರಗಳ ಬಳಕೆ, ಮಿಶ್ರ ಬೆಳೆಗಳ ಅನುಕೂಲ ಹಾಗೂ ಭೂಮಿಯನ್ನು ನಿಸ್ಸಾರಗೊಳಿಸದಿರಲು ಸರದಿಯ ಮೇಲೆ ಬೇರೆ ಬೇರೆ ಬೆಳೆಗಳನ್ನು ಬೆಳೆಯುವುದರ ಬಗ್ಗೆ ಜ್ಞಾನವನ್ನೂ ಲಂಬಾಣಿಗಳು ಪಡೆದಿದ್ದಾರೆ. ಬತ್ತ, ಜೋಳ ಪ್ರಮುಖ ಬೆಳೆಯಾಗಿ ಕಂಡು ಬಂದರೂ, ಮಿಶ್ರ ಬೆಳೆ ಹಾಗು ಪರ್ಯಾಯ ಬೆಳೆಗಳನ್ನು ಗುರುತಿಸಬಹುದು. ಕೆಲವರ ಗದ್ದೆಗಳಲ್ಲಿ ಬತ್ತಕ್ಕೆ ಪರ್ಯಾಯವಾಗಿ ಕೇವಲ ಕಬ್ಬನ್ನು ಮಾತ್ರ ಕಾಣಬಹುದು. ಕೆಲವರು ದ್ವಿದಳ ಧಾನ್ಯಗಳು ಹಾಗೂ ಎಣ್ಣೆ ಕಾಳುಗಳನ್ನು ಬೆಳೆಯುತ್ತಾರೆ. ಉದಾಹರಣೆಗೆ ತೊಗರಿ, ಕಡಲೆ, ಹೆಸರು, ಸೂರ್ಯಕಾಂತಿ, ಕಡಲೆಕಾಯಿ ಇತ್ಯಾದಿ.

ಮುಂಗಾರು ಮತ್ತು ಹಿಂಗಾರು ಮಳೆ ಕೃಷಿ ಚಟುವಟಿಕೆಯ ಮೇಲೆ ಪ್ರಭಾವವನ್ನು ಉಂಟುಮಾಡುವುದರಿಂದ ಲಂಬಾಣಿಗಳು ಋತುಮಾನದ ಚಕ್ರ ಹಾಗೂ ಹವಾಮಾನದ ಮುನ್ಸೂಚನೆ, ಗಾಳಿ ಬೀಸುವ ದಿಕ್ಕು ಇತ್ಯಾದಿಗಳನ್ನು ತಿಳಿದುಕೊಂಡಿದ್ದಾರೆ. ಈ ಜ್ಞಾನದಿಂದ

ಹೆಚ್ಚಿನ ಪರಿಸ್ಥಿತಿಯಲ್ಲಿ ಪರಿಣಾಮಕಾರಿ ಕೃಷಿ ಚಟುವಟಿಕೆ ಮಾಡಲು ಸಾಧ್ಯವಿಲ್ಲ; ಏಕೆಂದರೆ ವಾಸ್ತವಿಕವಾಗಿ ಬಡತನವು ಕೃಷಿಗೆ ಭಿನ್ನವಾದ ದಿಕ್ಕನ್ನು ಸಾಂಪ್ರದಾಯಿಕ ರೀತಿಯಲ್ಲಿ ಸೂಚಿಸುತ್ತದೆ.

ಆಧುನಿಕ ಕೃಷಿ ವ್ಯವಸ್ಥೆಯ ಒತ್ತಡದಿಂದ ಉತ್ತಮ ಬೀಜಗಳು (ಹೈಬ್ರೀಡ್), ರಾಸಾಯನಿಕ ಗೊಬ್ಬರಗಳು, ಕ್ರಿಮಿನಾಶಕಗಳು, ಪ್ರತ್ಯಕ್ಷವಾಗಿ ಪ್ರಗತಿಪರ ಕೃಷಿಕರಿಗೆ ಕೃಷಿ ಇಳುವರಿಯಲ್ಲಿ ಹೆಚ್ಚಳವನ್ನು ಉಂಟುಮಾಡಿತು. ಆದರೆ ಲಂಬಾಣಿಗಳು ಆಧುನಿಕ ಕೃಷಿ ಚಟುವಟಿಕೆಯನ್ನು ತಮ್ಮ ಪರಿಸರಕ್ಕೆ ಅಳವಡಿಸಿಕೊಳ್ಳದಿರುವುದು ಕೌಶಲ್ಯದ ಕೊರತೆಯಿಂದಲ್ಲ. ಸ್ವಲ್ಪಮಟ್ಟಿಗೆ ಬಂಡವಾಳದ ಕೊರತೆ ಮತ್ತು ಸ್ವಲ್ಪಮಟ್ಟಿಗೆ ಇವರ ಉದಾಸೀನತೆ ಹಾಗೂ ಸಮುದಾಯದ ಅಭಿವೃದ್ಧಿ ಕಾರ್ಯಕ್ರಮದ ಒಳಗೆ ಬರುವ ಕೃಷಿ ವಿಸ್ತರಣಾ ಅಧಿಕಾರಿಗಳ ದುರ್ಬಲ ಸಲಹೆಗಳು ವಿಭಿನ್ನ ರೀತಿಯಲ್ಲಿ ಪ್ರಭಾವ ಬೀರಿವೆ. ತಾಲ್ಲೂಕು ಅಭಿವೃದ್ಧಿಗೆ ಸಂಬಂಧಿಸಿದ ದಾಖಲಾತಿಗಳು, ಎರಡು ತಾಂಡಗಳಲ್ಲಿ ಕೇವಲ ೮ ಲಂಬಾಣಿ ಕುಟುಂಬಗಳು, ಅಲ್ಲದೆ ಇತರೆ ಗ್ರಾಮಸ್ಥರ ಕೆಲವು ಕುಟುಂಬಗಳು ಆಧುನಿಕ ಕೃಷಿ ಪ್ರಯೋಜನಗಳನ್ನು ಉಪಯೋಗಿಸಿಕೊಂಡಿವೆ ಎಂದು ತಿಳಿಸುತ್ತವೆ. ಆದರೂ ಸಾಮಾನ್ಯ ಅನಕ್ಷರತೆ ಮತ್ತು ಬಡತನದಿಂದ ಆಧುನಿಕ ಕೃಷಿ ಪ್ರಯೋಜನಗಳನ್ನು ಲಂಬಾಣಿಗಳು ಪಡೆದುಕೊಳ್ಳಲು ಕಷ್ಟವಾಗಿದೆ. ಸರ್ಕಾರದ ವಿನಾಯಿತಿ ಸಾಲ ಸೌಲಭ್ಯಗಳು ಅನೇಕ ಅಡೆತಡೆಗಳನ್ನು ಹೊಂದಿವೆ. ಅವುಗಳನ್ನು ಪಡೆದುಕೊಳ್ಳಲು ಅಕ್ಷರಸ್ಥರಾಗಿರುವುದು ಅವಶ್ಯಕ ಮತ್ತು ರಾಜಕೀಯ ಸಂಪರ್ಕವನ್ನು ಬೆಳೆಸಿಕೊಂಡಿರಬೇಕು ಹಾಗೂ ಜಾಣತನದಿಂದ ಸರ್ಕಾರಿ ಅಧಿಕಾರಿಗಳಿಗೆ ಲಂಚ ನೀಡುವ ಸಾಮರ್ಥ್ಯವನ್ನು ಹೊಂದಿರಬೇಕು. ಈ ಕಾರಣಗಳಿಂದ ಆರ್ಥಿಕ-ಸಾಮಾಜಿಕ ಅಭಿವೃದ್ಧಿ ಪ್ರಯತ್ನಕ್ಕೆ, ಅನಾನುಕೂಲ ಸ್ಪರ್ಧೆಗಳಿಂದ, ಅಸಮಾನವಾದ ರೀತಿಯಲ್ಲಿ ಯೋಜನೆಗಳನ್ನು ನೆರವೇರಿಸುವುದು ತಿಳಿಯುತ್ತದೆ. ಇದಕ್ಕೆ ಲಂಬಾಣಿಗಳ ಸಾಂಪ್ರದಾಯಿಕತೆ, ಸರ್ಕಾರಿ ಅಧಿಕಾರಿಗಳ ಬಗ್ಗೆ ಅನಗತ್ಯ ಎಚ್ಚರಿಕೆ ಮತ್ತು ಹೆದರಿಕೆಯು ಸಹ ಕಾರಣವಾಗಿದೆ. ಆದರೆ ಅಧ್ಯಯನಕ್ಕೆ ಒಳಪಡಿಸಿದ ಪ್ರದೇಶದಲ್ಲಿ ಲಂಬಾಣೇತರ ರೈತರು, ಸರ್ಕಾರದ ಸಾಲದ ರಿಯಾಯಿತಿಗಳನ್ನು ಹೇಗೆ ಪಡೆಯಬೇಕು ಎಂಬುದರ ಬಗ್ಗೆ ಉತ್ತಮ ಜ್ಞಾನವನ್ನು ಹೊಂದಿದ್ದಾರೆ.

## ಪ್ರಾರಂಭದ ಆರ್ಥಿಕ ವೈವಿಧ್ಯತೆ

ಲಂಬಾಣಿಗಳನ್ನು ಇತರ ಸಮುದಾಯದ ರೈತರಿಗೆ ಹೋಲಿಸಿದಾಗ ಇವರಲ್ಲಿ ಶ್ರಮ ವಿಭಜನೆಯು ವಯಸ್ಸು, ಲಿಂಗ ಮತ್ತು ಸ್ವಲ್ಪಮಟ್ಟಿಗೆ ವಿಶೇಷ ಪರಿಣತಿಯನ್ನು ಆಧರಿಸಿದೆ. ಆದರೆ ಈ ಸಾಮಾನ್ಯ ಕಲ್ಪನೆಯಲ್ಲಿ ಸ್ವಲ್ಪಮಟ್ಟಿಗೆ ಅಸ್ಪಷ್ಟತೆ ಇದೆ. ಏಕೆಂದರೆ ಲಂಬಾಣಿಗಳಲ್ಲಿ ಇರುವ ಬಡತನ, ಅವ್ಯವಸ್ಥಿತವಾದ ಉದ್ಯೋಗ - ಈ ಪರಿಸ್ಥಿತಿಗಳ ಪರಿಣಾಮದಿಂದ ಕೆಲವು ಸಂದರ್ಭದಲ್ಲಿ ಲಂಬಾಣಿಗಳ ಶ್ರಮ ವಿಭಜನೆಯ ನಿಯಮಗಳು ಬದಲಾಗುತ್ತದೆ. ಹೀಗಿದ್ದರೂ ಪುರುಷರು ಸಾಗುವಳಿಯಲ್ಲಿ ಹೆಚ್ಚಿನ ಶ್ರಮದ ಕೆಲಸಗಳನ್ನು ಮಾಡುತ್ತಾರೆ. ಅವೆಂದರೆ- ಉಳುಮೆ ಮಾಡುವುದು, ಬೀಜ ಬಿತ್ತುವುದು, ಕಳೆ ತೆಗೆಯುವುದು ಇತ್ಯಾದಿ. ಮಹಿಳೆಯರು ಬೀಜದ ಬಿತ್ತನೆಯಲ್ಲಿ, ಕಳೆ ತೆಗೆಯುವಲ್ಲಿ, ಬೆಳೆಗಳನ್ನು ಕಾವಲು ಕಾಯುವುದರಲ್ಲಿ ಮತ್ತು ಬೆಳೆಯ ಕೊಯ್ಲಿನಲ್ಲಿ ಪುರುಷರಿಗೆ ಸಹಾಯಕರಾಗಿ ಕೆಲಸ ಮಾಡುತ್ತಾರೆ. ಈ ಕೆಲಸಗಳನ್ನು ಮಹಿಳೆಯರು ಅಡಿಗೆ ಮಾಡುವುದು, ಮಕ್ಕಳನ್ನು ನೋಡಿಕೊಳ್ಳುವುದು ಮತ್ತು ಜಾನುವಾರುಗಳ ಚಿಕ್ಕ ಕರುಗಳು

ಮನೆಯಿಂದ ಹೊರಗೆ ಹೋಗದಂತೆ ನೋಡಿಕೊಳ್ಳುವುದು ಇತ್ಯಾದಿ ಮನೆಗೆಲಸಗಳ ಜೊತೆಗೆ ಮಾಡುತ್ತಿದ್ದಾರೆ. ಕೂಲಿಯಿಂದಲೇ ಸಂಪಾದನೆ (ಆದಾಯ) ಇರುವ ಕುಟುಂಬಗಳಲ್ಲಿ ಪುರುಷರು ಮತ್ತು ಮಹಿಳೆಯರು, ಬೆಳೆಯುತ್ತಿರುವ ಪುಟ್ಟ ಮಕ್ಕಳೊಂದಿಗೆ ಕೂಲಿ-ಕೆಲಸವನ್ನು ನಿರ್ವಹಿಸುತ್ತಾರೆ. ಇಂತಹ ಕುಟುಂಬಗಳಲ್ಲಿ ಮಹಿಳೆಯರು ಪುರುಷರ ಜೊತೆ ಸೇರಿಕೊಂಡು ಗುತ್ತಿಗೆ ಅಥವಾ ಕೂಲಿ ಆಧಾರದಲ್ಲಿ ಗುಂಡಿ ತೆಗೆಯುವ, ಕಬ್ಬನ್ನು ಕಡಿಯುವ, ಉಳುಮೆ ಮಾಡುವ, ಒಕ್ಕಣೆ ಮಾಡುವ, ಕಬ್ಬಿಣದ ಅದಿರನ್ನು ರೈಲಿಗೆ ತುಂಬುವ ಇತ್ಯಾದಿ ಕೃಷಿ ಮತ್ತು ಕೃಷಿಯೇತರ ಕೆಲಸಗಳಲ್ಲಿ ಪುರುಷರಿಗೆ ಸಮಾನವಾಗಿ ಕಾರ್ಯ ನಿರ್ವಹಿಸುತ್ತಾರೆ. ಆದರೂ ಪುರುಷರಿಗಿಂತ ಮಹಿಳೆಯರಿಗೆ ಕಡಿಮೆ ಕೂಲಿ ದೊರೆಯುತ್ತದೆ. ಇದಲ್ಲದೆ ಮಹಿಳೆಯರು ಅಡಿಗೆಗೆ ಸೌದೆ ಅಥವಾ ಕಟ್ಟಿಗೆ ಸಂಗ್ರಹಿಸುತ್ತಾರೆ. ಪುರುಷರು ವಾರ್ಷಿಕ ಕೂಲಿ ಆಧಾರದಲ್ಲಿ ಇತರರ ಮನೆಯಲ್ಲಿ ದುಡಿಯುತ್ತಾರೆ. ಮಹಿಳೆಯರು ವರ್ಷಕೂಲಿಗೆ ದುಡಿಯುವುದು ಬಹಳ ಕಡಿಮೆ. ಆದರೆ ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ವಾರ್ಷಿಕ ಕೂಲಿ ಆಧಾರದಲ್ಲಿ ಬೇರೆ ಊರುಗಳಲ್ಲಿ, ವಿಶೇಷವಾಗಿ ಪಟ್ಟಣ ಪ್ರದೇಶಗಳಲ್ಲಿ, ಮನೆಗೆಲಸದಲ್ಲಿ ದುಡಿಯುತ್ತಿದ್ದಾರೆ. ಕೆಲವೇ ಕೆಲವು ಅಭಿವೃದ್ಧಿ ಸಾಧಿಸುತ್ತಿರುವ ಕುಟುಂಬಗಳಲ್ಲಿ ಮಾತ್ರ ಮಹಿಳೆಯರನ್ನು ಹೊರಗಿನ (ಗದ್ದೆ, ಹೊಲ) ಕೆಲಸಕ್ಕೆ ಹಾಗೂ ಕೂಲಿ ಕೆಲಸಕ್ಕೆ ಕಳುಹಿಸುವುದಿಲ್ಲ. ಇಂತಹ ಕುಟುಂಬಗಳಲ್ಲಿ ಪುರುಷರು ಕೂಡ ಕೂಲಿ ಕೆಲಸವನ್ನು ಮಾಡಲು ಇಚ್ಛಿಸುವುದಿಲ್ಲ. ಇದು ಪ್ರಾಯಶಃ ಲಂಬಾಣಿಗಳ ಒಳಗೆ ಇರುವ ಸಾಮಾಜಿಕ ಸ್ಥಾನಕ್ಕೆ ಸಂಬಂಧಿಸಿದ್ದಾಗಿರಬಹುದು.

ಲಂಬಾಣಿಗಳ ಅಪ್ರಾಪ್ತ ವಯಸ್ಸಿನ ಮಕ್ಕಳು ಜಾನುವಾರುಗಳಿಗೆ ಮೇವು ಮತ್ತು ಪೋಷಕರಿಗೆ ಹೊಲದ ದಿನನಿತ್ಯದ ಕೆಲಸಕ್ಕೆ ಸಹಾಯ ಮಾಡುತ್ತಿದ್ದಾರೆ. ಸಹಾಯ ಸೇರಿದಂತೆ, ಪೋಷಕರು ತಮ್ಮ ಮಕ್ಕಳಿಗೆ ಉದ್ಯೋಗವನ್ನು ನೀಡುವುದು ಆರ್ಥಿಕ ಅವಶ್ಯಕತೆಯೂ ಹೌದು, ಅಗತ್ಯವು ಹೌದು. ಹಿಂದುಳಿದ ಆರ್ಥಿಕ ವ್ಯವಸ್ಥೆಯಲ್ಲಿ ಬಾಲಕಾರ್ಮಿಕರು ಪ್ರಮುಖವಾದ ಆರ್ಥಿಕ ಅಂಗ. ಇಡೀ ಕುಂಟುಂಬದ ಜೊತೆ ಮಕ್ಕಳು ತಂಡೋಪಾದಿಯಲ್ಲಿ ಹೊಲ ಗದ್ದೆಗಳಲ್ಲಿ, ಅನಿಶ್ಚಿತತೆಯಲ್ಲಿ ಅತ್ಯಲ್ಪ ಆದಾಯಕ್ಕೆ ದುಡಿಯುತ್ತಿದ್ದಾರೆ. ಆದರೂ ಶೈಕ್ಷಣಿಕ ಆಡಳಿತಗಾರರು ಅನಕ್ಷರತೆಗೆ ಕಾರಣವಾಗಿರುವ ಅಂಶಗಳನ್ನು ಸರಿಯಾಗಿ ಗುರುತಿಸದಿರುವುದು, ಸಾಂಪ್ರದಾಯಿಕ ರೂಢಿ ಮತ್ತು ಆಚರಣೆಗಳ ತರಬೇತಿಯಿಂದ ಮಕ್ಕಳು ತಮ್ಮ ಪೋಷಕರ ವೃತ್ತಿಯನ್ನೆ ಆರಿಸಿಕೊಳ್ಳುವಂತೆ ಅಥವಾ ಅನುಸರಿಸುವಂತೆ ಮಾಡಿದೆ. ಹೀಗಾಗಿ ಕೃಷಿ ಸಾಗುವಳಿ ಮತ್ತು ಇತರೆ ಸಾಂಪ್ರದಾಯಿಕ ವೃತ್ತಿ ಜ್ಞಾನವು ಹೊಸ ಪೀಳಿಗೆಯ ಕೈಗೆ ಬಂದಿದೆ. ಅದೂ ಅಲ್ಲದೆ, ಸರ್ಕಾರದಿಂದ ನೀಡಲಾದ ಶೈಕ್ಷಣಿಕ ಸೌಲಭ್ಯಗಳು ತೃಪ್ತಿದಾಯಕವಾಗಿಲ್ಲ ಮತ್ತು ತಾಂಡಗಳಲ್ಲಿ ಶೈಕ್ಷಣಿಕ ಚಟುವಟಿಕೆಯನ್ನು ದಿನನಿತ್ಯ ನಡೆಸಬೇಕಾಗುವಷ್ಟು ಉತ್ಸಾಹ ಕೂಡ ಕಂಡುಬರುವುದಿಲ್ಲ. ಅನೇಕ ಲಂಬಾಣಿಗಳಿಗೆ ಶಿಕ್ಷಣಕ್ಕಿಂತ ಭೂಮಿಯ ಬಗ್ಗೆ ಹೆಚ್ಚಿನ ಆಸಕ್ತಿ. ಹೆಚ್ಚಿನವರು 'ನಮ್ಮ ಮಕ್ಕಳು ಕುಟುಂಬದ ಆರ್ಥಿಕ ಉತ್ತಮೀಕರಣಕ್ಕೆ ಉಪಯೋಗವಾಗಿದ್ದಾರೆ. ಶಾಲೆಯಲ್ಲಿ ಸಮಯ ಕಳೆಯುವುದಕ್ಕಿಂತ ಮಕ್ಕಳು ಹಿರಿಯರ ಪ್ರೇರಣೆಯಿಂದ ಸಾಂಪ್ರಗಾಯಿಕ ಕಸುಬನ್ನು ಕಲಿತುಕೊಳ್ಳುತ್ತಾರೆ' ಎಂದು ಅಭಿಪ್ರಾಯಪಡುತ್ತಾರೆ.

ಆದರೂ ವಿಭಿನ್ನ ನೆಲೆಗಳಿಂದ ಆರ್ಥಿಕ ಸ್ಪರ್ಧೆ ಏರ್ಪಟ್ಟಿರುವುದರಿಂದ, ಮರಿಯಮ್ಮನಹಳ್ಳಿ ತಾಂಡದಲ್ಲಿ ನಾಲ್ಕು ಲಂಬಾಣಿ ಕುಟುಂಬಗಳು ಮತ್ತು ನಾಗಲಾಪುರ ತಾಂಡದಲ್ಲಿ ಮೂರು ಲಂಬಾಣಿ ಕುಟುಂಬಗಳು ಮರಗೆಲಸದಲ್ಲಿ ತೊಡಗಿಸಿಕೊಂಡಿವೆ. ನಾಗಲಾಪುರ ತಾಂಡದಲ್ಲಿ ಒಂದು ಕುಟುಂಬದವರು ಪೌರೋಹಿತ್ಯ ಕಾರ್ಯಕ್ಕೆ ಬದಲಾಗಿ 'ಸೇವಾ ಭಾವನ' (ಒಂದು ಕುಲ ದೈವದ ಹೆಸರು) ಪ್ರಭಾವ ಮತ್ತು ಆಶೀರ್ವಾದದಿಂದ ಪವಿತ್ರರಾಗಿರುವಂತೆ ವರ್ತಿಸುತ್ತಿದ್ದಾರೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ೬ ಜನರು (ಪುರುಷರು-೪ ಮತ್ತು ಮಹಿಳೆಯರು-೨) ಕೂಲಿ ಕೆಲಸದ ಜೊತೆಗೆ ಚಿಕ್ಕಪೆಟ್ಟಿಗೆ ಅಂಗಡಿಯನ್ನು ನಡೆಸುತ್ತಿದ್ದಾರೆ. ನಾಗಲಾಪುರ ತಾಂಡದಲ್ಲಿ ಒಂದು ಟೀ

ಅಂಗಡಿಯಲ್ಲದೆ, ಕಿರಾಣಿ  ವ್ಯಾಪಾರವನ್ನು ಲಂಬಾಣೇತರ ವ್ಯಕ್ತಿ ಒಬ್ಬ ನಡೆಸುತ್ತಿದ್ದಾರೆ. ನಾಗಲಾಪುರ ತಾಂಡದಲ್ಲಿ ಕೇವಲ ಒಂದೇ ಒಂದು ಪೆಟ್ಟಿಗೆ ಅಂಗಡಿ ಇದೆ. ನಾಗಲಾಪುರ ತಾಂಡದಲ್ಲಿ ಲಂಬಾಣಿಗಳು ಅವಶ್ಯಕವಾದ ವಸ್ತುಗಳನ್ನು ಹತ್ತಿರದ ಪಟ್ಟಣ ದಿಂದ(ಮರಿಯಮ್ಮನಹಳ್ಳಿ) ತಂದುಕೊಳ್ಳುತ್ತಾರೆ. ನಾಗಲಾಪುರ ತಾಂಡದಲ್ಲಿ, ಒಂದು ಕಾಲು ಇಲ್ಲದ ಲಂಬಾಣಿಯೊಬ್ಬ, ಯಾರ ಬೆಂಬ ಲವಿಲ್ಲದೆ ಹೊಸಪೇಟೆಯ ಅಂಗಡಿ ಒಂದರಲ್ಲಿ ಗೋಣಿ ಚೀಲಗಳನ್ನು ದುರಸ್ತಿ ಮಾಡುವ ಮೂಲಕ ತನ್ನ ಜೀವನಕ್ಕೆ ಸಾಕಾಗುವಷ್ಟು ಹಣವನ್ನು ಸಂಪಾದಿಸುತ್ತಿದ್ದಾನೆ. ನಾಗಲಾಪುರ ತಾಂಡದ ಮತ್ತು ಮರಿಯಮ್ಮನಹಳ್ಳಿ ತಾಂಡದ ಕೆಲವು ಲಂಬಾಣಿಗಳು ವ್ಯಾಸನಕೆರೆ ಸುತ್ತಮುತ್ತಲಿನ ರೈಲ್ವೇ ನಿಲ್ದಾಣದಲ್ಲಿ ಕಬ್ಬಿನದ ಅದಿರನ್ನು ರೈಲಿಗೆ ತುಂಬುವ (ಲೋಡಿಂಗ್) ಕೆಲಸವನ್ನು ಮಾಡುತ್ತಿದ್ದಾರೆ.

ಮರಿಯಮ್ಮನಹಳ್ಳಿ ತಾಂಡದಲ್ಲಿ ೯ ಜನರು ಸರ್ಕಾರಿ ನೌಕರಿ ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಇಬ್ಬರು ಪ್ರಾಥಮಿಕ ಶಾಲಾಶಿಕ್ಷಕರಾಗಿದ್ದಾರೆ. ಅರಣ್ಯ ಇಲಾಖೆಯಲ್ಲಿ ಇಬ್ಬರು ಕಾವಲುಗಾರರಾಗಿದ್ದಾರೆ. ಭೂ ದಾಖಲಾತಿ ಇಲಾಖೆಯಲ್ಲಿ ಒಬ್ಬರು ಜವಾನರಾತಿಗಿದ್ದಾರೆ. ಕಂದಾಯ ಇಲಾಖೆಯಲ್ಲಿ ಒಬ್ಬರು ಹಿರಿಯ ಸಹಾಯಕರಾಗಿದ್ದಾರೆ. ಪೋಲಿಸ್ ಇಲಾಖೆಯಲ್ಲಿ ಮೂರುಜನರು ಪೋಲಿಸ್ ಪೇದೆಗಳಾಗಿದ್ದಾರೆ. ನಾಗಲಾಪುರ ತಾಂಡದಲ್ಲಿ ಒಬ್ಬರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದಾರೆ. ಒಬ್ಬರು ಪೋಲಿಸ್ ಪೇದೆಯಾ ಗಿದ್ದಾರೆ. ತಾಲ್ಲೂಕು ಪಂಚಾಯಿತಿ ಕಛೇರಿಯಲ್ಲಿ ಒಬ್ಬರು ಜವಾನರಾಗಿ ಕೆಲಸ ಮಾಡುತ್ತಿದ್ದಾರೆ (ಈ ಮೂರು ಜನರು ಪ್ರಾಥಮಿಕ ಶಾಲಾ ಶಿಕ್ಷಕರೊಬ್ಬರ ಮಕ್ಕಳು). ಮರಿಯಮ್ಮನಹಳ್ಳಿ ತಾಂಡ ಹಾಗೂ ಸುತ್ತಮುತ್ತಲಿನ ತಾಂಡದ ಕೆಲವು ಮಹಿಳೆಯರು ರಾಷ್ಟ್ರೀಯ ಹೆದ್ದಾರಿ-೧೭ರಲ್ಲಿ ರಹಸ್ಯವಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿದ್ದಾರೆ.

ಇದರಿಂದ ಹೊರಬಂದ ನಿಗದಿತ ಆರಂಭದ ಆರ್ಥಿಕತೆಯು ಲಂಬಾಣಿಗಳು, ಜೀವನೋಪಾಯಕ್ಕಾಗಿ ಇತ್ತೀಚೆಗೆ ಪ್ರಾರಂಭಿಸಿದ ಕೃಷಿ, ಹೊಲ, ಗದ್ದೆಗಳಲ್ಲಿ ಕೂಲಿಕೆಲಸ, ಅರಣ್ಯ ಕೆಲಸಗಳು ಹಾಗೂ ಇತರ ನೌಕರಿಗಳು ಇವರನ್ನು ಅಭಿವೃದ್ಧಿ ದಾರಿಯಲ್ಲಿಯೇ ನಿಲ್ಲುವಂತೆ ಮಾಡಿತು. ನಾಗಲಾಪುರ ತಾಂಡವು ಪ್ರತ್ಯೇಕವಾಗಿ ನೆಲೆಗೊಂಡಿದ್ದರೂ ಸಾಪೇಕ್ಷವಾಗಿ ಒಂದೇ ರೀತಿಯ ಆರ್ಥಿಕ ಸಂಬಂಧಗಳನ್ನು ಹಿಂಬಾಲಿಸುತ್ತಿರುವುದನ್ನು ಕಾಣಬಹುದು (ಈ ತಾಂಡಕ್ಕೆ ೧೯೯೧ ರವರೆಗೆ ನೇರ ಬಸ್ಸಿನ ಸಂಪರ್ಕವಿರಲಿಲ್ಲ). ಮರಿಯಮ್ಮನಹಳ್ಳಿ ತಾಂಡವು ರಾಷ್ಟ್ರೀಯ ಹೆದ್ದಾರಿ ೧೭ರ ಪಕ್ಕದಲ್ಲಿ ನೆಲೆಗೊಂಡಿರುವುದರಿಂದ ಸಾರಿಗೆ ಸಂಪರ್ಕದ ಹೆಚ್ಚಳವು, ಹೆಚ್ಚಿನ ವಿಭಿನ್ನ ಆರ್ಥಿಕ ಸಂಬಂಧವನ್ನು ಹಿಂಬಾಲಿಸುವುದಕ್ಕೆ ಕಾರಣವಾಗಿದೆ.

ಲಂಬಾಣಿಗಳ ಒಳಗೆ ಸ್ಪಷ್ಟ ಆರ್ಥಿಕ ಬದಲಾವಣೆ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಇದ್ದುದರಿಂದ ಅವರ ಸಾಂಪ್ರದಾಯಿಕ ಕರಕುಶಲತೆ ಮತ್ತು ಗುಡಿಕೈಗಾರಿಕೆಯು ತೀಕ್ಷ್ಣವಾದ, ಅಗತ್ಯ ಬದಲಾವಣೆಯನ್ನು ಹೊಂದಲಿಲ್ಲ. ಇಂಥ ಪರಿಸ್ಥಿತಿಯು ಕೇಂದ್ರ-ಭಾರತದ ಬುಡಕಟ್ಟುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ (ಸಕ್ಸೇನ್ ೧೯೬೪ : ೧೭೧). ವಾಸ್ತವವಾಗಿ ಸಾಮಾನ್ಯ ಗೃಹ ಬಳಕೆಯ ಅಗತ್ಯಗಳಾದ, ಬಟ್ಟೆ, ಮಣ್ಣಿನ ಮಡಿಕೆ, ಪಾತ್ರೆಗಳು, ಪಾದರಕ್ಷೆಗಳು, ನೇಗಿಲು-ಬಿತ್ತನೆಯ ಸಲಕರಣೆ, ಬಂಡಿ ಇತ್ಯಾದಿ ಸಲಕರಣೆಗಳಿಗೆ ಬುಡಕಟ್ಟಿಲ್ಲದ ಕುಶಲಕರ್ಮಿಗಳನ್ನೆ

ಇವರು ಅವಲಂಬಿಸಬೇಕಾಗಿದೆ. ಉತ್ತರ ಪೂರ್ವ ಭಾರತದ ಬುಡಕಟ್ಟುಗಳಲ್ಲಿ ಗೃಹ ಬಳಕೆಯ ಅಗತ್ಯತೆಗಳಲ್ಲಿ ಸ್ವಾವಲಂಬನೆಯನ್ನು ಪಡೆದಿರುವ ಮತ್ತು ಪಡೆಯದಿರುವ ಬುಡಕಟ್ಟುಗಳ ನಡುವೆ ಸ್ಪಷ್ಟ ಭಿನ್ನತೆ ಇದೆ. ಇದನ್ನೆ ಸರ್ಕ್ಸೇನ್ ಅವರು ಸರಿಯಾಗಿ ತರ್ಕಿಸಿ, ಪ್ರಕೃತಿಯ ಬಗ್ಗೆ ಜೀವನೋಪಾಯದ ಮೂಲಕ, ಅನೇಕ ಮಿತಿಗಳ ನಡುವೆ, ಬುಡಕಟ್ಟು ಜನರು ಪರಿಶಿಷ್ಟ ಜಾತಿಯ ಜನರ ಎದುರು ಹಾಗೂ ಬುಡಕಟ್ಟು ಜನರ ಪ್ರದೇಶಗಳಲ್ಲಿ ಇರುವ ಹಿಂದು ಜಾತಿಯ ಗುಂಪಿನ ಜನರಲ್ಲಿದ್ದ ಆನುವಂಶಿಕ ವೃತ್ತಿಯ ಬಗ್ಗೆ ಇದ್ದ ಅಪಾರ ಆಸಕ್ತಿ ಇದಕ್ಕೆ ಕಾರಣವಾಗಿದೆ ಎಂದು ಹೇಳುತ್ತಾರೆ. ಕೆಲವು ಜಾತಿಗಳು ಮುಂದುವರಿದ ಆರ್ಥಿಕ ಆಸಕ್ತಿಯಿಂದ ವೃತ್ತಿ ಆಧಾರಿತ ಬದಲಾವಣೆ ಹೊಂದ್ದಿದವು. ಆದರೆ ಸಾಂಪ್ರದಾಯಿಕ ಜಾತಿಗಳು ಆರೋಪಣೆ ಮಾಡುವ ಮೂಲಕ ಅದನ್ನು ದೃಢಸಂಕಲ್ಪದಿಂದ ತಡೆಗಟ್ಟಿದವು (ಅದೇ; ೨೭೯-೨೮೦).

ಇಂದಿನಿಂದಲೂ ಬೆನ್ನತ್ತಿಬಂದ ವಿಶಿಷ್ಟ ಆರ್ಥಿಕ, ಕಸುಬುಗಳು ಸಂಪೂರ್ಣವಾಗಿ ಅಭಿವೃದ್ಧಿ ಹೊಂದದೆ ಇದ್ದುದರಿಂದಲೂ ನಿರ್ದಿಷ್ಟ ಭವಿಷ್ಯವಿಲ್ಲದೆ, ಏಕರೂಪವಲ್ಲದ ವೃತ್ತಿ ವರ್ಗಗಳು ಲಂಬಾಣಿಗಳ ನಡುವೆ ಹುಟ್ಟಿಕೊಂಡವು. ಸಾಮಾಜಿಕ ಸ್ತರವಿನ್ಯಾಸವು ಈ ಪ್ರದೇಶದ ಲಂಬಾಣಿಗಳಲ್ಲಿ ಇನ್ನೂ ಸ್ಪಷ್ಟವಾಗಿ ಕಾಣುವುದಿಲ್ಲ. ಆದರೂ ವರ್ಣ ವ್ಯವಸ್ಥೆಯು ಆಧರಿಸಿರುವ ರೀತಿಯಲ್ಲಿ ವೃತ್ತಿ ಅನುಕ್ರಮದ ಏಣಿ ಶ್ರೇಣಿಯು ಲಂಬಾಣಿಗಳ ಒಳಗೆ ಇದೆ.

## ಮೂಲ ಉತ್ಪಾದನಾ ಘಟಕ

ಲಂಬಾಣಿಗಳ ಹಿಂದಿನ ಆರ್ಥಿಕ ವ್ಯವಸ್ಥೆಯ ಮೂಲತತ್ವವನ್ನು ವಿವರವಾಗಿ ಅಧ್ಯಯನ ಮಾಡಿದಾಗ ಅವರದು ಸಣ್ಣಪ್ರಮಾಣದ ಉತ್ಪಾದನಾಕಾರರ ಆರ್ಥಿಕ ವ್ಯವಸ್ಥೆಯೆಂಬುದು ಸ್ಪಷ್ಟವಾಗುತ್ತದೆ. ಇವರಲ್ಲಿ ಬಹುಸಂಖ್ಯಾತರು ಸಾಗುವಳಿದಾರರು ಮತ್ತು ಕೂಲಿ ಕೆಲಸಗಾರರಾದರೂ ಕೆಲವರು ಕರಕುಶಲ ವಸ್ತುಗಳ ತಯಾರಿಯನ್ನು ಉಪವೃತ್ತಿಯಂತೆ ಅನುಸರಿಸುತ್ತಿದ್ದಾರೆ. ಕೆಲವರು ಪೆಟ್ಟಿಗೆ ಅಂಗಡಿ ನಡೆಸುತ್ತಿದ್ದಾರೆ. ಕೆಲವರು ಧಾರ್ಮಿಕ ಆಚರಣೆಗಳನ್ನು ಸಾಂಪ್ರದಾಯಿಕವಾಗಿ (ಪುರೋಹಿತರು) ನಡೆಸಿಕೊಡುವವರಿದ್ದಾರೆ. ಇಧ್ದಲು ಮತ್ತು ಸುಣ್ಣ ಸುಡುವವರು, ಮದ್ಯ (ಸರಾಯಿ) ವಿತರಕರು, ವೇಶ್ಯಾವಾಟಿಕೆ ಮಾಡುವವರು ಮತ್ತು ತಳಮಟ್ಟದ ಅಧಿಕಾರಿಗಳೂ ಇದ್ದಾರೆ. ಹೀಗೆ ವಿವಿಧ ವೃತ್ತಿಗಳನ್ನು ಅನುಸರಿಸುತ್ತಿರುವವರೆಲ್ಲರ ಪ್ರಾಥಮಿಕ ಉದ್ದೇಶ ಜೀವನ ನಿರ್ವಹಣೆಯೇ ಆಗಿದೆ. ಕುಟುಂಬವು ಮೂಲ ಆರ್ಥಿಕ ಘಟಕ. ಉತ್ಪಾದನಾ ಸಂಘಟನೆಯ ಪ್ರವೃತ್ತಿ ಮತ್ತು ಪ್ರಕ್ರಿಯೆಯಿಂದ ಹುಟ್ಟಿದ ಸಾಮಾಜಿಕ ಸಂಘಟನೆಯ ಕಾಯಿದೆಗಳು ವಿಶಾಲ ಅರ್ಥದಲ್ಲಿ ಕುಟುಂಬ/ಕೌಟುಂಬಿಕತೆ ಮತ್ತು ಇತರೆ ಸಂಬಂಧಿಕರು ಹಾಗೂ ಬಂಧುತ್ವ ಸಂಬಂಧಿಕರಿಂದ ಕೂಡಿದೆ (ನೋಡಿ, ನಶ್, ೧೯೬೬, ೨೩). ಸಾಹಲಿಸ್ ಅವರು ಇದನ್ನು ಭದ್ರವಾಗಿರುವ ಒಂದು ಆರ್ಥಿಕ-ಸಾಮಾಜಿಕ ಕೊಂಡಿ ಎಂದು ಕರೆದಿದ್ದಾರೆ. ಒಂದೇ ವಂಶದ ಸಂಕೋಲೆಯಲ್ಲಿ ಇರುವ ಗುಂಪೇ ಕುಟುಂಬ ಒಂದೇ ಭೂಭಾಗದ ಸಂಕೋಲೆಯ. ಒಳಗೆ ಇರುವವರು ತಾಂಡದ (ನೆಲೆಗೊಂಡ ಪ್ರದೇಶ) ಸದಸ್ಯರು. ಇವರು ಒಂದೇ ರಾಜಕೀಯ ಮತ್ತು ಆರ್ಥಿಕ ಸಂಘಟನೆಯ ಚಟುವಟಿಕೆಯಲ್ಲಿ ತೊಡಗಿಕೊಂಡಿರುವವರು ಮತ್ತು ಒಂದೇ ರೀತಿಯ ಧರ್ಮಾಚರಣೆಯ ಸಂಬಂಧಗಳ ಸಂಕೋಲೆಯಲ್ಲಿ ಇರುವವರು (ನೋಡಿ ಅಧ್ಯಾಯ ೩).

ಹೊಲೆಗದ್ದೆಗಳಲ್ಲಿನ ಕೆಲಸಕ್ಕೆ ಬೇಕಾಗುವ ಕೆಲಸಗಾರರ ಅವಶ್ಯಕತೆಯನ್ನು ಹೆಚ್ಚಾಗಿ ಕುಟುಂಬದ ಸದಸ್ಯರುಗಳಿಂದಲೇ ಪಡೆಯಲಾಗುತ್ತದೆ. ಇದು ಸಹ ಒಂದು ಅರ್ಥದಲ್ಲಿ ಕೂಲಿ ನೀಡುವ ಕೆಲಸಗಾರರಾಗಿ, ಕುಟುಂಬದ ಸದಸ್ಯರಾಗಿ, ಉತ್ಪಾದಕರಾಗಿ, ಒಟ್ಟು

ಉತ್ಪಾದನೆಯಲ್ಲಿ ಆರ್ಥಿಕ ಹಕ್ಕನ್ನು ಹೊಂದಿದ್ದಾರೆ (ಎಪಿಸ್ಟನ್, ೧೯೬೨; ೭೨). ಲಂಬಾಣಿ ಸಾಗುವಳಿದಾರರಲ್ಲಿ ಕೆಲವರು ಹೆಚ್ಚಿನ ಕೃಷಿ ಕೆಲಸವಿರುವ ಸಮಯದಲ್ಲಿ ಮಾತ್ರ ಕುಟುಂಬದ ಸದಸ್ಯರನ್ನು ದಿನಗೂಲಿ ಕೆಲಸಗಾರರಿಗೆ ಸಹಾಯ ಮಾಡುವಂತೆ ವಿನಂತಿಸುತ್ತಾರೆ. ಇದಕ್ಕೆ ವಿರುದ್ಧವಾಗಿ, ಕೃಷಿ ಚಟುವಟಿಕೆಯು ಕಡಿಮೆ ಹಾಗೂ ನಿಧಾನದಿಂದ ನಡೆಸಬಹುದಾದ ಸಂದರ್ಭದಲ್ಲಿ, ಕೆಲವು ಲಂಬಾಣಿ ಸಾಗುವಳಿದಾರರು ಕೂಡ ದಿನಗೂಲಿ ಕೆಲಸಗಾರರಾಗಿ ದುಡಿದು ಆದಾಯವನ್ನು ಹೆಚ್ಚಿಸಿಕೊಳ್ಳುತ್ತಾರೆ. ಸಾಂಪ್ರದಾಯಿಕವಾಗಿ ಕುಟುಂಬಕ್ಕಿಂತ ಮೇಲುಮಟ್ಟದಲ್ಲಿ ಔಪಚಾರಿಕವಾದ ರಚನೆ ಇರುವುದಿಲ್ಲ. ಬಂಧು-ಬಳಗ ಮೂಲದ ಅನುಭವವಿರುವ ಕೆಲಸದ ತಂಡಗಳು ಇವೆ. ಆದರೂ, ವೈಯಕ್ತಿಕ ನೆಲೆಯಲ್ಲಿ ಪರಸ್ಪರ ಸಹಾಯಕ ವ್ಯವಸ್ಥೆಯು, ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಕೂಲಿ ಕೊಡದೆ (ಮುಯ್ಯಾಳು) ನಡೆಸುತ್ತಾರೆ. ಕೃಷಿ ಚಟುವಟಿಕೆಯ ಹೆಚ್ಚಿನ ಒತ್ತಡದಿಂದ ಹೆಣಗುತ್ತಿದ್ದ ಸಂದರ್ಭಗಳಲ್ಲಿ, ಉದಾಹರಣೆಗೆ, ಬೀಜದ ಬಿತ್ತನೆ, ಕಳೆತೆಗೆಯುವಾಗ, ಒಕ್ಕಣೆ ಮಾಡುವ ಸಂದರ್ಭಗಳಲ್ಲಿ ಮುಯ್ಯಾಳು ರೀತಿಯಲ್ಲಿ ಕೆಲಸ ಮಾಡುತ್ತಾರೆ. ಈ ರೀತಿ ಕೆಲಸಗಾರರ ವಿನಿಮಯವು ಪ್ರಾಯಶಃ ಬಂಧು-ಬಳಗದ ಸಂಬಂಧಿಕರ ನಡುವೆ ಅಥವಾ ಸಮವಯಸ್ಕ ಗೆಳೆಯರ ನಡುವೆ ಸಾಮಾನ್ಯವಾಗಿದೆ. ಇದನ್ನು 'dyadic contract' ಎಂದು ಕರೆಯುತ್ತಾರೆ (ನೋಡಿ ಫಾಸ್ಟರ್, ೧೯೬೭). ಇನ್ನೂ ಕೆಲವು ಪರಿಸ್ಥಿತಿಯಲ್ಲಿ ಕೆಲಸಕ್ಕೆ ಸಹಾಯದ ಒಪ್ಪಂದಗಳು ದಿಕ್ಕಿಲ್ಲದ ರೀತಿಯಲ್ಲಿ ಸಹೋದರರು ಮತ್ತು ಸಂಬಂಧಿಕರ ನಡುವೆ ಚೆಂಬಲದ ರೀತಿಯಲ್ಲಿ, ನೇಗಿಲು ಎಳೆಯಲು ಎತ್ತುಗಳು ಮತ್ತು ಕೃಷಿ ಸಲಕರಣೆಗಳನ್ನು ಯಾವುದೇ ರೀತಿಯ ನಿರೀಕ್ಷೆ ಇಲ್ಲದೆ ವಿನಿಮಯವಾಗುವುದನ್ನು ಸಹ ಕಾಣಬಹುದು.

ಕುಟುಂಬದ ಮುಖ್ಯಸ್ಥರ ನಿರ್ವಹಣೆಯಲ್ಲಿ, ಕುಟುಂಬದ ಪ್ರತಿಯೊಬ್ಬ ಸದಸ್ಯರು ತಮ್ಮ ತಮ್ಮ ದುಡಿಮೆಯನ್ನು ಕುಟುಂಬದ ಸಾಮಾನ್ಯ ನಿಧಿಗೆ ನೀಡುತ್ತಾರೆ. ಸಾಮಾನ್ಯವಾಗಿ ಹಿರಿಯ ಗಂಡು ಮಗ ಕುಟುಂಬದ ಮುಖ್ಯಸ್ಥರಾಗಿರುತ್ತಾನೆ. ಆದರೆ ಕೆಲವು ಪರಿಸ್ಥಿತಿಗಳಲ್ಲಿ ಕುಟುಂಬದ ಹಿರಿಯ ಮಹಿಳೆಯೂ ಯಜಮಾನಿಯೆಂದು ಪರಿಗಣಿಸಲ್ಪಡುತ್ತಾಳೆ. ಈಗಾಗಲೆ ತಿಳಿದಿರುವಂತೆ, ಕೆಲಸ ಮಾಡುವ ಕೈಗಳನ್ನು (ಜನರನ್ನು) ಅವಲಂಬಿಸಿರುವವರ ಪ್ರಮಾಣ ಸ್ವಲ್ಪ ಮಟ್ಟಿಗೆ ಹೆಚ್ಚಾಗಿದೆ ಮತ್ತು ಅವಿಭಕ್ತ ಕುಟುಂಬಗಳಲ್ಲಿ ಅವಲಂಬಿತರು ಪೋಷಣೆಯ ಹಕ್ಕನ್ನು ಹೊಂದಿದ್ದಾರೆ. ಕೋಷ್ಟಕ ೨.೫ ರಲ್ಲಿ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಇರುವ ವಿವಿಧ ಮಾದರಿಯ ಕುಟುಂಬ ಪದ್ಧತಿಯನ್ನು ನೀಡಲಾಗಿದೆ.

## ಕೋಷ್ಟಕ ೨.೫

## ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ಕುಟುಂಬದ ಮಾದರಿಗಳು ಮತ್ತು ಕುಟುಂಬಗಳ ಸಂಖ್ಯೆ

| ಕುಟುಂಬದ ಮಾದರಿ | ಸಂಬಂಧಿಕರಿಲ್ಲದ ಕುಟುಂಬಗಳು | | ರಕ್ತ ಸಂಬಂಧಿಕರುವ ಇರುವ ಕುಟುಂಬಗಳು | | ವಿವಾಹ ಸಂಬಂಧಿಕರುವ ಇರುವ ಕುಟುಂಬಗಳು | | ಒಟ್ಟು | | | |
|---|---|---|---|---|---|---|---|---|---|---|
| | ಮ | ನಾ | ಮ | ನಾ | ಮ | ನಾ | ಮ | %ಶೇಕಡ | ನಾ | %ಶೇಕಡಾ |
| ೧. ಅಣುಕುಟುಂಬಗಳು | ೬೫ | ೫೯ | ೧ | ೪ | ೧ | ೧ | ೬೭ | ೬೫.೭ | ೬೫ | ೬೫.೬ |
| ೨. ಅವಿಭಕ್ತರ ಕುಟುಂಬಗಳು ಅ. ತಲೆತಲಾಂತರದಿಂದ ಇರುವ ಅವಿಭಕ್ತ ಕುಟುಂಬಗಳು | ೧೭ | ೧೭ | - | - | - | - | ೧೭ | | ೧೭ | |
| ಬ. ಇತ್ತೀಚಿನ ಸೋದರ ಸಹೋದರಿ ಸಂತತಿಯ ಅವಿಭಕ್ತ ಕುಟುಂಬಗಳು | ೩ | ೫ | - | - | - | - | ೩ | | ೫ | |
| ಸಿ. ತಲೆತಲಾಂತರದಿಂದ ಇರುವ ಮತ್ತು ಇತ್ತೀಚಿನ ಸೋದರ ಸಹೋದರಿ ಸಂತತಿಯ ಅವಿಭಕ್ತ ಕುಟುಂಬಗಳು | ೧೪ | ೧೧ | - | ೧ | ೧ | ೧ | ೧೫ | | ೧೨ | |
| ಒಟ್ಟು ಅವಿಭಕ್ತ ಕುಟುಂಬಗಳು | ೩೪ | ೩೩ | - | ೧ | ೧ | ೧ | ೩೫ | ೩೪.೩ | ೧೨ | ೩೫.೪ |
| ಒಟ್ಟು ೧ ಮತ್ತು ೨ | ೯೯ | ೯೨ | ೧ | ೫ | ೨ | ೨ | ೧೦೨ | ೧೦೦.೦ | ೯೯ | ೧೦೦.೦ |

ಸೂಚನೆ : ಮ = ಮರಿಯಮ್ಮನಹಳ್ಳಿ ತಾಂಡ, ನಾ = ನಾಗಲಾಪುರ ತಾಂಡ

ಅಧ್ಯಯನಕ್ಕೆ ಒಳಪಡಿಸಿದ ಎರಡೂ ತಾಂಡಗಳಲ್ಲಿ ಅಣು ಕುಟುಂಬಗಳು ಕ್ರಮವಾಗಿ (ಮರಿಯಮ್ಮನಹಳ್ಳಿ ತಾಂಡದಲ್ಲಿ ಶೇಕಡ ೬೫.೭ ಮತ್ತು ನಾಗಲಾಪುರ ತಾಂಡದಲ್ಲಿ ಶೇಕಡ ೬೪.೬ ರಷ್ಟು) ಮತ್ತು ಅವಿಭಕ್ತ ಕುಟುಂಬಗಳು ಮರಿಯಮ್ಮನಹಳ್ಳಿ ತಾಂಡದಲ್ಲಿ ಶೇಕಡ ೩೪.೩, ನಾಗಲಾಪುರ ತಾಂಡದಲ್ಲಿ ಶೇಕಡ ೩೫.೪ ಸ್ವಲ್ಪ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿವೆ. ಆದರೂ, ತಲೆತಲಾಂತರದಿಂದಿರುವ ಅವಿಭಕ್ತ ಕುಟುಂಬಗಳು, ತಲೆತಲಾಂತರದ ಜೊತೆಗೆ ಇತ್ತೀಚಿನ ಸೋದರ ಮತ್ತು ಸಹೋದರಿ ಸಂತತಿಯ ಅವಿಭಕ್ತ ಕುಟುಂಬಗಳು ಇವೆ. ತಲೆತಲಾಂತರದಿಂದಿರುವ ಅವಿಭಕ್ತ ಕುಟುಂಬಗಳು ಇತ್ತೀಚಿನ ಸೋದರಿ ಅಥವಾ ಸಹೋದರ ಸಂತತಿಯ ಅವಿಭಕ್ತ ಕುಟುಂಬಗಳಿಗಿಂತ ಸಂಖ್ಯೆಯಲ್ಲಿ ಪ್ರಬಲವಾಗಿವೆ. ಈ ರೀತಿ ತಲೆತಲಾಂತರದಿಂದಿರುವ ಅವಿಭಕ್ತ ಕುಟುಂಬಗಳು ಮುಂದುವರಿಕೆಗೆ ಉತ್ತಮ ಅವಕಾಶಗಳು ಇರುವುದು. ಏಕೆಂದರೆ, ತಂದೆ ತಾಯಿಗಳಿಗೆ ಗೌರವದಿಂದ ಅಥವಾ ಅವರ ಮಾತಿನಂತೆ ನಡೆಯಬೇಕು ಎಂಬ ಸಂಕೋಲೆಯ ನಿಷ್ಠೆ, ಒಡಹುಟ್ಟಿದ ಅಣ್ಣ-ತಮ್ಮಂದಿರ ಸಂಬಂಧದ ಸಂಕೋಲೆಯ ಗುಣ ಲಕ್ಷಣಗಳು ಸೋದರ ಅಥವಾ ಸೋದರಿ ಸಂತತಿಯ ಮಿಶ್ರಿತ ಸಂತತಿಯ ವಿಶಿಷ್ಟತೆಯಾಗಿವೆ. ಸಹೋದರತ್ವದ ಕುಟುಂಬಗಳು (ಅಣ್ಣತಮ್ಮಂದಿರು ಒಟ್ಟಿಗೆ ಇರುವ) ಬೇರ್ಪಟ್ಟು ಹೆಚ್ಚು ಇಳಿ ಮುಖ

ವಾಗಿರುವುದು ಕಾಣಿಸಿಕೊಳ್ಳುತ್ತದೆ. ಅವಿಭಕ್ತ ಕುಟುಂಬಗಳು ವಿಭಜನೆ ಆಗುತ್ತಿರುವುದಕ್ಕೆ ಲಂಬಾಣಿಗಳು ನೀಡುವ ವಿವರಣೆ ಎಂದರೆ ಸ್ವಾರ್ಥಪರತೆ, ಕುಟುಂಬದ ಸಾಮಾನ್ಯ ನಿಧಿಯ ದುರುಪಯೋಗ ಮಾಡುವುದು ಕುಟುಂಬದ ಸಾಮಾನ್ಯ ವಿಷಯಗಳಲ್ಲಿ ವೈಯಕ್ತಿಕ ನಿರ್ಧಾರಗಳನ್ನು ತೆಗೆದುಕೊಳ್ಳುವುದು, ಹಿರಿಯ ಸಹೋದರ ಅಥವಾ ಕುಟುಂಬದ ಹಣಕಾಸು ವ್ಯವಹಾರಗಳನ್ನು ನಿರ್ವಹಿಸುತ್ತಿದ್ದವರು ಹಣವನ್ನು ದುರುಪಯೋಗಮಾಡುವುದು, ಕೆಲಸದ ಹಂಚಿಕೆ, ಆಹಾರ ತಯಾರಿಕೆ ಮತ್ತು ಹಂಚಿಕೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಸಹೋದರರ ನಡುವಿನ ಜಗಳಗಳು. ಆದರೆ ಈ ರೀತಿಯ ಸಮಸ್ಯೆಗಳಿಂದ ತಂದೆ ತಾಯಿಗಳು ಅಧಿಕಾರದಲ್ಲಿ ಇರುವ ಭರವಸೆ ಇಲ್ಲದೆ ಇರುವುದು ಹಾಗೂ ಪಿತೃಕೇಂದ್ರಿತ ವಂಶಾನುಕ್ರಮದಲ್ಲಿ ಭರವಸೆ ಇಲ್ಲದೆ, ಅವಿಭಕ್ತ ಕುಟುಂಬಗಳು ಪ್ರಾಬಲ್ಯವನ್ನು ಪಡೆದುಕೊಳ್ಳುವಲ್ಲಿ ವಿಫಲವಾಗಿವೆ. ಆದುದರಿಂದ ತಲೆತಲಾಂತರ ಮತ್ತು ಇತ್ತೀಚಿನ ಸಹೋದರ ಅಥವಾ ಸಹೋದರಿ ಸಂತತಿಯ ಅವಿಭಕ್ತ ಕುಟುಂಬ ಎಂದು ಕರೆಯುವುದಕ್ಕೆ ಬದಲಾಗಿ, ಸರಳವಾಗಿ 'ಪಿತೃಪ್ರಧಾನ' ಇಂದು ರೂಢಿಗತವಾದ ವ್ಯವಸ್ಥೆಯಾಗಿದೆ. ಈ ರೀತಿಯ ಕುಟುಂಬಗಳನ್ನು ನಾನು ಪೈಟ್ರಿಫೋಕಲ್ ಎಂದು ಕರೆಯುತ್ತೇನೆ. ಇದು ತಂದೆಯ ಅಧಿಕಾರದ ಬಗ್ಗೆ ಒತ್ತಿ ಹೇಳುವುದರಿಂದ ಇದನ್ನು ಈ ರೀತಿ ಕರೆದಿದ್ದೇನೆ.

ಇನ್ನು ಕೆಲವು ಪರಿಸ್ಥಿತಿಗಳಲ್ಲಿ ಒಂದೇ ವಂಶಾನುಕ್ರಮದ ಬಗ್ಗೆ ಆಸಕ್ತಿ ಇರುವ ಇತರ ಸಂಬಂಧಿಕರು, ಸಹಭಾಗಿತ್ವದ ಹಕ್ಕಿನ ಆಧಾರವಿಲ್ಲದಿದ್ದರೂ ಒಂದೇ ಕುಟುಂಬದ ಸದಸ್ಯರಾಗಿ ಅವಲಂಬಿತರಾಗುತ್ತಾರೆ. ಪ್ರಾಯಶಃ ಅವರು ಜೀವನಾಧಾರವಿಲ್ಲದ ಮಕ್ಕಳು ಅಥವಾ ವ್ಯಕ್ತಿಗಳಾಗಿದ್ದು, ಅವರು ಕುಟುಂಬದ ಜೊತೆ ಕೆಲಸಮಾಡಲು ಬಂದವರಾಗಿರುತ್ತಾರೆ. ಇದನ್ನು ಕನ್ಯಾ ಸೇವೆ ಎಂದು ಲಂಬಾಣಿಗಳು ಕರೆಯುತ್ತಾರೆ. ಪ್ರಾಯಶಃ ಕೆಲವರು, ಸತ್ತ ಮಗಳ ಅಥವಾ ಅಕ್ಕ ತಂಗಿಯರ ಅನಾಥ ಮಕ್ಕಳಾಗಿದ್ದರೆ, ಇತರರು ತಂದೆ ತಾಯಿಯರು ಸಹೋದರ ಅಥವಾ ಸಹೋದರಿಯ ಮಕ್ಕಳಾಗಿರುತ್ತಾರೆ ಅಥವಾ ವೃದ್ಧ ಸಂಬಂಧಿಕರಾಗಿದ್ದಾರೆ. ಇದನ್ನು ತುಂಬಾ ಹತ್ತಿರದ ಬಂಧು ಬಳಗದ ಅಥವಾ ನೆಂಟಸ್ಥರು ಹೆಚ್ಚಾಗಿ ನಿರ್ವಹಿಸುತ್ತಿರುತ್ತಾರೆ. ಈ ರೀತಿಯ ಸಹಾಯಕ ಸಂಬಂಧಗಳು, ವಿಶಿಷ್ಟವಾಗಿ ಬಂಧುತ್ವಕ್ಕೆ ಹತ್ತಿರವಾದ ಸಂಬಂಧಿಗಳಿಗೆ ಮಹತ್ವ ಹಾಗು ಒತ್ತು ನೀಡುತ್ತವೆ. ಇವುಗಳು ಬಂಧುತ್ವದ ಹಕ್ಕು ಮತ್ತು ಸೇವಾ ಒಪ್ಪಂದಗಳು ಕೆಲವು ಆಯ್ದ ಬಂಧುತ್ವ ಸಂಬಂಧಗಳಲ್ಲಿ ಆರ್ಥಿಕ ಪ್ರಭಾವವನ್ನು ಕೂಡ ಉಂಟುಮಾಡಿದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಕೇವಲ ಮೂರು ಕುಟುಂಬಗಳು ಮತ್ತು ನಾಗಲಾಪುರ ತಾಂಡದಲ್ಲಿ ಏಳು ಕುಟುಂಬಗಳಲ್ಲಿ ಇಂಥ ಅವಲಂಬಿತರು ಇದ್ದಾರೆ. ಅಸಾಧಾರಣ ಸಂದರ್ಭಗಳಿಂದ ಇಂತಹ ಸದಸ್ಯರು ಸೇರಿಕೊಂಡಿರುವುದನ್ನು ಸೂಚಿಸುತ್ತದೆ. ಈ ರೀತಿಯ ಪರಹಿತ ರೂಢಿ ಸಂಪ್ರದಾಯಗಳಲ್ಲಿ ತೊಡಗಿಸಲು, ಸಂಘಟನೆಯಲ್ಲಿನ ಉತ್ಪಾದನ ಚಟುವಟಿಕೆಗಳ ತೀವ್ರತೆ ಮತ್ತು ವರ್ತನಾಕ್ರಮಗಳು ಅವಲಂಬಿತರಿಗೆ ಬೆಂಬಲವಾಗಿದೆ.

## ಲಂಬಾಣಿಗಳ ವಿವಿಧ ಕಸುಬುಗಳು

ಆರ್ಥಿಕ ದೃಷ್ಟಿಕೋನದಿಂದ ಎರಡು ತಾಂಡಗಳ ಕುಟುಂಬಗಳು ಗರ್ಭೀಕರಿಸಿರುವ ಕಸುಬುಗಳನ್ನು ಸ್ಥೂಲವಾಗಿ ನಾಲ್ಕು ಭಾಗಗಳಾಗಿ ವರ್ಗೀಕರಿಸಬಹುದು ೧. ಸ್ವಂತ ಭೂ ಹಿಡುವಳಿ ಹೊಂದಿರುವ ಸಾಗುವಳಿದಾರರು, ೨. ಭೂರಹಿತ. ಗೇಣಿ ಆಧಾರಿತ ಸಾಗುವಳಿದಾರರು, ೩. ಭೂರಹಿತ ಕಾರ್ಮಿಕರು ಮತ್ತು ೪. ಇತರೆ ಆರ್ಥಿಕ ಕಸುಬುದಾರರು. ಮೊದಲಿಗೆ ಕೃಷಿಯ ಬಗ್ಗೆ ವಿವರಿಸಿ ನಂತರ ಕೂಲಿ-ಕಾರ್ಮಿಕರು ಮತ್ತು ಇತರೆ ಆರ್ಥಿಕ ಕಸುಬುದಾರರ ಬಗ್ಗೆ ಚರ್ಚೆ ನಡೆಸಿದ್ದೇನೆ.

ಲಂಬಾಣಿಗಳಿಗೆ ಕೃಷಿ ಪ್ರಮುಖವಾದ ಮತ್ತು ಮಹತ್ವದ ಆರ್ಥಿಕ ಕಸುಬು. ಹೊಸಪೇಟೆ ಪ್ರದೇಶದಲ್ಲಿ ಪ್ರಮುಖ ಬೆಳೆಗಳು ಎಂದರೆ ಭತ್ತ, ಜೋಳ ಮತ್ತು ಕಬ್ಬು. ಇತರ ಧಾನ್ಯಗಳಾದ ನವಣೆ, ಸಜ್ಜೆ ಇತ್ಯಾದಿಗಳನ್ನು ನೀರಾವರಿ ಇಲ್ಲದ ತರಿ ಭೂಮಿಯಲ್ಲಿ ಬೆಳೆಯುತ್ತಾರೆ. ತೊಗರಿ, ಹೆಸರು, ಅಲಸಂದೆ, ಜೋಳ, ಹತ್ತಿ, ಕಡಲೆಕಾಯಿ, ಸೂರ್ಯಕಾಂತಿ, ಮೆಣಸಿನಕಾಯಿ ಬೆಳೆಗಳು ಪೂರಕ ಬೆಳೆಗಳಾಗಿವೆ. ಒಟ್ಟು ಕೃಷಿ ಯೋಗ್ಯ ಭೂಮಿಯಲ್ಲಿ ಜೋಳ, ಭತ್ತ ಮತ್ತು ಕಬ್ಬನ್ನು ಶೇಕಡ ೬೦ ಕ್ಕಿಂತ ಹೆಚ್ಚಿನ ಭೂಮಿಯಲ್ಲಿ ಬೆಳೆಯಲಾಗುತ್ತದೆ. ಭತ್ತದ ಬೆಳೆಯು ಒಕ್ಕಣೆಯ ನಂತರ ಅದೇ ಭೂಮಿಯಲ್ಲಿ ಕೆಲವರು ಧಾನ್ಯ ಬೆಳೆಗಳನ್ನು ಎರಡನೇ ಬೆಳೆಯಾಗಿ ಬೆಳೆಯುತ್ತಾರೆ. ಅದೇ ಭೂಮಿಯಲ್ಲಿ ಕೆಲವು ಬಗೆಯ ತರಕಾರಿಗಳು ಮತ್ತು ಸೊಪ್ಪುಗಳನ್ನು ಕೂಡ ಬೆಳೆಯುತ್ತಾರೆ. ಮಾವು, ನಿಂಬೆ, ದಾಳಿಂಬೆ ಇತ್ಯಾದಿ ಹಣ್ಣುಗಳನ್ನು ಹೊಲಗಳ ಬದುವಿನಲ್ಲಿ ಮತ್ತು ಮನೆಯ ಹಿತ್ತಿಲುಗಳಲ್ಲಿಯೂ ಬೆಳೆಯುತ್ತಾರೆ. ನೀರಾವರಿ ಕಡಿಮೆ ಪ್ರಮಾಣದಲ್ಲಿ ಇರುವ ಭೂಮಿಗಳಲ್ಲಿ ವರ್ಷಕ್ಕೆ ಒಂದೇ ಭತ್ತದ ಅಥವಾ ಜೋಳದ ಬೆಳೆಯನ್ನು ಬೆಳೆದರೆ, ಹೆಚ್ಚಿನ ನೀರಾವರಿ ಇರುವ ಭೂಮಿಗಳಲ್ಲಿ ವರ್ಷಕ್ಕೆ ಎರಡು ಬಾರಿ ಭತ್ತದ ಬೆಳೆಯನ್ನು ಬೆಳೆಯುತ್ತಾರೆ. ಹೀಗೆ ವಿವಿಧ ಬಗೆಯ ಬೆಳೆಗಳು ವಿವಿಧ ಬಗೆಯ ಮಣ್ಣಿನ ಗುಣಲಕ್ಷಣವಿರುವ ಭೂಮಿಯಲ್ಲಿ ಬೆಳೆಯುವ ಸಾಧ್ಯತೆಗಳಿವೆ. ಏಕೆಂದರೆ ಎರಡು ತಾಂಡಗಳು ಒಂದು ಮತ್ತೊಂದರಿಂದ ಭಿನ್ನವಾದ ಭೂ ಪ್ರದೇಶದಲ್ಲಿ, ವಿಸ್ತಾರವಾದ ವಿವಿಧ ಬಗೆಯ ಮಣ್ಣುಗಳು ಇರುವ ಪ್ರದೇಶಗಳಲ್ಲಿವೆ. ಇದು ಕಾಲ ಕಾಲಕ್ಕೆ ಬದಲಾವಣೆಯಾಗುವ ಹವಾಮಾನದ ಪರಿಸ್ಥಿತಿಗೆ ಹೊಂದಾಣಿಕೆಯಾಗುವ ಚಕ್ರಗತಿಯ ಬೆಳೆಗಳನ್ನು ಬೆಳೆಯುವುದರಿಂದಲೂ ಸಾಧ್ಯವಾಗಿದೆ.

**ಲಂಬಾಣಿಗಳು ಕೃಷಿಯಲ್ಲಿ ಸಾಧಿಸಿರುವ ಕೌಶಲ್ಯತೆ**

ಲಂಬಾಣಿಗಳಲ್ಲಿ ಇರುವ ಕೃಷಿ ಕೆಲಸದ ಆವೃತ್ತಿಯು ಸ್ಥೂಲವಾಗಿ ನಾಲ್ಕು ಪರಸ್ಪರ-ಸಂಬಂಧದ ಹಂತಗಳನ್ನು ಒಳಗೊಂಡಿದೆ. ಭೂಮಿಯನ್ನು ಬಿತ್ತನೆ ಮಾಡಲು ಹಣಿ ಮಾಡುವುದು, ಬೀಜದ ಬಿತ್ತನೆ, ಕಳೆತೆಗೆಯುವುದು ಮತ್ತು ಒಕ್ಕಣೆ. ಬೆಳೆಯ ಕಟಾವಿನ ನಂತರ ತಕ್ಷಣ ಗದ್ದೆಗಳಲ್ಲಿ ತೇವಾಂಶ ಇರುವಾಗಲೆ ಉಳುಮೆ ಮಾಡುತ್ತಾರೆ. ಏಕೆಂದರೆ ಭೂಮಿಯು ಒಣಗುವುದರಿಂದ ಉಳುಮೆ ಮಾಡಲು ಸಾಧ್ಯವಾಗಲಾರದು. ಕೆಲವು ಕಾರಣಗಳಿಂದ ಉಳುಮೆ ಮಾಡದಿದ್ದಾಗ ನಂತರದಲ್ಲಿ ಮುಂಗಾರು ಋತುವಿನ ಮೊದಲ ಮಳೆ ಬರುವವರೆಗೆ ಕಾಯುತ್ತಾರೆ. ಮಳೆ ಬಂದ ನಂತರ ಉಳುಮೆ ಮಾಡಿ ಭೂಮಿಯನ್ನು ಕಾಯಲು ಬಿಟ್ಟು ಫಲವತ್ತುಗೊಳಿಸುತ್ತಾರೆ (ಹೆಚ್ಚಿನ ನೀರಿನ ಅಂಶ ಇರುವ ಭೂಮಿಯಲ್ಲಿ ಇದು ಸಾಧ್ಯವಿಲ್ಲ). ಲಂಬಾಣಿಗಳು ವಿವಿಧ ಮಣ್ಣಿನ ಗುಣಲಕ್ಷಣಗಳನ್ನು ಆಧರಿಸಿ ಉಳುಮೆ ಮಾಡಲು ವಿವಿಧ ಮಾದರಿಯ ನೇಗಿಲುಗಳನ್ನು ಬಳಸುತ್ತಾರೆ. ಸಾಮಾನ್ಯವಾಗಿ ಒಂದು ಕೃಷಿ ಕುಟುಂಬವು ಎರಡು ಅಥವಾ ಮೂರು ರೀತಿಯಲ್ಲಿ ಉಳುಮೆಯ ಪ್ರಕ್ರಿಯೆಯನ್ನು ನಡೆಸುತ್ತದೆ.

ಕಪ್ಪು ಜಿಗುಟು ಮಣ್ಣಿನ (black cotton soil) ಒಣ ಭೂಮಿಯನ್ನು ಉಳುಮೆ ಮಾಡಿದಾಗ ಏಳುವ ಮಣ್ಣಿನ ಹೆಂಟೆಗಳನ್ನು ಬಿಸಿಲಿನಲ್ಲಿ ಒಣಗಲು ಬಿಟ್ಟು ಎತ್ತುಗಳಿಂದ ಹಲುಬೆಯನ್ನು ಒಡೆಯುತ್ತಾರೆ ಅಥವಾ ಕೈಯಿಂದ ಹೆಂಟೆಗಳನ್ನು ಒಡೆದು ಪುಡಿಮಾಡಲಾಗುತ್ತದೆ. ಹಲುಬೆಯನ್ನು ಬಿತ್ತನೆಯ ಬೀಜಗಳನ್ನು ಮುಚ್ಚಲು ಸಹ ಬಳಸುತ್ತಾರೆ. ಬತ್ತದ ಗದ್ದೆಯ ಕೆಲಸಕ್ಕೆ ಕೆಲಸಗಾರರ ಬಳಕೆಯನ್ನು, ಒಣ ಭೂಮಿಯ ಕೃಷಿಗೆ ಬಳಕೆಯಾಗುವ ಕೆಲಸಗಾರರ ಜೊತೆಗೆ ಹೋಲಿಸಿದರೆ, ಒಣಭೂಮಿಯ ಕೃಷಿ ಸ್ವಲ್ಪ ಕಡಿಮೆ

ಸಂಖ್ಯೆಯ ಕೆಲಸಗಾರರನ್ನು (ಕಾರ್ಮಿಕರನ್ನು) ಕೆಲಸಕ್ಕೆ ತೆಗೆದುಕೊಳ್ಳುತ್ತದೆ. ಇದೇ ರೀತಿಯಲ್ಲಿ ಕಪ್ಪು ಮಣ್ಣಿನ ಹೊಲಗಳ ಸಾಗುವಳಿಯೂ ಸಹ ಸ್ವಲ್ಪಮಟ್ಟಿಗೆ ಸರಳವೆನಿಸುತ್ತದೆ. ಹೊಸ ಗೇಣಿಯನ್ನು ಪ್ರಾರಂಭಿಸುವಾಗ, ಸಾಗುವಳಿದಾರರು ಸಾಂಕೇತಿಕವಾಗಿ ಸ್ವಲ್ಪ ಕೆಲಸವನ್ನು ಹಿಂದೂ ಹೊಸ ವರ್ಷದ ದಿನದಂದು (ಯುಗಾದಿ ಹಬ್ಬದ ದಿನ) ಹೊಲದಲ್ಲಿ ಪೂಜೆಯನ್ನು ಮಾಡುವ ಮೂಲಕ ಪ್ರಾರಂಭಿಸುತ್ತಾರೆ. 23/xl/2010

ಜೋಳದ ಬಿತ್ತನೆಯನ್ನು ಜೂನ್ ಮೊದಲನೆ ವಾರದಿಂದ ಪ್ರಾರಂಭಿಸಿ ಜುಲೈ ಕೊನೆಯ ವಾರದ ಒಳಗೆ ಸಾಮಾನ್ಯವಾಗಿ ಮುಗಿಸುತ್ತಾರೆ. ಈ ಪ್ರದೇಶದಲ್ಲಿ ಜೋಳದ ಬೆಳೆಯ ಸಾಗುವಳಿ ಒಂದೇ ರೀತಿಯಲ್ಲಿ ಇಲ್ಲ. ಬಿತ್ತನೆ ಬೀಜದ ಆಯ್ಕೆಯನ್ನು ಒಕ್ಕಣೆಗಿಂತ ಮೊದಲೆ ಕೆಲವರು ಆಯ್ದ ಬೆಳೆಗಳಿಂದ ಮಾಡುತ್ತಾರೆ. ಹೆಚ್ಚಿನವರು ಆಧುನಿಕ ಕಂಪನಿಗಳ ಬಿತ್ತನೆ ಬೀಜಗಳನ್ನೇ ಉಪಯೋಗಿಸುತ್ತಾರೆ. ಬಿತ್ತನೆ ಬೀಜದ ಹಾಗೂ ಕೃಷಿ ಸಲಕರಣೆಗಳ ಪೂಜೆಯ ನಂತರವೆ ಬಿತ್ತನೆ ಕೆಲಸವು ಪ್ರಾರಂಭವಾಗುವುದು. ಇದನ್ನು ಒಂದು ಹೊಸ ಸೀರೆಯಿಂದ ಮುಚ್ಚಿ, ಹೂವು ಹಣ್ಣುಗಳು ಮತ್ತು ಸಿಹಿತಿಂಡಿಯನ್ನು ಇಟ್ಟು ಪೂಜೆ ಮಾಡುತ್ತಾರೆ. ಬತ್ತದ ಬೆಳೆಗೆ ಪ್ರಾರಂಭದಿಂದ ಕೊನೆಯ ಒಕ್ಕಣೆಯವರೆಗೆ ನಿರಂತರವಾಗಿ ಎಚ್ಚರಿಕೆ ವಹಿಸುವ ಅಗತ್ಯವಿದೆ. ನಾಟಿಯ ನಂತರ ಬೆಳೆಗೆ ನಿರಂತರವಾಗಿ ನೀರು ನಿಲ್ಲುವ ಅವಶ್ಯಕತೆ ಇರುವುದರಿಂದ, ಭೂಮಿಯ ಉಳುಮೆಯ ನಂತರ ನಾಟಿಗಿಂತ ಮೊದಲು ನೀರು ಸಮತಟ್ಟಾಗಿ ನಿಲ್ಲುವಂತೆ ಮಾಡುವ ಉದ್ದೇಶದಿಂದ, ಭೂಮಿಯನ್ನು ಸಮವಾಗಿ ಮಟ್ಟ ಮಾಡುವ ಕೃಷಿ ಸಲಕರಣೆಯಿಂದ (ಇದನ್ನು ಮಣೆ ಎಂದು ಕರೆಯುತ್ತಾರೆ) ಮಟ್ಟ ಮಾಡುತ್ತಾರೆ. ಇದರಿಂದ ನೀರು ಸುಲಭವಾಗಿ ಬತ್ತಿ ಹೋಗಲಾರದು. ಶೇಕಡ ೬೦ ಕ್ಕೂ ಹೆಚ್ಚಿನ ಸಾಗುವಳಿದಾರರು ಕಳೆಯನ್ನು ಮಹಿಳಾ ಕೂಲಿ ಕಾರ್ಮಿಕರ ಸಹಾಯದಿಂದ (ಕೈಗಳಿಂದಲೇ) ತೆಗೆಸುತ್ತಾರೆ. ಕೆಲವೆ ಕೆಲವರು ಇತ್ತೀಚೆಗೆ ಬಂದಿರುವ ಕಳೆ ನಾಶಕಗಳನ್ನು ಬಳಸುತ್ತಾರೆ. ಕೊನೆಯದಾಗಿ ತೆನೆ ಹುಟ್ಟುವುದು ವಿಭಿನ್ನ ತಳಿಗಳ ಆಧಾರದ ಮೇಲೆ, ಸ್ಥಳೀಯ ಅಥವಾ ದೇಶಿ ಬಿತ್ತನೆ ಬೀಜವಾಗಿದ್ದರೆ ತೆನೆ ಹುಟ್ಟುವುದು ನಿಧಾನವಾಗುತ್ತದೆ. ಹೈಬ್ರೀಡ್ ತಳಿಯಾದರೆ ೩ ತಿಂಗಳ ನಂತರ ತೆನೆ ಹುಟ್ಟಿ ಬರುತ್ತದೆ. ತೆನೆ ಹುಟ್ಟಿದ ನಂತರ ಕೊಯ್ಯುವವರೆಗೆ ಸಾಮಾನ್ಯವಾಗಿ ಬೆಳೆಯನ್ನು ಕೆಲವರು ಕಾವಲು ಕಾಯುತ್ತಾರೆ. ವಂಶಪಾರಂಪರ್ಯವಾಗಿ ಒಕ್ಕಣೆ ಅಥವಾ ಬೆಳೆಯ ಸಮೃದ್ಧಿಯ ಸವಿಯಾಟವನ್ನು ಹುಣ್ಣಿಮೆಯ ದಿನದಂದು (ವಿಶೇಷವಾಗಿ ಸೀಗೆ ಹುಣ್ಣಿಮೆ) ಸಾಮಾನ್ಯವಾಗಿ ಆಚರಿಸುತ್ತಾರೆ. ಹೊಲದಲ್ಲಿ ನಡೆಯುವ ಈ ಔತಣಕೂಟಕ್ಕೆ ಸ್ನೇಹಿತರು ಮತ್ತು ಸಂಬಂಧಿಕರನ್ನು ಕರೆಯುತ್ತಾರೆ. ಊಟದ ತುಣುಕುಗಳು ಚೆಲ್ಲಾಪಿಲ್ಲಿಯಾಗಿ ಹೊಲದಲ್ಲೆಲ್ಲಾ ಬಿದ್ದರೆ, ಭಕ್ತಿಯಿಂದ ಹೊಲ ದೇವತೆಯನ್ನು ಪೂಜೆ ಮಾಡಿದರೆ ಬೆಳೆಗಳನ್ನು ರಕ್ಷಿಸಿ ಉತ್ತಮ ಇಳುವರಿಯನ್ನು ದಯಪಾಲಿಸುತ್ತದೆ ಎಂದು ಇವರು ನಂಬಿದ್ದಾರೆ.

ಜೋಳ ಮತ್ತು ಭತ್ತದ ಒಕ್ಕಣೆಯು ಅಕ್ಟೋಬರ್ ತಿಂಗಳ ಕೊನೆಯಿಂದ ಪ್ರಾರಂಭವಾಗಿ ಡಿಸೆಂಬರ್ ಮತ್ತು ಜನವರಿ ತಿಂಗಳವರೆಗೆ ನಡೆಯುತ್ತದೆ. ಬೆಳೆಗಳನ್ನು ಕುಡುಗೋಲಿನಿಂದ ಕತ್ತರಿಸಿ, ಸಣ್ಣ ಪುಟ್ಟ ಗುಂಪುಗಳ ರೀತಿಯಲ್ಲಿ ಹೊಲ ಗದ್ದೆಯಲ್ಲೇ ಒಣಗಲು ಬಿಡುತ್ತಾರೆ. ಒಣಗಿದ ನಂತರ ಒಟ್ಟುಗೂಡಿಸಿ ಬಣವೆ ಅಥವಾ ಮೆದೆ ಮಾಡುತ್ತಾರೆ. ಬೀಜದ ಬಿತ್ತನೆ ಮತ್ತು ಒಕ್ಕಣೆ ಕಾರ್ಯಕ್ಕೆ ಹೆಚ್ಚಿನ ಕೆಲಸಗಾರರ ಅಗತ್ಯವಿದೆ. ಇದಕ್ಕೆ ಕುಟುಂಬದ ಸದಸ್ಯರುಗಳಲ್ಲದೆ ಹೊರಗಿನಿಂದ ಹೆಚ್ಚುವರಿ ಕೆಲಸಗಾರರ ಅವಶ್ಯಕತೆ ಇದೆ.

ಬತ್ತವನ್ನು ಬಡಿದ ನಂತರ ಕಣದಲ್ಲಿ ಹರಡಿ ಎತ್ತುಗಳನ್ನು (ಜಾನುವಾರುಗಳ) ಬತ್ತದ ಹುಲ್ಲಿನ ಮೇಲೆ, ಎತ್ತುಗಳನ್ನು ಮೇಟಿಗೆ ಕಟ್ಟಿ (ಕಣದ ಮಧ್ಯ ನೆಡುವ ಮರದ ಅಥವಾ ಬಿದರಿನ ಕಂಭ) ಸುತ್ತಲು ಹೊಡೆಯುತ್ತಾರೆ. ಇದನ್ನು ಎಲ್ಲಾ ಸಾಗುವಳಿದಾರರು

ಮಾಡುವುದಿಲ್ಲ. ಸಣ್ಣ ಪ್ರಮಾಣದ ಸಾಗುವಳಿದಾರರು ಮಾತ್ರ ಇದನ್ನು ಮಾಡುತ್ತಾರೆ. ದೊಡ್ಡ ಪ್ರಮಾಣದ ಸಾಗುವಳಿದಾರರು ಇತ್ತೀಚೆಗೆ ಇದರ ಬದಲಿಗೆ ಹುಲ್ಲಿನ ಮೇಲೆ ಟ್ರ್ಯಾಕ್ಟರ್ ಓಡಿಸುತ್ತಿರುವುದು ಕಂಡು ಬರುತ್ತದೆ. ಬೆಳೆಗಳ ಒಕ್ಕಣೆ ಅಥವಾ ಬಡಿಯುವ ಕಾರ್ಯದ ನಂತರ ಸ್ನೇಹಿತರು ಮತ್ತು ಬಂಧು-ಬಳಗದ ಸಂಬಂಧಿಕರನ್ನು ಆಹ್ವಾನಿಸಿ ಹೊಲದ ದೇವರುಗಳಿಗೆ ಪೂಜೆಮಾಡಿ ಅಭಿನಂದನೆಯನ್ನು ಸಲ್ಲಿಸುವ ರೀತಿಯಲ್ಲಿ ಒಂದು ಧಾರ್ಮಿಕ ಆಚರಣೆ ಮಾಡುತ್ತಾರೆ.

ಲಂಬಾಣಿಗಳು ಇತರೆ ರೈತರಿಂದ ಕೃಷಿಕಾರ್ಯದಲ್ಲಿ ಪ್ರವೀಣತೆಯನ್ನು ಪಡೆದಿದ್ದಾರೆ ಮತ್ತು ಕೃಷಿಸಂಬಂಧಿ ಆಚರಣೆ ಮತ್ತು ಹಬ್ಬಹರಿದಿನಗಳನ್ನು ಇವರು ಒಂದೇ ಸ್ಥಳದಲ್ಲಿ ನೆಲೆನಿಂತ ನಂತರ ಅಳವಡಿಸಿಕೊಂಡಿದ್ದಾರೆ. ಲಂಬಾಣಿಗಳು ಹಿಂದಿನ ಅಲೆಮಾರಿ ಜೀವನದ ದಿನಗಳಲ್ಲಿ ಕೃಷಿ ಸಂಬಂಧಿ ಧಾರ್ಮಿಕ ಆಚರಣೆ ಮತ್ತು ಹಬ್ಬಹರಿದಿನಗಳು ಹೊಂದಿರಲಿಲ್ಲ. (ನೋಡಿ ಅಧ್ಯಾಯ - ೩)

ಆದರೂ ಸ್ವಲ್ಪ ನಿಶ್ಚಯವಾದ ಏಕರೂಪತೆಯು ಲಂಬಾಣಿಗಳ ಕೆಲವು ಸಾಗುವಳಿ ತಾಂತ್ರಿಕತೆಯಲ್ಲಿ ಇದೆ. ಕೃಷಿ ಇಳುವರಿಯು ಲಂಬಾಣಿಯೊಬ್ಬನ ಕಾರ್ಯ ಸಾಮರ್ಥ್ಯ, ಹಣಕಾಸಿನ ಸಂಪನ್ಮೂಲಗಳು, ಭೂಹಿಡುವಳಿಯ ಗಾತ್ರ ಹಾಗೂ ಮಣ್ಣಿನ ವೈಶಿಷ್ಟತೆಯನ್ನು ಆಧರಿಸಿದೆ.

ನಾಗಲಾಪುರ ತಾಂಡದಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುವುದು ಬಹುಸಂಖ್ಯಾತ ಕುಟುಂಬಗಳಿಗೆ (ಅಧ್ಯಯನಕ್ಕೆ ಒಳಪಡಿಸಿದ ೯೯ ಕುಟುಂಬದಲ್ಲಿ ೬೬ ಕುಟುಂಬಗಳು) ಪ್ರಾಥಮಿಕ ಆದಾಯವನ್ನು ಒದಗಿಸುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ೧೦೨ ಕುಟುಂಬಗಳಲ್ಲಿ ೪೩ ಕುಟುಂಬಗಳು ಮಾತ್ರ ಪರೋಕ್ಷವಾಗಿ ಕೂಲಿಯನ್ನು ಪ್ರಾಥಮಿಕ ಆದಾಯಕ್ಕೆ ಅವಲಂಬಿಸಿವೆ. ಭೂರಹಿತರಾಗಿ ಸಾಗುವಳಿ ಮಾಡದೆ ಇರುವ ಅಥವಾ ಗುತ್ತಿಗೆ ಆಧಾರದಿಂದ ಸಾಗುವಳಿ ಮಾಡದೆ ಇರುವ ಕುಟುಂಬಗಳಿಗೆ ಪರ್ಯಾಯ ಜೀವನೋಪಾಯದ ಆದಾಯದ ಮೂಲವಾಗಿದೆ. ಕೃಷಿಯನ್ನು ಅಲವಂಬಿಸಿರುವ ಕುಟುಂಬಗಳಿಗೆ ಇದು (ಕೂಲಿ) ಸಹಾಯಕ ಅಥವಾ ಪೂರಕ ಆದಾಯದ ಮೂಲವಾಗಿದೆ. (ನಾಗಲಾಪುರ ತಾಂಡದಲ್ಲಿ ಕೃಷಿ ಮತ್ತು ಕೂಲಿ ಕೆಲಸಗಳೆರೆಡರನ್ನು ಅವಲಂಬಿಸಿರುವ ಕುಟುಂಬಗಳು- ೯ ಮರಿಯಮ್ಮನಹಳ್ಳಿ ತಾಂಡದಲ್ಲಿ ಇದೇ ರೀತಿಯ ಕುಟುಂಬಗಳ ಸಂಖ್ಯೆ - ೩೫). ಕೋಷ್ಟಕ ೨.೬ ಕುಟುಂಬದ ಸದಸ್ಯರು ಬೇರೆ ಬೇರೆ ಕೆಲಸಗಳಲ್ಲಿ ನಿರತರಾಗಿ ಹಂಚಿಕೆಯಾಗಿರುವುದನ್ನು ನೀಡಲಾಗಿದೆ. ನಾಗಲಾಪುರದ ತಾಂಡದ ಹೆಚ್ಚಿನ ಕೂಲಿ ದುಡಿಮೆಗಾರರು ಕೃಷಿ ಕಾರ್ಮಿಕರು. ಇದಕ್ಕೆ ವಿರುದ್ಧವಾಗಿ ಮರಿಯಮ್ಮನಹಳ್ಳಿ ತಾಂಡದ ಕೂಲಿ ದುಡಿಮೆಗಾರರು, ಕೃಷಿ ಕೂಲಿಕೆಲಸದ ಜೊತೆಗೆ ಗಣಿಗಳಲ್ಲಿ ಇತರೆ ಹೊಸವೃತ್ತಿಗಳನ್ನು (ಲಾರಿಡ್ರೈವರ್, ರೈಲ್ವೇ ಲೋಡಿಂಗ್, ಇತ್ಯಾದಿ) ಅವಲಂಬಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ. ಇದು ಸ್ವಲ್ಪಮಟ್ಟಿನ ಆರ್ಥಿಕ ವಿಭಿನ್ನತೆಗೆ ಕಾರಣವಾಗಿದೆ. ಮರಿಯಮ್ಮನಹಳ್ಳಿ ನಾಗಲಾಪುರ ತಾಂಡದ ಕೆಲವು ಲಂಬಾಣಿ ಕುಟುಂಬಗಳು ಕಾಲಕಾಲಕ್ಕೆ ವಿವಿಧ ಪ್ರದೇಶಗಳಿಗೆ ಕೆಲಸವನ್ನು ಅರಸಿ ವಲಸೆ (ಸೀಜನಬಲ್ ಮೈಗ್ರೇಶನ್) ಹೋಗುವುದರಿಂದ, ಕೆಲವರು ಗಣಿಗಳಲ್ಲಿ ವೃತ್ತಿಯನ್ನು ಅವಲಂಬಿಸಿರುವುದರಿಂದ ಸ್ಥಳೀಯವಾಗಿ ಕೃಷಿ ಕಾರ್ಮಿಕರು ದೊರಕುವುದು ಸ್ವಲ್ಪಮಟ್ಟಿಗೆ ಕಷ್ಟ. ಆದರೂ ಗಣಿಯಲ್ಲಿ ಕೂಲಿ ಹಾಗೂ ವಲಸೆ ಹೋಗಿ ದುಡಿಯುವುದು, ಕೃಷಿ ಕೆಲಸಕ್ಕಿಂತ ತುಸು ಶ್ರಮದಾಯಕ. ಜೊತೆಗೆ ಕೂಲಿ ಕೂಡ ಸ್ವಲ್ಪ ಹೆಚ್ಚು. ಈ ಪ್ರದೇಶದ ಕೆಲವು ಕುಟುಂಬಗಳು ಮಲೆನಾಡು ಪ್ರದೇಶಗಳಿಗೆ ಜನವರಿ ತಿಂಗಳಿನಲ್ಲಿ ವಲಸೆ ಹೋಗಿ ಜೂನ್‌ನಲ್ಲಿ ಅಥವಾ ಕೃಷಿ ಸಾಗುವಳಿ ಕೆಲಸ ಪ್ರಾರಂಭಕ್ಕೆ ಸ್ವಲ್ಪ ಮೊದಲು ಅಥವಾ ಮಳೆ ಬಿದ್ದು ಸಾಗುವಳಿ ಕೆಲಸಗಳು ಪ್ರಾರಂಭವಾದಾಗ ತಮ್ಮ ಸ್ಥಳಗಳಿಗೆ ಹಿಂದಿರುಗುತ್ತಾರೆ. ಬೆಳೆಗಳ ಒಕ್ಕಣೆ ಕೆಲಸ ಮುಗಿದ ನಂತರ ಮತ್ತೆ ಮಲೆನಾಡು ಪ್ರದೇಶಕ್ಕೆ ಕೆಲಸವನ್ನು ಅರಸಿ ವಲಸೆ ಹೋಗುತ್ತಾರೆ.

ಕೃಷಿ ಸೇವಕರು ಅಥವಾ ಕೃಷಿ ಕೆಲಸಗಾರರು ಎಂಬುದೇ ಈ ಪ್ರದೇಶದ ವಿಭಿನ್ನವಾದ ಸಾಂಪ್ರದಾಯಿಕ ರೂಢಿ ಅಥವಾ ವಾಡಿಕೆ. ಇದು ಊಳಿಗಮಾನ್ಯ ಸೇವೆ ಮತ್ತು ಕೂಲಿಯ ಪ್ರತಿಫಲವನ್ನು ಅವಲಂಬಿಸಿದೆ. ಇದು ದಿನನಿತ್ಯ ಅನಿಶ್ಚಿತ ಕೆಲಸಗಾರರ ತಾತ್ಕಾಲಿಕ ವ್ಯವಸ್ಥೆಯಾಗಿದೆ. ಕೃಷಿಕರಿಗೆ ಕೆಲಸಗಾರರ ಸೇವೆಯ ಅವಶ್ಯಕತೆ ಇದ್ದಾಗ, ಅವಶ್ಯಕವಿದ್ದಷ್ಟು ವ್ಯಕ್ತಿಗಳು (ಕೆಲಸಗಾರರು) ಅನೇಕ ದಿನಗಳವರೆಗೆ ಅಥವಾ ಕೆಲಸ ಇರುವವರೆಗೆ ಕೆಲಸ ಮಾಡುತ್ತಾರೆ. ಕೃಷಿಯೇತರ ಕೂಲಿಕೆಲಸಗಾರರಲ್ಲಿಯು ಇಂತಹದೇ ವ್ಯವಸ್ಥೆ ಇದೆ. ಸಂಬಳವನ್ನು ಪ್ರತಿದಿನ ಅಥವಾ ವಾರದಲ್ಲಿ ಒಂದು ದಿನ (ಸಾಮಾನ್ಯವಾಗಿ ಸಂತೆ ನಡೆಯುವ ದಿನ) ನಗದು ರೂಪದಲ್ಲಿ ನೀಡುತ್ತಾರೆ. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ, ಅಂದರೆ ಒಕ್ಕಣೆ ಕಣದ ಕೆಲಸಕ್ಕೆ ಕೂಲಿಯನ್ನು ಸಾಂಪ್ರದಾಯಿಕ ಬಗೆಯಲ್ಲಿ ಧಾನ್ಯದ ರೂಪದಲ್ಲಿ ನೀಡುತ್ತಾರೆ. ದಿನಗೂಲಿಯಲ್ಲಿ ಕಂಡುಬರುವ ಮತ್ತೊಂದು ಮಾದರಿ ಎಂದರೆ ತುಂಡು ಗುತ್ತಿಗೆ ರೂಪದಲ್ಲಿ ನಿರ್ದಿಷ್ಟ ಪ್ರಮಾಣದ ಕೆಲಸಕ್ಕೆ, ನಿರ್ದಿಷ್ಟ ಮೊತ್ತದ ಕೂಲಿ ನೀಡಲಾಗುತ್ತದೆ.



## ಕೋಷ್ಟಕ ೨.೬

**ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ಲಂಬಾಣಿಗಳು ಕೂಲಿ ಕೆಲಸದ ಮೇಲೆ ಅವಲಂಬಿತರಾಗಿರುವ ಕುಟುಂಬಗಳ ಸಂಖ್ಯೆ ಮತ್ತು ಕೂಲಿ ಕೆಲಸದ ವಿಧಾನ**

| | ಕೆಲಸ ಮಾಡುವ ವ್ಯಕ್ತಿಗಳು | | | | | | |
|---|---|---|---|---|---|---|---|
| ಕೆಲಸದ ವಿಧಾನ | ಒಂದು | ಎರಡು | ಮೂರು | ನಾಲ್ಕು | ಐದು | ಆರಕ್ಕಿಂತ ಹೆಚ್ಚು | ಒಟ್ಟು |
| ಕೃಷಿ ಕೂಲಿ | ಮ. ೧೬ | ೪೧ | ೧೫ | ೮ | ೨ | ೮ | ೯೧ |
| | ನಾ. ೨೦ | ೨೫ | ೫ | ೧ | ೧ | ೨ | ೫೪ |
| ಕಟ್ಟಡ ಕೆಲಸ | ಮ. ೧ | ೧೯ | ೪ | ೩ | - | ೧ | ೨೮ |
| | ನಾ. - | - | - | - | - | - | - |
| ಇತರೆ ಕೂಲಿ | ಮ. ೫ | - | - | - | - | - | ೫ |
| | ನಾ. ೩೫ | ೧೬ | ೪೩ | ೩ | - | ೧ | ೫೯ |
| ಒಟ್ಟು | ಮ. ೨೩ | ೬೦ | ೧೯ | ೧೧ | ೨ | ೯ | ೧೨೪ |
| | ನಾ. ೫೫ | ೪೧ | ೭ | ೪ | - | ೩ | ೧೧೦ |

**ಸೂಚನೆ :**
೧. ಮ - ಮರಿಯಮ್ಮನಹಳ್ಳಿ, ನಾ - ನಾಗಲಾಪುರ
೨. ಕೆಲವು ಕುಟುಂಬಗಳು ಒಂದೇ ಕಾಲದಲ್ಲಿ ತನ್ನ ಸದಸ್ಯರನ್ನು ವಿಭಾಗಿಸಿ ಒಂದಕ್ಕಿಂತ ಹೆಚ್ಚಿನ ವಿವಿಧ ಕೂಲಿಕೆಲಸವನ್ನು ಮಾಡುತ್ತವೆ. ಅಥವಾ ಅನುಕ್ರಮವಾಗಿ ಕೃಷಿಕೂಲಿಗಳು ಹೆಚ್ಚಾಗಿರುವ ಸಂದರ್ಭದಲ್ಲಿ ಕೃಷಿ ಕೂಲಿಗಳಾಗಿ ನಂತರ ಕಟ್ಟಡ ಕಟ್ಟುವಲ್ಲಿ ಸಹಾಯಕ ಕೆಲಸ ಅಥವಾ ಇತರೆ ಕೆಲಸಗಳನ್ನು ಕೃಷಿ ಕೂಲಿ ಇಲ್ಲದೆ ಇರುವಾಗ ಮಾಡುತ್ತಾರೆ.

ಸಾಂಪ್ರದಾಯಿಕ ಆರ್ಥಿಕ ವ್ಯವಸ್ಥೆಯಲ್ಲಿ ಕೂಲಿಯನ್ನು ಧಾನ್ಯದ ರೂಪದಲ್ಲಿ ನೀಡಲಾಗುತ್ತಿತ್ತು. ಇತ್ತೀಚಿನ ವರ್ಷಗಳಲ್ಲಿ ಕೂಲಿಯನ್ನು ನಗದು ರೂಪದಲ್ಲಿ ನೀಡುತ್ತಿರುವುದು ಬದಲಾವಣೆಗೆ ಸಾಕ್ಷಿಯಾಗಿದೆ. ಹಣದ ರೂಪದಲ್ಲಿ ಕೂಲಿಯ ನೀಡಿಕೆ ನೀಡುವವರಿಗೆ ಅನೇಕ ಅನುಕೂಲಗಳನ್ನು ಉಂಟು ಮಾಡಿದೆ. ಮೊದಲಿಗೆ ಆಹಾರ ಪದಾರ್ಥಗಳಿಗೆ ಉಂಟಾದ ಬೆಲೆಯ ಹೆಚ್ಚಳ. ಆದರೆ ಕೆಲಸಗಾರರು ಕೂಲಿಯನ್ನು

ಧಾನ್ಯದ ರೂಪದಲ್ಲಿ (ಭೂರಹಿತ ಕೃಷಿ ಕಾರ್ಮಿಕರು) ಪಡೆಯುವುದಕ್ಕೆ ಆದ್ಯತೆ ನೀಡುತ್ತಾರೆ. ಒಕ್ಕಣೆ ಮತ್ತು ಕಣದ ಕೆಲಸಕ್ಕಾದರೂ ಧಾನ್ಯದ ರೂಪದ ಕೂಲಿ ನೀಡಿ ಎಂದು ಕೇಳಿಕೊಳ್ಳುವವರು ಇದ್ದಾರೆ. ಏಕೆಂದರೆ ಧಾನ್ಯಗಳ ರೂಪದಲ್ಲಿ ನೀಡುವ ಕೂಲಿಯನ್ನು ಸಾಂಪ್ರದಾಯಿಕವಾಗಿ ಪರಿಗಣಿಸಿ ಕೂಲಿಯನ್ನು ನಿರ್ಧರಿಸಿರುವುದು; ಇವರು ಯಾವುದೇ ಒಂದು ರೀತಿಯ ಕೂಲಿಗೆ ಅಂಟಿಕೊಳ್ಳದೆ ಬದಲಾಯಿಸುತ್ತಿರುವುದು ಕಂಡು ಬರುತ್ತದೆ.

ಯಾರಿಗಾದರೂ ಧಾನ್ಯದ (ಜೋಳ ಅಥವಾ ಭತ್ತ) ರೂಪದಲ್ಲಿ ಕೂಲಿ ನೀಡುವ ಸಂದರ್ಭದಲ್ಲಿ ಒಂದು ದಿನಕ್ಕೆ ಪುರುಷರಿಗೆ ೧೦ ರಿಂದ ೧೫ ಸೇರು, ಮಹಿಳೆಯರಿಗೆ ೮ ರಿಂದ ೧೦ ಸೇರು ಮತ್ತು ಮಕ್ಕಳಿಗೆ ೪ ರಿಂದ ೫ ಸೇರು - ಹೀಗೆ ಲಿಂಗ ಮತ್ತು ವಯಸ್ಸಿನ ಆಧಾರದ ಮೇಲೆ ಕೂಲಿಯ ಪ್ರಮಾಣವು ವ್ಯತ್ಯಾಸಗೊಳ್ಳುತ್ತದೆ. ಇದನ್ನು ನಗದು ರೂಪಕ್ಕೆ ಪರಿವರ್ತಿಸಿದರೆ ಈ ರೀತಿಯ ಕೂಲಿಯು ಸ್ವಲ್ಪ ಹೆಚ್ಚು ಕಡಿಮೆ ನಗದು ರೂಪದ ಕೂಲಿಗಿಂತ ದ್ವಿಗುಣದಂತೆ ಕಂಡುಬರುತ್ತದೆ. ಕೂಲಿಗಳು, ಕೃಷಿಕರಿಗೆ (ಭೂ ಒಡೆಯರಿಗೆ) ಕೊನೆಯ ಪಕ್ಷ ಒಕ್ಕಣೆ ಮತ್ತು ಕಣದ ಕೆಲಸದಂತಹ ವಿಶೇಷವಾದ ಸಂದರ್ಭಗಳಲ್ಲಾದರೂ ಉದಾರವಾಗಿ ಕೂಲಿಯನ್ನು ಧಾನ್ಯಗಳ ರೂಪದಲ್ಲಿ ನೀಡಿ, ಇತರ ಸಂದರ್ಭಗಳಲ್ಲಿ ಮಾಡುವ ಕೆಲಸಕ್ಕೆ ನಗದು ರೂಪದಲ್ಲಿ ಕೂಲಿ ನೀಡಿ ಎಂದು ಕೇಳಿಕೊಳ್ಳುವುದೂ ಉಂಟು. ೧೯೭೦ರ ದಶಕದಿಂದಲೂ ಕೂಲಿ ಕಾರ್ಮಿಕರಿಗೆ ನೀಡುವ ನಿಜವಾದ ಕೂಲಿಯು ಕಡಿಮೆಯಾಗುತ್ತಿದೆ. ಆದುದರಿಂದ ಕೃಷಿ ಕಾರ್ಮಿಕರು ಕೂಲಿಯನ್ನು ಕೊನೆಯ ಪಕ್ಷ ಕಣದ ಕೆಲಸದ ಸಂದರ್ಭದಲ್ಲಾದರೂ ಧಾನ್ಯದ ರೂಪದಲ್ಲಿ ನೀಡಲಿ ಎಂದು ಕೇಳುವುದು ಸಹಜವೇ ಆಗಿದೆ. ಆದರೆ ೨೦೦೦ ಇಸವಿಯಲ್ಲಿ ಕೃಷಿ ಉತ್ಪನ್ನಗಳಿಗೆ ಉಂಟಾದ ಬೆಲೆಯ ಕುಸಿತದಿಂದ ಈ ರೀತಿಯ ವ್ಯವಸ್ಥೆಯು ಊಹಿಸಲಾಗದ ರೀತಿಯಲ್ಲಿ ಏರಿಳಿತಗಳನ್ನು ಕಂಡಿದೆ. ೧೯೯೫ ರಿಂದ ೨೦೦೦ - ಐದು ವರ್ಷಗಳಲ್ಲಿ ಈ ಪುರುಷರ ದಿನಗೂಲಿಯು ೨೫ ರೂಪಾಯಿಂದ ೪೫ ರೂಪಾಯಿಗಳವರೆಗೆ ಕೆಲಸದ ಸ್ವರೂಪದ ಮೇಲೆ ವ್ಯತ್ಯಾಸವಾಗಿರುವುದನ್ನು ಗುರುತಿಸಬಹುದು. ಆದರೂ ಸಾಮಾನ್ಯ ಕೂಲಿಯು ೩೦ ರೂಪಾಯಿಗಿಂತ ಹೆಚ್ಚಾಗಿದೆ. ಸಾಮಾನ್ಯವಾಗಿ, ಮಹಿಳೆಯರ ಕೂಲಿಯು ಪುರುಷರ ಕೂಲಿಗಿಂತ (೨೦ ರಿಂದ ೩೦ ರೂಪಾಯಿಗಳ ಒಳಗೆ) ಕಡಿಮೆ ಇರುತ್ತದೆ. ಮಕ್ಕಳಿಗೆ ಮತ್ತು ಮಹಿಳೆಯರಿಗೆ ನೀಡಲಾಗುವ ಕೂಲಿಯ ದರ ಬೇರೆ ಬೇರೆ ಇದೆ. ವಿಶೇಷವೆಂದರೆ ೧೯೯೪-೯೫ರಲ್ಲಿ ದಿನಗೂಲಿಯು ಸ್ವಲ್ಪ ಮಟ್ಟಿಗೆ ಹೆಚ್ಚಳ ವಾಗಿದೆ ಎಂದು ಕೆಲವು ಕೂಲಿ ಕೆಲಸಗಾರರು ತಿಳಿಸುತ್ತಾರೆ.

ವಾರ್ಷಿಕ ಗುತ್ತಿಗೆ ಕೂಲಿಯ (ಜೀತ)[2] ಮತ್ತೊಂದು ಮಾದರಿ. ಒಂದು ನಿರ್ದಿಷ್ಟ ಅವಧಿಯವರೆಗೆ ಸೇವೆ ಮಾಡುವ ಅಥವಾ ದುಡಿಯುವ ಮಾದರಿ. ಸಾಮಾನ್ಯವಾಗಿ ಒಂದು ವರ್ಷಕ್ಕೆ ನಿರ್ದಿಷ್ಟ ವಾರ್ಷಿಕ ಕೂಲಿಯನ್ನು ನೀಡಲಾಗುತ್ತದೆ. ಅದೇನೆ ಇದ್ದರೂ, ವಾರ್ಷಿಕ ಕೂಲಿ ಕೆಲಸಗಾರ ಮತ್ತು ದಿನಗೂಲಿ ಕೆಲಸಗಾರರು ಎರಡು ಒಂದೇ ಅಲ್ಲ. ಇಂತಹ ವಾರ್ಷಿಕ ಸೇವಕರನ್ನು ಯಾರಿಗೆ, ವರ್ಷವಿಡಿ ಒಬ್ಬ ವ್ಯಕ್ತಿಯ ಸಹಾಯದ ಅವಶ್ಯಕತೆ ಇರುವ ಸಾಗುವಳಿದಾರರಲ್ಲಿ, ವಿಶೇಷವಾಗಿ ಲಂಬಾಣೇತರರಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಇದಕ್ಕೆ ಹಲವಾರು ಕಾರಣಗಳಿವೆ. ಬಹುಶಃ ದೊಡ್ಡ ಪ್ರಮಾಣದ ಭೂ ಹಿಡುವಳಿದಾರರಾಗಿರುವುದು, ಕುಟುಂಬದ ಸದಸ್ಯ ಕೆಲಸಗಾರರು ಸಾಗುವಳಿಗೆ ಸಾಕಾಗದಿರುವುದು ಅಥವಾ ತೀವ್ರ ಪ್ರಮಾಣದಲ್ಲಿ ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಂಡಿರುವುದು, ಹೆಚ್ಚುವರಿ ಕೆಲಸಗಾರರ ಅವಶ್ಯಕತೆ. ಪ್ರಾಯಶಃ ಕುಟುಂಬದಲ್ಲಿ ಯಾರು ಸಾಗುವಳಿ ಮಾಡಲು ಬರದಿರುವುದು (ವಿಧವೆಯರು); ಭೂ ಮಾಲಿಕರು ಇತ್ತೀಚಿಗೆ

---

೨ *ಸಕ್ಸೇನಾ ಅವರು ಮಧ್ಯ ಭಾರತದ ಕೆಲವು ಬುಡಕಟ್ಟುಗಳಲ್ಲಿ ಪುರುಷರು ಜೀತ ಮಾದರಿಯಲ್ಲಿ ದುಡಿಯುತ್ತಿರುವುದನ್ನು ಗುರುತಿಸಿದ್ದಾರೆ. (೧೯೬೪ : ೧೪೮).*

ಸಾಗುವಳಿ ಚಟುವಟಿಕೆಯನ್ನು ಮಾಡದಿರುವುದು. ಆದರೆ ೧೯೭೦ರ ಸರಕಾರದ 'ಉಳುವವನಿಗೆ ಭೂಮಿ' ಅಥವಾ 'ಉಳಿವವನೆ ಭೂ ಮಾಲೀಕ' ಕಾಯ್ದೆಗೆ ಅಂಜಿಕೊಂಡು ಅಥವಾ ಹೆದರಿಕೊಂಡು ಸ್ವಯಂ ಸಾಗುವಳಿ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರಲು, ಗೇಣಿ ನೀಡದೆ ಭೂಮಿಯನ್ನು, ತಮ್ಮ ಹಿಡಿತದಲ್ಲಿ ಇಟ್ಟುಕೊಂಡು ರಕ್ಷಣೆ ಮಾಡಲು ಅನೇಕರು ಇಂದು ವಾರ್ಷಿಕ ಕೂಲಿ ಆಧಾರದಲ್ಲಿ ವಾರ್ಷಿಕ ಕೂಲಿ ಕೆಲಸಗಾರನ್ನು ಇಟ್ಟುಕೊಂಡಿದ್ದಾರೆ.

ಇಂಥ ಕೆಲಸದಾಳುಗಳು (ಜೀತದಾಳು) ಮನೆಯ ಯಜಮಾನ ಮತ್ತು ಇತರ ಸದಸ್ಯರು ಸೂಚಿಸುವ ಎಲ್ಲಾ ಕೆಲಸಗಳನ್ನು ಮಾಡುತ್ತಾರೆ ಮತ್ತು ಇವರನ್ನು ಮನೆ ಸದಸ್ಯರ ರೀತಿಯಲ್ಲಿಯೇ ನೋಡಿಕೊಳ್ಳಲಾಗುತ್ತದೆ. ಸಾಂಪ್ರದಾಯಿಕವಾಗಿ ವಾರ್ಷಿಕ ಗುತ್ತಿಗೆಯು ಹಿಂದುಗಳ ಹೊಸವರ್ಷದ ದಿನದಂದು ಪ್ರಾರಂಭವಾಗುತ್ತದೆ. ಈ ದಿನಚರಿಯು ಕೃಷಿ ಕೆಲಸದ ಗತಿಯಂತೆ ಇಂದು ಕೂಡ ಬದಲಾವಣೆ ಹೊಂದುತ್ತಿದ್ದು, ಇತ್ತೀಚೆಗೆ ಈ ಸಾಂಪ್ರದಾಯಿಕತೆಯು ಸ್ವಲ್ಪ ಬದಲಾವಣೆಗಳನ್ನು ಕಾಣುತ್ತಿವೆ. ವಾರ್ಷಿಕ ಕೆಲಸದಾಳುಗಳು ಹೆಚ್ಚಿನ ಹಣವನ್ನು ಯಜಮಾನನಿಂದ ಸಾಲವಾಗಿ ಪಡೆದಿದ್ದರೆ, ಅದನ್ನು ಹಿಂದಿರುಗಿಸದೆ ಸಾಲದ ಹಣ ಮುಗಿಯುವವರೆಗೆ ಸೇವೆ ಮಾಡಬೇಕಾಗುತ್ತದೆ. ಮಕ್ಕಳು ಕೂಡ ಇಂತಹ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅವುಗಳೆಂದರೆ ಜಾನುವಾರುಗಳನ್ನು ನೋಡಿಕೊಳ್ಳುವುದು ಮತ್ತು ಕೃಷಿ ಸಾಗುವಳಿಯಲ್ಲಿ ತೊಡಗಿರುವವರಿಗೆ ಸಹಾಯ ಮಾಡುವುದು ಇತ್ಯಾದಿ. ಆದರೆ ಮಹಿಳೆಯರು ಮಾತ್ರ ವಾರ್ಷಿಕ ಕೂಲಿಗೆ ಇರುವುದು ಕಂಡು ಬರುವುದಿಲ್ಲ. ಸ್ವಲ್ಪ ಮಟ್ಟಿಗೆ ಸಣ್ಣ ವಯಸ್ಸಿನ ಬಾಲಕಿಯರು ಮಾತ್ರ (ಪ್ರಾಯದ ವಯಸಿಗೆ ಬರುವವರೆಗೆ) ವಾರ್ಷಿಕ ಕೂಲಿಗಾಗಿ ದುಡಿಯುತ್ತಿರುವಂಥ ಹಲವು ನಿದರ್ಶನಗಳಿವೆ. ಮರಿಯಮ್ಮನಹಳ್ಳಿ ತಾಂಡದ ೨೯ ಕುಟುಂಬಗಳಿಂದ ಬಂದ ೩೯ ಜನರು ಮತ್ತು ನಾಗಲಾಪುರ ತಾಂಡದ ೧೪ ಕುಟುಂಬಗಳಿಂದ ೨೦ ಜನರು ಲಂಬಾಣೇತರ ಸಾಗುವಳಿದಾರರ ಬಳಿ, ೧೯೯೭ ಮತ್ತು ೧೯೯೯ ನಡುವೆ ವಾರ್ಷಿಕ ಕೂಲಿ ಮಾದರಿಯಲ್ಲಿ ಕೆಲಸಗಾರರಾಗಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ವಯಸ್ಕಾದವರು, ಹೆಚ್ಚಿನ ಆರ್ಥಿಕ ಬಿಕ್ಕಟಿನ ಒತ್ತಡ ಇಲ್ಲದೇ ಇಂಥ ಕೆಲಸ ಮಾಡಲು ಆಸಕ್ತಿ ಪಡುವುದಿಲ್ಲ. ಏಕೆಂದರೆ ಹಗಲು ಮತ್ತು ರಾತ್ರಿ ಯಜಮಾನ ಮನೆಯಲ್ಲಿಯೇ ಇರುವುದು ಕೆಲಸಗಾರರ ವೈವಾಹಿಕ ಜೀವನಕ್ಕೆ ತೊಂದರೆಯಾಗುವುದು. ಹೆಚ್ಚಾಗಿ ೨೨ ವರ್ಷದ ಒಳಗಿನ ಗಂಡು ಮಕ್ಕಳನ್ನು ಇಂಥ ಸೇವೆಗೆ ತೆಗೆದುಕೊಳ್ಳಲಾಗುತ್ತದೆ. ವಾಸ್ತವಿಕವಾಗಿ, ಇದು ಆಕಸ್ಮಿಕವಾಗಿ ಸಂಭವಿಸುವ ಘಟನೆಗಳಿಗೆ ಹಣವನ್ನು ನೀಡುವ ಮತ್ತು ತೆಗೆದುಕೊಳ್ಳುವ ಮೂಲ ದಾರಿಯಾಗಿದೆ ಹಾಗೂ ಅಂಥ ವ್ಯವಸ್ಥೆಯಲ್ಲಿ ಇರುವ ಕೆಲಸಗಾರರು ಅಥವಾ ಸೇವಕರನ್ನು 'ಸಾಲದಾರರು' ಎಂದು ಕರೆಯುತ್ತಾರೆ. ಆಕಲ್ಪಿತವಾಗಿ 'ಜೀತ' ಪದವನ್ನು ಒರಟಾಗಿ ಉಪಯೋಗಿಸಲಾಗಿದೆ. ಆದರೆ ಎರಡು ಪ್ರತ್ಯೇಕ ಮಾದರಿ ಕೆಲಸ ಅಥವಾ ಕೂಲಿ ಪದ್ಧತಿ ಇವೆ. ೧. ವಾರ್ಷಿಕ ಗುತ್ತಿಗೆ ಮತ್ತು ೨. ಗುಲಾಮಗಿರಿ ಅಥವಾ ದಾಸ್ಯದಲ್ಲಿ ಇರುವ ಕೆಲಸಗಾರರು. ಕೆಲವು ಪರಿಸ್ಥಿತಿಗಳಲ್ಲಿ, ಕೆಲವು ಜನರು ಕೊಟ್ಟಿರುವ ಒಟ್ಟು ಮೊತ್ತದ ಹಣಕ್ಕೆ ದುಡಿಯುವ ಬದಲಾಗಿ, ಅದನ್ನು ಹಿಂದಿರುಗಿಸುವವರೆಗೆ ಬಡ್ಡಿ ಹಣಕ್ಕಾಗಿ ದುಡಿಯುತ್ತಿರುವುದೂ ಕೂಡ ಇದೆ. ಭಾರತದ ಸಂವಿಧಾನದಲ್ಲಿ ಗುಲಾಮಗಿರಿ ಪದ್ಧತಿಗೆ ನಿಷೇಧವಿದ್ದರೂ ಈ ವ್ಯವಸ್ಥೆ ಹಿಂದಿನಿಂದಲೂ ಅಳಿಯದೆ ಉಳಿದುಕೊಂಡಿರುವುದು ಇಂದು ಕೂಡ ಕರ್ನಾಟಕದ ಅನೇಕ ಭಾಗಗಳಲ್ಲಿ ಇರುವುದು ತಿಳಿಯುತ್ತದೆ. ಹಿಂದುಳಿದ ಜಾತಿ ಹಾಗೂ ವರ್ಗಗಳಿಗೆ ಸೇರಿದ ಜನರನ್ನು ಗುಲಾಮಗಿರಿ ವ್ಯವಸ್ಥೆಗೆ ಉಪಯೋಗಿಸಲಾಗಿದೆ. ಅಧ್ಯಯನಕ್ಕೆ ಒಳಪಡಿಸಿದ ತಾಂಡಗಳಲ್ಲಿ ಯಾವುದೇ ಪರಿಸ್ಥಿತಿಯಲ್ಲಿಯು ಗುಲಾಮಗಿರಿ ವ್ಯವಸ್ಥೆಯಲ್ಲಿ ದುಡಿಯುತ್ತಿರುವುದು ಕಂಡುಬರುವುದಿಲ್ಲ.

ಲಂಬಾಣಿಗಳು ನಗದನ್ನು ಉಳಿಸಿ, ಭೂಮಿಯನ್ನು ಕೊಂಡುಕೊಳ್ಳುವ ಅಥವಾ ಮನೆ ಕಟ್ಟುವ ಉದ್ದೇಶದಿಂದ ವಾರ್ಷಿಕ ಗುತ್ತಿಗೆ ಆಧಾರದಲ್ಲಿ ಕೆಲಸ ಮಾಡುತ್ತಿದ್ದಾರೆ. ಅನೇಕ ಮಕ್ಕಳು ವಾರ್ಷಿಕ ಕೂಲಿಗೆ ಸೇವಕರಾಗಿ ಕೆಲಸ ಮಾಡುತ್ತಿದ್ದಾರೆ. ಭವಿಷ್ಯದಲ್ಲಿ ಅವರ ಜೀವನ ಮಟ್ಟ ಸುಧಾರಿಸಲಿ ಎಂಬ ದೃಷ್ಟಿಯಿಂದ ಕೆಲವು ಪೋಷಕರು ಮಕ್ಕಳನ್ನು ಶಾಲೆಗಳಿಗೂ ಕಳುಹಿಸುತ್ತಿದ್ದಾರೆ. ಕೆಲವು ಆಕಸ್ಮಿಕ ಸಂದರ್ಭಗಳಲ್ಲಿ ಪೋಷಕರು ಮತ್ತು ಇತರರು ಇವರಿಗೆ ತೊಡಕುಂಟು ಮಾಡುತ್ತಿದ್ದಾರೆ. ಹೀಗೆ ಸಾಂಪ್ರದಾಯಿಕ ವೃತ್ತಿ ಅಭ್ಯಾಸವು ಅಳಿಯದೇ ಉಳಿದಿರುವುದಕ್ಕೆ ಇದೂ ಒಂದು ಉದಾಹರಣೆಯಾಗಿದೆ. ಬಡತನ ಮತ್ತು ಸಾಲದ ಋಣ ಸಾಮಾಜಿಕ-ಆರ್ಥಿಕ ಅಭಿವೃದ್ಧಿಗೆ ಅಡ್ಡಿ ಆತಂಕಗಳನ್ನು ಉಂಟು ಮಾಡುತ್ತಿರುವ ಅಂಶಗಳಲ್ಲಿ ಪ್ರಮುಖವಾದುವು.

ಇತರ ಸಮುದಾಯದ ಜನರು ಕೂಡ ವಾರ್ಷಿಕ ಕೂಲಿ ಗುತ್ತಿಗೆಯ ಆಧಾರದಲ್ಲಿ ಕೆಲಸ ಮಾಡುತ್ತಿದ್ದಾರೆ. ಸಾಮಾನ್ಯವಾಗಿ ಕೆಳ ಜಾತಿಯ ಕುಟುಂಬದಲ್ಲಿ ವಾರ್ಷಿಕ ಗುತ್ತಿಗೆ ಆಧಾರದಲ್ಲಿ ಕೆಲಸ ಮಾಡುವುದು ಇಂದೂ ಕೂಡ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಕೆಲವು ಬದಲಾವಣೆಗಳಿಂದ ಈ ಪದ್ಧತಿ ಹೆಚ್ಚಾಗಿ ಹೊರಭಾಗಕ್ಕೆ ಕಂಡುಬರುವುದಿಲ್ಲ. ವಾರ್ಷಿಕ ಸಂಬಳದ ಹೊರತಾಗಿ (೧೫೦೦ ರಿಂದ ೪೦೦೦) ವಾರ್ಷಿಕ ಕೂಲಿ ಕೆಲಸಗಾರರಿಗೆ, ಆಹಾರ, ಬಟ್ಟೆ, ವಾಸಕ್ಕೆ ಸ್ಥಳ ಅಥವಾ ವಸತಿ ಮತ್ತು ಇತರ ಜೀವನದ ಅವಶ್ಯಕ ಸೌಲಭ್ಯಗಳನ್ನು ನೀಡುತ್ತಾರೆ. ಕೆಲಸಗಾರರಿಗೆ ಜೀವನದ ನಿರ್ವಹಣೆಗೆ ಅವಶ್ಯಕ ಸೌಲಭ್ಯಗಳನ್ನು ನೀಡದಿದ್ದರೆ ಹೆಚ್ಚಿನ ಕೂಲಿ (೪೫೦೦ ರಿಂದ ೬೦೦೦ದವರೆಗೆ ೧೯೯೪-೯೫ರಲ್ಲಿ) ನೀಡಬೇಕು. ಅಂಥ ವ್ಯವಸ್ಥೆಯನ್ನು 'ವನ ಜೀತ' ಎಂದು ಲಂಬಾಣಿಗಳು ಅವರ ಭಾಷೆಯಲ್ಲಿ ಕರೆಯುತ್ತಾರೆ.

ಯಜಮಾನ ಮತ್ತು ಸೇವಕನ ನಡುವಿನ ಕರ್ತವ್ಯ ಮತ್ತು ಒಪ್ಪಂದಗಳು ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದಿವೆ. ಯಜಮಾನ ಅಥವಾ ಕುಟುಂಬದ ಮುಖ್ಯಸ್ಥನನ್ನು, ಕೆಲಸಗಾರ ಅಥವಾ ಸೇವಕರನ್ನು ಕುಟುಂಬದ ಸದಸ್ಯರಂತೆ ನೋಡಿಕೊಳ್ಳಬೇಕು ಮತ್ತು ಆಗಾಗೆ ಉತ್ತಮನೆಂದು ಭಾವಿಸಿ ಅವನನ್ನು ಬಂಧುತ್ವದ ಸಂಬಂಧ ಪದವನ್ನು ಬಳಸಿ ಅವರನ್ನು ಕರೆಯುತ್ತಾರೆ. ಕೆಲವು ತಂದೆ ತಾಯಿ ಇಲ್ಲದ ಮಕ್ಕಳನ್ನು ಕೆಲಸಗಾರರನ್ನಾಗಿ ಸೇರಿಸಿಕೊಂಡು ಅನೇಕ ವರ್ಷಗಳಿಂದ ಒಂದೇ ಕುಟುಂಬದಲ್ಲಿ ದುಡಿಯುತ್ತಿದ್ದರೆ, ಅಂಥವರು, ಕೊನೆಗೆ ವಿವಾಹವಾಗಿ ನೆಲೆಗೊಳ್ಳಲು ಯಜಮಾನನ ಸಹಾಯ ಪಡೆದುಕೊಳ್ಳುತ್ತಾರೆ. ಆದರೂ ಈ ಆದರ್ಶದ ಆಚರಣೆಯಲ್ಲಿ ಲೋಪ ದೋಷ ಮತ್ತು ಉತ್ತಮ ಗುಣಗಳು - ಎರಡನ್ನೂ ಕಾಣಬಹುದು.

ಕೆಲವು ಪರಿಸ್ಥಿತಿಗಳಲ್ಲಿ ನಿರೀಕ್ಷೆಯ ಚೌಕಟ್ಟನ್ನು ಉಲ್ಲಂಘನೆ ಮಾಡುವ ಸಾಧ್ಯತೆಗಳಿವೆ. ಹುಡುಗರು ಸೋಮಾರಿಗಳು, ಸ್ವಲ್ಪದಿನಗಳ ನಂತರ ಮಧ್ಯೆ ಬಿಟ್ಟು ಓಡಿದ್ದಾರೆ, ಒಪ್ಪಂದಗಳ ಬಗೆ ಅಪ್ರಾಮಾಣಿಕರು ಎಂದು ಆರೋಪಿಸಿದಂಥ ಯಜಮಾನರ ಸಂಖ್ಯೆ ಕಡಿಮೆಯಿದೆ. ಅತಿಯಾದ ಕೆಲಸದ ಒತ್ತಡಭಾರವನ್ನು ತಡೆಯಲಾರದೆ ಅನೇಕ ಸೇವಕರು ಮನೆ ಬಿಟ್ಟು ಓಡಿಹೋಗಿರುವಂಥ ನಿದರ್ಶನಗಳೂ ಇವೆ. ೧೯೯೭ ವಾರ್ಷಿಕ ಕೂಲಿ ಕೆಲಸಗಾರರ ಸಂಖ್ಯೆಯನ್ನು ೧೯೯೯ರಲ್ಲಿ ಹೋಲಿಸಿದರೆ ನಿಧಾನವಾಗಿ ಕಡಿಮೆಯಾಗುತ್ತಿದೆ.

ಗುತ್ತಿಗೆ ಆಧಾರಿತ ಜೀತದ ಸಂಬಂಧಗಳು ಒಟ್ಟುಗೂಡುತ್ತ ಬೆಳೆದುದ್ದರ ಪರಿಣಾಮವಾಗಿ ಲಂಬಾಣಿಗಳು ರೈತರಿಂದ ಸ್ಪಷ್ಟವಾದ ತಿಳುವಳಿಕೆಯನ್ನು ಲಂಬಾಣಿ ಸೇವಕರಿಂದ ಅಥವಾ ಕೂಲಿಗಾರರಿಂದ ಪಡೆದುಕೊಂಡರು. ಸ್ವಲ್ಪಮಟ್ಟಿನ ಉಳಿತಾಯದಿಂದ ಭೂಮಿಯನ್ನು ಕೊಂಡುಕೊಂಡು ಕೊನೆಗೆ ಸ್ವತಂತ್ರವಾಗಿ ಸಾಗುವಳಿದಾರರಾದರು. ಇವುಗಳ ಪರಿಣಾಮವನ್ನು ಈ ಅಧ್ಯಾಯದ ಕೊನೆಯಲ್ಲಿ ಚರ್ಚಿಸಲಾಗಿದೆ.

ಲಂಬಾಣಿಗಳಿಗೆ ಬೇಟೆ ಮತ್ತು ಮೀನುಗಾರಿಕೆ ಪ್ರಮುಖ ಹವ್ಯಾಸಗಳಾಗಿವೆ. ಅಲೆಮಾರಿಗಳಾಗಿ ಸಣ್ಣಪುಟ್ಟ ವ್ಯಾಪಾರಿಗಳು ಮತ್ತು ಸಾಗಾಣಿಕೆದಾರರಾಗಿದ್ದ ಸಂದರ್ಭದಲ್ಲಿ, ಕಾಡು ಪ್ರಾಣಿಗಳ ಬೇಟೆಯು ಪ್ರಮುಖವಾದ ಆರ್ಥಿಕ ಕಸುಬಾಗಿರಲಿಲ್ಲ. ಆದರೆ ಲಂಬಾಣಿಗಳು ತಮ್ಮ ಸಾಂಪ್ರದಾಯಿಕ ವೃತ್ತಿಯಾದ ಸಾಗಾಣಿಕೆಯ ಚಟುವಟಿಕೆಗಳು ನಿಂತು ಹೋದ ನಂತರ, ಆಹಾರ ಸಂಗ್ರಹಣೆ ಮತ್ತು ಬೇಟೆಯಂತಹ ಚಟುವಟಿಕೆಗಳನ್ನು ಹೆಚ್ಚಾಗಿ ಅವಲಂಭಿಸಬೇಕಾಯಿತು. ಕುರುಚಲು ಗಿಡದಂತಹ ಕಾಡುಗಳಲ್ಲಿ ಬೇಟೆಯೂ ಪ್ರಾಮುಖ್ಯತೆ ಪಡೆಯಿತು. ಒಂದೇ ಸ್ಥಳದಲ್ಲಿ ನೆಲೆಗೊಂಡ ನಂತರ, ಕೂಲಿ ಆಧಾರದ ವೃತ್ತಿಗಳನ್ನು ಆಯ್ದುಕೊಂಡಿದ್ದರಿಂದ ಬೇಟೆಯ ಪ್ರಾಮುಖ್ಯತೆಯು ಮತ್ತೆ ಕಡಿಮೆಯಾಗತೊಡಗಿತು. ಈಗ ಬಹುಮಂದಿಗೆ ಬೇಟೆ ಒಂದು ಹವ್ಯಾಸವಾಗಿ ಮಾತ್ರ ಉಳಿದಿದೆ.

ದಿನನಿತ್ಯದ ಕೆಲಸದಿಂದ ಸ್ವಲ್ಪ ವಿಶ್ರಾಂತಿ ದೊರೆತ ಸಮಯದಲ್ಲಿ ಲಂಬಾಣಿಗಳು ಮೀನು ಹಿಡಿಯುವುದನ್ನು ಕೂಡ ಮಾಡುತ್ತಾರೆ. ಇವರು ನಳ್ಳಿ / ಏಡಿ, ಆಮೆ ಇತ್ಯಾದಿಗಳನ್ನು ಹಿಡಿದು ಸಂಗ್ರಹಿಸಿ ತಿನ್ನುತ್ತಾರೆ. ಹತ್ತಿರದಲ್ಲಿ ಹರಿಯುವ ನೀರಿನ ಹೊಳೆ, ತೊರೆ, ಅಥವಾ ನದಿ ಮತ್ತು ಕೆರೆಗಳಲ್ಲಿ ನೀರು ಬತ್ತುತ್ತಿರುವಾಗ ಮತ್ತು ಮಳೆಯಿಂದ ಮಣ್ಣು ಮಿಶ್ರಿತ ಹೊಸ ನೀರು ಹರಿಯುವ ಸಂದರ್ಭದಲ್ಲಿ ಮೀನು ಹಿಡಿಯುಲು ೪ ರಿಂದ ೫ ಜನ ತಂಡಗಳಾಗಿ ಹೋಗುತ್ತಾರೆ. ಅಸಹ್ಯಕರವಾದ ಕೆಸರು ಅಥವಾ ಕೊಳಚೆ ನೀರಿನಲ್ಲಿಯೂ ಮೀನು ಹಿಡಿಯುವುದು ಉಂಟು. ಈ ಪ್ರದೇಶದಲ್ಲಿ ಮೀನುಗಳು ನವೆಂಬರ್‌ನಿಂದ ಮಾರ್ಚ್, ಏಪ್ರಿಲ್ ತಿಂಗಳವರೆಗೆ ಹೆಚ್ಚಾಗಿ ಸಿಗುತ್ತವೆ. ಗದ್ದೆಯ ಬಯಲುಗಳಲ್ಲಿ ಸ್ವಲ್ಪ ಆಳವಾದ ಗುಂಡಿಯಲ್ಲಿ ನಿಂತ ನೀರಿನಲ್ಲಿ ಮೀನುಗಳು ಸಿಗುತ್ತವೆ. ಲಂಬಾಣಿಗಳು ಕಾಡು ಪ್ರಾಣಿಗಳಾದ ಜಿಂಕೆ, ಮೊಲ, ಇತ್ಯಾದಿ ಪ್ರಾಣಿಗಳನ್ನು ಹವ್ಯಾಸಕ್ಕಾಗಿ ಬೇಟೆಯಾಡುತ್ತಾರೆ. ಬೇಟೆ ಮತ್ತು ಮೀನುಗಾರಿಕೆ ಕೇವಲ ಆರ್ಥಿಕ ದೃಷ್ಟಿಯಿಂದ ಮಾತ್ರವಲ್ಲದೆ ದಿನನಿತ್ಯದ ಕೆಲಸದಿಂದ ಸ್ವಲ್ಪ ಮಟ್ಟಿನ ವಿಶ್ರಾಂತಿ ಮತ್ತು ಮನೋರಂಜನೆಗಳನ್ನು ಪಡೆಯುವ ಸಾಧನಗಳೂ ಆಗಿವೆ. ಆಗಾಗ ಕೆಲವರು ಪ್ರತಿನಿತ್ಯದ ಕೂಲಿ ಕೆಲಸವನ್ನು ಬಿಟ್ಟು ವಿಶ್ರಾಂತಿಯಂತೆ ಬೇಟೆ ಮತ್ತು ಮೀನು ಹಿಡಿಯುವ ತಂಡಗಳನ್ನು ಸೇರುತ್ತಾರೆ.

ಕರಕುಶಲ ಕೆಲಸಗಳಾದ ಕೈಯಿಂದ ಬಟ್ಟೆಗೆ ಸೂಜಿ ಮಾಡುವುದು, ಬುಟ್ಟಿ ಹೆಣೆಯುವುದು, ಮಡಿಕೆ ಮಾಡುವುದು ಇತ್ಯಾದಿ ಮತ್ತು ಸೇವಾ ಕೆಲಸಗಳಾದ ಕ್ಷೌರಿಕ ಕೆಲಸ, ಕಾವಲು ಕಾಯುವುದು, ಬಾಚುವ ಮತ್ತು ಬೀದಿಗುಡಿಸುವಂಥ ಕೆಲಸಗಳಲ್ಲಿ ಲಂಬಾಣಿಗಳು ತಮ್ಮನ್ನು ತೊಡಗಿಸಿಕೊಳ್ಳುವುದಿಲ್ಲ. ಈ ಎಲ್ಲಾ ಸೇವಾ ಅಗತ್ಯಗಳಿಗೆ ಲಂಬಾಣಿಗಳು ವಿಶಿಷ್ಟ ಪರಿಣತಿ ಹೊಂದಿದ ಸಾಂಪ್ರದಾಯಿಕ ಜಾತಿಯ ಗುಂಪಿನ ವ್ಯಕ್ತಿಗಳನ್ನು ಅಥವಾ ಕೈಗಾರಿಕೆಗಳಿಂದ ಉತ್ಪಾದನೆಯಾಗುವ ವಸ್ತುಗಳನ್ನು ಅವಲಂಬಿಸಿದ್ದಾರೆ. ಕೇವಲ ೬ ವ್ಯಕ್ತಿಗಳು ಮಾತ್ರ ಮರಿಯಮ್ಮನಹಳ್ಳಿ ತಾಂಡದಲ್ಲಿ ಬಡಗಿ ಮತ್ತು ಕಬ್ಬಿಣದ ಕೆಲಸ ಮಾಡುತ್ತಿದ್ದಾರೆ. ಕೇವಲ ಒಂದೇ ಕುಟುಂಬವು ಈ ವೃತ್ತಿಯನ್ನು ಪ್ರಾಥಮಿಕವಾಗಿ ಅವಲಂಬಿಸಿ, ವಾರ್ಷಿಕ ಕೂಲಿ (ಆಯಾ) ಆಧಾರದಲ್ಲಿ ಅಳವಡಿಸಿಕೊಂಡಿದೆ. ನಾಗಲಾಪುರ ತಾಂಡದಲ್ಲಿ ೩ ಜನರು ಈ ಕೆಲಸವನ್ನು ತಮ್ಮ ಅವಶ್ಯಕತೆ ಮತ್ತು ಅಗತ್ಯಗಳನ್ನು ಪೂರೈಸಿಕೊಳ್ಳುವ ಉದ್ದೇಶಕ್ಕಾಗಿ ಮಾಡುತ್ತಾರೆ. ಆದರೆ ಯಾರೂ ಇದನ್ನು ವೃತ್ತಿಯನ್ನಾಗಿ ಪರಿಗಣಿಸಿ ಅಭ್ಯಾಸ ಮಾಡುತ್ತಿರುವುದು ಕಾಣುವುದಿಲ್ಲ. ಬಡಗಿ ಕರಕುಶಲತೆಯನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಸಮುದಾಯದ ಅಭಿವೃದ್ಧಿ ಕಾರ್ಯಕ್ರಮದ ಕೆಳಗೆ ಕೆಲವು ಲಂಬಾಣಿ ಕುಟುಂಬಗಳಿಗೆ ಬಡಗಿ ಕೆಲಸದ ಉಪಕರಣಗಳನ್ನು ಉಚಿತವಾಗಿ ನೀಡಲಾಗಿದೆ.

ಅಧ್ಯಯನಕ್ಕೆ ಒಳಪಡಿಸಿದ ಎರಡು ತಾಂಡದ ಲಂಬಾಣಿಗಳಿಗೆ ಸರ್ಕಾರಿ ಸೇವೆ ಅಥವಾ ನೌಕರಿ ಪ್ರಮುಖವಾದ ಆರ್ಥಿಕ ಮೂಲವಾಗಿಲ್ಲ. ಆರ್ಥಿಕ ಆದಾಯ ತರುವ ವೃತ್ತಿ ಅಥವಾ ನೌಕರಿಗಳೂ ಕೂಡ ಹೆಚ್ಚಿನವರಿಗೆ ದೊರೆತಿಲ್ಲ. ಮರಿಯಮ್ಮನಹಳ್ಳಿ ತಾಂಡದಲ್ಲಿ ೯ ಜನರು ಸರ್ಕಾರಿ ನೌಕರಿಯಲ್ಲಿ ಇದ್ದರೆ, ಇಬ್ಬರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದಾರೆ. ಅರಣ್ಯ ಇಲಾಖೆಯಲ್ಲಿ ಇಬ್ಬರು ಕಾವಲುಗಾರರಾಗಿದ್ದಾರೆ. ಭೂ ದಾಖಲಾತಿ ಇಲಾಖೆಯಲ್ಲಿ ಒಬ್ಬರು ಕಾರಕೂನರಾಗಿದ್ದಾರೆ. ಕಂದಾಯ ಇಲಾಖೆಯಲ್ಲಿ ಒಬ್ಬರು ಹಿರಿಯ ಸಹಾಯಕರಾಗಿದ್ದಾರೆ. ಮೂರು ಜನರು ಪೋಲಿಸ್ ಇಲಾಖೆಯಲ್ಲಿ ಪೋಲಿಸ್ ಪೇದೆಗಳಾಗಿದ್ದಾರೆ. ನಾಗಲಾಪುರ ತಾಂಡದಲ್ಲಿ ಒಬ್ಬರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದಾರೆ. ಒಬ್ಬರು ಪೋಲಿಸ್ ಪೇದೆಯಾಗಿದ್ದಾರೆ. ಒಬ್ಬರು ತಾಲ್ಲೂಕ್ ಪಂಚಾಯಿತಿ ಕಛೇರಿಯಲ್ಲಿ ಕಾರಕೂನರಾಗಿ ಕೆಲಸ ಮಾಡುತ್ತಿದ್ದಾರೆ. (ಈ ಮೂರು ಜನರೂ ಪ್ರಾಥಮಿಕ ಶಾಲಾ ಶಿಕ್ಷಕರೊಬ್ಬರ ಮಕ್ಕಳು). ಆರ್ಥಿಕ-ಸಾಮಾಜಿಕ ಪರಿಣಾಮ ಮತ್ತು ಆಧುನಿಕ ಉಪವೃತ್ತಿಗಳ ಪ್ರಭಾವ, ಅಧ್ಯಯನ ನಡೆಸಿದ ಎರಡು ತಾಂಡದ ಲಂಬಾಣಿಗಳ ಮೇಲೆ ನಿರ್ಲಕ್ಷಿಸಬಹುದಾದ ರೀತಿ ಇದೆ. ಏಕೆಂದರೆ ಅತ್ಯಂತ ಕಳಪೆ ಮಟ್ಟದಲ್ಲಿ ಶಾಲೆಯನ್ನು ತಾಂಡಗಳಲ್ಲಿ ನಡೆಸುತ್ತಿರುವುದು ಮತ್ತು ಲಂಬಾಣಿಗಳಲ್ಲಿ ಮಕ್ಕಳನ್ನು ಶಾಲೆಗೆ ಕಳುಹಿಸುವುದಕ್ಕೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳಿರುವುದರ ಅತ್ಯಂತ ಕಡಿಮೆ ಸಂಖ್ಯೆಯ ಜನರು ಸರ್ಕಾರಿ ನೌಕರಿಗೆ ಹೋಗಿರುವುದು ತಿಳಿಯುತ್ತದೆ.

## ಹಂಚಿಕೆ ಮತ್ತು ವಿನಿಮಯ

ಲಂಬಾಣಿಗಳ ಜೀವನಾಧಾರದ ಆರ್ಥಿಕತೆಯು ಸ್ವಯಂ ಪರಿಪೂರ್ಣವಾದುದಲ್ಲ ಮತ್ತು ಇವರು ಸಾಂಪ್ರದಾಯಿಕ ಸಾಗಾಣಿಕೆ, ಸಣ್ಣಪುಟ್ಟ ವ್ಯಾಪಾರ ಮಾಡಿಕೊಂಡು ಅಲೆಮಾರಿಗಳಾಗಿ ಜೀವನ ನಡೆಸುತ್ತಿದ್ದಾಗಲೂ ಇದು ಸಾಧ್ಯವಾಗಿಲ್ಲ. ಬೇರೆ ಜಾತಿ ಗುಂಪುಗಳಂತೆ, ಈ ಪ್ರದೇಶದಲ್ಲಿ ಲಂಬಾಣಿಗಳು ಇತರ ಜನರ ಜೊತೆ ಮಾರುಕಟ್ಟೆಯ ವಿನಿಮಯದಲ್ಲಿ ಒಂದು ಭಾಗವಾಗಿದ್ದಾರೆ. ಆದರೂ ನಾವು ಇವರ ಮೂಲ ಆರ್ಥಿಕತೆಯಲ್ಲಿ ಅನ್ಯೋನ್ಯತೆ ಮತ್ತು ಮರು ಹಂಚಿಕೆಯು ಇನ್ನೂ ಇರುವುದನ್ನು ಗುರುತಿಸಬಹುದು. ಲಂಬಾಣಿಗಳು ಉತ್ಪಾದನೆಯಲ್ಲಿ ನಾಲ್ಕು ಮಾದರಿಯ ಹಂಚಿಕೆಯನ್ನು ಹೊಂದಿದ್ದಾರೆ. ಪರಸ್ಪರ ಅನ್ಯೋನ್ಯತೆಯ ಸಂಗ್ರಹಣೆ ಮತ್ತು ಮರು ಹಂಚಿಕೆಯನ್ನು ರಾಜಕೀಯ, ಧಾರ್ಮಿಕ ಮತ್ತು ಸಾಂಪ್ರದಾಯಿಕ ಆಚರಣೆಯ ಸಂಕಲ್ಪದಿಂದ ಮಾಡುತ್ತಾರೆ. ಬೇರೆ ಸ್ಥಳಗಳಲ್ಲಿ ಮಾರುಕಟ್ಟೆಯಿಂದ ಹೊರಗೆ ಅನೌಪಚಾರಿಕ ಮಾರುಕಟ್ಟೆ ವಿನಿಮಯ ಮತ್ತು ಮಾರುಕಟ್ಟೆಯ ಸ್ಥಳದಲ್ಲಿ ಔಪಚಾರಿಕ ಮಾರುಕಟ್ಟೆಯ ವಿನಿಮಯ ನಡೆಸುತ್ತಾರೆ. ಇವರ ವಿನಿಮಯ ಮತ್ತು ಹಂಚಿಕೆಯ ಪದ್ಧತಿಯು ಸಾಂಪ್ರದಾಯಿಕ ಮಾದರಿಗಳಲ್ಲಿ ಮತ್ತು ಆಧುನಿಕ ಮಾರುಕಟ್ಟೆ ವಿನಿಮಯ ಎರಡು ಮಾದರಿಗಳ ಸಂಮಿಶ್ರದಂತಿದೆ. ಇದನ್ನು ಮುಂದಿನ ಚರ್ಚೆಯಿಂದ ಸಾದರಪಡಿಸಬಹುದು.

ಲಂಬಾಣಿಗಳಲ್ಲಿ ಇರುವ ಪರಸ್ಪರ ಕೊಟ್ಟು ತೆಗೆದುಕೊಳ್ಳುವ ವ್ಯವಸ್ಥೆಯು ಎರಡು ಬಗೆಗಳಲ್ಲಿ ಪ್ರಚಲಿತದಲ್ಲಿದೆ. ಅವುಗಳೆಂದರೆ, ಸಮತೋಲನದ ಅನ್ಯೋನ್ಯತೆ ಮತ್ತು ಸಾಮಾನ್ಯ ಅನ್ಯೋನ್ಯತೆ (ಒಟ್ಟರ್‌ಬೀನ್, ೧೯೭೨:೨೮). ರೈತರು ನೇರ ವಿನಿಮಯದ ಮೂಲಕ ವಸ್ತುಗಳು ಮತ್ತು ಸೇವೆಗಳಿಗೆ ಒಂದೇ ಪ್ರಮಾಣದ ಮೌಲ್ಯದಿಂದ ನಿಗದಿಪಡಿಸಿದ ಸಮಯದಲ್ಲಿ ವಿನಿಮಯ ಮಾಡಿಕೊಳ್ಳುತ್ತಾರೆ. ಲಂಬಾಣಿಗಳಲ್ಲಿ ಉಡುಗೊರೆ ಅಥವಾ ಕೊಡುಗೆ ಸಾಮಾನ್ಯ. ಆದರೆ ಲಂಬಾಣಿ ಮತ್ತು ಲಂಬಾಣೇತರರ ನಡುವೆ ಇದು ಸ್ವಲ್ಪಮಟ್ಟಿಗೆ ಕಡಿಮೆ ಇದೆ. ಉಡುಗೊರೆಯನ್ನು ಸ್ವೀಕರಿಸಿದವರು, ನೀಡಿದ ಉಡುಗೊರೆಯನ್ನು ಹೋಲುವ ಅಥವಾ ಅದಕ್ಕಿಂತಲೂ ಹೆಚ್ಚಿನ ಮೌಲ್ಯದ ಉಡುಗೊರೆಯನ್ನು ನಿರ್ದಿಷ್ಟ ಸಮಯದ ಒಳಗೆ ನೀಡುವುದು ಸಾಂಪ್ರದಾಯಿಕವಾಗಿ ಅವಶ್ಯ ಕೂಡ. ಉಡುಗೊರೆ ನೀಡುವುದು ಮತ್ತು

ಸ್ವೀಕರಿಸುವ ಒಪ್ಪಂದಕ್ಕೆ ಅಂಟಿಕೊಳ್ಳಲೇ ಬೇಕು ಎಂದೇನಿಲ್ಲ. ಉಡುಗೊರೆಗಳ ಮೂಲಕ ಸಾಮಾಜಿಕ ಸಂಬಂಧಗಳನ್ನು ಅನುಭವಿಸುವುದು ಮತ್ತು ನೋಡಿಕೊಳ್ಳುವುದು ಕೊನೆಯಲ್ಲಿ ಅವಲಂಬಿತವಾಗಿರುತ್ತದೆ. ಆದುದರಿಂದ ಲಂಬಾಣಿಗಳು ಹೆಚ್ಚಿನ ಸಮಯದಲ್ಲಿ ಬಂಡವಾಳದ ಅಭಾವವನ್ನು ಅನುಭವಿಸಿದರೂ ಅವರು ಉಡುಗೊರೆ ನೀಡುವ ಮತ್ತು ಸ್ವೀಕರಿಸುವ ಕ್ರಿಯೆಗಳನ್ನು ಸಾಮಾಜಿಕ ಒಪ್ಪಂದ ಪೂರೈಸುವ ಉದ್ದೇಶದಿಂದ ಮಾಡುತ್ತಿದ್ದಾರೆ. 7/9/2010.

## ಪರಸ್ಪರ ಕೊಟ್ಟು ತೆಗೆದುಕೊಳ್ಳುವ ಪ್ರಕ್ರಿಯೆಗಳು, ಆದಾಯ ಮತ್ತು ವೆಚ್ಚ

**ಶಿಶುಜನನ :** ಮಗು ಹುಟ್ಟಿದ ಸಮಯದಲ್ಲಿ, ತಾಯಿಯ ಸಂಬಂಧದ ಹಿರಿಯರು (ಮಗುವಿನ ಅಜ್ಜ, ಅಜ್ಜಿ) ಮತ್ತು ತಂದೆಯ ಕಡೆಯಿಂದ, ಮಗುವಿನ ಅತ್ತೆಯರು ಹೊಸ ಬಟ್ಟೆ ಮತ್ತು ಆಭರಣದ ಉಡುಗೊರೆಯನ್ನು ಕೊಡುತ್ತಾರೆ. ಉಡುಗೊರೆಗೆ ಪೂರಕವಾದಂತೆ ಮಗುವಿನ ತಾಯಿಯು ಅಥವಾ ಮಗುವಿನ ಕುಟುಂಬದ ಇತರ ಸದಸ್ಯರು ವಿಶೇಷ ಊಟೋಪಚಾರ ತಯಾರಿಸುತ್ತಾರೆ. ಉಡುಗೊರೆ ನೀಡುವುದು, ತಪ್ಪಿಹೋದ ಸಂದರ್ಭದಲ್ಲಿ ಸ್ವಲ್ಪ ಬಿಗಿಯಾದ ಅಥವಾ ಸಂಬಂಧದಲ್ಲಿನ ಒಡಕು ವಾತಾವರಣವನ್ನು ಸೂಚಿಸುತ್ತದೆ. ಗಂಡು ಮಗುವಿನ ಜನನವನ್ನು ಡೋಲು ಬಡಿಯುವ ಮೂಲಕ ಪ್ರಸಾರ ಮಾಡುತ್ತಾರೆ ಮತ್ತು ಇದು ವಿಶೇಷ ಸಂತೋಷದ ಸಂದರ್ಭ. ಮಗುವಿನ ತಂದೆಯು ಹತ್ತಿರದ ಸಂಬಂಧಿಕರಿಗೆ ಬಂದು ಬಳಗವನ್ನು ಉಲ್ಲಾಸಗೊಳಿಸಲು, ಚಹಾ ಕೂಟವನ್ನು ಏರ್ಪಡಿಸುತ್ತಾನೆ. ಇದೇ ಸಂದರ್ಭದಲ್ಲಿ ಒಟ್ಟಿಗೆ ಸೇರಿದ ಪ್ರತಿಯೊಬ್ಬ ಅತಿಥಿಗಯೂ ಸಾಂಪ್ರದಾಯಿಕವಾಗಿ ೧ ರೂಪಾಯಿಯಿಂದ ೫ ರೂಪಾಯಿಯವರೆಗೆ ಉಡುಗೊರೆ ನೀಡುವುದು ವಾಡಿಕೆ. ಈ ಸಂದರ್ಭದಲ್ಲಿ ಉಡುಗೊರೆಯಿಂದ ಒಟ್ಟುಗೂಡಿದ ಹಣದಿಂದ ಮಗುವಿನ ತಂದೆಯು ಬೆಲ್ಲ ಮತ್ತು ಕೊಬ್ಬರಿಯನ್ನು ಮಗುವಿಗೆ ಹೆಸರನ್ನು ಇಡಲು ಸೇರಿದ ಮಹಿಳೆಯರಿಗೆ ಹಂಚಲು ಕೊಂಡುಕೊಂಡು ಬರುತ್ತಾನೆ. ಪೂರ್ಣ ಚಂದ್ರ ಬರುವ ಅಥವಾ ಇರುವ ಫಾಲ್ಗುಣ ಮಾಸದಂದು (ಹೋಳಿ - ಹುಣ್ಣಿಮೆ) ತಂದೆಯು ಸಮುದಾಯದ ಜನರಿಗೆ ಸಿಹಿ ಒಳಗೊಂಡ ಔತಣ ಕೂಟಕ್ಕೆ, ತಾಂಡದ ಪ್ರತಿಯೊಂದು ಕುಟುಂಬದಿಂದ ಕೊನೆಯ ಪಕ್ಷ ಒಬ್ಬರನ್ನಾದರೂ ಆಮಂತ್ರಣ ಮಾಡುತ್ತಾನೆ. ಸಾಮಾನ್ಯವಾಗಿ ಎಲ್ಲಾ ಕುಟುಂಬಗಳೂ ಗಂಡು ಮಗುವಿನ ಜನನವಾದ ಒಂದು ವರ್ಷದ ಒಳಗೆ ಇಂಥ ಸವಿಯೂಟವನ್ನು ನೀಡುತ್ತಾರೆ. ಇದನ್ನು 'ಡೋಂಡ್' ಎಂದು ಕರೆಯುತ್ತಾರೆ. ಇದು ಕುಟುಂಬದ ಕುಲ ದೇವತೆಗಳಿಗೆ ಅಭಿನಂದನೆ ಅಥವಾ ಗೌರವದಿಂದ ಪೂಜೆ ಸಲ್ಲಿಸುವ ಸಮಾರಂಭವೂ ಕೂಡ ಆಗಿರುತ್ತದೆ. ಈ ಸಂದರ್ಭವನ್ನು 'ಕಲ್ಪರು' ಎಂದು ಕರೆಯುತ್ತಾರೆ. ಈ ಆಚರಣೆಯ ನಂತರವೇ ಹೊಸದಾಗಿ ಹುಟ್ಟಿರುವ ಮಗುವನ್ನು ನಂಬಿಕೆಯಿಂದ ಸಮುದಾಯಕ್ಕೆ ಸೇರಿಸಿಕೊಳ್ಳಲಾಗುತ್ತದೆ. ಈ ಸಮಾರಂಭದಲ್ಲಿ ಭಾಗಿಯಾಗುವ ಅಥವಾ ಆಮಂತ್ರಿಸಲಾದ ಪ್ರತಿಯೊಬ್ಬ ಅತಿಥಿಯು ಮಗುವಿಗೆ ಹೊಸ ಬಟ್ಟೆ ಅಥವಾ ಆಭರಣಗಳು ಅಥವಾ ಹಣವನ್ನು ಉಡುಗೊರೆಯಾಗಿ ನೀಡುತ್ತಾರೆ. ಈ ರೀತಿಯ ಸಮಾರಂಭಗಳಿಗೆ ಸರಿಸುಮಾರು ೧೦೦೦ ರೂಪಾಯಿಂದ ೨೦೦೦ ರೂಪಾಯಿಗಳ ವೆಚ್ಚ ತಗಲುತ್ತದೆ. ಇವರಲ್ಲಿ ಅತ್ಯಂತ ಬಡತನದಲ್ಲಿ ಇರುವವರು, 'ಕಲ್ಪರು' ಸವಿಯೂಟವನ್ನು ನೀಡಲು ಸಾಧ್ಯವೇ ಇಲ್ಲದವರು ಕಡೆಯ ಪಕ್ಷ ಬೆಲ್ಲ ಮತ್ತು ಕೊಬ್ಬರಿಯನ್ನು ಈ ಆಚರಣೆಗೆ ಬರುವ ಮಹಿಳೆಯರಿಗೆ ಹಂಚುತ್ತಾರೆ. ಲಂಬಾಣಿಗಳಲ್ಲಿ ಪಿತೃಪ್ರಧಾನ ವ್ಯವಸ್ಥೆ ಇರುವುದರಿಂದ ಗಂಡು ಮಗುವಿನ

ಜನನಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಾರೆ. ಅದೇ ಹೆಣ್ಣು ಮಗುವಿನ ಜನನಕ್ಕೆ ಸಾಂಪ್ರದಾಯಿಕವಾಗಿ ಹೆಚ್ಚಿನ ಪ್ರಾಮುಖ್ಯತೆ ನೀಡುವುದಿಲ್ಲ.

ಸೀಮಂತ (ಗರ್ಭಿಣಿಯರಿಗೆ ಮೊದಲ ಗರ್ಭಧಾರಣೆಯಲ್ಲಿ ಮಾಡುವ ಸಾಂಪ್ರದಾಯಿಕ ಆಚರಣೆ)ವನ್ನು ಗರ್ಭಿಣಿಗೆ ೫ ಅಥವಾ ೭ನೇ ತಿಂಗಳಿನಲ್ಲಿ ಬೇರೆ ಬೇರೆ ಸಮುದಾಯಗಳಲ್ಲಿ ಮಾಡುತ್ತಾರೆ. ಈ ಆಚರಣೆಯ ಸಂದರ್ಭದಲ್ಲಿ ಗರ್ಭಿಣಿಯಾದ ಮಹಿಳೆಯ ತಂದೆ ತಾಯಿಯರು, ಹೊಸ ಬಟ್ಟೆ ಮತ್ತು ವಿಶೇಷ ತಿಂಡಿ ತಿನಿಸುಗಳನ್ನು ನೀಡುತ್ತಾರೆ. ಲಂಬಾಣಿಗಳ ಸಾಂಪ್ರದಾಯಿಕ ರೂಢಿಯ ಪ್ರಕಾರ ಮೊದಲ ಹೆರಿಗೆ ಗಂಡನ ಮನೆಯಲ್ಲಿಯೆ ಅಥವಾ ಗಂಡ ವಾಸಿಸುವ ಸ್ಥಳದಲ್ಲಿ ನಡೆಯಬೇಕು. ಮೊದಲನೇ ಮಗುವಿನ ಹೆರಿಗೆಯ ನಂತರ ಆ ಮಹಿಳೆಯು ಅವರ ತಾಯಿಯ ಮನೆಗೆ ಮಗುವನ್ನು ತೋರಿಸಲು ಹೋಗುತ್ತಾಳೆ. ಆ ಸಂದರ್ಭದಲ್ಲಿ ಅವಳಿಗೆ ಮತ್ತು ಮಗುವಿಗೆ (ಮಗುವಿನ ಅಜ್ಜ- ಅಜ್ಜಿ) ಉಡುಗೊರೆಯಾಗಿ ಹೊಸ ಬಟ್ಟೆ ನೀಡುತ್ತಾರೆ. ಈ ಸಾಂಪ್ರದಾಯಿಕ ಆಚರಣೆಗೆ ಸುಮಾರು ೫೦೦ರಿಂದ ೧೦೦೦ ರೂಪಾಯಿಗಳ ವೆಚ್ಚ ತಗುಲುತ್ತದೆ. ಗಂಡು ಮಕ್ಕಳು ಇಲ್ಲದೇ ಇರುವವರು, ಗಂಡು ಮಗುವನ್ನು ದತ್ತು ಸ್ವೀಕಾರ ಮಾಡುತ್ತಾರೆ. ಈ ಸಮಾರಂಭಕ್ಕೆ ಸುಮಾರು ೫೦೦ ರಿಂದ ೧೦೦೦ ರೂಪಾಯಿಗಳ ವೆಚ್ಚ ಬರಬಹುದು. ದತ್ತು ಸ್ವೀಕಾರ ಸಮಾರಂಭದ ಭೋಜನದ ನಂತರ, ಅತಿಥಿಗಳು ಹೊಸ ಬಟ್ಟೆ ಅಥವಾ ಹಣವನ್ನು ದತ್ತು ಸ್ವೀಕರಿಸಿದ ತಂದೆ ತಾಯಿಗಳಿಗೆ ಉಡುಗೊರೆಯಾಗಿ ನೀಡುತ್ತಾರೆ.

ಮಗುವಿಗೆ ಮೊದಲಬಾರಿ ತಲೆಕೂದಲನ್ನು ತೆಗೆಸುವ (ಚೌಳ) ಮುಂಡನ ಮಾಡಿಸುವ ವಿಶೇಷ ಧಾರ್ಮಿಕ ಸಮಾರಂಭಗಳಲ್ಲಿ, ರಾಥೋಡ್, ಚವಾಣ್, ಮತ್ತು ಪವಾರ್ ಗೋತ್ರದವರು ಬಾಲಾಜಿ ಎಂಬ ದೇವರನ್ನು ಪೂಜಿಸುವ ಸಂದರ್ಭದಲ್ಲಿ ಸಿಹಿ ಒಳಗೊಂಡ ಊಟಣಕೂಟವನ್ನು ಮಾಡಿದ್ದರೆ, ವಡಾತ್ಯ ಗೋತ್ರದವರು 'ಕನ್‌ಕಲಿ' ಎಂಬ ದೇವತೆಗೆ ಮೇಕೆಯ ಬಲಿ ಅಥವಾ ಆಹುತಿ ನೀಡಿ ಊಟಣ ಕೂಟ ಏರ್ಪಡಿಸುತ್ತಾರೆ. ಕೆಲವರು ಅದನ್ನು ತುಂಡು ತುಂಡಾಗಿ ಕತ್ತರಿಸಿ ಅತಿಥಿಗಳ ಒಳಗೆ ಹಂಚಿಕೊಳ್ಳುವರು. ಇಂತಹ ಸಮಾರಂಭಗಳಿಗೆ ೧೫೦೦ ರೂಪಾಯಿಯಿಂದ ೨೫೦೦ ರೂಪಾಯಿಗಳಿಗೂ ಹೆಚ್ಚು ವೆಚ್ಚ ತಗಲುತ್ತದೆ.

ವಿವಾಹ : ಪ್ರತಿಯೊಂದು ವಿವಾಹವು ಒಂದೇ ಕುಲದ ಅಥವಾ ಗೋತ್ರದಲ್ಲಿ ವೈವಾಹಿಕ ಬಾಂಧವ್ಯದ ಸಂಬಂಧವನ್ನು ಹುಟ್ಟು ಹಾಕುತ್ತದೆ. ಇಂಥಹ ಸಂಬಂಧಗಳು ಉಡುಗೊರೆ ಮತ್ತು ಪ್ರತಿ ಉಡುಗೊರೆ ನೀಡುವ ಮೂಲಕ ಏರ್ಪಡುತ್ತವೆ. ಅಲ್ಲದೆ ಇದು ಆರ್ಥಿಕ ವ್ಯವಸ್ಥೆಯಲ್ಲಿ ಒಂದಕ್ಕೊಂದು ಹೆಣೆದುಕೊಂಡಿದೆ. ಕೆಲವು ಉಡುಗೊರೆಗಳು ರೂಢಿ ಸಂಸ್ಕಾರ ಸಂಬಂಧವಾಗಿ ಮತ್ತು ಸಾಂಪ್ರದಾಯಿಕ ಆಚರಣೆಯಿಂದ ಕೂಡಿ, ವೈವಾಹಿಕ ಬಾಂಧವ್ಯದ ವಿಸ್ತರಣೆಗಳಾಗಿವೆ. ಲಂಬಾಣಿಗಳು ವಧುದಕ್ಷಿಣೆಯನ್ನು ಹೆಣ್ಣಿನ ತಂದೆ ತಾಯಿಗಳಿಗೆ ಅಥವಾ ಪೋಷಕರಿಗೆ ನೀಡಬೇಕು. ಸಾಂಪ್ರದಾಯಿಕವಾಗಿ ವಧು-ದಕ್ಷಿಣೆಯು ೫೧, ೬೧, ೮೧, ೧೦೧ (ರೂಪಾಯಿಗಳಲ್ಲಿ) ಹೀಗೆ ನೀಡಲ್ಪಡುತ್ತದೆ. ಇದು ವಧುದಕ್ಷಿಣೆ ನೀಡುವ ಮತ್ತು ತೆಗೆದುಕೊಳ್ಳುವ ಕುಲ ಅಥವಾ ವಂಶವನ್ನು ಅವಲಂಬಿಸಿದೆ. (ಕುಲಗಳು ಮೇಲು ಮತ್ತು ಕೀಳು ಎಂದು ಗಣನೆಗೆ ತೆಗೆದುಕೊಳ್ಳುವುದು ಕೇವಲ ವಿವಾಹದ ಉದ್ದೇಶಕ್ಕಾಗಿ ಮಾತ್ರ). ಅಧ್ಯಯನ ಮಾಡಿದ ಸಮಯದಲ್ಲಿ ಜಾತ್‌ಬೀಸ್ ಕುಲ (ಚವಾಣ್ ಮತ್ತು ಪವಾರ್)ದವರು ವಡಾತ್ಯ ಕುಲದ ವಧುವಿಗೆ ೫೧ ರೂಪಾಯಿಗಳನ್ನು ವಧುದಕ್ಷಿಣೆಯಾಗಿ ನೀಡಿದರೆ, ವಡಾತ್ಯ ಕುಲದವರು ಜಾತ್‌ಬೀಸ್ ಕುಲದ ವಧುವಿಗೆ ೬೧ ರೂಪಾಯಿಗಳ ವಧು ದಕ್ಷಿಣೆ ನೀಡುತ್ತಿದ್ದಾರೆ. ಅದಲ್ಲದೆ ವಿವಿಧ ಮಾದರಿ ವಿವಾಹಗಳಿಗೆ ಬೇರೆ ಬೇರೆ ಮೊತ್ತದ ಹಣದ ಅವಶ್ಯಕತೆ ಇದೆ. ಗಂಡು ಮತ್ತು ಹೆಣ್ಣುಗಳ ಪಲಾಯನದ ನಂತರದ ಘಟನೆಗಳಿಗೆ ವಧು -

ದಕ್ಷಿಣೆ + ೧೫೦ ರೂಪಾಯಿಗಳ ದಂಡವನ್ನು ಜಾತಿ ಪಂಚಾಯತಿಗೆ ನೀಡಬೇಕು. ಇದಕ್ಕೆ ಸಂಚಾಲಕನಾಗಿ ಕೆಲಸ ಮಾಡುವ ವ್ಯಕ್ತಿ ಕೂಡ ೫೦ ರೂಪಾಯಿ ದಂಡ ವಿಧಿಸಬಹುದು. ವಿಧವಾ ಪುನರ್‌ವಿವಾಹದಲ್ಲಿ; ಹೆಣ್ಣು / ಹೆಣ್ಣಿನ ಕಡೆಯುವರು, ಸಾಂಪ್ರದಾಯಿಕವಾಗಿ ೧೫೦ ರೂಪಾಯಿಗಳನ್ನು ಮರಣ ಹೊಂದಿದ ಗಂಡನ ಕುಟುಂಬದವರಿಗೆ ನೀಡಬೇಕು ಮತ್ತು ಜಾತಿ ಪಂಚಾಯತಿಗೆ ೨೫ ರೂಪಾಯಿ ಶುಲ್ಕ ನೀಡಬೇಕು. ವಿವಾಹ ವಿಚ್ಛೇದಿತ ಮಹಿಳೆ ಪುನರ್‌ವಿವಾಹವಾಗಬೇಕಾದರೆ, ಮೊದಲನೇ ಗಂಡನಿಗೆ ಸಾಂಪ್ರದಾಯಿಕವಾಗಿ ೧೫೦ ರೂಪಾಯಿಗಳ ಪರಿಹಾರ ನೀಡಬೇಕು ಮತ್ತು ಜಾತಿ ಪಂಚಾಯಿತಿಗೆ ೨೫ ರಿಂದ ೫೦ ರೂಪಾಯಿಗಳವರೆಗೆ ದಂಡ/ಶುಲ್ಕ ನೀಡಬೇಕು. ಆದರೆ ಪರಿಹಾರದ ಮೊತ್ತ ಇತ್ತೀಚೆಗೆ ೫೦೦ ರೂಪಾಯಿಗಳಿಗೆ ಬದಲಾಗಿದೆ. ವಿಧುರರು ಅವಿವಾಹಿತ ಮಹಿಳೆಯನ್ನು ಪುನರ್‌ವಿವಾಹವಾಗಬೇಕಾದರೆ ಸಾಂಪ್ರದಾಯಿಕವಾಗಿ ೨೫೦ ರೂಪಾಯಿ ವಧುದಕ್ಷಿಣೆ ನೀಡಬೇಕು.

ಲಂಬಾಣಿಗಳು ಇತರೆ ಜಾತಿ ಗುಂಪುಗಳ ಸಾಂಪ್ರದಾಯಿಕ ಆಚರಣೆಗಳನ್ನು ಅಳವಡಿಸಿಕೊಂಡಿದ್ದಾರೆ. ಕೆಲವು ಸ್ಥಿತಿವಂತ ಲಂಬಾಣಿಗಳು ವಧುವಿನ ತಂದೆ ತಾಯಿಗಳಿಂದ ವರದಕ್ಷಿಣೆ ತೆಗೆದುಕೊಳ್ಳುತ್ತಿದ್ದಾರೆ. ೫೦೦೦ರಿಂದ ೧ ಲಕ್ಷ ರೂಪಾಯಿಗಳವರೆಗೆ, ಸಾಮಾನ್ಯವಾಗಿ ಮದುಮಗ ಸರ್ಕಾರಿ ಸೇವೆ ಅಥವಾ ಆಧುನಿಕ ವೃತ್ತಿಗಳಲ್ಲಿ ತೊಡಗಿರುವವರು ಹೆಚ್ಚಿನ ಪ್ರಮಾಣದ ವರದಕ್ಷಿಣೆಯನ್ನು ನಿರೀಕ್ಷಿಸುತ್ತಿದ್ದಾರೆ. ಆರ್ಥಿಕವಾಗಿ ಹಿಂದುಳಿದಿರುವ ಲಂಬಾಣಿಗಳ ಆರ್ಥಿಕ ಪರಿಸ್ಥಿತಿಯಲ್ಲಿ ವರದಕ್ಷಿಣೆ, ಇತ್ಯಾದಿ ಧಾರ್ಮಿಕ ಸಾಂಪ್ರದಾಯಿಕ ಆಚರಣೆಗಳ ಕಾರಣದಿಂದಾಗಿ ಮತ್ತಷ್ಟು ತೊಡಕಾಗುತ್ತದೆ. ಆದರೆ ಇವರು ಪ್ರಯತ್ನಪೂರ್ವಕವಾಗಿ ಉನ್ನತ ಸಾಮಾಜಿಕ ಆರ್ಥಿಕ ಸ್ಥಾನ ಗಳಿಸಿಕೊಳ್ಳಲು, ಸಾಂಪ್ರದಾಯಿಕ ಆಚರಣೆಗಳಿಂದ ಉಂಟಾಗುತ್ತಿರುವ ಆರ್ಥಿಕ ನಷ್ಟವನ್ನು ಎದುರಿಸಲು ಸಿದ್ಧರಿದ್ದಾರೆ.

ವಧುದಕ್ಷಿಣೆಯ ಜೊತೆಗೆ ವರನ ಕುಟುಂಬವು ವಧುವಿಗೆ ಮದುವೆಯ ಬಟ್ಟೆ ಮತ್ತು ಸಾಂಕೇತಿಕವಾಗಿ ಪ್ರಮುಖವಾದ ಆಭರಣಗಳನ್ನು ನೀಡಬೇಕು. ಲಂಬಾಣಿಗಳಲ್ಲಿ ವಧು-ಸೇವಾ ಆಚರಣೆಯು ಹೆಚ್ಚು ಪ್ರಾಧಾನ್ಯವುಳ್ಳದಾಗಿದೆ. ವರನ ತಂದೆ ಅಥವಾ ಕುಟುಂಬದವರು ವಧುದಕ್ಷಿಣೆ ಮತ್ತು ಇತರೆ ಉಡುಗೊರೆಗಳನ್ನು ನೀಡಲು ಸಾಧ್ಯವಾಗದಿದ್ದರೆ, ಸಾಂಪ್ರದಾಯಿಕವಾಗಿ ವರನನ್ನು ವಿವಾಹ ಸಂದರ್ಭದಲ್ಲಿ ನೀಡಬೇಕಾದ ಹಣಕ್ಕೆ ಬದಲಾಗಿ ಭವಿಷ್ಯದಲ್ಲಿ ಎರಡರಿಂದ ಮೂರು ವರ್ಷ ಮಾವನ ಸೇವೆಯನ್ನು ಮಾಡಬೇಕು (ನಾಗಲಾಪುರ ತಾಂಡದಲ್ಲಿ ೨ ಮತ್ತು ಮರಿಯಮ್ಮನಹಳ್ಳಿ ತಾಂಡದಲ್ಲಿ ೫ ಇಂತಹ ಘಟನೆಗಳನ್ನು ಗುರುತಿಸಿದ್ದೇವೆ).

ಲಂಬಾಣಿಗಳು ವಿವಾಹವನ್ನು ಸಾಂಪ್ರದಾಯಿಕವಾಗಿ ಬಹುಕಾಲದಿಂದಲೂ ವಧುವಿನ ಮನೆಯಲ್ಲಿ ನಡೆಸುತ್ತಾರೆ. ವರನು ವೈವಾಹಿಕ ಆಚರಣೆಗಳಿಗೆ ವಧುವಿನ ಮನೆಗೆ ಹೋಗುವುದು ಅವಶ್ಯ. ವಿವಾಹಕ್ಕೆ ಹೊರಡುವ ಹಿಂದಿನ ದಿನ ವರನ ಕುಟುಂಬದವರು ಸಾಮಾನ್ಯವಾಗಿ ತಾಂಡದವರೆಲ್ಲರಿಗೂ ಮತ್ತು ಹತ್ತಿರದ ಬಂಧುಗಳಿಗೆ ಸವಿಯೂಟ ನೀಡುತ್ತಾರೆ. ಇದಕ್ಕೆ ಸುಮಾರು ೧೫೦೦ ರಿಂದ ೨೫೦೦ ರೂಪಾಯಿಗಳಿಗೂ ಹೆಚ್ಚಿನ ವೆಚ್ಚ ತಗುಲುತ್ತದೆ. ವಿವಾಹ ನಿಶ್ಚಯವಾದ ಹುಡುಗನಿಗೆ ತಾಂಡದ ಪ್ರತಿಯೊಂದು ಕುಟುಂಬವು ೫ ರಿಂದ ೧೦ ರೂಪಾಯಿಗಳ ಹಣದ ಉಡುಗೊರೆ ನೀಡುವ ಮೂಲಕ ಸಂತೋಷ ಸಮಾರಂಭಕ್ಕೆ ಸಹಾಯ ಮಾಡುತ್ತಾರೆ. ವಿವಾಹದಂತಹ ವಿಶೇಷ ಸಂದರ್ಭಗಳಲ್ಲಿ ಲಂಬಾಣೇತರ ಸ್ನೇಹಿತರೂ ಸಹ ವರ ಅಥವಾ ವಧುವಿಗೆ ಉಡುಗೊರೆಯನ್ನು ಹಣದ ರೂಪದಲ್ಲಿ ನೀಡುತ್ತಾರೆ. ಇದಕ್ಕೆ ಪ್ರತಿಯಾಗಿ, ಲಂಬಾಣಿಗಳು ಇತರೆ ಸಮುದಾಯದ ಸ್ನೇಹಿತರ ವಿವಾಹಗಳಿಗೆ ಹೋದಾಗ ಇವರು ಕೂಡ ಹಣದ ರೂಪದಲ್ಲಿ ಉಡುಗೊರೆ ನೀಡುತ್ತಾರೆ.

ಮದುವೆಯ ನಂತರ ಹುಡುಗಿ (ವಧು) ಗಂಡನ ಮನೆಗೆ ಹೋಗುವ ಸಂದರ್ಭದಲ್ಲಿ ತಾಂಡದ ಪ್ರತಿಯೊಂದು ಕುಟುಂಬದವರು ೧ರಿಂದ ೧೦ ರೂಪಾಯಿಗಳವರೆಗೆ ಹಣವನ್ನು ಉಡುಗೊರೆಯಾಗಿ ನೀಡುತ್ತಾರೆ. ವಧುವಿನ ತಂದೆ ತಾಯಿಗಳು ನಾಲ್ಕು ಜೊತೆ ಹೊಸ ಬಟ್ಟೆಗಳನ್ನು, ಸ್ವಲ್ಪ ಆಭರಣಗಳನ್ನು ಒಂದು ಮರದ ಅಥವಾ ಕಬ್ಬಿಣದ (ತಗಡಿನ) ಪೆಟ್ಟಿಗೆ ಹಾಗೂ ಒಂದು ಹಸುವನ್ನು ಸಂಪ್ರದಾಯಿಕವಾಗಿ ಮಗಳಿಗೆ ಉಡುಗೊರೆಯಾಗಿ ನೀಡುತ್ತಾರೆ. ವಿವಾಹದ ನಂತರ ಇವೆಲ್ಲವುಗಳಿಗೆ ಕಡಿಮೆ ಎಂದರೂ ೨೫೦೦ದಿಂದ ೫೦೦೦ ರೂಪಾಯಿಗಳವರೆಗೆ ಖರ್ಚು ಬರುತ್ತದೆ. ಹಾಗೆಯೇ ಹುಡುಗಿಯ ಹತ್ತಿರದ ಬಂಧು ಬಳಗದವರು, ವಿಶೇಷವಾಗಿ ಸೋದರ ಮಾವಂದಿರು ಮತ್ತು ಸೋದರತ್ತೆಯರು ಹಾಗೂ ತಂದೆಯ ಸಹೋದರರು ಮತ್ತು ತಾಯಿಯ ಸಹೋದರರು ಕೂಡ ಆಭರಣದ ರೂಪದಲ್ಲಿ ಅಥವಾ ಹೊಸ ಬಟ್ಟೆಯ ರೂಪದಲ್ಲಿ ಉಡುಗೊರೆಯನ್ನು ನೀಡುತ್ತಾರೆ. ತಾಯಿಯ ಮನೆಯಿಂದ ಸಾಂಪ್ರದಾಯಿಕವಾದ ಉಡುಗೊರೆಗಳನ್ನು ತೆಗೆದುಕೊಂಡು ಹೋಗದೆ ಇದ್ದರೆ, ಹೊಸದಾಗಿ ಮದುವೆಯಾದ ಹುಡುಗಿ ತನ್ನ ಗಂಡನ ಮನೆಯಲ್ಲಿ ತಾತ್ಸಾರ ಭಾವನೆಯಿಂದ ಕಡೆಗಣಿಸುತ್ತಾರೆ ಎಂದು ಕೆಲವು ಹಿರಿಯರು ಹೇಳುತ್ತಾರೆ.

ಶವಸಂಸ್ಕಾರ : ಹೆಣ ಸುಡುವ ಅಥವಾ ಹೂಳುವುದನ್ನು (ಶವ ಸಂಸ್ಕಾರದ ಮಾದರಿಗಳು ಮರಣ ಹೊಂದಿದ ಪ್ರಕಾರವನ್ನು ಅವಲಂಬಿಸಿವೆ-ನೋಡಿ ಅಧ್ಯಾಯ-೩). ಶವ ಸಂಸ್ಕಾರಕ್ಕೆ ಬಂದಿದ್ದ ಬಂಧುಗಳು ಮತ್ತು ನೆರೆಹೊರೆಯವರು ನಿರ್ಧರಿಸುತ್ತಾರೆ. ತಂದೆ, ಮಗ, ತಮ್ಮ ಅಥವಾ ಗಂಡ ಅಥವಾ ಪರಿಸ್ಥಿತಿಗೆ ತಕ್ಕಂತೆ ಮರಣ ಹೊಂದಿದ ವ್ಯಕ್ತಿಯ ಕುಟುಂಬದವರು ಶವ ಸಂಸ್ಕಾರಕ್ಕೆ ಸಹಾಯ ಮಾಡಲು ಬಂದಿದ್ದವರಿಗೆ ಚಹಾ / ಕಾಫಿ / ಶರಬತ್ತು ಇತ್ಯಾದಿಗಳನ್ನು ೫ ರಿಂದ ೧೦ ಸಲ (ಶವ ಸಂಸ್ಕಾರ ಮುಗಿಯುವವರೆಗೆ) ನೀಡಬೇಕು. ವ್ಯಕ್ತಿ ಸತ್ತ ಮರುದಿವಸ ಮರಣ ಹೊಂದಿದವರಿಗೆ ಉತ್ತರಾಧಿಕ್ರಿಯೆಯ ಆಚರಣೆಯ ದಿನದಂದು ಶವ ಸಂಸ್ಕಾರ ಮಾಡಿದ ಸ್ಥಳಕ್ಕೆ ಹೋಗಿ ಪೂಜೆಮಾಡಿ ಬಂದನಂತರ ಸಿಹಿ ಊಟವನ್ನು (ಮಾದಲಿ) ಮಧ್ಯಾಹ್ನದ ರೂಢಿ ಆಚರಣೆಗೆ ಬಂದಿದ್ದ ಸಂಬಂಧಿಗಳೆಲ್ಲರೂ ಸೇರಿ ಹಂಚಿಕೊಂಡು, ಸಾಮಾನ್ಯವಾಗಿ ತಾಂಡದ ಸ್ವಲ್ಪ ಹೊರಗಿರುವ ಮರದ ಕೆಳಗೆ ಮಾಡುತ್ತಾರೆ. ಊಟದ ನಂತರ ಸೇರಿದವರೆಲ್ಲರು (ಕನಿಷ್ಠ ೨೫ ಪೈಸೆಯಿಂದ ೧೦ ರೂಪಾಯಿಗಳವರೆಗೆ) ಕೊಡುಗೆ ನೀಡಿ ಶೋಕಿಸುತ್ತಿರುವ ಕುಟುಂಬದ ಸಂಜೆಯ ಊಟದ ತಯಾರಿಗೆ ಬೇಕಾಗುವ ಕಿರಾಣಿ ಸಾಮಾನುಗಳಿಗೆ ಕೊಡುಗೆಯಾಗಿ ನೀಡುತ್ತಾರೆ. ೩ನೇ ದಿನದ ಉತ್ತರಾಧಿಕ್ರಿಯೆ ಧಾರ್ಮಿಕ ವಿಧಿ ಆಚರಣೆಯು ಬಹಳ ವೆಚ್ಚದಾಯಕ ಆಚರಣೆಯಾಗಿದೆ (ಸುಮಾರು ೨೫೦೦ ದಿಂದ ೫೦೦೦). ಆ ದಿನದಂದು ಒಂದು ಅಥವಾ ಎರಡು, ಆಡು ಕುರಿಗಳನ್ನು ಕಡಿದು ಬಂದ ಎಲ್ಲಾ ಅತಿಥಿಗಳಿಗೆ ಮತ್ತು ತಾಂಡದಲ್ಲಿರುವ ಪ್ರತಿಯೊಂದು ಕುಟುಂಬದಿಂದ ಕನಿಷ್ಠ ಒಬ್ಬರಿಗೆ ಊಟ ನೀಡಲಾಗುತ್ತದೆ.

ಲಂಬಾಣಿಗಳು ಇಂತಹ (ಸವಿಯೂಟದ) ವೆಚ್ಚಗಳನ್ನು ಕಡಿಮೆ ಮಾಡುವುದಿಲ್ಲ. ಇವುಗಳು ಅವರ ಸಾಂಪ್ರದಾಯಿಕತೆಯ ಅಂಗಗಳಾಗಿವೆ ಮದುವೆ ಮತ್ತು ಶವ ಸಂಸ್ಕಾರದಂತಹ ಸಮಾರಂಭಗಳು ಭಾವನಾತ್ಮಕ ಅಂಶಗಳಿಂದ ತುಂಬಿದೆ ಮತ್ತು ಲಂಬಾಣಿಗಳು ಸಾಂಪ್ರದಾಯಿಕ ರೂಢಿ, ಆಚರಣೆಗಳನ್ನು ಪ್ರಬಲವಾಗಿ ನಂಬಿ ಅವುಗಳಿಗೆ ಸರಿಯಾಗಿ ನಡೆದುಕೊಂಡು ಖರ್ಚು ವೆಚ್ಚಗಳನ್ನು ಗಣನೆಗೆ ತೆಗೆದುಕೊಳ್ಳದೆ

ಭರಿಸುತ್ತಿದ್ದಾರೆ. ಇಂಥ ಸಾಂಪ್ರದಾಯಿಕ ಆಚರಣೆಗಳನ್ನು ಸಾಮಾಜಿಕ ಭಯವಿರುವುದರಿಂದ ಸಾರ್ವಜನಿಕ ಒಪ್ಪಿಗೆಗಾಗಿ ವಿಧಿಬದ್ಧವಾಗಿ ಮಾಡುತ್ತಾರೆ.

ಈ ಭಾಗದ ರೈತಾಪಿ ಸಮುದಾಯಗಳಲ್ಲಿ ಆಹಾರ ವಿನಿಮಯವು ಹಬ್ಬ, ವಿವಾಹ, ಶವಸಂಸ್ಕಾರ, ಇತ್ಯಾದಿ ಸಮಾರಂಭಗಳಲ್ಲಿ ಪರಸ್ಪರ ಆಮಂತ್ರಣದಿಂದ ಔತಣಗಳು ನಡೆಯುವುದು ಅತಿಸಾಮಾನ್ಯ. ಲಂಬಾಣಿಗಳು ಸಾಮಾನ್ಯವಾಗಿ ಇಂಥ ಸಮಾರಂಭಗಳಲ್ಲಿ ಆಹಾರ ವಿನಿಮಯ ಮಾಡಿಕೊಳ್ಳುವುದಿಲ್ಲ. ಆದರೆ ಅತಿಥಿಗಳಿಗೆ ಸಂಬಂಧಿಕರಿಗೆ ಮತ್ತು ಸ್ನೇಹಿತರಿಗೆ ಔತಣ ನೀಡುತ್ತಾರೆ. ಅತಿಥಿಗಳು ಸಮಾರಂಭಕ್ಕೆ ಅಥವಾ ಔತಣಕ್ಕೆ ಬರಲು ಆಗದೆ ಇದ್ದ ಸಂದರ್ಭದಲ್ಲಿ ಮಾತ್ರ ಅವರಿಗೆ ಆಹಾರವನ್ನು ಕಳುಹಿಸಿಕೊಡಲಾಗುತ್ತದೆ. ಲಂಬಾಣಿಗಳು ಸಮಾರಂಭಗಳಿಗೆ ಭೇಟಿ ನೀಡುವ ರಕ್ತ ಸಂಬಂಧಿಗಳಿಗೆ ಉತ್ತಮ ವಿಶೇಷ ಉಪಚಾರ ನೀಡುತ್ತಾರೆ ಮತ್ತು ಇಂತಹ ವಿಶೇಷ ಸಮಯಗಳು ಹೆಚ್ಚಾಗಿ ಕಂಡುಬರುತ್ತವೆ. ರಕ್ತ ಸಂಬಂಧಿಗಳು ಭೇಟಿ ನೀಡುವಾಗ ಸಾಮಾನ್ಯವಾಗಿ ಬೇಯಿಸಿದ ಆಹಾರವನ್ನು (ಎಣ್ಣೆಯಲ್ಲಿ ಬೇಯಿಸಿದ) ಜೊತೆಯಲ್ಲಿ ತರುತ್ತಾರೆ. ಲಂಬಾಣಿಗಳು ತಮ್ಮ ರಕ್ತ ಸಂಬಂಧಿಗಳು ಬರುವಾಗ ಬರಿ ಕೈಯಲ್ಲಿ ಬರುವುದಿಲ್ಲ ಎಂದೇ ಯೋಚಿಸುತ್ತಾರೆ. ಇಂಥ ಅತಿಥಿ ಉಪಚಾರಗಳು ಬಂಧು ಬಳಗ, ಸ್ನೇಹಿತರು ಮತ್ತು ನೆರೆ ಹೊರೆಯವರಿಗೆ, ಒಡಹುಟ್ಟಿದವರಿಗೆ ಹೆಚ್ಚುವರಿ ವೆಚ್ಚದ  ಮಾರ್ಗಗಳಾಗಿವೆ. ಹೀಗಿದ್ದರೂ ಉಪಚಾರಗಳು ಪರಸ್ಪರವಾಗಿವೆ ಮತ್ತು ಬಾಕಿ ಇದ್ದು ನಿಗದಿತ ಅಥವಾ ನಿರ್ದಿಷ್ಟ ಸಮಯದ ಒಳಗೆ ಪೂರ್ಣಗೊಳ್ಳದಿದ್ದರೆ ಅದನ್ನು ನಿರಾಕಾರ ಮಾಡಲಾಗುತ್ತದೆ. ಸಂವೇದನೆಯ ದೃಷ್ಟಿಯಿಂದ ಎಲ್ಲಾ ಮಾದರಿಯ ಸಾಂಪ್ರದಾಯಿಕ ಆಚರಣೆಯ ರೂಢಿ ವಿನಿಮಯಗಳು, ಉಡುಗೊರೆಯ ಮಾದರಿಯಲ್ಲಿ ಆಹಾರ ವಿನಿಮಯ, ಕೆಲಸಗಾರರ ವಿನಿಮಯ, ಇತ್ಯಾದಿಗಳು ಲಂಬಾಣಿಗಳಿಗೆ ಆರ್ಥಿಕ ನಷ್ಟ ಸಂಭವಿಸುವ ಪ್ರಕ್ರಿಯೆಗಳು. ಇಂಥ ಸಂಕೀರ್ಣವಾದ ಸಾಂಪ್ರದಾಯಿಕ ಆಚರಣೆಗಳನ್ನು ಅಳವಡಿಸಿಕೊಂಡಿರುವುದರಿಂದ, ಇಂದು ವಾಸ್ತವಿಕವಾಗಿ ಒಬ್ಬ ಲಂಬಾಣಿಯು ಉಳಿತಾಯವನ್ನು ಭವಿಷ್ಯದಲ್ಲಿ ನೀಡಬೇಕಾಗುವ ಉಡುಗೊರೆಗಾಗಿ ಮತ್ತು ಬೇರೆಯವರಿಗಾಗಿ ಕೆಲಸ ಮಾಡುತ್ತಿದ್ದಾನೆ.

ಇದರ ಜೊತೆಗೆ ಅನೌಪಚಾರಿಕ, ಅರಚಿತ ಕೆಲಸದ ಗುಂಪುಗಳು, ಆಗಾಗ ಹೆಚ್ಚು ಕಾರ್ಮಿಕ ಆಧಾರಿತ ಕೃಷಿಗೆ ಲಂಬಾಣಿಗಳು ಬಂಧುಗಳ ಮೂಲದಿಂದ ಮತ್ತು ನೆರೆಹೊರೆಯ ಸಹಾಯದಿಂದ ಅಥವಾ ಗುತ್ತಿಗೆ ನೀಡುವ ಮೂಲಕ (ಫಾಸ್ಟರ್ ೧೯೬೭)ಕೆಲಸಗಾರ ವಿನಿಮಯವನ್ನೂ ಒಳಗೊಂಡಿದೆ. ಇಂತಹ ಕೆಲಸಗಾರರ ವಿನಿಮಯಗಳು, ಕ್ರಮಬದ್ಧ ಅಥವಾ ಊರ್ಜಿತವಾಗುವುದು ರೂಢಿಗತ ಸಾಂಪ್ರದಾಯಿಕ ಕ್ರಿಯಾ ವಿಧಿಗಳನ್ನು ಹಾಗೂ ಸಮಾರಂಭಗಳನ್ನು ಆಚರಿಸುವ ಮೂಲಕ. ಅವುಗಳೆಂದರೆ, ಬೀಜ ಬಿತ್ತುವಾಗ ಹೊಲದ ಪೂಜೆ, ಭೂಮಿಗೆ ಅಥವಾ ಹೊಲಕ್ಕೆ ಒಕ್ಕಣೆ ಸಮಯದಲ್ಲಿ ಅಭಿನಂದನೆ ಅಥವಾ ಗೌರವ ಸಲ್ಲಿಸುವ ಪೂಜೆಯ ಸಂದರ್ಭಗಳಲ್ಲಿ ಕುಡಿಯುವುದು ಮತ್ತು ಸವಿಯೂಟದ ಸಮಾರಂಭಗಳನ್ನು ನಡೆಸುತ್ತಾರೆ. ಇಂತಹ ಆಹಾರ ಮತ್ತು ಮದ್ಯ ವಿನಿಮಯ ವಿಶೇಷ ಸಂದರ್ಭದಲ್ಲಾದರೂ, ಆರ್ಥಿಕ ದೃಷ್ಟಿಯಿಂದ ಇದು ಅಗತ್ಯವಿಲ್ಲ. ಸ್ನೇಹಿತರು, ನೆರೆಹೊರೆಯವರ ನಡುವೆ ಅಗತ್ಯ ಎಂದು ಭಾಸವಾದರೂ, ಅಂತಹ ಸಂಬಂಧಗಳು ಅರಚಿತವಾಗಿದೆ. ಕುಟುಂಬ ಮತ್ತು ಬಂಧುತ್ವದ ಗುಂಪುಗಳಲ್ಲಿ ಸ್ಪಷ್ಟ ವ್ಯತ್ಯಾಸ ಕಂಡು ಬರುತ್ತದೆ. ಆದರೆ

ಯಾವಕಡೆ ಸಂಬಂಧ ಎಂದು ಸ್ಪಷ್ಟವಾಗಿ ಗುರುತಿಸಿದ ತರುವಾಯ ಹೆಚ್ಚಿನ ಗಮನಕೊಡುವ ಅಗತ್ಯ ಮತ್ತು ಸ್ಥಿರವಾದ ಅಥವಾ ದೃಢವಾದ ಸುಧಾರಣೆಗಳನ್ನು ಇಂತಹ ಸಂಬಂಧದಲ್ಲಿ ತರಬೇಕಾಗಿದೆ. ಆದುದರಿಂದ ಲಂಬಾಣಿಗಳಲ್ಲಿ ಎಲ್ಲಾ ವಿಶೇಷ ಸಂದರ್ಭಗಳಲ್ಲಿ ಅಂತರ್ಗತವಾಗಿರುವ ಆಹಾರ ಮತ್ತು ಕುಡಿತವನ್ನು ಪರ್ಯಾಲೋಚಿಸಿ ಸುಧಾರಣೆಗಳನ್ನು ಮಾಡಬೇಕು. 'ಆಯಾ' (ಜಾಜಮಾನಿ) ಆರ್ಥಿಕ ಸಂಬಂಧವನ್ನು ಹೊಂದಿರುವವರಿಗೆ ಲಂಬಾಣಿಗಳು, ಆಹಾರದ ಉಡುಗೊರೆಯನ್ನು ಸರಾಗವಾಗಿ ಜಾತಿಯ ಶ್ರೇಣಿಯಲ್ಲಿ ವಿವಿಧ ಸ್ತರಗಳಲ್ಲಿರುವ ಜಾತಿಗಳಿಗೆ ನೀಡುತ್ತಾರೆ.

## ಸಾಂಪ್ರದಾಯಿಕ ಆರ್ಥಿಕ ಸಂಬಂಧಗಳು

ಮೊದಲೇ ನಿಶ್ಚಯಿಸಿಕೊಂಡ ಆರ್ಥಿಕ ಸಂಬಂಧಗಳು ಹಳ್ಳಿಯ ಮಟ್ಟದಲ್ಲಿ ಸಾಗುವಳಿದಾರರು ಮತ್ತು ಅನೇಕ ಕರಕುಶಲ ಕರ್ಮಿಗಳು ಮತ್ತು ಸೇವಾ ಜಾತಿಗಳ ನಡುವೆ ಪರಸ್ಪರ ಸಮತೋಲನದ ಅನ್ಯೋನ್ಯತೆಯು ಸಮಾವೇಶವಾಗಿವೆ. ಇಂತಹ ಸಂಬಂಧಗಳು ಗೊತ್ತುಮಾಡಿಕೊಂಡಿದ್ದಕ್ಕಿಂತಲೂ ಹೆಚ್ಚಾಗಿ ಪದೇ ಪದೇ ವಸ್ತು ವಿನಿಮಯ ಮತ್ತು ಮಾರುಕಟ್ಟೆ ವಿನಿಮಯದ ಗುಣಲಕ್ಷಣಗಳನ್ನು ಒಳಗೊಂಡಿದೆ. ಹೀಗಿರುವ ಸಂಬಂಧಗಳು ಬಹುಶಃ ಅಪ್ಪಟ ಆರ್ಥಿಕ ಸ್ವರೂಪದ್ದಾಗಿರಬಹುದು ಅಥವಾ ಅವುಗಳು ಸಾಮಾಜಿಕ ಮತ್ತು ರಾಜಕೀಯ ಸಂಬಂಧಗಳಿಗಿಂತ ಹೆಚ್ಚಿನದಾದ ಸಂಬಂಧಗಳನ್ನು ಒಳಗೊಂಡಿರಬಹುದು. ಈ ಕಾರಣಗಳಿಂದಾಗಿ ಆಶ್ರಯದಾತ ಮತ್ತು ಆಳುತನದ ನಡುವೆ ಇರುವ ಸಂಬಂಧದಲ್ಲಿ, ಸಾಂಪ್ರದಾಯಿಕ ಪ್ರತಿಫಲಗಳ ವ್ಯವಸ್ಥೆ ಹೆಚ್ಚು ಪ್ರಾಧಾನ್ಯತೆವುಳ್ಳದ್ದಾಗಿರುವುದರಿಂದ ಇದನ್ನು ಮಾರುಕಟ್ಟೆಯ ವಿನಿಮಯ ಎಂದು ಕರೆಯಬಹುದು.

ಆದರ್ಶ ರೂಪದ 'ಆಯಾ' ವ್ಯವಸ್ಥೆ (ಆಶ್ರಯದಾತ ಮತ್ತು ಆಶ್ರಿತ ಸಂಬಂಧ)ಯು ಅಧ್ಯಯನ ನಡೆಸಿದ ಪ್ರದೇಶದಲ್ಲೂ ಕ್ಷೀಣಾವಸ್ಥೆಯಲ್ಲಿದೆ. ಹೀಗಾಗಿ ಲಂಬಾಣಿಗಳು ಸಂಪೂರ್ಣವಾಗಿ 'ಆಯಾ' (ಜಾಜಮಾನಿ) ಸಂಬಂಧವನ್ನು ಇತರ ಜಾತಿಗಳ ಜೊತೆ ಹೊಂದಿಲ್ಲ. ಆದರೂ ಅವರು ಜೀವಶಕ್ತಿ ಇರುವ ಆರ್ಥಿಕ ಸಂಬಂಧಕ್ಕೆ ಒಳಗಾಗಿದ್ದಾರೆ. ಸೇವೆಗಳಿಗೆ ಪ್ರತಿಯಾಗಿ ಧಾನ್ಯದ ರೂಪದ ವಾರ್ಷಿಕ ಸಂಭಾವನೆ ಅಥವಾ ವಸ್ತುಗಳನ್ನು ಪೂರೈಸುವುದು. ಆದರೆ ಇವು ಸಾಂಪ್ರದಾಯಿಕ ಆಚರಣೆಗಳಿಗೆ ಮಹತ್ವವಿಲ್ಲದೆ ಹೆಚ್ಚುವರಿಯಾದ ಸೇವೆಗಳಾಗಿವೆ. ಈ ದೃಷ್ಟಿಯಿಂದ ಮೇಲೇಳುವ ಅಥವಾ ಏರ್ಪಡುವ ವ್ಯವಸ್ಥೆಗಳನ್ನು 'ನಿರ್ಧಿಷ್ಟ ಅಥವಾ ಸಾಂಪ್ರದಾಯಿಕ ಪದ್ಧತಿಯ ಪ್ರತಿಫಲ ಅಥವಾ ಇನಾಮು' (ಸ್ಕಾರ್ಲೆಟ್ ಎಪ್ಸ್‌ಟೈನ್, ೧೯೬೭) ಎಂದು ಕರೆಯಬಹುದು.

ಈ ರೀತಿಯ ಸಂಬಂಧಗಳು ಲಂಬಾಣಿ ಕೃಷಿ ಸಾಗುವಳಿದಾರರು ಮತ್ತು ಕರಕುಶಲ ಕರ್ಮಿ ಮತ್ತು ಸೇವಾ ಜಾತಿಗಳಲ್ಲಿವೆ. ಅಂಥವುಗಳೆಂದರೆ ಕಮ್ಮಾರ, ಬಡಗಿ, ಬುಟ್ಟಿ ಹೆಣೆಯುವವರು (ಕೊರಮರು), ಹೆಳವರು (ವಂಶವೃಕ್ಷದ ಭವಿಷ್ಯ ಹೇಳುವ ಜೀನಿಯಾಲಜಿಸ್ಟ್), ಚರ್ಮದ ವಸ್ತುಗಳನ್ನು ಪೂರೈಸುವ ಅಸ್ಪೃಶ್ಯರು, ಸತ್ತ ಪ್ರಾಣಿಗಳನ್ನು ತೆಗೆದು ಹಾಕುವವರು ಮತ್ತು ಹೊಲಗಳಲ್ಲಿ ಕೃಷಿ ಸಾಗುವಳಿಗೆ ಸಹಾಯ ಮಾಡುವವರು. ಆಶ್ರಿತರಿಗೆ ಜೋಳವನ್ನು ಅಥವಾ ಧಾನ್ಯಗಳನ್ನು ವಾರ್ಷಿಕವಾಗಿ ನೀಡುತ್ತಾರೆ. ಬಡಗಿಗೆ ೭೫

ಸೇರು; ಕಮ್ಮಾರನಿಗೆ ೭೫ ಸೇರು; ಅಸ್ಪೃಶ್ಯರಿಗೆ ೫೦ ಸೇರಿನಿಂದ ೩೦೦ ಸೇರು; ಬುಟ್ಟಿ ಹೆಣೆಯುವವರಿಗೆ ೨೦ ಸೇರು ; ವಂಶದ ಭವಿಷ್ಯ ಬರೆಯುವ ಅಥವಾ ಹೇಳುವ ಜೀನಿಯಾಲಜಿಸ್ಟ್‌ಗೆ ೩೦ ಸೇರು ; ಬಡಗಿಯು ಲಂಬಾಣಿಗಳಿಗೆ ಹೆಚ್ಚುವರಿಯಾಗಿ ಕೆಲಸ ಮಾಡಿದ್ದರೆ ಅಂದರೆ ಮನೆ ರಿಪೇರಿ, ಹೊಸ ಮನೆಕಟ್ಟುವಾಗ ಮರಗೆಲಸ, ಇತ್ಯಾದಿ, ಕೆಲಸಕ್ಕೆ ಪ್ರತ್ಯೇಕವಾದ ಸಂಭಾವನೆ ನೀಡುವುದು ವಾಸ್ತವ. ಈ ಕುಶಲ ಕರ್ಮಿಗಳು ಮತ್ತು ಸೇವಾ ಕೆಲಸಗಾರರು ಕೃಷಿ ಸಾಗುವಳಿದಾರರಲ್ಲದ ಲಂಬಾಣಿಗಳ ಕೆಲಸಗಳನ್ನು ತುಂಡು ಗುತ್ತಿಗೆ ಅಥವಾ ನಿರ್ದಿಷ್ಟ ಹಣಕ್ಕೆ ನಗದು ಸಂಭಾವನೆಯ ರೂಪದಲ್ಲಿ ಮಾಡುತ್ತಾರೆ. ಈ ವಿಶಿಷ್ಟ ಕೆಲಸಗಾರರು ಕೆಲವು ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಉದ್ದೇಶದಿಂದ ಉತ್ಪಾದಿಸುತ್ತಾರೆ.

ಆಶ್ರಿತ ಮತ್ತು ಆಶ್ರಯದಾತನ ನಡುವಿನ ವಿಶಿಷ್ಟ ರೂಪದ 'ಆಯಾ' ಸಂಬಂಧಗಳು ಕೇವಲ ಲಂಬಾಣಿ ಸಾಗುವಳಿದಾರರು ಮತ್ತು ಕೆಳಮಟ್ಟದ ಕೆಲಸಗಳನ್ನು ಮಾಡುವವರ (ಸೇವಾ ಜಾತಿಗಳು) ನಡುವೆ ಸ್ಥಾಪಿತವಾಗಿವೆ. ಲಂಬಾಣಿ ಆಶ್ರಯದಾತರ ವಿಶೇಷ ಸಮಾರಂಭಗಳಲ್ಲಿ, ಎಂದರೆ ಹುಟ್ಟು, ಸಾವು, ವಿವಾಹ ಇತ್ಯಾದಿ ಸಮಾರಂಭಗಳಲ್ಲಿ ಮನೆಯ ಮುಂದಿನ ಹಾಗೂ ಸುತ್ತಮುತ್ತಲಿನ ಭಾಗವನ್ನು ಗುಡಿಸುವುದು, ಸ್ವಚ್ಛಗೊಳಿಸುವುದು, ಸುದ್ದಿಗಳನ್ನು ಮುಟ್ಟಿಸುವುದು, ಇತರ ಸೇವೆಗಳು ಹಾಗೂ ನಂತರದ ಕೆಲಸಗಳನ್ನು ನೋಡಿಕೊಳ್ಳುವ ಉದ್ದೇಶದಿಂದ ಉಂಟಾಗಿದೆ. ಈ ರೀತಿಯ ಸೇವೆಗಳಿಗೆ ಸಮಾರಂಭಗಳ ಆಚರಣೆಯ ವಿಶೇಷ ಸಂದರ್ಭದಲ್ಲಿ, ಸೇವೆ ನೀಡುವವರಿಗೆ ಸಾಂಪ್ರದಾಯಿಕ ವಾಡಿಕೆಯಂತೆ ಆಹಾರವು ಸೇರಿದಂತೆ ಸಂಭಾವನೆ ನೀಡಲಾಗುತ್ತದೆ. ಲಂಬಾಣಿಗಳು ಇತರ ಲಂಬಾಣೇತರ ಪರಿಶಿಷ್ಟ ಜಾತಿಗೆ ಸೇರಿದ ರೈತರನ್ನು ಬಂಧುತ್ವ ಸಂಬಂಧ ಪದದಿಂದ 'ಹೊಲೆಯ ಮಗ' ಎಂದು ಕರೆಯುತ್ತಾರೆ. ಇಂತಹ ಪದ ಬಳಕೆ ಈಗಲೂ ಬಹಳ ವಿರಳವಾಗಿ ಕಂಡುಬರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಅತಿಯಾದ ಸಾಮಾಜಿಕ ಒತ್ತಡ ಮತ್ತು ಸಾಂಪ್ರದಾಯಿಕ ಆಚರಣೆಗಳ ವಿರಳತೆಯ ಕಾರಣದಿಂದ, ಮೊದಲೇ ನಿಶ್ಚಯಿಸಿದ ಆರ್ಥಿಕತೆಯಲ್ಲಿ ಲಂಬಾಣಿ ಮತ್ತು ಇತರೆ ವಿಶೇಷ, ವೃತ್ತಿ ಪರಿಣಿತಿ ಹೊಂದಿದ ಜಾತಿಗಳ ನಡುವೆ, ಸಂಬಂಧದಲ್ಲಿ ಪರಿಶಿಷ್ಟರನ್ನು ಹೊರತುಪಡಿಸಿ, ಲಂಬಾಣಿಗಳು ರೂಢಿಗತವಾಗಿ ಕೆಳಮಟ್ಟದ ಸ್ಥಾನ ಪಡೆದುಕೊಂಡಿದ್ದಾರೆ. ಇದಕ್ಕಿಂತ ಹೆಚ್ಚಾಗಿ ಮೇಲ್ ಜಾತಿ ಮತ್ತು ಇತರ ವಿಶೇಷ ವೃತ್ತಿ ಪರಿಣಿತಿ ಹೊಂದಿದ ಜಾತಿಗಳ ನಡುವಿನ 'ಆಯಾ' ಸಂಬಂಧವು ಈ ಪ್ರದೇಶದಲ್ಲಿ ಕ್ಷೀಣಿಸುತ್ತಿದೆ. ಇಂದು ಬದಲಾದ ಪ್ರವೃತ್ತಿಯಿಂದ ಗುತ್ತಿಗೆ ಆಧಾರದ ಗುಣ ಲಕ್ಷಣವನ್ನು ಪಡೆದುಕೊಂಡಿದೆ (ಪಲಾಂಡೆ, ೧೯೫೫: ೩೫೩). ಸ್ಕಾರ್ಲೆಟ್ ಎಪ್ಸ್ಟೈನ್ ಅವರು ದಕ್ಷಿಣ ಕರ್ನಾಟಕದ ಎರಡು ವಿಭಿನ್ನ ಮಾದರಿಯ ಹಳ್ಳಿಗಳಲ್ಲಿ ಸಾಂಪ್ರದಾಯಿಕ ಆನುವಂಶಿಕತೆಯ ಕೊಂಡಿಗಳು ಇರುವುದನ್ನು ಬೇರೆ ಬೇರೆ ಕಾರಣಗಳಿಂದ ಗುರುತಿಸಿದ್ದಾರೆ. "ಒಂದು ರೈತ ಯಜಮಾನ ಮತ್ತು ಇತರ ಅಸ್ಪೃಶ್ಯ ಕೆಲಸಗಾರರ ನಡುವೆ, ಮತ್ತೊಂದು ರೈತರು ಮತ್ತು ನಿಶ್ಚಯವಾದ ನಿಯಮಿತ ಕಾರ್ಯವಿರುವ ಜಾತಿಗಳ ನಡುವೆ......." (೧೯೬೭: ೨೩೧-೨೩೪).

ಲಂಬಾಣಿಗಳ ವಿವಾಹ ನಡೆಸಿಕೊಡುವ ಬ್ರಾಹ್ಮಣ ಪುರೋಹಿತರಿಗೆ ನಗದು ರೂಪದಲ್ಲಿ ಹಣ ನೀಡಲಾಗುತ್ತದೆ. ೧೯೬೦-೭೦ರ ದಶಕದವರೆಗೆ ಈ ಶುಲ್ಕ ಕಡಿಮೆ ಇದ್ದದ್ದು ತಿಳಿದು ಬರುತ್ತದೆ. ಆದರೆ ಇತ್ತೀಚೆಗೆ ಈ ಶುಲ್ಕ ಕನಿಷ್ಠ ೨೫ ರೂಪಾಯಿಗಳಿಂದ ಪ್ರಾರಂಭವಾಗಿ

ನೂರು ನೂರಾ ಐವತ್ತು ರೂಪಾಯಿಗಳವರೆಗೆ ಸಾಮಾನ್ಯವಾಗಿ ನೀಡುತ್ತಾರೆ. ಇದೇ ರೂಪದಲ್ಲಿ ತಾಂಡದ 'ನಾಯಕನ' (ಮುಖ್ಯಸ್ಥ) ಯೋಗ್ಯತೆಗೆ ತಕ್ಕಂತೆ ಸಾಂಪ್ರದಾಯಿಕವಾಗಿ ಹಲವು ವಿಶೇಷ ಸಮಾರಂಭಗಳನ್ನು ನಡೆಸಿಕೊಡುತ್ತಾನೆ. ಮದುವೆಯಂತಹ ಸಮಾರಂಭದಲ್ಲಿ ನಾಯಕ ಸಾಂಪ್ರದಾಯಿಕವಾಗಿ ೩ ರೂಪಾಯಿಗಳನ್ನು (ಮೂರು ಹಂತದಲ್ಲಿ ಪ್ರತಿ ಹಂತದಲ್ಲಿ ೧ ರೂಪಾಯಿಯಂತೆ) ಸ್ವೀಕರಿಸುತ್ತಾನೆ. ಕೇವಲ ವಿವಾಹ ನಿಶ್ಚಯದ ಸಮಾರಂಭದಲ್ಲಿ ಮಾತ್ರ ಸರಿಸಮನಾಗಿ ನಾಯಕನು ಇಬ್ಬರು ಸಹಾಯಕರಾದ 'ಡಾವೊ' ಮತ್ತು 'ಕಾರುಬಾರಿ' ಇವರು ಕೂಡ ಸಾಂಪ್ರದಾಯಿಕವಾಗಿ ಒಂದು ರೂಪಾಯಿಯನ್ನು ಎಲೆ ಮತ್ತು ಅಡಿಕೆಯ ಜೊತೆಗೆ ಸ್ವೀಕರಿಸುತ್ತಾರೆ. ನಾಯಕನಿಗೆ ಸಾಂಪ್ರದಾಯಿಕವಾಗಿ ಸಲ್ಲಿಸಬೇಕಾದುದನ್ನು ಸುಂಕ ಎಂದು ಕರೆಯುತ್ತಾರೆ. ಈ ಶುಲ್ಕ ಅಥವಾ ಉಡುಗೊರೆಯನ್ನು ನೀಡದೆ, ವಿವಾಹ ಒಪ್ಪಂದವು ಔಪಚಾರಿಕವಾಗಿ ವಿಶ್ವಾಸಾರ್ಹವಾಗಿದೆ ಎಂದು ಪರಿಗಣಿಸಲಾಗುವುದಿಲ್ಲ.

ದತ್ತು ಸ್ವೀಕಾರ ಸಮಾರಂಭದ ಕೊನೆಯಲ್ಲಿ ದತ್ತು ಸ್ವೀಕಾರ ಮಾಡಿದ ತಂದೆಯು ವಿವಿಧ ತಾಂಡಗಳಿಂದ ಸಮಾರಂಭಕ್ಕೆ ಬಂದ ನಾಯಕರಿಗೆ ಒಂದು ರೂಪಾಯಿಯನ್ನು ಸಾಂಪ್ರದಾಯಿಕವಾಗಿ ನೀಡಬೇಕು. ಇಂತಹ ಒಪ್ಪಂದಗಳಿಗೆ ನಾಯಕರಿಂದ 'ಸುಂಕ ಮುದ್ರೆ' ಹಾಕುವ ಮೂಲಕ ದತ್ತು ಸ್ವೀಕಾರಕ್ಕೆ ಒಪ್ಪಿಗೆ ನೀಡಲಾಗುತ್ತದೆ. ತಾಂಡದ ಪೂಜಾ ಮಂದಿರದ ಪೂಜಾರಿಗೆ ಪ್ರತಿ ಕುಟುಂಬವು ವಾರ್ಷಿಕವಾಗಿ ಸಾಂಪ್ರದಾಯಿಕವಾಗಿ ಇಂತಿಷ್ಟು ದವಸ ಧಾನ್ಯ ಎಂದು ನೀಡಬೇಕು. ೧೯೯೯ರಲ್ಲಿ ನಾಗಲಾಪುರ ತಾಂಡದಲ್ಲಿ ಪುರೋಹಿತರಿಗೆ ಒಂದು ಮೂಟೆ ಜೋಳವನ್ನು ವಾರ್ಷಿಕವಾಗಿ (ಕೃಷಿ ಸಾಗುವಳಿ ಕುಟುಂಬಗಳು ಮಾತ್ರ) ನೀಡುವುದು ತಿಳಿಯುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ವಾರ್ಷಿಕವಾಗಿ ೨೫ ರೂಪಾಯಿಗಳಿಂದ ೧೦೦ ರೂಪಾಯಿಗಳವರೆಗೆ ಪ್ರತಿ ಕುಟುಂಬಗಳು ಸಾಮರ್ಥ್ಯಕ್ಕೆ ಅನುಸಾರವಾಗಿ ನೀಡುವುದು ತಿಳಿಯುತ್ತದೆ.

ಈ ವಿಶ್ಲೇಷಣೆಯಿಂದ ಸಾಂಪ್ರದಾಯಿಕ ಆರ್ಥಿಕತೆ ಮತ್ತು 'ಆಯಾ' ಸಂಬಂಧಗಳನ್ನು ನಾವು ತರ್ಕಿಸಿ ಒಂದು ತೀರ್ಮಾನಕ್ಕೆ ಬರಬಹುದು. ಆದರೆ ಮಾರುಕಟ್ಟೆ ವ್ಯವಸ್ಥೆಯು ಸಮಾಜದ ಅನೇಕ ಸ್ತರಗಳ ಆರ್ಥಿಕತೆಯ ಜೊತೆಗೆ ವ್ಯಕ್ತಿ ಸ್ವರೂಪವಿಲ್ಲದ ಲಕ್ಷಣ ಹೊಂದಿದ ಸಮಗ್ರತೆಯನ್ನು ನೀಡುತ್ತದೆ. ವ್ಯಕ್ತಿ ಸಂಬಂಧಗಳು, ಸಾಂಪ್ರದಾಯಿಕ ಆಯಾ ವ್ಯವಸ್ಥೆಗಳು, ಧಾರ್ಮಿಕ ಶಕ್ತಿ ಮತ್ತು ನೀತಿಪಾಲನೆಗೆ ಪೂರಕವಾದ ಚಟುವಟಿಕೆಗಳನ್ನು ಮಾಡುವ ಮೂಲಕ ಸಹನೆಯಿಂದ ಸಮಗ್ರತೆಯನ್ನು ಸಾಧಿಸಿವೆ.

ಸಾಮಾನ್ಯ ಅನ್ಯೋನ್ಯತೆಯಲ್ಲಿ ವಿನಿಮಯವು ಪ್ರಮುಖವಾಗಿ ಒಂದೇ ಮಾರ್ಗದಲ್ಲಿ ಪ್ರತ್ಯಕ್ಷವಾಗುತ್ತದೆ. ಇದು ಸಾಂಪ್ರದಾಯಿಕ ಸಾಮಾಜಿಕ ಯೋಗ್ಯತೆ ಮತ್ತು ಗೌರವಗಳನ್ನು ಒಳಗೊಂಡಿದೆ (ಒಟೋಬೀನ್, ೧೯೭೨: ೨೮). ಸಮತೋಲನದ ಅನ್ಯೋನ್ಯತೆಯಲ್ಲಿ ಸ್ವಾಭಾವಿಕತೆ ಹೆಚ್ಚಾಗಿದ್ದರೆ, ಸಾಮಾನ್ಯ ಅನ್ಯೋನ್ಯತೆಯಿಂದ ತೃಪ್ತಿಪಡಿಸುವ ಕೆಲವು ಸನ್ನಿವೇಶಗಳಿವೆ. ವಿಶೇಷ ಅಥವಾ ಸಾಮಾನ್ಯ ಸಮಾರಂಭಗಳಲ್ಲಿ ತುಂಬಾ ಹತ್ತಿರದ ಸಂಬಂಧಿಕರ ನಡುವೆ ಆಹಾರವನ್ನು ಕೊಟ್ಟು ತೆಗೆದುಕೊಳ್ಳುವಾಗ ಇದು ಸಾಮಾನ್ಯವಾಗಿ ಕಂಡು ಬರುತ್ತದೆ. ಮೂಲ ಉತ್ಪಾದನಾ ಘಟಕದ ಬಗ್ಗೆ ಹೇಳುವುದಾದರೆ, ಜೀವನಾಧಾರವಿಲ್ಲದ ಬಂಧುಗಳಿಗೆ ಸಹಾಯ ನೀಡುವುದನ್ನು ಸಾಮಾನ್ಯ ಅನ್ಯೋನ್ಯತೆಯಿಂದಲೇ ಮಾಡಲಾಗುತ್ತದೆ. ಇಂತಹ ಸಹಾಯಗಳನ್ನು ಯಾವುದೇ ನಿರೀಕ್ಷೆಗಳಿಲ್ಲದೆ, ನೈತಿಕ ಹಕ್ಕು ಎಂದು ಪರಿಗಣಿಸಿ ಒಪ್ಪಿಕೊಳ್ಳಲಾಗಿದೆ. ಇದನ್ನು ಹಿಂದಿರುಗಿಸಬೇಕು ಎಂಬ ಯಾವುದೇ ಒಪ್ಪಂದಗಳು ಇಲ್ಲ.

ಬುಡಕಟ್ಟು ಆರ್ಥಿಕತೆಯನ್ನು ಕುರಿತು ಚರ್ಚಿಸುತ್ತಾ ಶಾಲಿನ್ಸ್ ಅವರು, ಇಲ್ಲಿ ಕುಟುಂಬವೇ ಉತ್ಪಾದನಾ ಮೂಲ ಘಟಕವಾಗಿದೆ. ಕೇಂದ್ರಾಭಿಗಾಮಿ ಒತ್ತಡಗಳಿಂದ ಉತ್ಪಾದಿಸಿದ ಕೌಟುಂಬಿಕ ಆರ್ಥಿಕತೆ ಹಾಗೂ ಬಂಧುತ್ವ ಗುಂಪುಗಳು ಹೊರಸೂಸುವ ಒತ್ತಡದಿಂದ, ಕುಟುಂಬದ ಆರ್ಥಿಕ ಸಂಪನ್ಮೂಲಗಳನ್ನು ಪರಿಹಾರದ ರೂಪದಲ್ಲಿ ಜೀವನಾಧಾರವಿಲ್ಲದ ಬಂಧುಗಳಿಗೆ ಹಂಚುತ್ತದೆ. ಇಂಥ ಒಪ್ಪಂದಗಳು ಒಬ್ಬ ವ್ಯಕ್ತಿಗೆ ಹೆಚ್ಚು ಉಪಯೋಗವಾಗುವುದರ ಜೊತೆಗೆ ಅವರ ಬಂಧುತ್ವ ಸಂಬಂಧಗಳಿಗೆ ಹೆಚ್ಚಿನ ಸ್ಥಾನ ನೀಡುತ್ತವೆ (೧೯೭೧:೪೫-೪೮) ಎಂದು ಹೇಳಿದ್ದಾರೆ.

ಬುಡಕಟ್ಟು ಆರ್ಥಿಕ ಪದ್ಧತಿಗೆ ನೇರ ಸಾಮಾನ್ಯ ನಡವಳಿಕೆ ಮತ್ತು ಹೋಲಿಕೆಯಿಲ್ಲದಿದ್ದರೂ, ಕೆಲವು ಲಂಬಾಣಿಗಳು ಈ ರೀತಿ ಪ್ರವೃತ್ತಿಯನ್ನು ತೋರಿಸುತ್ತಾರೆ. ಆದರೆ ಅವರು ಅದರಿಂದ ನಷ್ಟ ಹೊಂದುತ್ತಿರುವ ಸೂಚನೆಗಳು ತಿಳಿಯುತ್ತವೆ. ಅನೌಪಚಾರಿಕ ಒಪ್ಪಂದಗಳಿಂದ ತುಂಬಾ ಹತ್ತಿರದ ಬಂಧುಗಳು ಅಂದರೆ ಅಣ್ಣ ತಮ್ಮಂದಿರು, ಸಹೋದರಿಯರು ಅಥವಾ ವಿವಾಹ ಸಂಬಂಧವಿರುವ ಸಂಬಂಧಿಕರನ್ನು ತೊಂದರೆಗಳಿಂದ ಕಾಪಾಡುವುದು ಹಲವು ವರ್ಷಗಳಿಂದ ಕ್ಷೀಣಿಸುತ್ತಿರುವ ಕಾರಣ ಲಂಬಾಣಿಗಳು ಹೆಚ್ಚು ವ್ಯಕ್ತಿ ಕೇಂದ್ರಿತವಾಗುತ್ತಿರುವುದು. ನಾನು ಕ್ಷೇತ್ರ ಕಾರ್ಯ ಮಾಡುತ್ತಿದ್ದ ಸಮಯದಲ್ಲಿ ಹಿರಿಯ ಪೋಷಕರು ತಮ್ಮ ಮಕ್ಕಳಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ಕಂಡುಬರುತ್ತದೆ.

ಲಂಬಾಣಿಗಳು ಸ್ಥಿತಿವಂತ ಲಂಬಾಣೇತರರಿಂದ ಸಹಾಯವನ್ನು ಯಾವುದೇ ರೀತಿಯ ಹಿಂದಿರುಗಿಸದ ಒಪ್ಪಂದಗಳಿಂದ ಸ್ವೀಕರಿಸುತ್ತಾರೆ. ಈ ಪ್ರದೇಶದ ಕೃಷಿಕರು ಲಂಬಾಣಿಗಳು ಹಿಂದುಳಿದವರು ಎಂದು ಹೇಳುತ್ತಾರೆ. ಇವರು ದಯಾಪರ ಸಹಾಯಗಳನ್ನು ಒಪ್ಪಂದವಿಲ್ಲದೆ ಸ್ವೀಕರಿಸುತ್ತಾರೆ ಮತ್ತು ದಾಸ್ಯ ಮನೋಭಾವನೆಯನ್ನು ಸಹಾಯಮಾಡಿದವರ ಬಗ್ಗೆ ಬೆಳೆಸಿಕೊಳ್ಳುತ್ತಾರೆ. ಇದೇ ರೀತಿ ಲಂಬಾಣಿಗಳು ಮೊದಲೇ ನಿಶ್ಚಯಿಸಿಕೊಂಡ ಸಂಬಂಧದ ಚಿಂತನೆಗಳು ನನಗೆ ಕ್ಷೇತ್ರಕಾರ್ಯದ ಸಮಯದಲ್ಲಿ ಅನುಭವವಾಗಿದೆ.

ಸಾಮಾನ್ಯ ಅನ್ಯೋನ್ಯತೆಯ ಮತ್ತೊಂದು ಘಟನೆ ಎಂದರೆ ಯಾರು ದೈಹಿಕ ಶಕ್ತಿ ಅಥವಾ ಬುದ್ಧಿವಂತಿಕೆಯಿಂದ ಎಂದರೆ, ಕುಸ್ತಿ, ಭಾರವಾದ ಕಲ್ಲಿನ ಗುಂಡುಗಳನ್ನು ಎತ್ತುವುದು ಮತ್ತು ಪರೀಕ್ಷೆಗಳಲ್ಲಿ ಉತ್ತೀರ್ಣವಾಗುವುದು ಇತ್ಯಾದಿ ಸಂದರ್ಭದಲ್ಲಿ ಗೌರವದಿಂದ ಉಡುಗೊರೆ ನೀಡುವ ಅಭ್ಯಾಸಗಳಿವೆ. ಉದಾಹರಣೆಗೆ, ಮರಿಯಮ್ಮನಹಳ್ಳಿ ತಾಂಡದ ಕೆಲವು ಲಂಬಾಣಿ ಹುಡುಗರು ತುಂಬಾ ಭಾರವಾದ ಕಲ್ಲಿನ ಗುಂಡುಗಳನ್ನು ಎತ್ತುತ್ತಾರೆ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಯುಗಾದಿ ಮತ್ತು ದಸರಾ ಹಬ್ಬಗಳಲ್ಲಿ ನಡೆಯುವ ಭಾರ ಎತ್ತುವ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಾರೆ. ಇವರು ಪದಕ ಅಥವಾ ಬಹುಮಾನಗಳ ಜೊತೆ ತಾಂಡಕ್ಕೆ ಮರಳಿದಾಗ ತಾಂಡದ ಪ್ರತಿಯೊಂದು ಕುಟುಂಬವು ೧ ರೂಪಾಯಿಂದ ೫ ರೂಪಾಯಿಗಳವರೆಗೆ ಉಡುಗೊರೆ ನೀಡಿ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾರೆ. ಇಂತಹ ಘಟನೆಗಳು ಡೋಲುಗಳನ್ನು ಬಡಿಯುವುದರ ಮೂಲಕ ವಿಜಯೋತ್ಸವ ಮೆರವಣಿಗೆಯು ತಾಂಡದ ಕಿರಿದಾದ ದಾರಿಯಲ್ಲಿ ಸಾಗುತ್ತದೆ.

## ಸಾಮಾಜಿಕ ಸ್ಥಾನ, ನಾಯಕತ್ವ ಮತ್ತು ಆರ್ಥಿಕ ವೆಚ್ಚ

ಢಾಂಬಿಕತನದ ಮೇಲೆ ಮಾಡುವ ವೆಚ್ಚ ಸಾಮಾಜಿಕ ಜೀವನದ ಒಂದು ಯಾಂತ್ರಿಕತೆ. ಇವುಗಳ ಮೂಲಕ ಧಾರ್ಮಿಕವಾಗಿ ಅಥವಾ ಸಾಮಾಜಿಕವಾಗಿ ಮೇಲೇರಲು ಪ್ರಯತ್ನಿಸುತ್ತಾರೆ. ಆರ್ಥಿಕ ಏಣಿಶ್ರೇಣಿಯಿಂದ ಕೆಳಕ್ಕೆ ಬಿದ್ದವರು ಮತ್ತೆ ಬಡವರಾಗುತ್ತಾರೆ. ಸಾಮಾಜಿಕವಾಗಿ

ಮೇಲೇರಲು ದುಂದುವೆಚ್ಚವನ್ನು ಕಡಿಮೆಗೊಳಿಸಿ ಅತ್ಯಲ್ಪವಾದ ಉಳಿತಾಯಗಳಿಂದ ಅಥವಾ ಉತ್ಪಾದನಾ ಚಟುವಟಿಕೆಯಲ್ಲಿ ತೊಡಗಿಸ ಬೇಕಾಗುತ್ತದೆ.

ಆರ್ಥಿಕವಾಗಿ ಸಮೃದ್ಧಿಯಾಗಿರುವ ಕೆಲವೇ ಕೆಲವು ಸ್ಥಿತಿವಂತ ಲಂಬಾಣಿಗಳು ಪದೇ ಪದೇ ಸಾಂಪ್ರದಾಯಿಕ ರೂಢಿ ಸಂಸ್ಕಾರಗಳನ್ನು ಆಚರಿಸುವ ದಿನದಂದು ತಮ್ಮ ಸಮುದಾಯದ ಜನರಿಗೆ ಔತಣವನ್ನು ನೀಡುತ್ತಾರೆ. ಇಂತಹ ಔತಣಕೂಟಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಭಾಗವಹಿಸುವವರು ಹೃದಯ ಭಾಗದವರೆಗೆ ಊಟ ಮಾಡುತ್ತಾರೆ. ಇದರಿಂದ ಔತಣ ನೀಡುವವರ ಗೌರವವು ನಿರೀಕ್ಷೆಗೂ ಮೀರಿ ಉತ್ತಮಗೊಳ್ಳುತ್ತದೆ ಮತ್ತು ಸಾಂಪ್ರದಾಯಿಕ ನಾಯಕತ್ವಕ್ಕೆ ಜೀವಂತಿಕೆ ಸಿಗುತ್ತದೆ. ಇದರಲ್ಲಿ ವಿರೋಧಿಗಳ ಸ್ಥಾನವನ್ನು ಇಮ್ಮಡಿಗೊಳಿಸುವ ಚಲನೆ ಅಡಕಗೊಂಡಿದೆ. ಅತ್ಯಂತ ಹಿಂದುಳಿದ ಸಮುದಾಯಗಳಲ್ಲಿ ಉತ್ತಮ ಆಹಾರವು ವಿರಳ. ಇಲ್ಲಿ ಪದೇ ಪದೇ ಔತಣ ಅಥವಾ ಸವಿಯೂಟವನ್ನು ನೀಡುವವರು ಔಪಚಾರಿಕ ಅಧಿಕಾರ ಮತ್ತು ಯಜಮಾನಿಕೆಯನ್ನು ಪಡೆದುಕೊಳ್ಳುತ್ತಾರೆ. ಇದು ಕೆಲವು ಸಂದರ್ಭಗಳಲ್ಲಿ ಔಪಚಾರಿಕ ನಾಯಕರನ್ನು ಅವರು ಹಿಂದುಳಿದವರಾಗಿದ್ದರೆ ಹಿಂದಕ್ಕೆ ತಳ್ಳಿಬಿಡುವ ಸಾಧ್ಯತೆಗಳಿವೆ. ಆರ್ಥಿಕವಾಗಿ ಸಮೃದ್ಧಿಯಾದ ಕೆಲವೇ ಲಂಬಾಣಿಗಳನ್ನು ಆರಿಸಿ, ಪ್ರತ್ಯೇಕವಾಗಿ ಇರಿಸಿ ಮತ್ತು ಉತ್ತಮ ಗೌರವಗಳನ್ನು ನೀಡಿ ಔದಾರ್ಯಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಇಂತಹ ಉತ್ತಮ ಸವಿಯೂಟಗಳನ್ನು ವ್ಯವಸ್ಥೆಗೊಳಿಸಲು, ಲಂಬಾಣೇತರರಿಗೆ ಹೋಲಿಸಿದರೆ ಲಂಬಾಣಿಗಳು ಕನಿಷ್ಟ ಎಂದರೂ ೨೦೦೦ದಿಂದ ೩೦೦೦ ರೂಪಾಯಿಗಳಿಗೂ ಹೆಚ್ಚು ಹಣವನ್ನು ವ್ಯಯಿಸುತ್ತಾರೆ. ಲಂಬಾಣಿಗಳು ಸಾಮಾಜಿಕ ಸ್ಥಾನಗಳನ್ನು ಹುಡುಕುವುದು ಏಕೆಂದರೆ ಬಹುಶಃ ಅವರ ಸಾಂಪ್ರದಾಯಿಕತೆ ಹಾಗೂ ಮತ್ತೊಬ್ಬನಿಗೆ ಸಮನಾಗಿ ಬದುಕುವ ಆಸೆ.

ಲಂಬಾಣಿಗಳು ಅಲೆಮಾರಿ ಜೀವನ ಬಿಟ್ಟು ನೆಲೆಗೊಂಡನಂತರ ಮತ್ತು ಕೃಷಿಯನ್ನು ಅಳವಡಿಸಿಕೊಂಡ ಪರಿಣಾಮಗಳಿಂದ ಅನ್ಯೋನ್ಯತಾ ವ್ಯವಸ್ಥೆಯು ವಾಸ್ತವಿಕವಾಗಿ ಬೆಳವಣಿಗೆಯನ್ನು ಕಂಡರೂ ಸಂಕೀರ್ಣವಾಗಿತ್ತು. ಕಾರಣ ಮೂಲ ಆರ್ಥಿಕ ಕಸುಬುಗಳಲ್ಲಿ ಉಂಟಾದ ಬದಲಾವಣೆ ಮತ್ತು ಇತರೆ ಸಮುದಾಯಗಳ ಸಾಂಸ್ಕೃತಿಕ ಸಂಪರ್ಕವಾಗಿದೆ. 15. 9. 10.

## ಮರುಹಂಚಿಕೆ

ಸರ್ಕಾರವು ನಾಗರಿಕರಿಂದ ತೆರಿಗೆಯನ್ನು ಸಂಗ್ರಹಿಸುತ್ತದೆ ಮತ್ತು ಸಾರ್ವಜನಿಕರ ಅನುಕೂಲಕ್ಕಾಗಿ ವ್ಯಯಿಸುವುದು ಪ್ರಾಯಶಃ ಮರುಹಂಚಿಕೆಯ ಒಂದು ಭಾಗ (ಇದಕ್ಕೆ ಪೂರಕವಾದ ದೃಷ್ಟಿಕೋನಕ್ಕೆ ನೋಡಿ ಒಟರ್‌ಬೇನ್ ೧೯೭೭ : ೩೪).

ಮರುಹಂಚಿಕೆಯು ಸ್ವಯಂಪ್ರೇರಿತವಾಗಿರಬಹುದು ಅಥವಾ ಸ್ವಯಂಪ್ರೇರಿತವಾಗಿಲ್ಲದಿರಬಹುದು (ಒಟರ್‌ಬೇನ್ ೧೯೭೭ : ೨೭ ೩೪). ಪ್ರತ್ಯಕ್ಷ (ಭೂಕಂದಾಯ, ಮನೆತೆರಿಗೆ) ಮತ್ತು ಪರೋಕ್ಷ (ಸರಕು ಮತ್ತು ಸೇವಾ ತೆರಿಗೆ) ತೆರಿಗೆಗಳನ್ನು ಸರ್ಕಾರಕ್ಕೆ ಲಂಬಾಣಿಗಳು ನೀಡುತ್ತಾರೆ ಹಾಗೂ ಸಾಮಾನ್ಯ ಮತ್ತು ವಿಶೇಷ ಸವಲತ್ತುಗಳನ್ನು ದೇಶದ ನಾಗರಿಕರಾಗಿ ಪಡೆದುಕೊಳ್ಳುತ್ತಾರೆ. ಇದಕ್ಕಿಂತ ಹೆಚ್ಚಾಗಿ ಇವರನ್ನು ಹಿಂದುಳಿದ ಸಮುದಾಯವಾಗಿ ಪರಿಗಣಿಸಿರುವುದರಿಂದ ಸ್ವಯಂಪ್ರೇರಿತವಲ್ಲದ ರೀತಿಯಲ್ಲಿ ಮರುಹಂಚಿಕೆ ಮತ್ತು ವಿನಿಮಯಗಳು

ಯುತ್ತವೆ (ಮೇಲಿನೊಸ್ಕಿ, ಅವರನ್ನು ಉಲ್ಲೇಖಿಸಿರುವುದು ಶಾನ್‌ಲೀಲ್ಸ್, ೧೯೭೧ : ೬೧; ನೆಹಲಿ, ೧೯೬೮ : ೧೩೦-೧೩೬; ನಶ್ ೬: ೩೨). ಕೋಷ್ಟಕ ೨.೧೧ರಲ್ಲಿ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದ ಲಂಬಾಣಿಗಳು ಕ್ರಮವಾಗಿ ೫೧೧೨ ಮತ್ತು ೩೭ ರೂಪಾಯಿಗಳ ಪ್ರತ್ಯಕ್ಷ ತೆರಿಗೆ ನೀಡಿರುವುದನ್ನು ವಿವರಿಸಲಾಗಿದೆ. ಪರೋಕ್ಷ ತೆರಿಗೆಯನ್ನು ಲೆಕ್ಕಾಚಾರ ಮಾಡಲು ಸಾಧ್ಯವಿಲ್ಲ.

ಇದಕ್ಕಿಂತ ಹೆಚ್ಚಾಗಿ ಹಾಗೂ ಪ್ರಮುಖವಾಗಿ ಸ್ವಯಂಪ್ರೇರಿತ ಮರುಹಂಚಿಕೆಯು ಸ್ಥಳೀಯ ಗುಂಪುಗಳ ಒಳಗೆ ಇದೆ. ಇದನ್ನು ಕಾರಿ (ಕೋ-ಅಪರೇಟಿವ್) ಮತ್ತು ಒಟ್ಟುಗೂಡಿದ ಪ್ರಯತ್ನ ಎಂದು ಸಹ ಕರೆಯಬಹುದು. ಈ ರೀತಿಯ ಸ್ವಾಭಾವಿಕ ರುಹಂಚಿಕೆಯನ್ನು ಸ್ಥಳೀಯವಾಗಿ ಗೊತ್ತುಮಾಡಿದ ನಿಯೋಗವಾದ ಜಾತಿ ಪಂಚಾಯತಿಯು ಆರ್ಥಿಕ, ರಾಜಕೀಯ ಮತ್ತು ಪ್ರದಾಯಿಕ ಗುರಿಗಳಿಂದ ನಿರ್ವಹಿಸುತ್ತದೆ. ಸಾರ್ವಜನಿಕ ಆರ್ಥಿಕತೆಯ ಮಾದರಿಗಳಾದ ವಸ್ತುಗಳ ಸಂಗ್ರಹಣೆ ಮತ್ತು ಹಂಚಿಕೆ, ವೆಗಳು ಮತ್ತು ಹಣದ ವಿನಿಮಯಗಳಲ್ಲಿ ಜಾತಿ ಪಂಚಾಯಿತಿಯ ಪಾತ್ರವು ಬಂಧುತ್ವ ನೈತಿಕತೆಯಿಂದ ಕೇಂದ್ರೀಕೃತವಾಗಿದೆ. ಇಂಥ ಗೆ ವಸೂಲಿಮಾಡುವ ಮೂಲಕ ಪಂಚಾಯಿತಿಯು ಕೌಟುಂಬಿಕ ಆರ್ಥಿಕತೆಯ ಮೇಲೆ ಹೆಚ್ಚುವರಿ ಆರ್ಥಿಕ ಹೊರೆಯನ್ನು ವಿಧಿಸುತ್ತದೆ. ಲ್ಲದೆ, ಜನರು ತಮ್ಮ ಉತ್ಪಾದನಾ ಯೋಜನೆಗಳನ್ನು ಹೆಚ್ಚಿಸಿಕೊಳ್ಳುವಂತೆ ಒತ್ತಡವನ್ನು ಸಹ ಉಂಟುಮಾಡುತ್ತದೆ. ಈ ರೀತಿಯ ರ್ಥಿಕ ಚಲನಶೀಲತೆಯಿಂದ ಸಾಮಾನ್ಯ ನಿಯೋಗವಾದ ಲಂಬಾಣಿ ಪಂಚಾಯಿತಿಗಳು ಧಾರ್ಮಿಕ ಆಚರಣೆ, ದೇವಾಲಯವನ್ನು ಕಟ್ಟುವ ರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುತ್ತಿವೆ. ಸೇವೆಗಳು ಮಾತ್ರ ಗುಣಾತ್ಮಕವಾದ ಪಾತ್ರವನ್ನು ಹೊಂದಿವೆ. "ಬರಿ ತೋರಿಕೆಯ ಮತ್ತು ವಿಷ್ಯದ ಯೋಜನೆ ಇಲ್ಲದ ಅನುತ್ಪಾದಕ ವೆಚ್ಚಗಳನ್ನು, ಒತ್ತಾಯಪೂರ್ವಕವಾಗಿ ಈ ನಿಯೋಗಗಳು ಮತ್ತು ನಾಯಕತ್ವವು ಹೊಂದಿದೆ" ೯೭೧ : ೪೮).

ಮರುಹಂಚಿಕೆಯು ಹೋಲಿಕೆಯ ದೃಷ್ಟಿಯಿಂದ ಹೆಚ್ಚಾಗಿ ಜಾತಿವಾದಿ ಗುಣಲಕ್ಷಣಕ್ಕೆ ಅಂಟಿಕೊಳ್ಳುವ ಲಕ್ಷಣವಿದೆ. ಅನ್ಯೋನ್ಯತೆಯು ಬಂಧಗಳ ನಡುವೆ ಇದ್ದರೆ ಮರುಹಂಚಿಕೆಯು ಸಂಬಂಧಗಳ ಒಳಗೆ ಇರುತ್ತದೆ (ಶಾಹಲೀನ್ಸ್, ೧೯೭೧: ೬೦-೬೪). ಇದನ್ನು ಕೆಳಗೆ ಆಚರಣೆಗಳ ಸಹಾಯದಿಂದ ಸ್ಪಷ್ಟಪಡಿಸಲು ಪ್ರಯತ್ನಿಸಲಾಗಿದೆ.

ಅ. ಲಂಬಾಣಿ ಪಂಚಾಯಿತಿಯು ವಿಶೇಷ ಸಂದರ್ಭದಲ್ಲಿ ಹೆಚ್ಚು ಕಡಿಮೆ ಬೇರೆ ಬೇರೆ ಮೊತ್ತದ ಹಣವನ್ನು ಸಾಂಪ್ರದಾಯಿಕವಾಗಿ ಮದ್ಯವನ್ನು ನಿಷೇಧಿಸಿದ ಸಂದರ್ಭದಲ್ಲಿ ಮದ್ಯವನ್ನು ಬಚ್ಚಿ ಇಳಿಸುವವರಿಂದ ಮತ್ತು ಮಾರಾಟಗಾರರಿಂದ ಸಂಗ್ರಹಿಸುತ್ತದೆ.

ಆ. ಸಾಂಪ್ರದಾಯಿಕ ಆಚರಣೆಗಳಿಗೆ ಪೂರಕವಾಗಿ ಮಾಂಸಾಹಾರವನ್ನು ದೇವತೆಗಳನ್ನು ಸಂತೈಸಲು ಮತ್ತು ಈ ಕೆಳಗೆ ಪಟ್ಟಿಮಾಡಿದ ಹಬ್ಬಗಳನ್ನು ಉತ್ಸಾಹದಿಂದ ಆಚರಿಸಲು ಹಬ್ಬದ ದಿನಗಳಲ್ಲಿ ಮಾಂಸಾಹಾರದ ಔತಣಕೂಟಗಳನ್ನು ನಡೆಸುತ್ತದೆ :

೧. ಸತಿ ಭವಾನಿ ಹಬ್ಬವನ್ನು (ಆಷಾಡ ಮಾಸದ ಹುಣ್ಣಿಮೆ ದಿನದ ನಂತರದ ಮೊದಲನೆ ಮಂಗಳವಾರ ಅಥವಾ ಶುಕ್ರವಾರ); ೨. ದಸರಾ ಹಬ್ಬದ ೯ನೇ ದಿನ ; ೩. ದೀಪಾವಳಿ ಮತ್ತು ಯುಗಾದಿ ; ೪. ಹೋಳಿ (ಫಾಲ್ಗುಣ ಮಾಸದ ೧೬ನೇ ದಿನ). ಲಂಬಾಣಿಗಳು ನಂಬಿರುವ ಧಾರ್ಮಿಕ ಆಚರಣೆಗಳನ್ನು ಯೋಗ್ಯವಾದ ದಿನದಂದು ಆಚರಿಸುತ್ತಾರೆ

(೨೫ ರೂಪಾಯಿಗಳಿಂದ ೧೦೦ ರೂಪಾಯಿಗಳವರೆಗೆ ವ್ಯತ್ಯಾಸಗೊಳ್ಳುತ್ತದೆ). ಪ್ರಾಣಿಗಳನ್ನು ಕೊಂಡುಕೊಂಡಾಗ (ಆಡು/ಕುರಿ) ಬರುವ ವೆಚ್ಚವನ್ನು ಸಮನಾಗಿ ಹಂಚಿಕೊಳ್ಳುತ್ತಾರೆ. ಪಟ್ಟಣದ ಮಾಂಸದ ಅಂಗಡಿಗಳಿಂದ ಮಾಂಸವನ್ನು ಕೊಂಡುಕೊಂಡು ಬರುವುದರ ಬದಲಾಗಿ ಈ ರೀತಿ ಮಾಡುತ್ತಾರೆ. ಹಬ್ಬಗಳ ಔತಣವು ಸಂಘಟನೆಯಾದ ತರುವಾಯ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ವಿಭಿನ್ನತೆಯನ್ನು ವಿವರವಾಗಿ ಬೇರೆ ಬೇರೆ ವಿಶ್ಲೇಷಿಸಲಾಗಿದೆ.

ಮರಿಯಮ್ಮನಹಳ್ಳಿ ತಾಂಡದಲ್ಲಿ ಕಚ್ಚಾ ಮಾಂಸವನ್ನು (ಬೇಯಿಸದೆ) ಪಂಚಾಯಿತಿಯು ಪ್ರತಿಯೊಂದು ಕುಟುಂಬಕ್ಕೂ ಸಮನಾಗಿ ಮೇಲೆ ತಿಳಿಸಿದ ಮೂರು ಮತ್ತು ನಾಲ್ಕನೆ ಹಬ್ಬಗಳ ಆಚರಣೆಯಲ್ಲಿ ಹಂಚುತ್ತದೆ. ಈ ಮಾಂಸದಿಂದ ಕುಟುಂಬಗಳು ಅಡುಗೆಯನ್ನು ತಯಾರಿಸುತ್ತವೆ. ಮೊದಲನೆ ಮತ್ತು ಎರಡನೆ ಹಬ್ಬಗಳ ಆಚರಣೆಯ ವಿಶೇಷ ಸಂದರ್ಭದಲ್ಲಿ ಜಾತಿ ಆಧಾರಿತವಾದ ಔತಣವನ್ನು ವ್ಯವಸ್ಥೆಗೊಳಿಸಿ ತಮ್ಮ ದೇವತೆಗಳಿಗೆ ಗೌರವ ಸಲ್ಲಿಸುತ್ತಾರೆ. ಆದರೂ ಈ ಎರಡು ವಿಶೇಷ ಆಚರಣೆಯ ಸಂದರ್ಭದಲ್ಲಿ ಪಂಚಾಯಿತಿಯು ಬೇಯಿಸಿದ ಮಾಂಸವನ್ನು ಮಾತ್ರ ಹಂಚುತ್ತದೆ; ಪ್ರತಿಯೊಂದು ಕುಟುಂಬಗಳು ಔತಣಕ್ಕೆ ಬರುವಾಗ ಇತರೆ ಆಹಾರದ ಬಗೆಗಳನ್ನು ತರಬೇಕು. ಕೇವಲ ಗೌರಿ ಹಬ್ಬದ ಆಚರಣೆಯ ವಿಶೇಷ ಸಮಾರಂಭದಲ್ಲಿ ಮಾತ್ರ ಪಂಚಾಯಿತಿಯು ಪೂರ್ಣ ಪ್ರಮಾಣದ (ಊಟ) ಔತಣವನ್ನು ನೀಡುತ್ತದೆ (ವಿವರಗಳಿಗೆ ನೋಡಿ ಅಧ್ಯಾಯ ೩ : ೧ ಮತ್ತು ೩).

ನಾಗಲಾಪುರ ತಾಂಡದಲ್ಲಿ ಪಂಚಾಯತಿಯು ಹಿಂದೂ ಹೊಸ ವರ್ಷದ ದಿನ ಯುಗಾದಿ, ದಸರಾ ಮತ್ತು ದೀಪಾವಳಿ ಹಬ್ಬಗಳಲ್ಲಿ ಬೇಯಿಸಿದ ಮಾಂಸವನ್ನು ಮಾತ್ರ ಹಂಚುತ್ತದೆ. ಇದಕ್ಕೆ ಪೂರಕವಾಗಿ ಸೇವಾಭಯನ ದೇವರ ಮುಂದೆ ಊಟಕ್ಕೆ ಬರುವಾಗ ಜೊತೆಯಲ್ಲಿ ತರಬೇಕು. ಹೋಳಿ ಮತ್ತು ಗೌರಿ ಹಬ್ಬಗಳ ಆಚರಣೆಯ ವಿಶೇಷ ಸಮಾರಂಭಗಳಲ್ಲಿ ಮಾತ್ರ ಪಂಚಾಯಿತಿಯು ಪೂರ್ಣ ಪ್ರಮಾಣದ ಊಟವನ್ನು ವ್ಯವಸ್ಥೆಗೊಳಿಸುತ್ತದೆ.

ಪಂಚಾಯಿತಿಗಳು ಪೂರ್ಣ ಪ್ರಮಾಣದ ಊಟದ ವ್ಯವಸ್ಥೆಗೆ ವೆಚ್ಚವನ್ನು ಕುಟುಂಬಗಳ ಕೊಡುಗೆಯಿಂದ ನೇರವಾಗಿ ಭರಿಸಲಾಗುತ್ತದೆ ಮತ್ತು ಅವಶ್ಯವಿದ್ದರೆ ಜಾತಿ ಪಂಚಾಯಿತಿಯ ನಿಧಿಯನ್ನು ಕೂಡ ಬಳಸಲಾಗುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ೧೯೯೯ರಲ್ಲಿ ಗೌರಿ ಹಬ್ಬದ ವಿಶೇಷ ಆಚರಣೆಗೆ ಲಂಬಾಣಿ ಪಂಚಾಯಿತಿಯು ಪ್ರತಿಯೊಂದು ಕುಟುಂಬದಿಂದ ಸಮಾನ ಪ್ರಮಾಣದಲ್ಲಿ ಕೊಡುಗೆಯನ್ನು ಸಂಗ್ರಹಿಸಿತು (ಪ್ರತಿ ಕುಟುಂಬಕ್ಕೆ ಎರಡು ಸೇರು ಅಕ್ಕಿ ಮತ್ತು ಪ್ರತಿ ವ್ಯಕ್ತಿಗೆ ೫ ರೂಪಾಯಿಗಳು). ಎಲ್ಲಾ ಕೊಡುಗೆಗಳಿಂದ ಬಂದ ವಸ್ತುಗಳು ಮತ್ತು ಹಣದಿಂದ ಎರಡು ಜಾತಿ ಆಧಾರಿತ ಔತಣವನ್ನು ಏರ್ಪಡಿಸಲಾಗಿದೆ. ಈ ಆಚರಣೆಗಳಿಗೆ ತಗುಲುವ ವೆಚ್ಚ ಸುಮಾರು ೭೦೦೦ ರಿಂದ ೮೦೦೦ ರೂಪಾಯಿಗಳು. ಕೌಟುಂಬಿಕ ಕೊಡುಗೆಗಳನ್ನು ಕಡಿಮೆಗೊಳಿಸಿಕೊಳ್ಳುವ ಉದ್ದೇಶದಿಂದ ಲಂಬಾಣೇತರ ಸ್ಥಿತಿವಂತರಿಂದ ವಸ್ತುಗಳ ರೂಪದಲ್ಲಿ ಹಾಗೂ ಹಣದ ರೂಪದಲ್ಲಿ ನಿಧಿಯನ್ನು ಸಂಗ್ರಹಿಸುತ್ತಾರೆ.

ಲಂಬಾಣಿಗಳು ಪಂಚಾಯಿತಿಗೆ ಸಾಂಪ್ರದಾಯಿಕ ಆಚರಣೆಗಳಿಗೆ ಸಲ್ಲಿಸಬೇಕಾದುದನ್ನು ಪಡೆದುಕೊಳ್ಳುವ ಅಧಿಕಾರವಿದೆ. ಜೊತೆಗೆ ರೂಢಿ ಸಾಂಪ್ರದಾಯಿಕ ಆಚರಣೆಗಳನ್ನು ವಿರೋಧಿಸುವ ಅಥವಾ ಪಂಚಾಯಿತಿಗೆ ವಿರುದ್ಧ ನಡೆದುಕೊಳ್ಳುವ ವ್ಯಕ್ತಿಗಳಿಗೆ ದಂಡ ವಿಧಿಸುತ್ತದೆ. ಇದರಿಂದ ಬಂದ ವರಮಾನವನ್ನು ಸಮುದಾಯದ ಉದ್ದೇಶಕ್ಕಾಗಿ ಬಳಸಲಾಗುತ್ತದೆ. ಈ ಕೆಳಗೆ ನೀಡಿರುವುದು ಸಾಂಪ್ರದಾಯಿಕವಾಗಿ ಪಂಚಾಯಿತಿಗಳಿಗೆ ಸಲ್ಲಿಸಬೇಕಾದ ಮೊತ್ತ/ದರ ಮತ್ತು ಪಂಚಾಯಿತಿಗಳಿಗೆ ಕೂಡಿಬರುವ ಒಟ್ಟು ಶುಲ್ಕ.

| ಸಂದರ್ಭಗಳು : | ಮೊತ್ತ ರೂಪಾಯಿಗಳಲ್ಲಿ | |
|---|---|---|
| | ಮರಿಯಮ್ಮನಹಳ್ಳಿ ತಾಂಡ ೧೯೯೧ಲ | ನಾಗಲಾಪುರ ತಾಂಡ ೧೯೯೧ಲ |
| ವಿವಾಹ | ೫೭ | ೪೫ |
| ಪಲಾಯನದ ನಂತರದ ವಿವಾಹ | ೧೫೦ | ೧೫೦ |
| ವಿಧವಾ ಪುನರ್‌ವಿವಾಹ | ೨೫ | ೨೫ |
| ಬಿಟ್ಟು ಓಡಿಹೋದ ನಂತರ ವಿವಾಹ | ೬೦ | ೨೫ |
| ಸಾಮಾಜಿಕ ದಾರಿತಪ್ಪಿದ ನಡತೆಗಳು (ದುರಹಂಕಾರ, ಪಂಚಾಯಿತಿಗೆ ಎದುರಾಗುವುದು) | ಇಲ್ಲ ಮೊತ್ತ ಬಹಳ ವ್ಯತ್ಯಾಸವಾಗುತ್ತದೆ. | |
| ಅನೈತಿಕ ಸಂಬಂಧಗಳು | | |
| ಗಂಡು | ೬೦ | ೬೦ |
| ಹೆಣ್ಣು | ೩೦ | ೩೦ |
| ಚಾಡಿ ಹೇಳುವುದಕ್ಕೆ | ೬೦ | ೬೦ |
| ದೈಹಿಕವಾಗಿ ದಾಳಿಮಾಡುವುದು | ೨೫ | ೨೫ |
| ಚಪ್ಪಲಿಯಿಂದ ಬಡೆಯುವುದು | ೫ | ೫ |
| ಸಣ್ಣ ಪುಟ್ಟ ಅಪರಾಧ | ೫ ರೂಪಾಯಿಗಳಿಂದ ೨೫ ರೂಪಾಯಿಗಳ ವರೆಗೆ ಮೊತ್ತ ವ್ಯತ್ಯಾಸಗೊಳ್ಳುತ್ತದೆ. | |
| ನಿಷಿದ್ಧ ಸಂದರ್ಭದಲ್ಲಿ ಮದ್ಯ ಮಾರಾಟ | ೫೦ | - |
| ನಿಷಿದ್ಧ ಸಂದರ್ಭದಲ್ಲಿ ಮದ್ಯಪಾನ | ೨೫ | - |
| ಕುಟುಂಬಗಳ ನಡುವಿನ ಸಮಸ್ಯೆಗಳು ಅಥವಾ ಒಂದೇ ಕುಟುಂಬದ ಒಳಗಿನ ಸಮಸ್ಯೆಗಳ ಪರಿಹಾರ | ಈ ಮೊತ್ತದಲ್ಲಿ ಬಹಳ ವ್ಯತ್ಯಾಸವಿದೆ. | |

ಈ ಲೆಕ್ಕ ಪತ್ರಗಳನ್ನು ಪಂಚಾಯಿತಿಯಲ್ಲಿ 'ಕಾರಬಾರಿ' ಅಥವಾ ಪಂಚಾಯಿತಿಯಿಂದ ನೇಮಿಸಿದ ಸದಸ್ಯರೊಬ್ಬರು ಮಾಡುತ್ತಾರೆ. ಕೆಲವು ಲಂಬಾಣಿಗಳು ಪಂಚಾಯಿತಿಯ ಸದಸ್ಯರು ಸಂಗ್ರಹಿಸಿದ ಪಂಚಾಯಿತಿ ನಿಧಿಯಲ್ಲಿ ಸ್ವಲ್ಪ ನುಂಗಿಬಿಡುತ್ತಾರೆ ಎಂದು ಆರೋಪಿಸುತ್ತಾರೆ.

## ಮಾರುಕಟ್ಟೆ ವಿನಿಮಯ

ಮಾರುಕಟ್ಟೆ ವಿನಿಮಯವು ಅಧ್ಯಯನ ನಡೆಸಿದ ಪ್ರದೇಶಗಳಲ್ಲಿ ವಿನಿಮಯ ಮಾದರಿಗಳಲ್ಲೇ ಹೆಚ್ಚು ಪ್ರಬಲವಾಗಿದೆ ಮತ್ತು ಲಂಬಾಣಿಗಳಲ್ಲಿಯೂ ಕೂಡ ಇದೆ. ಆದರೂ ಮುಂದಿನ ಚರ್ಚೆಯಿಂದ, ಅನ್ಯೋನ್ಯತೆ ಮತ್ತು ಮರುಹಂಚಿಕೆಯು ಈಗಲೂ ಸ್ವಲ್ಪಮಟ್ಟಿಗೆ ಅಸ್ತಿತ್ವದಲ್ಲಿದೆ ಎಂದು ತಿಳಿದುಬರುತ್ತದೆ. ನನ್ನ ಊಹೆ ಒಟ್ಟು ಲಂಬಾಣಿಗಳ ಆರ್ಥಿಕ ಧೋರಣೆಯು ಪ್ರಮುಖವಾಗಿ ನಿರ್ಧಾರವಾಗುವುದು ಮಾರುಕಟ್ಟೆ ವಿನಿಮಯ ತತ್ವದ ಆಧಾರದಿಂದ. ಮಾರುಕಟ್ಟೆಯಲ್ಲಿ ಅದೋ ಇದೋ (ವಸ್ತು ವಿನಿಮಯ ಅಥವಾ ಮಾರುಕಟ್ಟೆ ವಿನಿಮಯ) ಎಂದು ಕಾರ್ಯ ನಿರ್ವಹಿಸುವಾಗ ಸಮುದಾಯದ ಒಳಗೆ ಅಥವಾ ಲಂಬಾಣಿ ಮತ್ತು ಲಂಬಾಣೇತರರ ನಡುವೆ ಬದಲಾವಣೆಗಳು ಉಂಟಾಗಬಹುದು.

## ಮಾರುಕಟ್ಟೆಯಲ್ಲಿ ಲಂಬಾಣಿಗಳ ಭಾಗವಹಿಸುವಿಕೆ ಮತ್ತು ಲಂಬಾಣಿಗಳ ಆರ್ಥಿಕ ಜೀವನದ ಮೇಲೆ ಅದರ ಪ್ರಭಾವ

ಗ್ರಾಮಗಳು ಮತ್ತು ಪಟ್ಟಣಗಳ ಪರಿಸರದಲ್ಲಿ ಪ್ರತಿವಾರ ಒಂದು ನಿರ್ದಿಷ್ಟ ದಿನದಂದು ಸಂತೆ ಏರ್ಪಡುತ್ತದೆ. ಈ ಅಧ್ಯಯನವನ್ನು ಕೈಗೊಂಡ ಮರಿಯಮ್ಮನಹಳ್ಳಿ ಗ್ರಾಮದಲ್ಲಿ ಪ್ರತಿ ಸೋಮವಾರ ಸಂತೆ ನಡೆಯುತ್ತದೆ. ಲಂಬಾಣಿಗಳು ತಮ್ಮ ಅನುಭೋಗದ ಅಗತ್ಯಗಳಿಗಿಂತ ಹೆಚ್ಚಾದ ದವಸಧಾನ್ಯಗಳನ್ನು, ಕೆಲವು ಸಂದರ್ಭಗಳಲ್ಲಿ ತಮ್ಮ ಉಪಜೀವನಕ್ಕೆ ಬೇಕಾದ ಪ್ರಮಾಣದಲ್ಲಿಯೇ ಆಹಾರ ಧಾನ್ಯಗಳನ್ನು ಹಾಗೂ ಇತರ ಉತ್ಪನ್ನಗಳನ್ನು ಸಂತೆಗಳಲ್ಲಿ ಮಾರಾಟಮಾಡಿ ತಮಗೆ ಬೇಕಾದ ಇತರ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ. ಆಹಾರ ಧಾನ್ಯಗಳನ್ನು ಬೆಳೆಯದೇ ಇದ್ದವರು ಹಾಗೂ ತಮಗೆ ಬೇಕಾದ ಪ್ರಮಾಣಕ್ಕಿಂತ ಕಡಿಮೆ ಬೆಳೆಯುವವರು ಸಂತೆಗಳಲ್ಲಿ ಅವುಗಳನ್ನು ಕೊಂಡುಕೊಳ್ಳುತ್ತಾರೆ. ಇತರ ದಿನಗಳಲ್ಲಿ ಹಳ್ಳಿಗಾಡಿನ ತಾಂಡಕ್ಕೆ ಹತ್ತಿರವಿರುವ ಅಂಗಡಿಗಳಲ್ಲಿಯೂ ಅವರು ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವುದುಂಟು. ಜಾನುವಾರುಗಳ ಮಾರಾಟ ಮತ್ತು ಖರೀದಿ ವಾರದ ಸಂತೆಗಳಲ್ಲಿ ನಡೆಯುತ್ತದೆ. ಔಪಚಾರಿಕ ಮಾರುಕಟ್ಟೆಗಳಲ್ಲಿ ತಮ್ಮ ಸರಕುಗಳನ್ನು ಮಾರಾಟಮಾಡಿ ದುಡಿಯುವುದಕ್ಕಿಂತ ಹೆಚ್ಚಾಗಿ ತಮ್ಮ ಶ್ರಮದಿಂದ ದುಡಿದ ಆದಾಯದಿಂದಲೇ ಲಂಬಾಣಿಗಳು ತಮಗೆ ಬೇಕಾದ ಸರಕುಗಳನ್ನು ಕೊಂಡುಕೊಳ್ಳುತ್ತಾರೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ನಾಲ್ಕು ಕುಟುಂಬಗಳು ಮತ್ತು ನಾಗಲಾಪುರ ತಾಂಡದಲ್ಲಿ ಎರಡು ಕುಟುಂಬಗಳು ತಮಗೆ ವರ್ಷವಿಡೀ ಅಗತ್ಯವಾದ ಪ್ರಮಾಣಕ್ಕಿಂತ ಹೆಚ್ಚಾಗಿ ಉಳಿದ (ವಾರ್ಷಿಕವಾಗಿ ೨೫,೦೦೦ ರೂಪಾಯಿಗಳ ಮೌಲ್ಯದ) ಆಹಾರ ಧಾನ್ಯಗಳನ್ನು ಮಾರಾಟ ಮಾಡುತ್ತಾರೆ. ಇವರಲ್ಲಿ ಬಹುತೇಕ ಜನರು ವಾರಕ್ಕೊಂದು ಬಾರಿ ಸಂತೆಯಲ್ಲಿ ಮಾರಾಟ - ಖರೀದಿ ಕಾರ್ಯವನ್ನು ಮಾಡುತ್ತಾರೆ. ಹೀಗಾಗಿ ವಿವಿಧ ಸರಕುಗಳ ಬೆಲೆಗಳಲ್ಲಾಗುವ ಏರುಪೇರುಗಳು ಮತ್ತು ವ್ಯತ್ಯಾಸಗಳ ಬಗೆಗೆ ಅವರಿಗೆ ಖಚಿತ ಮಾಹಿತಿ ಇರುತ್ತದೆ. ಧಾನ್ಯಗಳನ್ನು ಖರೀದಿಸುವ ಹಾಗೂ ಸರಕುಗಳನ್ನು ಮಾರುವ ಸಂಚಾರಿ ವರ್ತಕರು ಲಂಬಾಣಿ ತಾಂಡಗಳಿಗೆ ಆಗಾಗ ಭೇಟಿ ಕೊಡುವುದರಿಂದಲೂ ಸರಕುಗಳ ಬೆಲೆಗಳಲ್ಲಿಯ ಏರುಪೇರುಗಳ ಬಗೆಗೆ ತಿಳಿಯುತ್ತದೆ. ಈ ರೀತಿ ಕೊಟ್ಟು ತೆಗೆದುಕೊಳ್ಳುವ ಚೌಕಾಶಿ ವ್ಯವಹಾರಗಳಲ್ಲಿ ಲಂಬಾಣಿ ಕೃಷಿಕರು ಹಾಗೂ ಹೊರಗಿನವರು ಮಾರುಕಟ್ಟೆ ಮನೋಭಾವವನ್ನು ಹೊಂದಿರುತ್ತಾರೆ. ಮಾರುಕಟ್ಟೆಗಳಲ್ಲಿ ಖರೀದಿದಾರರು ಹಾಗೂ ಮಾರಾಟಗಾರರು ಆರ್ಥಿಕತೆಯ ಸನ್ನಿವೇಶಕ್ಕೆ ತಕ್ಕ ರೀತಿಯಲ್ಲಿ ತಮ್ಮ ಪಾತ್ರಗಳನ್ನು ನಿರ್ವಹಿಸುತ್ತಾರೆ. ವ್ಯಕ್ತಿಗಳಾಗಿ ಅವರು ಅನಾಮಧೇಯರಾಗಿರುತ್ತಾರೆ. ವ್ಯವಹಾರಗಳು ಕುದುರುವುದಕ್ಕಿಂತ ಮುನ್ನ ಬಹಳಷ್ಟು ಚೌಕಾಶಿ ನಡೆಯುತ್ತದೆ. ಈ ಮಾರುಕಟ್ಟೆಗಳು ಮುಕ್ತ ಮಾರುಕಟ್ಟೆಯ ಮಾದರಿಯಲ್ಲಿಯೇ ಕಾರ್ಯನಿರ್ವಹಿಸಿದರೂ ಪಟ್ಟಣದ ವರ್ತಕರು ಹಾಗೂ ಮಧ್ಯವರ್ತಿಗಳೊಂದಿಗೆ ಇರುವ ನಿರಂತರವಾದ ಲಂಬಾಣಿಗಳ ವೈಯಕ್ತಿಕ ಸಂಬಂಧಗಳನ್ನು ಆಧರಿಸಿರುತ್ತದೆ. ಮಾರುಕಟ್ಟೆಯ ವೈಯಕ್ತಿಕವಲ್ಲದ ಸಂಬಂಧಗಳ ಸನ್ನಿವೇಶಕ್ಕಿಂತ ಆ ಸಂಬಂಧಗಳು ಲಂಬಾಣಿಗಳಿಗೆ ಸುಭದ್ರತೆ ಹಾಗೂ ವಿಶ್ವಾಸದ ಭಾವವನ್ನು ನೀಡುತ್ತವೆ.

ಸರಕುಗಳ ದಾಸ್ತಾನು ಪ್ರಮಾಣ ಕಡಿಮೆ ಇರುವುದರಿಂದ ಹಾಗು ಆರ್ಥಿಕ ಅಗತ್ಯಗಳನ್ನು ಪೂರೈಸುವ ಪರ್ಯಾಯ ಆದಾಯದ ಮೂಲಗಳು ಇಲ್ಲದಿರುವುದರಿಂದ ತಮ್ಮ ಸರಕುಗಳಿಗೆ ಲಾಭದಾಯಕ ಬೆಲೆಗಳು ಸಿಗುವವರೆಗೆ ದಾಸ್ತಾನನ್ನು ತಡೆದಿಟ್ಟುಕೊಳ್ಳುವ ಸಾಮರ್ಥ್ಯ

ಲಂಬಾಣಿಗಳಲ್ಲಿ ತೀರ ಕಡಿಮೆ ಇರುತ್ತದೆ. ತಾವು ಕೊಡಬೇಕಾದ ಹಣಕಾಸಿನ ವ್ಯವಹಾರಗಳನ್ನು ಇತ್ಯರ್ಥಗೊಳಿಸಲು ಸುಗ್ಗಿಯ ನಂತರದಲ್ಲಿ ಕೂಡಲೇ ಅವರು ತಮ್ಮ ಬಹುಪಾಲು ಕೃಷಿ ಉತ್ಪನ್ನಗಳನ್ನು ಮಾರಾಟಮಾಡುತ್ತಾರೆ. ತತ್ಪರಿಣಾಮವಾಗಿ ಜೂನ್ ತಿಂಗಳಲ್ಲಿ ಮಳೆಗಾಲ ಆರಂಭದ ವೇಳಗಾಗಲೇ ಅವರ ಬಳಿ ಜೀವನ ನಿರ್ವಹಣೆಗೆ ಆಹಾರಧಾನ್ಯ ಉಳಿದಿರುವುದಿಲ್ಲವಾದ್ದರಿಂದ ಅಧಿಕ ಬೆಲೆ ತೆತ್ತು ಅವುಗಳನ್ನು ಮತ್ತೆ ಕೊಂಡುಕೊಳ್ಳಬೇಕಾಗುತ್ತದೆ.

ಲಂಬಾಣಿಗಳ ಹಣಕಾಸಿನ ವ್ಯವಹಾರಗಳಲ್ಲಿ ಶೇಕಡಾ ೨೫ರಷ್ಟು ಚಟುವಟಿಕೆಗಳು ನಿರ್ದಿಷ್ಟವಲ್ಲದ ದಿನಗಳಲ್ಲಿ ಅನೌಪಚಾರಿಕ ಮಾರುಕಟ್ಟೆ ಸನ್ನಿವೇಶಗಳಲ್ಲಿ ನಡೆಯುತ್ತವೆ. ಇಂತಹ ವ್ಯವಹಾರಗಳು ಬಹುತೇಕವಾಗಿ ನಗದು ರೂಪದಲ್ಲಿ ನಡೆಯುತ್ತವೆ. ಕೆಲವು ಮಾತ್ರ ಸರಕಿಗೆ ಪ್ರತಿಯಾಗಿ ಸರಕನ್ನು ನೀಡುವ ರೂಪದಲ್ಲಿ ನಡೆಯುತ್ತವೆ.

ಲಂಬಾಣಿಗಳು ತಮ್ಮ ಬಹುಪಾಲು ಖರೀದಿಗಳನ್ನು ವಾರದಲ್ಲಿ ಒಂದು ಬಾರಿ ಮಾಡಿದರೂ ಸ್ಥಳೀಯ ಅಂಗಡಿಗಳಿಂದ ತಮಗೆ ಬೇಕಾದ ಚಿಕ್ಕಪುಟ್ಟ ದಿನಸಿಗಳನ್ನು ಅಥವಾ ವಸ್ತುಗಳನ್ನು ದಿನನಿತ್ಯ ಕೊಂಡುಕೊಳ್ಳುತ್ತಾರೆ. ದಿನಗೂಲಿ ಮಾಡುವ ಲಂಬಾಣಿಗಳು ಕೂಲಿ ಹಣ ತೆಗೆದುಕೊಂಡು ಬಂದ ನಂತರ ದಿನದ ಕೊನೆಯಲ್ಲಿ ತಮಗೆ ಬೇಕಾಗುವ ವಸ್ತುಗಳನ್ನು ಸ್ಥಳೀಯ ಅಂಗಡಿಗಳಲ್ಲಿ ಕೊಂಡು ಕೊಳ್ಳುತ್ತಾರೆ. ಅಂತಹ ಜನರು ತಮ್ಮ ದಿನನಿತ್ಯದ ಅಗತ್ಯಗಳಿಗಾಗಿ ಅಧಿಕ ಬೆಲೆ ಕೊಟ್ಟು ಸರಕುಗಳನ್ನು ಕೊಂಡುಕೊಳ್ಳುತ್ತಾರೆ. ಅಗತ್ಯಕ್ಕಿಂತ ಅಧಿಕ ಆಹಾರಧಾನ್ಯಗಳ ಸಂಗ್ರಹವಿರುವ ಕುಟುಂಬಗಳಿಂದಲೂ ಇವರು ಆಹಾರ ಧಾನ್ಯಗಳನ್ನು ಕೊಂಡುಕೊಳ್ಳುತ್ತಾರೆ. ಸಾಮಾನ್ಯವಾಗಿ ಆಹಾರಧಾನ್ಯಗಳನ್ನು ಕೊಂಡುಕೊಳ್ಳುವುದಕ್ಕಾಗಿಯೇ ಅವರು ಕಟ್ಟಿಗೆ ಹಾಗೂ ಇತರ ಉತ್ಪನ್ನಗಳನ್ನು ನೆರೆಹೊರೆಯ ಹಾಗೂ ದೂರದ ಹಳ್ಳಿಗಾಡುಗಳಲ್ಲಿ ಮಾರಾಟಮಾಡುತ್ತಾರೆ.

ಲಂಬಾಣಿ ಮಹಿಳೆಯರ ಉಡುಪುಗಳ ವಿಶೇಷ ಮಾರುಕಟ್ಟೆ ಸಂಘಟನೆಯನ್ನು ಕುರಿತು ಇಲ್ಲಿ ಪ್ರಸ್ತಾಪ ಮಾಡುವುದು ಬಹುಮುಖ್ಯ. ಇತರ ಯಾವುದೇ ಸಮುದಾಯವು ಇಂತಹ ಉಡುಪು-ಸಾಮಗ್ರಿಗಳನ್ನು ಬಳಸುವುದಿಲ್ಲವಾದ್ದರಿಂದ ಈ ಬಗೆಯ ಸರಕುಗಳಿಗೆ ಸಾಮಾನ್ಯ ಬೇಡಿಕೆ ಎಂಬುದಿಲ್ಲ. ಲಂಬಾಣೇತರ ಕೆಲವು ವ್ಯಾಪಾರಿಗಳು ಇಂತಹ ಸರಕು ಸಾಮಗ್ರಿಗಳನ್ನು ತಯಾರಿಸುವಲ್ಲಿ ವಿಶೇಷ ಪ್ರಾವಿಣ್ಯತೆಯನ್ನು ಪಡೆದಿದ್ದು ಗದಗ, ಹೊಸಪೇಟೆ, ರಾಣಿಬೆನ್ನೂರು, ರಾಮದುರ್ಗ ಮೊದಲಾದ ಪಟ್ಟಣಗಳಲ್ಲಿದ್ದು ತಮ್ಮ ಸುತ್ತಮುತ್ತಲಿನ ಅಥವಾ ಸಮೀಪದ ಲಂಬಾಣಿ ತಾಂಡಗಳ ಜನರಿಗೆ ಅವುಗಳನ್ನು ಒದಗಿಸುತ್ತಿದ್ದಾರೆ. ಈ ಉಡುಪುಗಳಿಗೆ ಬಳಸುವ ಬಟ್ಟೆಯು ಕೆಂಪು ವರ್ಣದ ಒರಟಾದ ದಪ್ಪ ಬಟ್ಟೆಯಾಗಿರುತ್ತದೆ. ಅದನ್ನು ಕಪ್ಪು, ಕಂದು ಹಾಗೂ ಟ್ಯಾನಿಕ್ ಆಮ್ಲದ ದ್ರಾವಣದಲ್ಲಿ ನೆನೆಸಿ ತಂದು ಬಣ್ಣಕ್ಕೆ ತಿರುಗಿ.!ಲಾಗಿರುತ್ತದೆ. ತಮಗೆ ಸಮೀಪದಲ್ಲಿರುವ ಇಂತಹ ವ್ಯಾಪಾರಿಗಳ ಬಳಿ ಲಂಬಾಣಿಗಳು ತಮ್ಮ ಉಡುಪು-ಸಾಮಗ್ರಿಗಳನ್ನು ಕೊಂಡುಕೊಳ್ಳುತ್ತಾರೆ. ಕೆಲವು ಸಂದರ್ಭದಲ್ಲಿ ಈ ವ್ಯಾಪಾರಿಗಳೇ ಲಂಬಾಣಿ ವಾಸಸ್ಥಾನದ ತಾಂಡಗಳಿಗೆ ತಮ್ಮ ಸರಕುಗಳನ್ನು ಕೊಂಡೊಯ್ಯು ಮಾರಾಟ ಮಾಡುತ್ತಾರೆ. ಲಂಬಾಣಿ ಮಹಿಳೆಯರ ಉಡುಪುಗಳ ವಿಷಯದಲ್ಲಿ ಕೆಲವು ವ್ಯಾಪಾರಿಗಳು ಏಕಸ್ವಾಮ್ಯವನ್ನು ಹೊಂದಿದ್ದಾರೆ.

೧೯೯೮-೯೯ರ ಅವಧಿಯಲ್ಲಿ ಓರ್ವ ಲಂಬಾಣಿ ಮಹಿಳೆಯ ಉಡುಪಿನ ಬೆಲೆ ೩೫೦ ರೂಪಾಯಿಗಳಷ್ಟು ಇದ್ದಿತು. ಇತ್ತೀಚೆಗೆ ಲಂಬಾಣಿ ಯುವತಿಯರು ಹಾಗೂ ಮಹಿಳೆಯರು ಕೈಗಾರಿಕೆಗಳಿಂದ ಉತ್ಪಾದಿಸುವ ಆಧುನಿಕ ಮಾದರಿಯ ಬಟ್ಟೆಗಳನ್ನು ತೊಡುವಲ್ಲಿ ಆಸಕ್ತರಾದ್ದರಿಂದ ಸಾಂಪ್ರದಾಯಿಕ ಮಾದರಿಯ ಬಟ್ಟೆಯ ಮಾರಾಟವು ಕುಗ್ಗಿದೆ.

ಇಂದು ಲಂಬಾಣಿ ವಿವಾಹದ ಉಡುಪು ಸಂಪ್ರದಾಯ ಹಾಗೂ ಆಧುನಿಕತೆಗಳ ಸಮ್ಮಿಶ್ರಣವಾಗಿದ್ದು, ಸಾಂಪ್ರದಾಯಿಕ ಶೈಲಿಯ ಬಟ್ಟೆಯನ್ನು ವರನ ಮೇಲು ಬಟ್ಟೆ (ಖೋಲ್) ಹಾಗೂ ವಧುವಿನ ಮೇಲುವಸ್ತ್ರ (ಚಟಿಯಾ ಅಥವಾ ಓಡನಿ) ಮೊದಲಾದ ಪ್ರಮುಖ ಉಡುಪುಗಳ ರೂಪದಲ್ಲಿ ಸಾಂಕೇತಿಕವಾಗಿ ಬಳಸಲಾಗುತ್ತದೆ. ಇತರ ಉಡುಪುಗಳಿಗೆ ಆಧುನಿಕ ಮಾದರಿಯ ಬೆಡಗಿನ ಬಟ್ಟೆಗಳನ್ನು ಬಳಸಲಾಗುತ್ತದೆ.

ಸರಕುಗಳಿಗೆ ಪ್ರತಿಯಾಗಿ ಸರಕುಗಳನ್ನು ಕೊಟ್ಟು ತೆಗೆದುಕೊಳ್ಳುವುದು ಸ್ಥಳೀಯ ಮಟ್ಟದಲ್ಲಿ ಅನೌಪಚಾರಿಕವಾಗಿ ಅಲ್ಪಸ್ವಲ್ಪ ನಡೆಯುತ್ತದೆ. ಸಂಚಾರಿ ಕುಂಬಾರರು ಧಾನ್ಯಗಳಿಗೆ ವಿನಿಮಯವಾಗಿ ಮಡಿಕೆಗಳನ್ನು ಕೊಡುತ್ತಾರೆ. ಹೊತ್ತು ಮಾರುವ ವರ್ತಕರು ತರಕಾರಿ, ಬಾಳೆಹಣ್ಣು, ಹುರಿದ ಕಡಲೆಕಾಯಿ, (ಶೇಂಗಾ) ಮೊದಲಾದವುಗಳನ್ನು ವಿನಿಮಯದ ರೀತಿ ಒದಗಿಸುತ್ತಾರೆ. ಧಾನ್ಯಗಳನ್ನು ಕೊಡಲಾಗದಿದ್ದವರು ಇವೆಲ್ಲವುಗಳನ್ನು ಹಣಕೊಟ್ಟು ಕೊಂಡುಕೊಳ್ಳುತ್ತಾರೆ. ಐವತ್ತು ವರ್ಷಗಳಷ್ಟು ಹಿಂದಿನ ಕಾಲದೊಂದಿಗೆ ಹೋಲಿಕೆ ಮಾಡಿ ನೋಡುವುದಾದರೆ ಇಂದು ಚಿಕ್ಕಪುಟ್ಟ ವ್ಯವಹಾರಗಳಲ್ಲಿ ಕೂಡ ಹಣದ ಬಳಕೆ ಅಧಿಕವಾಗಿದೆ. ಸರಕಿಗೆ ಪ್ರತಿಯಾಗಿ ಸರಕನ್ನು ವಿನಿಮಯಿಸುವ ರೂಢಿಯೇ ಅಳಿದುಹೋಗಿದೆ ಎನ್ನುವಷ್ಟು ಮಟ್ಟಿಗೆ ಇಲ್ಲವಾಗಿದೆ. '೧೯ನೆ ಶತಮಾನದ ಮಧ್ಯಭಾಗದವರೆಗೆ ಲಂಬಾಣಿಗಳು ಅಲೆಮಾರಿ ವ್ಯಾಪಾರಿಗಳು ಹಾಗೂ ಸರಕು ಸಾಗಾಣಿಕೆದಾರರಾಗಿದ್ದಾಗ ಸರಕಿಗೆ ಪ್ರತಿಯಾಗಿ ಸರಕನ್ನು ವಿನಿಮಯಿಸುವುದು ಪರಸ್ಪರ ಕೊಟ್ಟುತೆಗೆದುಕೊಳ್ಳುವಿಕೆಗಳ ಪ್ರಧಾನ ರೀತಿಯಾಗಿತ್ತು'. ಶಾಂತಿಕಾಲದಲ್ಲಿ ಇವರು ಸೈನ್ಯ ಪಡೆಗಳಿಗೆ ಪೂರೈಸುತ್ತಿದ್ದ ಸರಕು ಸಾಗಾಣಿಕೆಗೆ ನಗದು ಹಣವನ್ನು ಕೊಡಮಾಡಲಾಗುತ್ತಿತ್ತು (ಕ್ರಫೋರ್ಡ್ ೧೭೪೭ : ೯೦).

ಇತರ ಮಾದರಿಯ ವಿನಿಮಯಗಳು ಇಂದಿಗೂ ಅಲ್ಪಸ್ವಲ್ಪ ಪ್ರಮಾಣದಲ್ಲಿ ರೂಢಿಯಲ್ಲಿವೆಯಾದರೂ ಇಂದು ಲಂಬಾಣಿ ಆರ್ಥಿಕತೆಯು ಸ್ಥಳೀಯ ಮಾರುಕಟ್ಟೆಯ ಆರ್ಥಿಕತೆಯಲ್ಲಿ ಒಂದಾಗಿ ಹೋಗಿದೆ. ಕೇವಲ ಸರಕು ಮತ್ತು ಸೇವೆಗಳ ಅನುಭೋಗಕ್ಕಾಗಿ ಮಾತ್ರವೇ ಅಲ್ಲದೆ ಅವರು ಇಂದು ಸಂಪನ್ಮೂಲ ಮಾರುಕಟ್ಟೆ (ಜಮೀನು ಮತ್ತು ಜಾನುವಾರು), ಕಾರ್ಮಿಕ ಮಾರುಕಟ್ಟೆ, ಮತ್ತು ಆರಂಭದ ದೇಶೀಯ ಬಂಡವಾಳ ಮಾರುಕಟ್ಟೆ, (ಬಡ್ಡಿ ಆಧರಿತ ಸಾಲಗಳು ಮತ್ತು ಠೇವಣಿಗಳ ರೂಪದಲ್ಲಿರುವ) ಮೊದಲಾದವುಗಳಲ್ಲಿಯೂ ಪಾಲುಗೊಳ್ಳುತ್ತಿದ್ದಾರೆ.

ಇದುವರೆಗೆ ನಾವು ಲಂಬಾಣಿ ಸಮುದಾಯದ ಎಲ್ಲ ವಿನಿಮಯ ಮಾದರಿಗಳನ್ನು ಪರಿಶೀಲಿಸಿದ್ದಾಗಿದೆ. ಇವುಗಳು ಈ ಸಮುದಾಯದ ಜನಜೀವನದ ಆರ್ಥಿಕ ಸ್ವರೂಪವನ್ನು ಮಾತ್ರವಲ್ಲದೆ ಸಾಮಾಜಿಕ ಸನ್ನಿವೇಶಗಳು, ಪರಸ್ಪರ ವ್ಯವಹಾರ ಸಂಬಂಧಗಳು ಮತ್ತು ಸರಕು-

ಸೇವೆಗಳ ವಿನಿಮಯ ಮೊದಲಾದವುಗಳನ್ನು ತಿಳಿಸುತ್ತವೆ. ಲಂಬಾಣಿ ಸಮುದಾಯವು ಒಳಗೆ ಗುಣಾತ್ಮಕವಾಗಿ ಭಿನ್ನವಾದ ಅನೇಕ ಮಾದರಿಗಳ ಪರಸ್ಪರ ಒಳ ಸಂಬಂಧಿ, ವಿವಿಧ ರೀತಿಗಳ ವಿನಿಮಯಗಳನ್ನು ಒಳಗೊಂಡಿದೆ. ಪ್ರಾದೇಶಿಕ ಹಾಗೂ ರಾಷ್ಟ್ರಮಟ್ಟದಲ್ಲಿ ಲಂಬಾಣಿ ಸಮುದಾಯವು ಇತರೆ ಸಮುದಾಯಗಳೊಂದಿಗೆ ಹೊಂದಿಕೊಂಡಿರುವಂತೆಯೇ, ಒಂದು ಸಮುದಾಯದ ವಿಭಿನ್ನ ಕ್ಷೇತ್ರಗಳು ಹಾಗೂ ಕಾರ್ಯ ಜಾಲವನ್ನು ಪರಸ್ಪರವಾಗಿ ಹೇಗೆ ಆಂತರಿಕ ಸಂಬಂಧಗಳನ್ನು ಹೊಂದಿರುತ್ತದೆ ಎಂಬುದನ್ನು ಪರಿಶೀಲಿಸುವ ಮಾರ್ಗಗಳಲ್ಲಿ, ವಿನಿಮಯ - ಉಪವ್ಯವಸ್ಥೆಗಳು, ಆಹಾರ ಧಾನ್ಯ, ಬೇಯಿಸಿದ ಆಹಾರ, ಮೌಲ್ಯಯುತವಾದ ವಸ್ತ್ರ ಆಭರಣ, ಗೌರವ ಮತ್ತು ಒಪ್ಪಂದಗಳ ಮೂಲಕ, ಔಪಚಾರಿಕ ಮತ್ತು ಅನೌಪಚಾರಿಕ ವಿನಿಮಯ ವ್ಯವಸ್ಥೆಯು ಲಂಬಾಣಿಗಳ ಸಾಮಾಜಿಕ ಜೀವನದಲ್ಲಿ ವ್ಯಾಪಿಸಿದೆ.

## ಕುಟುಂಬದ ಆದಾಯ ಹಾಗೂ ವೆಚ್ಚಗಳ ಮಾದರಿಗಳು

ಮರಿಯಮ್ಮನಹಳ್ಳಿ (೧೯೯೮-೯೯ ) ಹಾಗೂ ನಾಗಲಾಪುರ (೧೯೯೮-೯೯) ತಾಂಡಗಳ ಕುಟುಂಬಗಳ ವಾರ್ಷಿಕ ಆದಾಯಗಳನ್ನು ಅವುಗಳ ಜೀವನೋಪಾಯದ ವಿವಿಧ ಮೂಲಗಳನ್ನಾಧರಿಸಿ ಅಂದಾಜು ಮಾಡಲಾಗಿದೆ. ತಾಂಡಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಎಲ್ಲ ಕುಟುಂಬಗಳ ವಾರ್ಷಿಕ ಆದಾಯವನ್ನು ತುಲನಾತ್ಮಕವಾಗಿ ಗಣನೆ ಮಾಡಲಾಗಿದೆ.

### ಕೋಷ್ಟಕ ೨.೭

**ಪ್ರಮುಖ ವೃತ್ತಿಗಳನ್ನಾಧರಿಸಿದ ಮರಿಯಮ್ಮನಹಳ್ಳಿ ತಾಂಡದ ಕುಟುಂಬಗಳ ಒಟ್ಟು ವಾರ್ಷಿಕ ಆದಾಯದ ಬಗೆಗಳು (೧೯೯೮-೯೯)**

| ವೃತ್ತಿಗಳು | ಆದಾಯ ಗುಂಪುಗಳು (ರೂ.ಗಳಲ್ಲಿ). | | | |
|---|---|---|---|---|
| | ೫೦೦೦ ರಿಂದ ೧೦೦೦೦ವರೆಗೆ | ೧೦೦೦೧ ರಿಂದ ೧೫೦೦೦ ವರೆಗೆ | ೧೫೦೦೧ ರಿಂದ ೨೦೦೦೦ಗಳಿಗೂಹೆಚ್ಚು | ಒಟ್ಟು |
| ಕೃಷಿ ಸಾಗುವಳಿ | ೩೧ | ೧೫ | ೪ | ೫೦ |
| ಕೂಲಿ ದುಡಿಮೆ | ೩೯ | ೪ | - | ೪೩ |
| ಅರಣ್ಯ ಉತ್ಪನ್ನಗಳು | ೪ | - | - | ೪ |
| ಪಡೆದ ಸಾಲಗಳು | ೧ | ೧ | - | ೨ |
| ಕುಶಲಕರ್ಮಿ (ಬಡಿಗತನ) | - | ೧ | - | ೧ |
| ಇತರೆ (ಬಡ್ಡಿಸಾಲ ನೀಡಿಕೆ ಹಾಗೂ ಕಿರುಕುಳ ವ್ಯಾಪಾರ) | ೨ | - | - | ೨ |
| ಒಟ್ಟು | ೨೨ (ಶೇಕಡಾ ೭೫.೫) | ೨೧(ಶೇಕಡಾ ೨೦.೬) | ೪ (ಶೇಕಡಾ ೩.೬) | ೧೦೨ (ಶೇಕಡ ೧೧೦೦) |

ಮರಿಯಮ್ಮನಹಳ್ಳಿ ತಾಂಡದ ೧೦೨ ಕುಟುಂಬಗಳ ವಾರ್ಷಿಕ ಆದಾಯವನ್ನು ಅವುಗಳ ಪ್ರಮುಖ ವೃತ್ತಿಗಳನ್ನಾಧರಿಸಿದಂತೆ ಕೋಷ್ಟಕ ೨.೭ರಲ್ಲಿ ನೀಡಲಾಗಿದೆ. ಕುಟುಂಬದ ಒಟ್ಟಾರೆ ಆದಾಯವನ್ನು ಪ್ರಮುಖ ಆದಾಯ ಮೂಲದಿಂದ ತೆಗೆದುಕೊಳ್ಳಲಾಗಿದೆ. ಹೆಚ್ಚಿನ

ಪರಿಸ್ಥಿತಿಯಲ್ಲಿ ಒಂದು ಅಥವಾ ಅದಕ್ಕಿಂತ ಹೆಚ್ಚಿನ ಪೂರಕ ಆದಾಯದ ಮೂಲಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಮೂರು ಸ್ಥೂಲ ಆದಾಯದ ವರ್ಗಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಇದನ್ನು ಕನಿಷ್ಠ, ಮಧ್ಯಮ ಹಾಗೂ ಉತ್ತಮ ಎಂಬುದಾಗಿ ಗುರುತಿಸಲಾಗಿದೆ.[೩]

ಕೋಷ್ಟಕ ೨.೭ ರಿಂದ ಸ್ಪಷ್ಟವಾಗಿ ತಿಳಿದುಬರುವ ಅಂಶವೆಂದರೆ ಒಟ್ಟು ೧೦೨ ಕುಟುಂಬಗಳಲ್ಲಿ ೨೨ ಕುಟುಂಬಗಳು (ಶೇಕಡ ೨೫.೫ ರಷ್ಟು ಕುಟುಂಬಗಳು) ಕನಿಷ್ಠ ಆದಾಯದ ಗುಂಪುಗಳಾಗಿದ್ದು ವಾರ್ಷಿಕ ೫೦೦೦ ರೂ.ಗಳಿಂದ ೧೦೦೦೦ ರೂ.ಗಳ ವ್ಯಾಪ್ತಿಯಲ್ಲಿ ಬರುತ್ತವೆ. ೨೧ ಕುಟುಂಬಗಳು (ಶೇಕಡಾ ೨೦.೬) ವಾರ್ಷಿಕ ೧೦೦೦ ರಿಂದ ೧೫೦೦೦ ರೂ.ಗಳ ವರೆಗಿನ ಮಧ್ಯಮ ಆದಾಯ ಗುಂಪುಗಳಲ್ಲಿ ಹಾಗೂ ಉಳಿದ ೪ ಕುಟುಂಬಗಳು (ಶೇಕಡಾ ೩.೯) ವಾರ್ಷಿಕ ೧೫೦೦೦ ರಿಂದ ೨೦೦೦೦ರೂ.ಗಳಿಗೂ ಹೆಚ್ಚಿನ ಆದಾಯ ಇರುವ ಕುಟುಂಬಗಳು ಉತ್ತಮ ಆದಾಯ ಗುಂಪಿನಲ್ಲಿ ಸೇರ್ಪಡೆಯಾಗುತ್ತವೆ. ಮರಿಯಮ್ಮನಹಳ್ಳಿ ತಾಂಡದ ಆರ್ಥಿಕತೆಯ ಮಿತಿಗಳನ್ನು ತಿಳಿದ ನಂತರ ಕನಿಷ್ಠ ಹಾಗೂ ಗರಿಷ್ಠ ಆದಾಯಗಳನ್ನು ಗುರುತಿಸಬೇಕು. ಎರಡು ಕುಟುಂಬಗಳು ವಾರ್ಷಿಕ ೫೦೦೦ ರೂ. ಆದಾಯವನ್ನುಳ್ಳವುಗಳಾಗಿವೆ. (೧) ಏಕಾಂಗಿ ಓರ್ವ ವಿಧವೆ ವೃದ್ಧೆ ಮೊಮ್ಮಗನ ವಾರ್ಷಿಕ ಕೂಲಿಯಾಗಿ ೨೦೦೦೦ರೂ.ಗಳು, ಕುಟುಂಬದ ಮೊದಲಿನ ಆದಾಯಗಳನ್ನು ಬಡ್ಡಿ ಸಾಲ ನೀಡುತ್ತ, ಬಡ್ಡಿಯ ರೂಪದಲ್ಲಿ ೨೫೦ ರೂ.ಗಳನ್ನು ಹಾಗೂ ತಾನೇ ಸ್ವತಃ ಸಣ್ಣಪುಟ್ಟ ಉತ್ಪನ್ನಗಳನ್ನು ಮಾಡುವುದರಿಂದ ೮೦೦ ರೂ.ಗಳು - ಹೀಗೆ ಒಟ್ಟು ವಾರ್ಷಿಕ ೫೦೦೦ ರೂ.ಗಳ ಆದಾಯವನ್ನು ಹೊಂದಿದ್ದಾಳೆ. (೨) ಸಂತಾನವಿಲ್ಲದ ಒಬ್ಬ ವಿಧುರನು ಕೂಲಿಯ ರೂಪದಲ್ಲಿ ೪೩೦೦ ರೂ.ಗಳು, ಉಪಉತ್ಪನ್ನಗಳ ಮಾರಾಟದಿಂದ ೭೦೦ ರೂ.ಗಳು ಹೀಗೆ ವಾರ್ಷಿಕ ೫೦೦೦ ರೂ.ಗಳ ಆದಾಯವನ್ನು ಹೊಂದಿದ್ದಾನೆ. ಅತಿ ಹೆಚ್ಚಿನ ಆದಾಯವನ್ನುಳ್ಳ ಕುಟುಂಬವು ೨೦ ಸದಸ್ಯರನ್ನೊಳಗೊಂಡಿದ್ದು ವಾರ್ಷಿಕ ೨೫೦೦೦ ರೂ.ಗಳಷ್ಟು ಆದಾಯ ಹೊಂದಿದೆ. ಕೃಷಿ ಸಾಗುವಳಿಯಿಂದ ೧೫೧೨೦ ರೂ.ಗಳು, ಕೂಲಿಯ ರೂಪದಲ್ಲಿ ೫೭೫೦ ರೂ.ಗಳು ಉಪಉತ್ಪನ್ನಗಳ ಮಾರಾಟದಿಂದ ೧೫೫೦ ರೂ.ಗಳು ಹಾಗೂ ಬಡ್ಡಿ ವ್ಯವಹಾರದಿಂದ ೭೦೦ ರೂ.ಗಳು, ಜಾನುವಾರುಗಳ ಮಾರಾಟದಲ್ಲಿ ಮಧ್ಯವರ್ತಿಗಳಾಗಿ ಕೆಲಸಮಾಡುವುದರಿಂದ ೨೫೦೦ ರೂ.ಗಳು - ಹೀಗೆ ಒಟ್ಟು ೨೫೦೦೦ರೂ.ಗಳಷ್ಟು ವಾರ್ಷಿಕ ಆದಾಯವನ್ನು ಹೊಂದಿದೆ. 23/7/10.

ಕೋಷ್ಟಕ ೨.೮ರಲ್ಲಿ ಮರಿಯಮ್ಮನಹಳ್ಳಿ ತಾಂಡದ ೧೦೨ ಕುಟುಂಬಗಳ ಪ್ರಮುಖ ಆದಾಯವನ್ನು ಪೂರಕ ಉಪಆದಾಯ ಕ್ಷೇತ್ರಗಳ ಲೆಕ್ಕಾಚಾರದಲ್ಲಿ ಕೊಡಲಾಗಿದೆ. ವಾರ್ಷಿಕವಾಗಿ ರೂ. ೫೦ ರಿಂದ ೪೫೦೦ ರೂ.ವರೆಗೆ ಕುಟುಂಬದ ಆದಾಯದಲ್ಲಿಯ ವ್ಯತ್ಯಾಸವನ್ನು ನಾವು ಇಲ್ಲಿ ಕಾಣಬಹುದಾಗಿದೆ. ಆದಾಯದ ಮೂಲಗಳಿಗೆ ಸಂಬಂಧಿಸಿದಂತೆ ಮರಿಯಮ್ಮನಹಳ್ಳಿ ತಾಂಡದ ಒಟ್ಟು ೧೦೨ ಕುಟುಂಬಗಳಲ್ಲಿ ೫೦ ಕುಟುಂಬಗಳು ಕೃಷಿ ಸಾಗುವಳಿಯಿಂದ ಅಧಿಕ ಆದಾಯವನ್ನು ಪಡೆಯುತ್ತಿದ್ದರೆ, ೧೪ ಕುಟುಂಬಗಳು ಕೃಷಿಯನ್ನು ಪರೋಕ್ಷವಾಗಿ ಅವಲಂಬಿಸಿದ ಆದಾಯದ ಮೂಲವಾಗಿದೆ. ಜೀವನೋಪಾಯದ ಇತರ ಪ್ರಮುಖ ಆದಾಯದ ಮೂಲಗಳೆಂದರೆ ಕೂಲಿ ಆಧಾರದ

---

*೩. ಸರಕಾರಿ ಪದ್ಧತಿಯಂತೆ ಆದಾಯ ಗುಂಪುಗಳ ವರ್ಗೀಕರಣವನ್ನು ಮಾಡಲಾಗಿದೆ. ರೂ. ೧೧,೮೦೦ ರ ವರೆಗೆ ವಾರ್ಷಿಕ ಆದಾಯವಿರುವ ಕುಟುಂಬದ ವ್ಯಕ್ತಿಯು ಬಡ ವಿದ್ಯಾರ್ಥಿ ಎಂದು ಸರಕಾರದ ನೆರವು ಪಡೆಯಲು ಅರ್ಹನು; ಸರಕಾರವು ೧೯೯೭-೯೮ರಲ್ಲಿ ೨೦,೦೦೦ರೂಪಾಯಿಗಳಿಗಿಂತಲೂ ಕಡಿಮೆ ಆದಾಯವಿರುವರು ಬಡತನದ ರೇಖೆಗಿಂತ ಕೆಳಗಿರುವರು ಎಂದು ತೀರ್ಮಾನಿಸಲಾಗುವುದು. ಈ ಸಾಮಾನ್ಯ ವರ್ಗೀಕರಣವನ್ನಾಧರಿಸಿ ಮಧ್ಯಮ ವರ್ಗವನ್ನು ವಾರ್ಷಿಕ ರೂ. ೧೦,೦೦೦ದಿಂದ ರೂ. ೧೫೦೦೦ಕ್ಕಿಂತ ಅಧಿಕ ಆದಾಯವನ್ನುಳ್ಳ ಕುಟುಂಬಗಳನ್ನು ಉತ್ತಮ ಆದಾಯ ಗುಂಪಿಗೆ ಸೇರಿದವುಗಳೆಂದು ಪರಿಗಣಿಸಲಾಗಿದೆ.*

ದುಡಿಮೆಗಳಾದ ಕೃಷಿ ಕೂಲಿ, ಕಟ್ಟಡ ಕಟ್ಟುವ ಸಹಾಯಕ ಕೆಲಸ, ಕಟ್ಟಿಗೆ ಒಡೆಯುವುದು, ಗಣಿ ಕೂಲಿ ಇತ್ಯಾದಿ. ಈ ಉದ್ಯೋಗಗಳು ೪೩ ಕುಟುಂಬಗಳಿಗೆ ಪ್ರಾಥಮಿಕ ಆದಾಯದ ಮೂಲವಾಗಿದ್ದರೆ, ೩೫ ಕುಟುಂಬಗಳಿಗೆ ಪೂರಕ ಆದಾಯದ ಮೂಲವಾಗಿದೆ. ಸಣ್ಣ ಭೂಹಿಡುವಳಿ ಹೊಂದಿದ ಲಂಬಾಣಿಗಳು ಹಾಗೂ, ಭೂರಹಿತ ಲಂಬಾಣಿಗಳು ಹೆಚ್ಚಾಗಿ ಕೂಲಿ ಆಧಾರದ ದುಡಿಮೆಯನ್ನೇ ಅವಲಂಬಿಸಿ ಜೀವನ ನಡೆಸುತ್ತಾರೆ. ಇವುಗಳೆ ಇಂತಹ ಕುಟುಂಬಗಳಿಗೆ ಆದಾಯದ ಪ್ರಮುಖ ಮೂಲಗಳಾಗಿವೆ. ಅವಿಭಕ್ತ ಕುಟುಂಬದ ಸದಸ್ಯರು ತಮ್ಮ ಕೃಷಿ ಸಾಗುವಳಿ ಕಾರ್ಯಗಳಿಂದ ಉಳಿದ ಅವಧಿಯಲ್ಲಿ ಕೂಲಿಯ ಕೆಲಸಕ್ಕೆ ಹೋಗುತ್ತಾರೆ. ಕುರುಚಲು ಗಿಡದಂತಹ ಕಾಡುಗಳಿಂದ ಕಟ್ಟಿಗೆ ಸಂಗ್ರಹಿಸುವುದು, ಬಡಗಿತನ, ಚಿಕ್ಕ ಪೆಟ್ಟಿಗೆ ಅಂಗಡಿಗಳನ್ನು ನಡೆಸುವುದು, ಬಡ್ಡಿ ವ್ಯವಹಾರ ಮೊದಲಾದ ಇತರೆ ವೃತ್ತಿಗಳು ೯ ಕುಂಟುಂಬಗಳಿಗೆ ಜೀವನೋಪಾಯದ ಪ್ರಮುಖ ಆದಾಯ ಮೂಲಗಳಾಗಿದ್ದರೆ, ೩೪ ಕುಟುಂಬಗಳು ಇತರೆ ವೃತ್ತಿ ಮತ್ತು ಉಪ ಉತ್ಪನ್ನಗಳ ಮಾರಾಟದ ಮೂಲಕ ಪೂರಕ ಆದಾಯ ಮೂಲವಾಗಿ ಆಶ್ರಯಿಸಿವೆ. ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಹೆಚ್ಚಿನ ಕುಟುಂಬಗಳು ಸಾಮಾನ್ಯ ಬಡತನದಲ್ಲಿವೆ (ಶೇಕಡ ೭೫.೫) ಬಡತನದ ರೇಖೆಗಿಂತ ಕೆಳಗೆ ಇರುವುದರಿಂದ ಅವರು ಬಡತನದಲ್ಲಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಅವುಗಳಲ್ಲಿ ಎರಡು ಕುಟುಂಬಗಳು ಸಾಲ ಮಾಡಿಯೇ ತಮ್ಮ ಜೀವನೋಪಾಯದ ಅಗತ್ಯಗಳನ್ನು ಪೂರೈಸಿಕೊಳ್ಳಬೇಕಾದ ಸ್ಥಿತಿಯಲ್ಲಿದ್ದರೆ, ೧೭ ಕುಟುಂಬಗಳು ತಮ್ಮ ಹಣಕಾಸಿನ ತೊಂದರೆಗಳನ್ನು ನೀಗಿಸಿಕೊಳ್ಳಲು ಸಾಕಷ್ಟು ಸಾಲವನ್ನು ಮಾಡುತ್ತಲೇ ಇರಬೇಕಾಗಿದೆ. ಕೂಲಿ ದುಡಿಮೆ ಮತ್ತು ಉಪ ಉತ್ಪನ್ನಗಳ ಮಾರಾಟ ಸಾಮಾನ್ಯವಾಗಿ ಆನುಷಂಗಿಕ ಆದಾಯದ ಮೂಲಗಳಾಗಿವೆ. ಆದಾಯದ ಮೂಲಗಳನ್ನು ಕುರಿತಾದ ಈ ವಿವರಣೆಗಳಿಂದ ಹಾಗೂ ಅವರಲ್ಲಿ ಯಾರೂ ಕೃಷಿಯೇತರ ಅಥವಾ ನೇರವಾಗಿ ಔದ್ಯಮಿಕ ಸ್ವರೂಪದ ಉದ್ಯೋಗಗಳಲ್ಲಿ ತೊಡಗಿಲ್ಲವಾದ್ದರಿಂದ ಮರಿಯಮ್ಮನಹಳ್ಳಿ ತಾಂಡವನ್ನು ಕೃಷಿ ಆಧಾರಿತ ಸಮುದಾಯವೆಂದು ಪರಿಗಣಿಸ ಬಹುದಾಗಿದೆ. ವೃತ್ತಿ ಚಲನೆಯ ವ್ಯಾಪ್ತಿ ಸೀಮಿತವಾಗಿದ್ದು, ಆಧುನಿಕ ಸ್ವರೂಪದ ಉದ್ಯೋಗಾವಕಾಶಗಳು ಇಲ್ಲವಾಗಿವೆ. ಲಂಬಾಣಿ ಜನರ ನಿರಕ್ಷರತೆಯೂ ಇದಕ್ಕೆ ಕಾರಣವಾಗಿದೆ.

ಕೋಷ್ಟಕ ೨.೮

**ಮರಿಯಮ್ಮನಹಳ್ಳಿ ತಾಂಡ ಕುಟುಂಬಗಳ ಪ್ರಾಥಮಿಕ ಮತ್ತು ಆನುಷಂಗಿಕ ವೃತ್ತಿಗಳು ಹಾಗೂ ಅವುಗಳಿಂದ ಬರುವ ವಾರ್ಷಿಕ ಆದಾಯ (೧೯೯೮-೯೯)**

| ವೃತ್ತಿಗಳು | ಆದಾಯ ಗುಂಪುಗಳು | | | |
|---|---|---|---|---|
| | ರೂ. ೧೫೦೦ ರವರೆಗೆ | ರೂ. ೧೫೦೧ ರಿಂದ ರೂ. ೩೦೦೦ರ ವೆರಗೆ | ರೂ. ೩೦೦೧ ರಿಂದ ರೂ. ೪೫೦೦ರವರೆಗೆ | ಒಟ್ಟು |
| ಕೃಷಿ ಸಾಗುವಳಿ | ೮ | ೫ | ೧ | ೧೪ |
| ಕೂಲಿ ದುಡಿಮೆ | ೨೬ | ೭ | ೨ | ೩೫ |
| ಉಪ ಉತ್ಪನ್ನ ಮಾರಾಟ | ೩೩ | ೧ | - | ೩೪ |
| ಸಾಲಪಡೆದ ಕುಟುಂಬಗಳು | ೧೩ | ೩ | ೧ | ೧೭ |
| ಕುಶಲ ಕರ್ಮಿಗಳು (ಬಡಿಗತನ) | ೧ | - | - | ೧ |
| ಕಿರುಕುಳ ವ್ಯಾಪಾರ | ೧ | - | - | ೧ |
| ಒಟ್ಟು | ೮೨ | ೧೬ | ೪ | ೧೦೨ |

ಸೂಚನೆ : ವ್ಯತ್ಯಾಸದ ವ್ಯಾಪ್ತಿ ರೂ. ೫೦ ರಿಂದ ರೂ. ೪,೫೦೦ರ ವರೆಗೆ ಇದೆ.

ನಾಗಲಾಪುರ ತಾಂಡದಲ್ಲಿಯ ೯೯ ಕುಟುಂಬಗಳು ತಮ್ಮ ಆದಾಯವನ್ನು ಯಾವ ಮೂಲಗಳಿಂದ ಸಂಪಾದಿಸುತ್ತವೆ ಎಂದು ತಿಳಿಯುವುದು ಅವಶ್ಯ. ೭೭ ಕುಟುಂಬಗಳು ಕೂಲಿ ದುಡಿಮೆಯಿಂದ ತಮ್ಮ ಬಹುಪಾಲು ಆದಾಯವನ್ನು ಪಡೆದುಕೊಳ್ಳುತ್ತಿವೆ. ೯ ಕುಟುಂಬಗಳು ಆನುಷಂಗಿಕ ಆದಾಯಕ್ಕಾಗಿ ಅವಲಂಬಿಸಿವೆ. ೧೯ ಕುಟುಂಬಗಳು ಪ್ರಾಥಮಿಕವಾಗಿ ಆದಾಯದ ಮೂಲಕ್ಕೆ ಕೃಷಿಯನ್ನು ಅವಲಂಬಿಸಿವೆ. ೭ ಕುಟುಂಬಗಳು ಕೃಷಿಯನ್ನು ಆನುಷಂಗಿಕ ಆದಾಯ ಮೂಲವನ್ನಾಗಿ ಅವಲಂಬಿಸಿವೆ. ಉಪಉತ್ಪನ್ನಗಳ ಮಾರಾಟ, ಬಡ್ಡಿವ್ಯವಹಾರ ಹಾಗೂ ಸರಕಾರಿ ಸೇವೆ ೧೪ ಕುಟುಂಬಗಳಿಗೆ ಪ್ರಾಥಮಿಕ ಆದಾಯ ಮೂಲವಾಗಿದ್ದರೆ ೮೧ ಕುಟುಂಬಗಳಿಗೆ ಅವುಗಳು ಆದಾಯದ ಆನುಷಂಗಿಕ ಮೂಲಗಳಾಗಿವೆ. ಉಪಉತ್ಪನ್ನಗಳ ಮಾರಾಟವು ನಾಗಲಾಪುರ ತಾಂಡದ ಲಂಬಾಣಿಗಳಿಗೆ ಅತ್ಯಂತ ಸಾಮಾನ್ಯವಾದ ಆದಾಯದ ಆನುಷಂಗಿಕ ಮೂಲವಾಗಿದೆ (ಕೋಷ್ಟಕ ೨.೧೦). ಜೀವನೋಪಾಯದ ಮೂಲಗಳ ಈ ಸ್ವರೂಪದಿಂದಾಗಿ ಸಮಸ್ತ ತಾಂಡವನ್ನು ಪ್ರಧಾನವಾಗಿ ಕೃಷಿ ಕೂಲಿ ದುಡಿಮೆಗಾರರ ಸಮುದಾಯವೆಂದು ಪರಿಗಣಿಸಬಹುದು.

## ಕೋಷ್ಟಕ ೨.೧೦

**ನಾಗಲಾಪುರ ತಾಂಡದ ಕುಟುಂಬಗಳ ಆನುಷಂಗಿಕ ವೃತ್ತಿಗಳು ಹಾಗೂ ಅವುಗಳಿಂದ ಲಭಿಸುವ ವಾರ್ಷಿಕ ಆದಾಯ(೧೯೯೮-೯೯)**

| ವೃತ್ತಿಗಳು | ಆದಾಯದ ಗುಂಪುಗಳು (ರೂಪಾಯಿಗಳಲ್ಲಿ) | | | |
|---|---|---|---|---|
| | ರೂ. ೧೫೦೦ರ ವರೆಗೆ | ರೂ. ೧೫೦೧ ರಿಂದ ರೂ.೩೦೦೦ರ ವರೆಗೆ | ರೂ. ೩೦೦೧ ರಿಂದ ರೂ.೪೫೦೦ ವರೆಗೆ | ಒಟ್ಟು |
| ಕೃಷಿ ವ್ಯವಸಾಯ | ೪ | ೩ | - | ೭ |
| ಕೂಲಿ ದುಡಿಮೆ | ೮ | ೧ | - | ೯ |
| ಅರಣ್ಯ ಉತ್ಪನ್ನಗಳ ಮಾರಾಟ | ೭೦ | ೬ | ೨ | ೭೮ |
| ಇತರೆ (ಸಾಲ ನೀಡಿಕೆಗೆ ಪ್ರತಿಯಾಗಿ ಪಡೆದ ಬಡ್ಡಿ ಹಣ) | ೧ | - | - | ೧ |
| ಒಟ್ಟು | ೮೩ | ೧೦ | ೨೩ | ೯೫ |

**ಸೂಚನೆ :** ೧. ಕುಟುಂಬಗಳಿಗೆ ಆನುಷಂಗಿಕ ವೃತ್ತಿಗಳಲ್ಲಿ ಆದಾಯದ ವ್ಯತ್ಯಾಸದ ವ್ಯಾಪ್ತಿಯು ಸೊನ್ನೆಯಿಂದ ರೂ. ೪೫೦೦ರವರೆಗೆ ಇದೆ.

ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ಆದಾಯ ಮಾದರಿಗಳನ್ನು, ತುಲನೆಮಾಡಿದರೆ ಎರಡೂ ತಾಂಡಗಳಲ್ಲಿ ಸಾಮಾನ್ಯ ಒಡೆತನದ ಸನ್ನಿವೇಶ ನಮಗೆ ಕಂಡು ಬರುತ್ತದೆ. ಮುಕ್ಕಾಲು (೩/೮) ಪಾಲು ಕುಟುಂಬಗಳು ಬಡತನದ ರೇಖೆಯ ಕೆಳಗೆ ಜೀವಿಸುತ್ತಿವೆ. ಇನ್ನಷ್ಟು ಸೂಕ್ಷ್ಮವಾಗಿ ತುಲನೆ ಮಾಡುವುದಾದರೆ ನಾಗಲಾಪುರ ತಾಂಡದಲ್ಲಿ ಮಧ್ಯಮ ಆದಾಯದ ಸಮುದಾಯವು ವಿಸ್ತೃತವಾಗಿದ್ದರೆ ಮರಿಯಮ್ಮನಹಳ್ಳಿ ತಾಂಡದ ಉತ್ತಮ (ಸಾಪೇಕ್ಷವಾಗಿ) ಆದಾಯದ ಕುಟುಂಬಗಳು ಸ್ವಲ್ಪ ಹೆಚ್ಚಾಗಿವೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಉತ್ತಮ ಆದಾಯದ ಗುಂಪುಗಳು ಶೇಕಡಾ ೩.೭ರಷ್ಟರಿದ್ದರೆ, ನಾಗಲಾಪುರ ತಾಂಡದಲ್ಲಿ ಶೇಕಡಾ ೨.೧ ರಷ್ಟಿದೆ. ಈ ಆದಾಯ ಮಾದರಿಗಳು ಆಯಾ ತಾಂಡಗಳಲ್ಲಿಯ ಪ್ರಮುಖ ವೃತ್ತಿಯಿಂದ ನಿರ್ಧರಿತಗೊಂಡಿವೆ. ಉದಾಹರಣೆಗೆ ಕೃಷಿ ಸಾಗುವಳಿಯ ಕೂಲಿ ದುಡಿಮೆಗಿಂತ ಅಧಿಕ ಆದಾಯವನ್ನು ನೀಡುತ್ತದೆ.

ಕನಿಷ್ಠ ಹಾಗೂ ಗರಿಷ್ಠ ಆದಾಯ ವ್ಯಾಪ್ತಿಯ ವ್ಯತ್ಯಾಸವು ಮರಿಯಮ್ಮನಹಳ್ಳಿ ತಾಂಡಕ್ಕಿಂತ ನಾಗಲಾಪುರ ತಾಂಡದಲ್ಲಿ ಅಧಿಕವಾಗಿದೆ. ನಾಗಲಾಪುರದಲ್ಲಿ ಈ ವ್ಯತ್ಯಾಸ ವ್ಯಾಪ್ತಿಯು ೫೦೦೦ ರೂ.ಗಳಿಂದ ೨೦೦೦೦ರೂ.ವರೆಗಿದ್ದರೆ, ಮರಿಯಮ್ಮನಹಳ್ಳಿ ತಾಂಡದಲ್ಲಿ ೫೦೦೦ ರೂ.ಗಳಿಂದ ೨೫೦೦೦ರವರೆಗಿದೆ. ಮರಿಯಮ್ಮನಹಳ್ಳಿ ತಾಂಡದ ಆರ್ಥಿಕತೆಯ ವೈವಿಧ್ಯತೆಯ ಅಂಶವನ್ನು ಈ ಹೋಲಿಕೆಯು ಸೂಚಿಸುತ್ತದೆ.

ತುಲನಾತ್ಮಕವಾಗಿ ಮರಿಯಮ್ಮನಹಳ್ಳಿ ತಾಂಡದಲ್ಲಿ ಕೃಷಿಯನ್ನು ಅಧಿಕವಾಗಿ ಅವಲಂಬಿಸಿದ್ದು ಬಹುಮಟ್ಟಿಗೆ ಕೃಷಿ ಪ್ರಧಾನವಾಗಿದೆ. ವ್ಯಕ್ತಿಗತ ಪಾತ್ರಗಳು ಮತ್ತು ಚಟುವಟಿಕೆಗಳ ದೃಷ್ಟಿಯಿಂದ ಹೆಚ್ಚು ವ್ಯತ್ಯಾಸವನ್ನು ಹೊಂದಿಲ್ಲ. ೧೯೮೦ರ ದಶಕದವರೆಗೂ ನಾಗಲಾಪುರ ತಾಂಡವು ಪಟ್ಟಣಗಳೊಂದಿಗೆ ಕಡಿಮೆ ಕೂಲಿ ಸಂಪರ್ಕಗಳನ್ನು ಹೊಂದಿತ್ತು. ಆದರೆ ಮರಿಯಮ್ಮನಹಳ್ಳಿ ತಾಂಡವು ವಿಭಿನ್ನ ಮಾದರಿ ಕೂಲಿ ದುಡಿಮೆಯನ್ನು ಆಶ್ರಯಿಸಿದ್ದು ಬಾಹ್ಯ ಪ್ರಪಂಚದೊಂದಿಗೆ ಮುಕ್ತವಾಗಿ ಸ್ಪಂದಿಸುವ ಬಲವನ್ನು ಹೊಂದಿದೆ. ಆರ್ಥಿಕ ಪಾತ್ರಗಳು ಹಾಗೂ ಚಟುವಟಿಕೆಗಳ ದೃಷ್ಟಿಯಿಂದ ವೈವಿಧ್ಯತೆಯನ್ನೊಳಗೊಂಡಿದ್ದು ಪಟ್ಟಣ ಪ್ರದೇಶದೊಂದಿಗೆ ಹೆಚ್ಚಿನ ಸಂಪರ್ಕಗಳನ್ನು ಹೊಂದಿದೆ.

ಈ ಕೆಳಗಿನ ಪಟ್ಟಿಯು ಎರಡು ತಾಂಡ ಜನರು ವಿವಿಧ ಪ್ರದೇಶಗಳಿಗೆ ಕೆಲಸಗಳನ್ನು ಹರಸಿ ವಲಸೆ ಹೋಗಿರುವುದನ್ನು ಸೂಚಿಸುತ್ತದೆ. ಇಲ್ಲಿ ಅವರು ಸೀಜನಲ್ ಮತ್ತು ಶಾಶ್ವತವಾಗಿ ವಲಸೆ ಹೋಗಿರುವುದನ್ನು ಪಟ್ಟಿ ಮಾಡಲಾಗಿದೆ.

| ಇಲ್ಲಿಗೆ | ಒಂದೇ ತಾಲೂಕಿನೊಳಗಿನ ಸ್ಥಳಗಳು | | | ತಾಲೂಕು ಹೊರಗಿನ ಜಿಲ್ಲೆಯೊಳಗಿನ ಸ್ಥಳಗಳು | | ಜಿಲ್ಲೆಯ ಹೊರಗಿನ ಸ್ಥಳಗಳು | | ಒಟ್ಟು | |
|---|---|---|---|---|---|---|---|---|---|
| ಇಂದ | | ಸೀ. | ಶಾ. | ಸೀ. | ಶಾ. | ಸೀ. | ಶಾ. | ಸೀ. | ಶಾ. |
| ಮರಿಯಮ್ಮನಹಳ್ಳಿ ತಾಂಡ | | ೩ | ೨೨ | ೧ | ೩ | ೪೦ | ೭ | ೪೪ | ೩೨ |
| ನಾಗಲಾಪುರ ತಾಂಡ | | - | ೪೬ | - | ೩ | - | ೧ | - | ೮ |

ಸೂಚನೆ : ಸೀ = ಸೀಜನಲ್ ಶಾ = ಶಾಶ್ವತ

ನಾಗಲಾಪುರ ತಾಂಡದೊಳಗೆ ಅಂಗಡಿಗಳ ಕೊರತೆ ಇರುವುದರಿಂದ ನಾಗಲಾಪುರ ತಾಂಡದ ಲಂಬಾಣಿಗಳು ಸರಕುಗಳ ಖರೀದಿಗಾಗಿ ಪ್ರತಿನಿತ್ಯ ನಾಗಲಾಪುರ ಮತ್ತು ಸುತ್ತಮುತ್ತಲಿನ ಗ್ರಾಮಗಳಿಗೆ ಹೋಗಿ ಬರುತ್ತಾರೆ. ಮರಿಯಮ್ಮನಹಳ್ಳಿಯು ಚಿಕ್ಕ ಪಟ್ಟಣವಾಗಿರುವುದರಿಂದ ಸ್ವಲ್ಪ ಹೆಚ್ಚು ಕಡಿಮೆ ಎಲ್ಲಾ ರೀತಿಯ ಅಂಗಡಿಗಳಿವೆ. ನಾಗಲಾಪುರ ತಾಂಡವನ್ನು ಹೋಲಿಸಿ ನೋಡುವುದಾದರೆ ಮರಿಯಮ್ಮನಹಳ್ಳಿ ತಾಂಡದಲ್ಲಿ ವೃತ್ತಿ ವೈವಿಧ್ಯತೆಯ ವ್ಯಾಪ್ತಿ ಹಾಗೂ ಅದಕ್ಕನುಗುಣವಾದ ಭೌತಿಕ ಸಂಚಲನೆ ಅಧಿಕವಾಗಿದೆ.

ಈ ಅಧ್ಯಯನದಲ್ಲಿ ನಾನು ಪ್ರಮಾಣಾತ್ಮಕ ಆರ್ಥಿಕ ಪ್ರಾಮುಖ್ಯತೆಗಳನ್ನು ಒತ್ತಿ ಹೇಳುವುದಕ್ಕಿಂತ ಬುಡಕಟ್ಟೀಕರಣದ ಹಣಕಾಸಿನ ವ್ಯವಹಾರದ ಗುಣಾತ್ಮಕ ಅಂಶಗಳನ್ನು ಗುರುತಿಸುವಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದೇನೆ.

## ಅನುಭೋಗದ ಪ್ರಮಾಣ ಮತ್ತು ಜೀವನಮಟ್ಟ

ಲಂಬಾಣಿ ಕುಟುಂಬಗಳ ವೆಚ್ಚಗಳ ಮಾದರಿಗಳನ್ನು ಇಲ್ಲಿ ವಿಶ್ಲೇಷಿಸಿದ್ದೇನೆ. ಕೋಷ್ಟಕ ೨.೧೧ ರಲ್ಲಿ ಎರಡೂ ತಾಂಡಗಳ ವೆಚ್ಚಗಳ ವಿವರಗಳು, ಎರಡೂ ತಾಂಡಗಳ ಒಟ್ಟು ವೆಚ್ಚಗಳು ಹಾಗೂ ಒಂದು ಕುಟುಂಬದ ಸರಾಸರಿ ವೆಚ್ಚ ಮೊದಲಾದವುಗಳನ್ನು ತಿಳಿಸಲಾಗಿದೆ. ಎಲ್ಲಾ ಕುಟುಂಬಗಳ ವೆಚ್ಚಗಳ ಅಂದಾಜನ್ನು ಆಧರಿಸಿ ಒಟ್ಟಾರೆ ವೆಚ್ಚ ಹಾಗೂ ಸರಾಸರಿ ವಿವರಗಳನ್ನು ಗಣನೆ ಮಾಡಲಾಗಿದೆ.

ಮರಿಯಮ್ಮನಹಳ್ಳಿ ತಾಂಡದಲ್ಲಿ ವೆಚ್ಚದ ಬಹುಭಾಗವು (ಶೇಕಡಾ ೬೬.೬೯) ಜೀವನದ ಅಗತ್ಯ ಅನುಭೋಗಗಳಾದ ಆಹಾರ, ಬಟ್ಟೆ ಹಾಗೂ ಇತರೆ ವಸ್ತುಗಳಿಗಾಗಿ ವ್ಯಯಿಸಲ್ಪಟ್ಟರೆ, ಸಾಗಾಣಿಕೆ, ಸಂಪರ್ಕಗಳು, ಆರೋಗ್ಯ ಹಾಗೂ ಶಿಕ್ಷಣ ಮೊದಲಾದ ಬಾಬ್ತುಗಳು ಅತಿ ಕಡಿಮೆ ಪ್ರಮಾಣದ್ದಾಗಿವೆ. ಪ್ರತ್ಯೇಕವಾಗಿ ಕಾಣುವ ಅಂಶಗಳೆಂದರೆ ಕೇವಲ ೩೩ ಕುಟುಂಬಗಳು ಮಾತ್ರ ಸಾಗಾಣಿಕೆಗೆ ವೆಚ್ಚಮಾಡಿದ್ದು, ನಾಗಲಾಪುರ ತಾಂಡದಲ್ಲಿಯ ಅನೇಕ ವ್ಯಕ್ತಿಗಳು ವರ್ಷದ ಹೆಚ್ಚಿನ ಅವಧಿಯಲ್ಲಿ ಕಾಲುನಡಿಗೆ ಅಥವಾ ಚಕ್ಕಡಿಗಳ ಮೂಲಕ ವಾರದ ಸಂತೆಗಳಿಗೆ ಹೋಗುವುದನ್ನು ಬಿಟ್ಟರೆ ಪರ ಊರುಗಳನ್ನು ಸಂಪರ್ಕಿಸಲು ಮೋಟಾರು ವಾಹನ ಮತ್ತು ರೈಲುಗಳ ಮೂಲಕ ಯಾತ್ರೆಗಳಿಗಾಗಿ, ಜಾತ್ರೆಗಳಿಗಾಗಿ ಇಲ್ಲವೆ ಸಂಬಂಧಿಕರ ವಿವಾಹ ಮೊದಲಾದ ಕಾರಣಗಳಿಗಾಗಿ ಪ್ರಯಾಣ ಮಾಡಲಾಗಿದೆ. ಪ್ರಾಥಮಿಕ ಶಿಕ್ಷಣವನ್ನು ಸರಕಾರವು ಉಚಿತವಾಗಿ ಒದಗಿಸಿದೆ. ಆದರೆ ಮರಿಯಮ್ಮನಹಳ್ಳಿ ಲಂಬಾಣಿಗಳು ಉನ್ನತ ಶಿಕ್ಷಣದತ್ತ ಒಲವನ್ನು ತೋರಿಲ್ಲವಾದ್ದರಿಂದ ಶಿಕ್ಷಣಕ್ಕಾಗಿ ಹೆಚ್ಚು ವೆಚ್ಚಮಾಡಿಲ್ಲ.

ವೆಚ್ಚದ ಬಹುಪಾಲು ಮೊತ್ತವನ್ನು ಆಹಾರಕ್ಕಾಗಿ ಬಳಸುವುದು ಜೀವನೋಪಾಯ ಆರ್ಥಿಕತೆಯ ಸಾಮಾನ್ಯ ಲಕ್ಷಣವಾಗಿದೆ. ಮರಿಯಮ್ಮನಹಳ್ಳಿ ತಾಂಡಕ್ಕೆ ಆರ್ಥಿಕತೆಯು ಪ್ರಧಾನವಾಗಿ ಜೀವನೋಪಾಯ ಸ್ವರೂಪದ್ದಾಗಿದೆ ಎಂದು ಹೇಳಬಹುದು. ಲಂಬಾಣಿಗಳ ಪ್ರಮುಖ ಆಹಾರವು ಇತರ ಸ್ಥಳೀಯ ಸಮುದಾಯಗಳ ಜನರ ರೀತಿಯಲ್ಲೆ ಅಕ್ಕಿ, ಜೋಳಗಳಾಗಿವೆ. ಇದಕ್ಕೆ ಪೂರಕವಾಗಿ ರಾಗಿ, ನವಣೆ, ಸಾವೆ ಮೊದಲಾದ ಧಾನ್ಯಗಳು, ಬೇಳೆಕಾಳು ಮತ್ತು ತರಕಾರಿಗಳನ್ನು ಬಳಸಲಾಗುತ್ತದೆ. ಹೈನು ಉತ್ಪನ್ನಗಳು ಅವರ ಆಹಾರದ ಮಹತ್ವದ ಭಾಗವಾಗಿಲ್ಲ. ಮಾಂಸ ಅವರಿಗೆ ಬಹಳ ಇಷ್ಟವಾದರೂ ವಾರಕ್ಕೊಂದು ಬಾರಿ ಮಾಂಸವನ್ನು ಹತ್ತಿರದ ಮಾಂಸದಂಗಡಿಗಳಿಂದ ಕೊಂಡುತಂದು ತಿನ್ನುತ್ತಾರೆ. ಲಂಬಾಣಿಗಳು ಹೆಚ್ಚಾಗಿ ಶ್ರಮಜೀವಿಗಳಾದ್ದರಿಂದ ಸಾಮಾನ್ಯವಾಗಿ ಅವರ ಆಹಾರ ಸೇವನೆಯ ಪ್ರಮಾಣ ಅಧಿಕವಾಗಿದೆ. ಬೆಳಿಗ್ಗೆ ೮-೯ ಗಂಟೆಗೆ ಮೊದಲು ಅಥವಾ ಕೆಲಸಗಳಿಗೆ ಹೋಗುವ ಮೊದಲು, ಮಧ್ಯಾಹ್ನ ೩ ಕ್ಕೆ ಮೊದಲು ಹಾಗೂ ರಾತ್ರಿ ೭ ಅಥವಾ ೮ ಗಂಟೆ ಮಧ್ಯೆ - ಹೀಗೆ ಎಲ್ಲಾ ಜನರು ಆಹಾರ ಸೇವಿಸುವಂತೆ ಅವರು ದಿನದಲ್ಲಿ ಮೂರು ಬಾರಿ ಆಹಾರ ಸೇವಿಸುತ್ತಾರೆ. ಸಾರಾಯಿ ಮತ್ತು ಹೆಂಡ ಕುಡಿಯುವುದೆಂದರೆ ಅವರಿಗೆ ಬಹಳ ಆಸಕ್ತಿ. ಸಾರಾಯಿ ತಯಾರುಮಾಡುವಲ್ಲಿಯೂ ಅವರು ಪರಿಣತಿಯನ್ನು ಪಡೆದಿದ್ದಾರೆ.

## ಕೋಷ್ಟಕ : ೨.೧೧

**ಮರಿಯಮ್ಮನಹಳ್ಳಿ ತಾಂಡ (೧೯೯೮-೯೯) ನಾಗಲಾಪುರ ತಾಂಡದ (೧೯೯೮-೯೯) ಲಂಬಾಣಿಗಳ ವೆಚ್ಚ ಮಾದರಿಗಳು (ರೂ.ಗಳಲ್ಲಿ)**

| ವೆಚ್ಚದ ಮಾದರಿಗಳು | ಮರಿಯಮ್ಮನಹಳ್ಳಿ ತಾಂಡ | | ನಾಗಲಾಪುರ ತಾಂಡ | |
|---|---|---|---|---|
| | ತಾಂಡದ ಒಟ್ಟು ವೆಚ್ಚ | ಒಂದು ಕುಟುಂಬದ ಸರಾಸರಿ ವೆಚ್ಚ | ತಾಂಡದ ಒಟ್ಟು ವೆಚ್ಚ | ಒಂದು ಕುಟುಂಬದ ಸರಾಸರಿ ವೆಚ್ಚ |
| ಅ. ಅನುಭೋಗ ವೆಚ್ಚ | | | | |
| ೧. ಆಹಾರ ಧಾನ್ಯಗಳು (ಧಾನ್ಯಗಳು, ತರಕಾರಿ ಬೇಳೆಕಾಳು ಇತ್ಯಾದಿ) | ೬೧,೬೦೫ | ೬೦೧.೦೨೯(೧೦೨) | ೧೦೭,೨೦೦ | ೧೦೮೨.೮೩ (೯೯) |
| ೨. ಬಟ್ಟೆ | ೨೧,೫೩೧ | ೨೧೧.೦೮೮ (೧೦೨) | ೨೪,೫೦೧ | ೨೪೭.೫೮ (೯೯) |
| ೩. ಮನೆ ಕಟ್ಟಡ ಮತ್ತು ದುರಸ್ತಿಗಳು | ೪,೯೬೩ | ೧೫೦.೩೮೪ (೩೩) | ೧,೧೫೫ | ೧೧೫.೫೦ (೧೦) |
| ೪. ಸಾಗಾಣಿಕೆ ಮತ್ತು ಸಂದೇಶ | ೩,೨೦೫ | ೩೨.೩೭೮ (೯೯) | ೪,೮೮೬ | ೬೬.೦೩ (೭೪) |
| ೫. ಆರೋಗ್ಯ | ೫೨೧೦ | ೮೦.೧೫೪ (೬೫) | ೪,೦೯೯ | ೫೭.೭೩ (೭೧) |
| ೬. ಶಿಕ್ಷಣ | - | - | ೨,೭೦೦ | ೫೪೦.೦೦ (೫) |
| ೭. ಇಂಧನ ಮತ್ತು ಎಣ್ಣೆಗಳು | ೪೭೬೫ | ೪೭.೪೭೫ (೧೦೧) | ೫೨೭೭ | ೩೫.೮೫ (೯೮) |
| ೮. ಅಡಿಕೆ, ಎಲೆ, ಮಸಾಲೆ, ತಂಬಾಕು ಇತ್ಯಾದಿ | ೫೨೩೫ | ೫೧.೩೨೪ (೧೦೨) | ೪೫೧೫ | ೪೬.೫೩ (೯೭) |
| ೯. ಪಾನೀಯಗಳು (ಹೆಂಡ, ಸಾರಾಯಿ ಚಹ, ಕಾಫಿ) | ೫೧೨೫ | ೫೧.೨೫೦ (೧೦೦) | ೭೮೨೬ | ೭೯.೦೫ (೯೯) |
| (ಅ) ದ ಒಟ್ಟು ಮೊತ್ತ (೧ ರಿಂದ ೯) | ೧೪೧,೬೯೬ (ಶೇಕಡ ೬೯) | ೧೩೬೧.೮೫೦ (೧೦೨) | ೧೬೨.೧೬೭ (ಶೇಕಡ ೮೩.೧೫) | ೧೬೩೮.೦೫ (೯೯) |
| ಆ. ಐಶಾರಾಮಗಳಿಗಾಗಿ ಮಾಡುವ ವೆಚ್ಚ | | | | |
| ೧೦. ಆಭರಣಗಳು ಮತ್ತು ಪಾದ ರಕ್ಷೆಗಳು | ೧೪೨೦ | ೨೦.೨೮೬ (೭೦) | ೨,೬೯೪ | ೩೨.೪೬ (೮೩) |
| ೧೧. ಅಲಂಕಾರ ಮತ್ತು ಮನರಂಜನೆಗಳು | ೨೯೭೭ | ೨೯.೨೮೬ (೧೦೨) | ೨,೮೭೭ | ೩೧.೬೨ (೯೧) |
| ಆ. ದ ಒಟ್ಟು ಮೊತ್ತ (೧೦-೧೧) | ೪,೩೯೭ (ಶೇಕಡ ೨.೦೭) | ೪೩.೧೧೦ (೧೦೨) | ೫೫೭೧ (ಶೇಕಡ ೨.೮೬) | ೫೬.೨೭ (೯೯) |

| ವೆಚ್ಚದ ಮಾದರಿಗಳು | ತಾಂಡದ ಒಟ್ಟು ವೆಚ್ಚ | ಒಂದು ಕುಟುಂಬದ ಸರಾಸರಿ ವೆಚ್ಚ | ತಾಂಡದ ಒಟ್ಟು ವೆಚ್ಚ | ಒಂದು ಕುಟುಂಬದ ಸರಾಸರಿ ವೆಚ್ಚ |
|---|---|---|---|---|
| ಇ. ಸಾಮಾಜಿಕ ಮತ್ತು ಧಾರ್ಮಿಕ | ಉದ್ದೇಶಗಳಿಗಾಗಿ | ಮಾಡುವ ವೆಚ್ಚ | | |
| ೧೨. ಉಡುಗೊರೆ ಮತ್ತು ಕಾಣಿಕೆಗಳು | ೪೩೩೬ | ೪೪.೨೪೫ (೯೬) | ೩,೩೩೦ | ೩೪.೩೩ (೯೭) |
| ೧೩. ವ್ಯಾಜ್ಯ ತಗಾದೆಗಳು | ೧೨೦೭ | ೫೫.೨೧೭ (೨೩) | ೧,೦೭೦ | ೧೭೮.೩೩ (೬) |
| ೧೪. ಸಂಸ್ಕಾರ ವಿಧಿಗಳು ಹಾಗೂ ಧಾರ್ಮಿಕ ವಿಧಿಗಳು | ೭೧೨೩ | ೧೦೩.೫೧೪ (೩೫) | ೧೨ನೆಯ ಕಲಮಿನಲ್ಲಿ ಸೇರ್ಪಡೆ ಯಾಗಿವೆ | - |
| (ಇ) ದ ಒಟ್ಟು ಮೊತ್ತ (೧೨-೧೫) | ೧೨,೭೨೯ (ಶೇಕಡ ೫.೯೮) | ೧೨೪.೭೯ | ೪,೪೦೦ (ಶೇಕಡ ೨.೨೬) | ೪೪.೪೪ (೯೯) |
| ಈ. ಉತ್ಪಾದಕ ವೆಚ್ಚ | | | | |
| ೧೫. ಸಾಧನ ಸಲಕರಣೆ ಗಳ ಖರೀದಿ ಕೂಲಿ ಹಣ, ನೇಗಿಲು, ಜಾನು ವಾರು, ಬೀಜಗಳು ಮತ್ತು ಗೊಬ್ಬರ | ೨೪೨೫೫ | ೩೪೧.೬೨೦ (೭೧) | ೯,೩೨೫ | ೪೦೫.೪೪ (೯೩) |
| ೧೬. ತೆರಿಗೆಗಳು : ಭೂಕಂದಾಯ ಮನೆ ತೆರಿಗೆ. | ೧೧೧೨ | ೭.೯೩೫ (೬೨) | ೫೫೭ | ೮.೩೧ (೬೭) |
| ೧೭. ಭೂ ಬಾಡಿಗೆ ಪಾವತಿ | ೩೨೫೦ | ೨೩೨.೧೫೩ (೧೪) | ೪೦೦ | ೪೦೦ (೧) |
| ಈ. ದ ಒಟ್ಟು ಮೊತ್ತ (೧೫ -೧೭) | ೨೮.೬೧೭ (ಶೇಕಡಾ ೧೩.೪೪) | ೨೮೦.೫೬೦ (೧೦೨) | ೧೦,೨೮೨ (ಶೇಡಕಾ ೫.೨೭) | ೧೦೩.೮೬ (೯೯) |
| ಉ. ಉಳಿತಾಯಗಳು ಮತ್ತು ಬಂಡವಾಳು ವೆಚ್ಚ | | | | |
| ೧೮. ಪಾತ್ರೆ ಇತ್ಯಾದಿ ಗಳ ಖರೀದಿ | ೫೭೬ | ೨೦.೫೨೧ (೨೮) | ೪,೫೧೫ | ೪೫.೬೧ (೯೯) |
| ೧೯. ಸಾಲ ಮತ್ತು ಬಡ್ಡಿ ಯ ಮರು ಪಾವತಿ | ೧೪,೯೭೧ | ೧೯೯.೬೧೩(೭೫) | ೨,೫೪೨ | ೧೮೧.೫೭ (೧೪) |
| ೨೦. ಹೈನದ ದನಕರು ಖರೀದಿ | ೭೫೫ | ೧೫೦.೧೬೭ (೩) | ೧,೧೦೦ | ೩೬೬.೬೭ (೩) |
| ೨೧. ಉಳಿತಾಯಗಳು, ಸಾಲ ನೀಡಿಕೆ, ಸಹಕಾರಿ ಸಂಘಗಳು ಹಾಗೂ ಬ್ಯಾಂಕುಗಳ ಲ್ಲಿಯ ಷೇರುಗಳು | ೮೮೭೨ | ೧೧೨.೩೪೪ (೭೯) | ೪,೪೫೦ | ೪೪೫.೦೦ (೧೦) |
| ಉ) ದ ಒಟ್ಟು ಮೊತ್ತ (೧೮-೨೧) | ೨೫,೧೭೫ (ಶೇಕಡ ೧೧.೮೩) | ೨೪೬.೮೦೦ (೧೦೨) | ೧೨.೯೦೭ | ೧೨೭.೩೪ (೯೯) |
| ಒಟ್ಟು ಮೊತ್ತ | ೨,೧೨,೮೮೬ (ಶೇಕಡ ೧೦೦) | ೨೦೮೭.೧೨೦ (೧೦೨) | ೧೯೫.೦೨೭ (ಶೇಕಡ ೧೦೦) | ೧೯೬೯.೮೬ (೯೯) |

ಸೂಚನೆ : ೧. ಸಂಖ್ಯೆಗಳು ಸಂಬಂಧಿಸಿದ ಕುಟುಂಬಗಳ ಸಂಖ್ಯೆಯನ್ನು ಸೂಚಿಸುತ್ತವೆ.

೨. ಕೋಷ್ಟಕದಲ್ಲಿ ಕುಟುಂಬದ ಸರಾಸರಿ ವೆಚ್ಚ ಮತ್ತು ತಾಂಡದ ಒಟ್ಟು ವೆಚ್ಚದ ಶೇಕಡಾವಾರು ಅಂಕಿ ಅಂಶಗಳನ್ನು ನೀಡಲಾಗಿದೆ.

ಸಾಮಾಜಿಕ ಮತ್ತು ಧಾರ್ಮಿಕ ಉದ್ದೇಶಗಳಿಗಾಗಿ ಮಾಡುವ ವೆಚ್ಚಗಳು ಮರಿಯಮ್ಮನಹಳ್ಳಿ ತಾಂಡ ಲಂಬಾಣಿಗಳ ವೆಚ್ಚಗಳ ಮಾದರಿಯ ಗಮನಾರ್ಹ ಲಕ್ಷಣವಾಗಿದೆ. ಈ ಕಾರಣಗಳಿಗೋಸ್ಕರ ಮಾಡಲಾಗುವ ವೆಚ್ಚಗಳು (ಶೇಕಡ ೫.೯೮), ಸೌಲಭ್ಯಗಳು ಮತ್ತು ಐಶಾರಾಮಗಳಿಗಾಗಿ ಮಾಡುವ ವೆಚ್ಚಗಳಿಗಿಂತ (ಶೇಕಡಾ ೨.೦೭) ಹೆಚ್ಚಾಗಿವೆ. ಬಂಧು ಬಾಂಧವ್ಯದವರಿಗೆ ಸತ್ಕಾರ ಆಚರಣೆಗಳು ಒಪ್ಪಂದಗಳು ಪ್ರಮುಖ ವೆಚ್ಚ ನಿರ್ದೇಶಕ ಸೂಚಕವಾಗಿವೆ. ಈ ವೆಚ್ಚಗಳು ಅನಿಶ್ಚಿತ ಸನ್ನಿವೇಶ - ಸಂದರ್ಭಗಳಲ್ಲಿ ಮಾಡುವ ಸ್ವರೂಪದ್ದಾಗಿದ್ದು, ಕುಟುಂಬಗಳು ತಮ್ಮ ಆರ್ಥಿಕ ಸಾಮರ್ಥ್ಯವನ್ನು ಲೆಕ್ಕಿಸದೇ ಮಾಡುವಂತಹವುಗಳಾಗಿವೆ. ಹುಟ್ಟು, ನಿಶ್ಚಿತಾರ್ಥ, ವಿವಾಹ, ಸಾವು ಮೊದಲಾದ ಸನ್ನಿವೇಶಗಳಲ್ಲಿ ಸಮಾಜವು ಮನ್ನಿಸುವ ರೀತಿಯಲ್ಲಿಯೇ ವಿಧಿ ವಿಧಾನಗಳನ್ನು ನೆರವೇರಿಸಬೇಕಾಗುತ್ತದೆ. ಇಂತಹ ಸಮಯದಲ್ಲಿ ಸಾಲವನ್ನಾದರೂ ಮಾಡಿ ಸಾಂಪ್ರದಾಯಿಕ ಆಚರಣೆಗಳನ್ನು ಮಾಡಲೇಬೇಕಾಗುತ್ತದೆ. ಕುಲ ದೇವತಾ ದೇವಸ್ಥಾನಗಳಿಗೆ ಹಾಗೂ ಸಾಧುಸಂತರ ದರ್ಶನಕ್ಕಾಗಿ ಯಾತ್ರೆಗಳನ್ನು ಮಾಡುವುದು ಅಗತ್ಯವಾದ್ದರಿಂದ ಸಾಂದರ್ಭಿಕವಾಗಿ ವೆಚ್ಚಮಾಡಲೇಬೇಕಾಗುತ್ತದೆ. ಸಾಮುದಾಯಿಕ ಹಾಗೂ ಕೌಟುಂಬಿಕ ಅಭಿವೃದ್ಧಿಗಾಗಿ ದಾನ-ನೈವೇದ್ಯ, ಬಲಿ, ಹೋಮ ಇತ್ಯಾದಿ ಧಾರ್ಮಿಕ ಸರ್ಮಪಣೆಗಳು, ಇತರ ಕುಟುಂಬಗಳಿಗೆ ಕೊಡ ಮಾಡುವ ದಾನಧರ್ಮಗಳು, ಸ್ಥಳೀಯ ದೇವತೆಗಳಿಗೆ ಅರ್ಪಿಸುವ ಕಾಣಿಕೆಗಳು ದೈನಂದಿನ ಜೀವನಕ್ರಮದಲ್ಲಿ ಸಾಮಾನ್ಯ ವೆಚ್ಚಗಳಾಗಿವೆ. ಲಂಬಾಣಿಗಳು ತಮ್ಮ ನೆರೆಹೊರೆಯ ಜಾತಿ ಗುಂಪುಗಳ ದೇವತೆಗಳ ಆರಾಧನೆಯನ್ನು ತಮ್ಮ ಸಂಪ್ರದಾಯಗಳ ಸರಣಿಯಲ್ಲಿ ಸೇರ್ಪಡಿಸಿಕೊಂಡಿರುವುದರಿಂದ, ಅವರ ಅಲ್ಪ ಆದಾಯದಲ್ಲಿ ಒಂದು ಪಾಲನ್ನು ಈ ಎಲ್ಲಾ ಧಾರ್ಮಿಕ ಆಚರಣೆಗಳಿಗೆ ವೆಚ್ಚಮಾಡಲೇಬೇಕಾಗುತ್ತದೆ. ಕೃಷಿ ಸಾಗುವಳಿಯನ್ನು ಪ್ರಧಾನ ಕಸುಬನ್ನಾಗಿ ಅಳವಡಿಸಿಕೊಂಡ ನಂತರ ಈ ಮನೋಭಾವ ವಿಸ್ತೃತವಾಗಿದೆ.

ಲಂಬಾಣಿ ಜನರು ಬಟ್ಟೆ ತೊಳೆಯಲು, ಸ್ನಾನ ಮಾಡಲು ಸೋಪನ್ನು ಬಳಸುತ್ತಾರಾದರೂ, ಅಂಥವರ ಸಂಖ್ಯೆ ಅಪರೂಪವೇ ಆಗಿದೆ. ಬಹುತೇಕ ಜನರು ಪ್ರತಿದಿನ ಸ್ನಾನ ಮಾಡುವುದಿಲ್ಲ. ಧಾರ್ಮಿಕ ವಿಧಿ ಆಚರಣೆಗಳಿಗೋಸ್ಕರ ವಾರಕ್ಕೊಂದು ಸಲ ಸ್ನಾನ ಮಾಡುತ್ತಾರೆ. ಲಂಬಾಣಿ ಎಂದೊಡನೆ ಇತರರ ಮನಸ್ಸಿನಲ್ಲಿ ಮೂಡುವ ಚಿತ್ರವೆಂದರೆ ಅಸ್ತವ್ಯಸ್ತ ಹಾಗೂ ಅಶುಚಿ ವ್ಯಕ್ತಿಯ ಚಿತ್ರಣ. ಬಹುತೇಕ ಲಂಬಾಣಿಗಳು ಪಾದರಕ್ಷೆಗಳನ್ನು ಧರಿಸುವುದಿಲ್ಲ. ಪಟ್ಟಣ - ನಗರಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ಹೋಗುವ ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಚಲನಚಿತ್ರಗಳನ್ನು ನೋಡುತ್ತಾರೆ.

ಉತ್ಪಾದಕ ಚಟುವಟಿಕೆಗಳಿಗೆ ಬಂಡವಾಳ ಹೂಡುವುದಕ್ಕೆ ಸಂಬಂಧಿಸಿದಂತೆ ಆಧುನಿಕ ಕೃಷಿ ಪ್ರಭಾವದಿಂದ ಉತ್ತಮ ಬೀಜಗಳಿಗೆ, ರಾಸಾಯನಿಕ ಗೊಬ್ಬರ, ಇತರೆ ಸಲಕರಣೆಗಳ ಖರೀದಿಗೆ, ಭೂಕಂದಾಯ ಪಾವತಿ ಅಥವಾ ಭೂ ಬಾಡಿಗೆ ಮೊದಲಾದವುಗಳಿಗೆ, ಒಟ್ಟಾರೆ ವೆಚ್ಚದ ಒಂದು ಚಿಕ್ಕ ಪಾಲನ್ನು (ಶೇಕಡಾ ೧೩.೪೪) ಮಾತ್ರವೇ ವ್ಯಯಿಸಲಾಗುತ್ತದೆ. ಇದು ಅವರ ಕೃಷಿ ಜಡತ್ವದ ಸ್ಥಿತಿಯನ್ನು ಸೂಚಿಸುತ್ತದೆ. ಆಧುನಿಕ ಸುಧಾರಿತ ಕೃಷಿ ವಿಧಾನಗಳ ಮಹತ್ವವನ್ನು ಲಂಬಾಣಿಗಳು ತಿಳಿದಿಲ್ಲವೆಂದಲ್ಲ; ಅವುಗಳನ್ನು ಬಳಸಬಾರದೆಂಬ ಮನೋಭಾವವು ಅವರಲ್ಲಿ ಇಲ್ಲವೆಂದು ಭಾವಿಸಲು ಕೂಡದು. ಬಂಡವಾಳದ ಕೊರತೆ, ಫಲವತ್ತಾದ ಭೂಮಿಯ ಕೊರತೆ, ನೀರಾವರಿ ಸೌಲಭ್ಯಗಳ ಕೊರತೆ, ಅವರಿಗಿರುವ ಬಹು ದೊಡ್ಡ ತೊಂದರೆ ಇಂತಹ ಅಡೆತಡೆಗಳಿಂದ ಇವರು ಆಧುನಿಕ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ.

ವರ್ಷದುದ್ದಕ್ಕೂ ಆಗಾಗ್ಗೆ ಒಂದೊಂದಾಗಿ ಬರುವ ಧಾರ್ಮಿಕ ವಿಧಿ ಆಚರಣೆಗಳು, ಸಮಾರಂಭಗಳು, ಹಬ್ಬ, ಹುಣ್ಣಿಮೆಗಳು ಮೊದಲಾದವುಗಳಿಗಾಗಿ ಮಾಡುವ ವೆಚ್ಚಗಳು ಅವರಿಗೆ ಆರ್ಥಿಕ ಹೊರೆಯಾಗುತ್ತವೆ. ಈ ಸಾಂಪ್ರದಾಯಿಕ ಪ್ರವೃತ್ತಿ ಧರ್ಮಾಚರಣೆ, ರೂಢಿ ಆಚರಣೆಗಳು ಲಂಬಾಣಿ ಜನರ ಆರ್ಥಿಕತೆಯ ಬೆಳವಣಿಗೆಯನ್ನು ಕುಂಠಿತಗೊಳಿಸಿವೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ನಾಲ್ಕು ಕುಟುಂಬಗಳು ಹಾಗೂ ನಾಗಲಾಪುರ ತಾಂಡದಲ್ಲಿ ಎರಡು ಕುಟುಂಬಗಳು ಮಾತ್ರವೇ ನೀರಾವರಿ ಸೌಕರ್ಯಗಳಿಂದ ಕೂಡಿದ ಫಲವತ್ತಾದ ಕೃಷಿ ಭೂಮಿಯ ಒಡೆತನವನ್ನು ಹೊಂದಿದ್ದು, ಕೃಷಿ ಸಾಗುವಳಿಯಲ್ಲಿ ಸುಧಾರಿತ ವಿಧಾನಗಳನ್ನು ಅನುಸರಿಸುತ್ತಿವೆ.

ಅನುಭೋಗ ಮತ್ತು ಉತ್ಪಾದಕ ವೆಚ್ಚದ ನಂತರದಲ್ಲಿ 'ಉಳಿತಾಯಗಳು' (ಶೇಕಡಾ ೧೧.೮೩) ಮೂರನೆಯ ಸ್ಥಾನವನ್ನು ಪಡೆದಿದೆ. ಈ ಬಾಬ್ತಿನಲ್ಲಿ ಅರ್ಧಕ್ಕಿಂತ ಹೆಚ್ಚು ಹಣವನ್ನು ಸಾಲಗಳ ಮರುಪಾವತಿಗಾಗಿ ಬಳಸಲಾಗುತ್ತದೆ. ಸಾಲದ ಮೇಲಿನ ಬಡ್ಡಿದರ ತೀರ ಅಧಿಕವಾಗಿದ್ದು, ಕೆಲವು ಸಂದರ್ಭಗಳಲ್ಲಿ ವಾರ್ಷಿಕ ಶೇಕಡಾ ೬೦ರಷ್ಟಿದೆ. ಹೆಚ್ಚಿನ ಸಂಖ್ಯೆಯ ಲಂಬಾಣಿಗಳು ಸ್ಥಳೀಯ ಬಂಡವಾಳ ಶಾಹಿಗಳಿಂದ (ಲೇವಾದಾವಿದಾರರು) ವೈಯಕ್ತಿಕವಾಗಿ ಸಾಲ ಪಡೆಯುತ್ತಾರೆ. ಪತ್ತಿನ ಸಹಕಾರಿ ಸಂಘಗಳು ೧೯೬೦ರ ದಶಕದಲ್ಲಿ ಆರಂಭಗೊಂಡ ಮೇಲೆ ಸಹಕಾರಿ ಸಂಘಗಳಿಂದ ಸಾಲ ಪಡೆಯಲು ಅನುವಾಗಿದೆ. ಉಳಿತಾಯಗಳ ಮೂರರಲ್ಲೊಂದು ಪಾಲನ್ನು ಜಾನುವಾರು ಖರೀದಿ, ಸಹಕಾರಿ ಸಂಘಗಳ ಷೇರು ಖರೀದಿ, ಠೇವಣಿ ಹಾಗೂ ನೆರೆಹೊರೆಯವರಿಗೆ ಸಾಲ ನೀಡಲು ಮೊದಲಾದ ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿಸಲಾಗಿದೆ. ಉಳಿತಾಯಗಳಲ್ಲಿಯ ಒಂದು ಚಿಕ್ಕಪಾಲನ್ನು ಲಂಬಾಣಿಗಳು ನಗದು ಹಣ ಮತ್ತು ಆಭರಣಗಳ ರೂಪದಲ್ಲಿ ಉಳಿಸಿಕೊಂಡಿರುತ್ತಾರೆ. ಉಳಿತಾಯಗಳ ಲೆಕ್ಕಾಚಾರದಲ್ಲಿ ಸಮುದಾಯದ ಒಟ್ಟಾರೆ ಸರಾಸರಿ ಮೊತ್ತ ಶೇಕಡಾ ೧೧.೮೩ ರಷ್ಟಿದೆ. ಬಹುಪಾಲು ಲಂಬಾಣಿಗಳು ಉಳಿತಾಯ ಮಾಡಲಾರರು. ಕೇವಲ ಕೆಲವರು ಮಾತ್ರವೇ ಅಲ್ಪಸ್ವಲ್ಪ ಉಳಿತಾಯಮಾಡಬಲ್ಲರು ಎಂಬುದನ್ನು ಈ ಅಂಕಿ ಸಂಖ್ಯೆಗಳು ಸೂಚಿಸುತ್ತವೆ.

ನಾಗಲಾಪುರ ತಾಂಡದಲ್ಲಿಯು ಕೂಡ ವೆಚ್ಚದ ಅತಿ ಹೆಚ್ಚು ಪಾಲು (ಶೇಕಡಾ ೮೩.೧೫) ಅನುಭೋಗಕ್ಕಾಗಿಯೇ ವ್ಯಯವಾಗುತ್ತದೆ. ಇತರೆ ವೆಚ್ಚಗಳಿಗಾಗಿ ಉಳಿಯುವ ಹಣವು ಶೇಕಡಾ ೧೬.೮೫ ಮಾತ್ರವೇ ಇದ್ದು, ಅದರಲ್ಲಿ ಸೌಲಭ್ಯ ಐಶಾರಾಮಗಳಿಗಾಗಿ ಶೇಕಡಾ ೨.೮೬, ಸಾಮಾಜಿಕ ಧಾರ್ಮಿಕ ಕಾರ್ಯಗಳಿಗೆ ಶೇಕಡಾ ೨.೨೬, ಉತ್ಪಾದಕ ಚಟುವಟಿಕೆಗಳಿಗೆ ಶೇಕಡಾ ೫.೨೭ ಮತ್ತು ಉಳಿತಾಯ ಹಾಗೂ ಬಂಡವಾಳಕ್ಕಾಗಿ ಶೇಕಡ ೬.೪೬ ವಿನಿಯೋಗವಾಗುತ್ತದೆ.

ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳ ವೆಚ್ಚದ ಮಾದರಿಗಳ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಈ ಕೆಳಗಿನಂತೆ ನಿರೂಪಿಸಬಹುದು : ಈ ಎರಡೂ ತಾಂಡಗಳಲ್ಲಿ ನಾಗಲಾಪುರ ತಾಂಡದ ಲಂಬಾಣಿಗಳು ಬಡತನದಲ್ಲಿದ್ದು, ಅವರ ಬಡತನದ ಸ್ಥಿತಿಯು ಅಧಿಕ ಪ್ರಮಾಣದ ಅನುಭೋಗ ವೆಚ್ಚದ ಮೂಲಕ ನಿರ್ದೇಶಿತವಾಗುತ್ತದೆ. ನಾಗಲಾಪುರ ತಾಂಡದ ಅನುಭೋಗ ವೆಚ್ಚ ಪ್ರಮಾಣವು ಶೇಕಡಾ ೮೩.೧೫ ಇದ್ದರೆ, ಮರಿಯಮ್ಮನಹಳ್ಳಿ ತಾಂಡದ ವೆಚ್ಚದ ಪ್ರಮಾಣವು ಶೇಕಡಾ ೬೬.೬೯ ಇದೆ; ಮರಿಯಮ್ಮನಹಳ್ಳಿ ತಾಂಡದಲ್ಲಿ ಶಿಕ್ಷಣಕ್ಕಾಗಿ ಹಣವನ್ನು ವಿನಿಯೋಗಿಸಿದೇ ಇದ್ದರೆ, ನಾಗಲಾಪುರ ತಾಂಡದಲ್ಲಿ ಐದು ಕುಟುಂಬಗಳು ಸರಾಸರಿ ೫೪೦ ರೂ.ಗಳನ್ನು ಪ್ರೌಢ ಶಾಲೆ ಹಾಗೂ ಕಾಲೇಜು ಶಿಕ್ಷಣಕ್ಕಾಗಿ ವಿನಿಯೋಗಿಸಿವೆ; ಸೇವಾ ಸೌಲಭ್ಯ - ಐಶಾರಾಮಗಳಿಗೆ ಸಂಬಂಧಿಸಿದಂತೆ ಎರಡೂ ತಾಂಡಗಳ ಸ್ಥಿತಿ ಸ್ವಲ್ಪಮಟ್ಟಿಗೆ ಏಕಪ್ರಕಾರವಾಗಿದೆ. (ಮರಿಯಮ್ಮನಹಳ್ಳಿ ಶೇಕಡಾ ೨.೦೭ ಹಾಗೂ ನಾಗಲಾಪುರ ಶೇಕಡಾ ೨.೮೬); ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಮರಿಯಮ್ಮನಹಳ್ಳಿ ತಾಂಡ (ಶೇಕಡಾ ೫.೮೯) ನಾಗಲಾಪುರ ತಾಂಡಕ್ಕಿಂತ (ಶೇಕಡಾ ೨.೨೬) ಅಧಿಕ ವೆಚ್ಚ ಮಾಡಿದೆ.

ಉತ್ಪಾದಕ ಚಟುವಟಿಕೆಗಳಿಗಾಗಿ ಮಾಡಲಾಗುವ ವೆಚ್ಚಗಳ ವಿಷಯದಲ್ಲಿ ಮರಿಯಮ್ಮನಹಳ್ಳಿ ತಾಂಡವು (ಶೇಕಡಾ ೧೩.೪೪) ಾಗಲಾಪುರ ತಾಂಡವು (ಶೇಕಡಾ ೫.೨೬) ಮೇಲ್ಮೆಯನ್ನು ಸಾಧಿಸಿದೆ. ಮರಿಯಮ್ಮನಹಳ್ಳಿ ತಾಂಡ ಕೃಷಿಕ ಕುಟುಂಬಗಳು ಅಧಿಕವಾಗಿದ್ದು ಷಿಗೆ ಹೆಚ್ಚಿನ ಹಣವನ್ನು ತೊಡಗಿಸಬೇಕಾದ ಅವಶ್ಯಕತೆ ಅಲ್ಲಿದೆ. ನಾಗಲಾಪುರ ತಾಂಡದಲ್ಲಿ ಕೂಲಿದುಡಿಮೆಯ ಜನರು ಧಿಕವಾಗಿರುವುದರಿಂದ ಕೃಷಿ ಸಾಗುವಳಿಗೆ ಹೆಚ್ಚಿನ ಹಣವನ್ನು ಅಲ್ಲಿ ತೊಡಗಿಸಬೇಕಾದ ಅವಶ್ಯಕತೆಯಿಲ್ಲ. ಮರಿಯಮ್ಮನಹಳ್ಳಿ ಾಂಡದಲ್ಲಿಯ ಕೆಲವು ಕೃಷಿಕರು ಆಧುನಿಕ ಕೃಷಿಯ ಕೆಲವು ಅಂಶಗಳನ್ನು ಅನುಸರಿಸುತ್ತಿದ್ದಾರೆ. ಉಳಿತಾಯ ಹಾಗೂ ಬಂಡವಾಳ ೊಡಗಿಸುವಿಕೆಯಲ್ಲಿ ಮರಿಯಮ್ಮನಹಳ್ಳಿ ತಾಂಡವು ನಾಗಲಾಪುರ ತಾಂಡಕ್ಕಿಂತ ಮುಂದೆ ಇದೆ (ಮರಿಯಮ್ಮನಹಳ್ಳಿ ತಾಂಡ ಶೇಕಡಾ ೧.೮೩; ನಾಗಲಾಪುರ ತಾಂಡ ಶೇಕಡಾ ೬.೪೬). ನಾಗಲಾಪುರ ತಾಂಡದಲ್ಲಿ ಆದಾಯದ ಶೇಕಡಾ ೮೩.೧೫ ಪಾಲು ಅನುಭೋಗಕ್ಕಾಗಿ ್ಯಯವಾಗುತ್ತದೆ. ಹಾಗೂ ಅಲ್ಲಿಯ ಜನಸಂಖ್ಯೆಯ ಬಹುಪಾಲು ಜನರು ಅಲ್ಪ ದುಡಿಮೆಯ ಕೂಲಿ ಕೆಲಸದ ಆರ್ಥಿಕತೆಯನ್ನು ನುಸರಿಸಿಕೊಂಡಿದ್ದಾರೆ. ಹೀಗಾಗಿ ನಾಗಲಾಪುರ ತಾಂಡದಲ್ಲಿ ಆರ್ಥಿಕ ಬೆಳವಣಿಗೆಯ ಸಾಮರ್ಥ್ಯಗಳು ಶಕ್ತಿಹೀನವಾಗಿವೆ. ಮರಿಯಮ್ಮನಹಳ್ಳಿ ಾಂಡದೊಂದಿಗಿನ ಹೋಲಿಕೆಯಲ್ಲಿ ನಾಗಲಾಪುರ ತಾಂಡದ ಸಾಪೇಕ್ಷ ಬಡತನವು ದಿಗ್ಭ್ರಮೆಗೊಳಿಸುವಂತಹದು ಎಂದೆನಿಸುತ್ತದೆ. ರಿಯಮ್ಮನಹಳ್ಳಿ ತಾಂಡಕ್ಕೆ ಪಟ್ಟಣದೊಡನೆ ನಿಕಟ ಸಂಪರ್ಕಗಳಿವೆ; ಹಣದ ಮಾಧ್ಯಮವನ್ನಾಧರಿಸಿದ ಆರ್ಥಿಕತೆ ಇದೆ; ಚಾತ್ಮಕತೀತೆಯ ್ರವೃತ್ತಿ ಅಲ್ಲಿ ಅಧಿಕವಾಗಿದೆ; ವೈವಿಧ್ಯಮಯ ಆರ್ಥಿಕ ಚಟುವಟಿಕೆಗಳು ಅಲ್ಲಿ ಕಾಣಸಿಗುತ್ತವೆ; ಕೆಲವು ಕುಟುಂಬಗಳಲ್ಲಿ ಮಾತ್ರವೇ ಾಗಿದ್ದರೂ ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲ ಇಲ್ಲಿ ಕಾಣಸಿಗುತ್ತದೆ. ಈ ಎಲ್ಲ ಸಂಗತಿಗಳು ಆರ್ಥಿಕ ಬೆಳವಣಿಗೆಯ ಇತರ ಮರ್ಥ ಅಂಶಗಳಾಗಿದ್ದರೂ ವಾಸ್ತವವಾಗಿ ನಾಗಲಾಪುರ ತಾಂಡವು ಬಡತನದ ರೇಖೆಯ ಕೆಳಗೆ ಉಳಿದುಕೊಂಡಿರುವುದು ವಿಚಿತ್ರ ಂಗತಿ ಎಂದೇ ತೋರುತ್ತದೆ.

ಒಟ್ಟಾರೆ ನಾಗಲಾಪುರ ತಾಂಡವು ತೋರಿಕೆಯಲ್ಲಿ ಪರಸ್ಪರ ವಿರೋಧವನ್ನುಳ್ಳ ಎರಡು ಒಲವುಗಳ ಸಹ ಅಸ್ತಿತ್ವದ ಒಂದು ದರ್ಶನವಾಗಿದೆ ಎನ್ನಬಹುದು. ಅಂದರೆ ಆರ್ಥಿಕತೆಯ ಬೆಳವಣಿಗೆಗೆ ಸಹಾಯಕವಾದ ಅವಕಾಶಗಳು ಅಥವಾ ಅಂಶಗಳು ಇದ್ದಾಗಲು ೂಡ ಅವುಗಳು ಪ್ರಯೋಜನಕಾರಿಯಾಗಿ ಬಳಕೆಯಾಗದಿರುವುದು ಮತ್ತು ಕಡುಬಡತದ ಅಸ್ತಿತ್ವದಲ್ಲಿರುವುದು ಸೋಜಿಗವನ್ನುಂಟು ಾಡುವ ಸಂಗತಿಯೇ ಸರಿ. ಆರ್ಥಿಕತೆಯಲ್ಲಿ ವೈವಿಧ್ಯತೆ ಇದ್ದಾಗಲು ಅಸ್ತಿಪಾಸ್ತಿಗಳಿಲ್ಲದಿರುವ ಸಾಮಾನ್ಯ ಆರ್ಥಿಕ ಬಡತನ ಒಂದೆಡೆಯಿದ್ದರೆ, ೆಲವು ಕುಟುಂಬಗಳು ಸ್ಥಿತಿವಂತವಾಗಿರುವುದು, ಉತ್ತಮ ಸಾಧನೆಗಳನ್ನು ಮಾಡಿರುವುದು ಹಾಗು ಆ ನಿಟ್ಟಿನಲ್ಲಿ ಮುಂದುವರೆಯುವ ಹಂಬಲಿಕೆಯನ್ನು ತೋರುತ್ತಿರುವುದು ಇನ್ನೊಂದೆಡೆಯಲ್ಲಿ ಕಂಡುಬರುವ ಸಂಗತಿಯಾಗಿದೆ. ಕೇವಲ ಸಾಧನಗಳ ಬದಲಾವಣೆ ಮಾತ್ರವೇ ಡತನದ ನಿರ್ಮೂಲನೆಗೆ ಸಹಕಾರಿಯಾಗಲಾರದು. ನಾಗಲಾಪುರ ತಾಂಡ ಒಬ್ಬ ಲಂಬಾಣಿ ಮರಿಯಮ್ಮನಹಳ್ಳಿ ತಾಂಡದ ಅತ್ಯಂತ ್ಥಿತಿವಂತ ಲಂಬಾಣಿಯನ್ನು ಆದಾಯದಲ್ಲಿ ಮೀರಿಸಿರುವುದು ಗಮನಾರ್ಹ ಸಂಗತಿಯೇ ಸರಿ (ನಾಗಲಾಪುರ ತಾಂಡದ ಕುಟುಂಬದ ಗರಿಷ್ಠ ಆದಾಯವು ವಾರ್ಷಿಕ ರೂ. ೨೦,೦೦೦ ಇದ್ದರೆ ಮರಿಯಮ್ಮನಹಳ್ಳಿ ತಾಂಡದ ಕುಟುಂಬದ ಗರಿಷ್ಠ ಆದಾಯವು ವಾರ್ಷಿಕ ರೂ. ೨೫,೦೦೦ ಿದೆ). ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರ ತಾಂಡದ ಲಂಬಾಣಿಗಳಲ್ಲಿ ಹೆಚ್ಚಿನ ಸಂಖ್ಯೆಯ ಜನರು ಬಡತನದ ರೇಖೆಯ ಕೆಳಗಿದ್ದಾರೆ. ಡತನದ ಸ್ಥಿತಿ ಅವರ ಜೀವನ ಶೈಲಿಯನ್ನು ಬಾಧಿಸಿದೆ. ನಾನು ಅಂದಾಜಿಸಿದಂತೆ ವಾರ್ಷಿಕ ಆದಾಯವು ಒಂದು ವರ್ಷದ ಅವಧಿಯಲ್ಲಿ ವರಲ್ಲಿ ಎಲ್ಲರಿಗೂ ನಿಯತಕಾಲಿಕವಾಗಿ ಸಮನಾಗಿ ಸಿಕ್ಕುವುದಿಲ್ಲ. ಕೂಲಿ ದುಡಿಮೆಯ ಲಂಬಾಣಿಗಳಿಗೆ ವರ್ಷದ ಕೆಲವು ತಿಂಗಳುಗಳಲ್ಲಿ

ಉತ್ಪಾದಕ ಚಟುವಟಿಕೆಗಳಿಗಾಗಿ ಮಾಡಲಾಗುವ ವೆಚ್ಚಗಳ ವಿಷಯದಲ್ಲಿ ಮರಿಯಮ್ಮನಹಳ್ಳಿ ತಾಂಡವು (ಶೇಕಡಾ ೧೩.೪೪) ನಾಗಲಾಪುರ ತಾಂಡವು (ಶೇಕಡಾ ೫.೨೭) ಮೇಲ್ಮೆಯನ್ನು ಸಾಧಿಸಿದೆ. ಮರಿಯಮ್ಮನಹಳ್ಳಿ ತಾಂಡ ಕೃಷಿಕ ಕುಟುಂಬಗಳು ಅಧಿಕವಾಗಿದ್ದು ಕೃಷಿಗೆ ಹೆಚ್ಚಿನ ಹಣವನ್ನು ತೊಡಗಿಸಬೇಕಾದ ಅವಶ್ಯಕತೆ ಅಲ್ಲಿದೆ. ನಾಗಲಾಪುರ ತಾಂಡದಲ್ಲಿ ಕೂಲಿದುಡಿಮೆಯ ಜನರು ಅಧಿಕವಾಗಿರುವುದರಿಂದ ಕೃಷಿ ಸಾಗುವಳಿಗೆ ಹೆಚ್ಚಿನ ಹಣವನ್ನು ಅಲ್ಲಿ ತೊಡಗಿಸಬೇಕಾದ ಅವಶ್ಯಕತೆಯಿಲ್ಲ. ಮರಿಯಮ್ಮನಹಳ್ಳಿ ತಾಂಡದಲ್ಲಿಯ ಕೆಲವು ಕೃಷಿಕರು ಆಧುನಿಕ ಕೃಷಿಯ ಕೆಲವು ಅಂಶಗಳನ್ನು ಅನುಸರಿಸುತ್ತಿದ್ದಾರೆ. ಉಳಿತಾಯ ಹಾಗೂ ಬಂಡವಾಳ ತೊಡಗಿಸುವಿಕೆಯಲ್ಲಿ ಮರಿಯಮ್ಮನಹಳ್ಳಿ ತಾಂಡವು ನಾಗಲಾಪುರ ತಾಂಡಕ್ಕಿಂತ ಮುಂದೆ ಇದೆ (ಮರಿಯಮ್ಮನಹಳ್ಳಿ ತಾಂಡ ಶೇಕಡಾ ೧೧.೮೩; ನಾಗಲಾಪುರ ತಾಂಡ ಶೇಕಡಾ ೬.೪೬). ನಾಗಲಾಪುರ ತಾಂಡದಲ್ಲಿ ಆದಾಯದ ಶೇಕಡಾ ೮೩.೧೫ ಪಾಲು ಅನುಭೋಗಕ್ಕಾಗಿ ವ್ಯಯವಾಗುತ್ತದೆ. ಹಾಗೂ ಅಲ್ಲಿಯ ಜನಸಂಖ್ಯೆಯ ಬಹುಪಾಲು ಜನರು ಅಲ್ಪ ದುಡಿಮೆಯ ಕೂಲಿ ಕೆಲಸದ ಆರ್ಥಿಕತೆಯನ್ನು ಅನುಸರಿಸಿಕೊಂಡಿದ್ದಾರೆ. ಹೀಗಾಗಿ ನಾಗಲಾಪುರ ತಾಂಡದಲ್ಲಿ ಆರ್ಥಿಕ ಬೆಳವಣಿಗೆಯ ಸಾಮರ್ಥ್ಯಗಳು ಶಕ್ತಿಹೀನವಾಗಿವೆ. ಮರಿಯಮ್ಮನಹಳ್ಳಿ ತಾಂಡದೊಂದಿಗಿನ ಹೋಲಿಕೆಯಲ್ಲಿ ನಾಗಲಾಪುರ ತಾಂಡದ ಸಾಪೇಕ್ಷ ಬಡತನವು ದಿಗ್ಭ್ರಮೆಗೊಳಿಸುವಂತಹದು ಎಂದೆನಿಸುತ್ತದೆ. ಮರಿಯಮ್ಮನಹಳ್ಳಿ ತಾಂಡಕ್ಕೆ ಪಟ್ಟಣದೊಡನೆ ನಿಕಟ ಸಂಪರ್ಕಗಳಿವೆ; ಹಣದ ಮಾಧ್ಯಮವನ್ನಾಧರಿಸಿದ ಆರ್ಥಿಕತೆ ಇದೆ; ಚಾತ್ಯತೀತೆಯ ಪ್ರವೃತ್ತಿ ಅಲ್ಲಿ ಅಧಿಕವಾಗಿದೆ; ವೈವಿಧ್ಯಮಯ ಆರ್ಥಿಕ ಚಟುವಟಿಕೆಗಳು ಅಲ್ಲಿ ಕಾಣಸಿಗುತ್ತವೆ; ಕೆಲವು ಕುಟುಂಬಗಳಲ್ಲಿ ಮಾತ್ರವೇ ಆಗಿದ್ದರೂ ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲ ಇಲ್ಲಿ ಕಾಣಸಿಗುತ್ತದೆ. ಈ ಎಲ್ಲ ಸಂಗತಿಗಳು ಆರ್ಥಿಕ ಬೆಳವಣಿಗೆಯ ಇತರೆ ಸಮರ್ಥ ಅಂಶಗಳಾಗಿದ್ದರೂ ವಾಸ್ತವವಾಗಿ ನಾಗಲಾಪುರ ತಾಂಡವು ಬಡತನದ ರೇಖೆಯ ಕೆಳಗೆ ಉಳಿದುಕೊಂಡಿರುವುದು ವಿಚಿತ್ರ ಸಂಗತಿ ಎಂದೇ ತೋರುತ್ತದೆ.

ಒಟ್ಟಾರೆ ನಾಗಲಾಪುರ ತಾಂಡವು ತೋರಿಕೆಯಲ್ಲಿ ಪರಸ್ಪರ ವಿರೋಧವನ್ನುಳ್ಳ ಎರಡು ಒಲವುಗಳ ಸಹ ಅಸ್ತಿತ್ವದ ಒಂದು ನಿದರ್ಶನವಾಗಿದೆ ಎನ್ನಬಹುದು. ಅಂದರೆ ಆರ್ಥಿಕತೆಯ ಬೆಳವಣಿಗೆಗೆ ಸಹಾಯಕವಾದ ಅವಕಾಶಗಳು ಅಥವಾ ಅಂಶಗಳು ಇದ್ದಾಗಲು ಕೂಡ ಅವುಗಳು ಪ್ರಯೋಜನಕಾರಿಯಾಗಿ ಬಳಕೆಯಾಗದಿರುವುದು ಮತ್ತು ಕಡುಬಡತದ ಅಸ್ತಿತ್ವದಲ್ಲಿರುವುದು ಸೋಜಿಗವನ್ನುಂಟು ಮಾಡುವ ಸಂಗತಿಯೇ ಸರಿ. ಆರ್ಥಿಕತೆಯಲ್ಲಿ ವೈವಿಧ್ಯತೆ ಇದ್ದಾಗಲು ಅಸ್ತಿಪಾಸ್ತಿಗಳಿಲ್ಲದಿರುವ ಸಾಮಾನ್ಯ ಆರ್ಥಿಕ ಬಡತನ ಒಂದೆಡೆಯಿದ್ದರೆ, ಕೆಲವು ಕುಟುಂಬಗಳು ಸ್ಥಿತಿವಂತವಾಗಿರುವುದು, ಉತ್ತಮ ಸಾಧನೆಗಳನ್ನು ಮಾಡಿರುವುದು ಹಾಗು ಆ ನಿಟ್ಟಿನಲ್ಲಿ ಮುಂದುವರೆಯುವ ಹಂಬಲಿಕೆಯನ್ನು ತೋರುತ್ತಿರುವುದು ಇನ್ನೊಂದೆಡೆಯಲ್ಲಿ ಕಂಡುಬರುವ ಸಂಗತಿಯಾಗಿದೆ. ಕೇವಲ ಸಾಧನಗಳ ಬದಲಾವಣೆ ಮಾತ್ರವೇ ಬಡತನದ ನಿರ್ಮೂಲನೆಗೆ ಸಹಕಾರಿಯಾಗಲಾರದು. ನಾಗಲಾಪುರ ತಾಂಡ ಒಬ್ಬ ಲಂಬಾಣಿ ಮರಿಯಮ್ಮನಹಳ್ಳಿ ತಾಂಡದ ಅತ್ಯಂತ ಸ್ಥಿತಿವಂತ ಲಂಬಾಣಿಯನ್ನು ಆದಾಯದಲ್ಲಿ ಮೀರಿಸಿರುವುದು ಗಮನಾರ್ಹ ಸಂಗತಿಯೇ ಸರಿ (ನಾಗಲಾಪುರ ತಾಂಡದ ಕುಟುಂಬದ ಗರಿಷ್ಠ ಆದಾಯವು ವಾರ್ಷಿಕ ರೂ. ೨೦,೦೦೦ ಇದ್ದರೆ ಮರಿಯಮ್ಮನಹಳ್ಳಿ ತಾಂಡದ ಕುಟುಂಬದ ಗರಿಷ್ಠ ಆದಾಯವು ವಾಷಿಕ ರೂ. ೨೫,೦೦೦ ಇದೆ). ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರ ತಾಂಡದ ಲಂಬಾಣಿಗಳಲ್ಲಿ ಹೆಚ್ಚಿನ ಸಂಖ್ಯೆಯ ಜನರು ಬಡತನದ ರೇಖೆಯ ಕೆಳಗಿದ್ದಾರೆ. ಬಡತನದ ಸ್ಥಿತಿ ಅವರ ಜೀವನ ಶೈಲಿಯನ್ನು ಬಾಧಿಸಿದೆ. ನಾನು ಅಂದಾಜಿಸಿದಂತೆ ವಾರ್ಷಿಕ ಆದಾಯವು ಒಂದು ವರ್ಷದ ಅವಧಿಯಲ್ಲಿ ಅವರಲ್ಲಿ ಎಲ್ಲರಿಗೂ ನಿಯತಕಾಲಿಕವಾಗಿ ಸಮನಾಗಿ ಸಿಕ್ಕುವುದಿಲ್ಲ. ಕೂಲಿ ದುಡಿಮೆಯ ಲಂಬಾಣಿಗಳಿಗೆ ವರ್ಷದ ಕೆಲವು ತಿಂಗಳುಗಳಲ್ಲಿ

ತೀವ್ರ ಆರ್ಥಿಕ ಕೊರತೆ ಇರುತ್ತದೆ. ಕೃಷಿ ಸಾಗುವಳಿಯಲ್ಲಿ ಬಿತ್ತನೆ ಕೆಲಸದ ನಂತರ ಮತ್ತು ಕಳೆ ತೆಗೆಯುವ ಕೆಲಸ ಆರಂಭವಾಗುವ ಮೊದಲು ಅಂದರೆ ಜೂನ್ - ಜುಲೈ ತಿಂಗಳಲ್ಲಿ ಅವರಿಗೆ ದುಡಿಮೆಯ ಅವಕಾಶಗಳೇ ಇರುವುದಿಲ್ಲ. ಕುರುಚಲು ಕಾಡಿನಿಂದ ಕಟ್ಟಿಗೆ ಕದ್ದು ತರುವುದು ಹಾಗೂ ಅಧಿಕ ಬಡ್ಡಿ ದರದ ಸಾಲವನ್ನು ಪಡೆಯುವುದೇ ಅವರು ಮಾಡಬಹುದಾದ ಕೆಲಸಗಳಾಗಿವೆ. ಕೆಲವರು ಮಲೆನಾಡು ಪ್ರದೇಶಕ್ಕೆ ಕೆಲಸವನ್ನು ಅರಸಿ ವಲಸೆ ಹೋಗುತ್ತಾರೆ.

ಜೀವನ ಮಟ್ಟದ ಪರಿಕಲ್ಪನೆಯ ಬಗೆಗೆ ಲಂಬಾಣಿಗಳಲ್ಲಿ ಏಕಾಭಿಪ್ರಾಯವಿಲ್ಲ. ತಮ್ಮ ಜೀವನ ಇತ್ತೀಚಿನ ದಿನಗಳಲ್ಲಿ ಕಟ್ಟ ಸ್ಥಿತಿಯಲ್ಲಿದೆ ಎಂದು ಕೆಲವರು ಭಾವಿಸಿದರೆ, ತಮ್ಮ ಜೀವನಮಟ್ಟ ಇತ್ತೀಚೆಗೆ ಸಾಕಷ್ಟು ಸುಧಾರಿಸಿದೆ ಎಂದು ಬಹಳಷ್ಟು ಜನರು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯಗಳು ವಿಭಿನ್ನ ಅಂಶಗಳ ಹಾಗೂ ವಿಭಿನ್ನ ದೃಷ್ಟಿಕೋನದ ಲೆಕ್ಕಾಚಾರಗಳನ್ನು ಒಳಗೊಂಡಿವೆ. ಜೀವನಾವಶ್ಯಕ ವಸ್ತುಗಳ ಬೆಲೆಗಳ ಏರಿಕೆ ಹಾಗೂ ಅವರ ಲೆಕ್ಕಾಚಾರಗಳಿಗಿಂತ ಕಡಿಮೆಯಾಗುತ್ತಿರುವ ಕೂಲಿದರಗಳಿಂದಾಗಿ ತಮ್ಮ ಜೀವನ ಕಷ್ಟವಾಗಿದೆ ಎಂದು ಮೊದಲ ವರ್ಗವು ಭಾವಿಸುತ್ತದೆ, ಆಹಾರ ಬೇಯಿಸುವ ವಿಧಾನಗಳಲ್ಲಾದ ಸುಧಾರಣೆಗಳು, ಶಿಕ್ಷಣ, ಸರ್ಕಾರಿ ಸೌಲಭ್ಯಗಳು, ಸಂಪರ್ಕ ಸೌಲಭ್ಯಗಳು, ಅನುಭೋಗದ ಸರಕುಗಳ ಮಟ್ಟ, ಉತ್ತಮವಾಗಿ ಜೀವಿಸಬೇಕೆಂಬ ಹಂಬಲ ಹೆಚ್ಚಾಗುತ್ತಿರುವುದು ಮೊದಲಾದ ಅಂಶಗಳನ್ನು ಅನುಲಕ್ಷಿಸಿ ತಮ್ಮ ಜೀವನಕ್ರಮ ಹಾಗೂ ಶೈಲಿಯಲ್ಲಿ ಮೊದಲಿಗಿಂತಲೂ ಸುಧಾರಣೆಯಾಗಿದೆ ಎಂದು ಇನ್ನೊಂದು ವರ್ಗವು ಭಾವಿಸುತ್ತದೆ. ಹೊಸ ಆರ್ಥಿಕ ರೀತಿ ನೀತಿಗಳ ಅನುಸರಣೆ ಹಾಗೂ ಅಭಿವೃದ್ಧಿ ಹೊಂದಿದ ಸಮುದಾಯಗಳ ಜನರ ಜೀವನ ಶೈಲಿಯ ಕೆಲವು ಅಂಶಗಳನ್ನು ಅನುಕರಣೆ ಮಾಡುವ ಮೂಲಕ ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಬಹುದೆಂದು ಭಾವಿಸುವ ಎರಡನೆಯ ವರ್ಗದ ಜನರ ಆರ್ಥಿಕ ಭವಿಷ್ಯವು ಆಶಾದಾಯಿಕತೆಯಿಂದ ತುಂಬಿದೆ.

ಕೆಲವು ಲಂಬಾಣಿಗಳ ಸ್ಥಿತಿವಂತಿಕೆ (ನಾಗಲಾಪುರ ತಾಂಡದಲ್ಲಿ ಎರಡು ಕುಟುಂಬಗಳು ಹಾಗೂ ಮರಿಯಮ್ಮನಹಳ್ಳಿ ತಾಂಡದಲ್ಲಿ ನಾಲ್ಕು ಕುಟುಂಬಗಳು) ಹೊರಗಿನ ಪ್ರಪಂಚದೊಡನೆ ಸಂಪರ್ಕಗಳ ಪರಿಣಾಮವಾಗಿ ವಿಸ್ತೃತಗೊಂಡ ಅವರ ಭೌತಿಕ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಉದಾಹರಣೆಗೆ, ನಾಗಲಾಪುರ ತಾಂಡದಲ್ಲಿ ಸ್ಥಿತಿವಂತ ಲಂಬಾಣಿಯ ಮನೆಯಲ್ಲಿ ತೇಗದ ಮರದಿಂದ ಮಾಡಿದ ಮಂಚ, ದೊಡ್ಡ ಕನ್ನಡಿ, ಗಡಿಯಾರಗಳು, ರೇಡಿಯೊ, ಟೇಪ್‌ರಿಕಾರ್ಡರ್, ಟಿ.ವಿ, ಬೂಟುಗಳು, ಹಿಂದು ದೇವತೆಗಳ ಸುಂದರ ಶಿಲಾ ಪ್ರತಿಮೆಗಳು, ನೀರು ಸಂಗ್ರಹಣೆಯ ಫಿಲ್ಟರ್‌ಗಳು, ಆರಾಮದ ಕುರ್ಚಿಗಳು, ಟೀಪಾಯ್, ಡಿಜೈನುಗಳನ್ನುಳ್ಳ (ಎಂಬ್ರಾಯ್ಡರಿ) ಮೇಜಿನ ಮೇಲುವಸ್ತ್ರಗಳು, ಬಾಗಿಲು ಅಲಂಕಾರಕ್ಕಾಗಿ ಆಚೀಚೆ ಇಟ್ಟಿರುವ ಚಿತ್ರಗಳು, ಕಿಟಕಿ ಪರದೆ, ವಿದ್ಯುತ್ ದೀಪಗಳು (೧೯೯೧ರಲ್ಲಿ ನಾಗಲಾಪುರ ತಾಂಡದಲ್ಲಿ ಅದೊಂದೇ ಮನೆಯಲ್ಲಿ ವಿದ್ಯುತ್ ಸಂಪರ್ಕವಿದ್ದಿತು). ಮೊದಲಾದ ಆಧುನಿಕ ಆಕರ್ಷಕ ಸುಂದರ ವಸ್ತುಗಳು ಆ ಕುಟುಂಬದ ಆರ್ಥಿಕ ಸಮೃದ್ಧಿ ಮತ್ತು ಸ್ಥಿತಿವಂತಿಕೆಯನ್ನು ಪ್ರತಿಬಿಂಬಿಸುತ್ತವೆ. ಅದೇ ತಾಂಡದಲ್ಲಿ ಇತರ ನಾಲ್ಕು ಕುಟುಂಬಗಳ ಬಳಿ ಕೈಗಡಿಯಾರ, ಟೇಪ್‌ರಿಕಾರ್ಡ್‌ರ್, ರೇಡಿಯೋಗಳಿವೆ. ಅದೇ ರೀತಿ ಮರಿಯಮ್ಮನಹಳ್ಳಿ ತಾಂಡದಲ್ಲಿಯ ಎರಡು ಮನೆಗಳಲ್ಲಿ ಕುರ್ಚಿಗಳು, ಮೇಜುಗಳು, ಟಿ.ವಿ., ಟೇಪ್‌ರಿಕಾರ್ಡ್‌ರ್, ರೇಡಿಯೋ ಇತ್ಯಾದಿ ಆಧುನಿಕ ಆಕರ್ಷಕ ಗೃಹ ಬಳಕೆಯ ವಸ್ತುಗಳಿವೆ.

## ಸಾಲ, ಉಳಿತಾಯಗಳು ಮತ್ತು ಬಂಡವಾಳ ಕ್ರೋಢೀಕರಣ

### ಸಾಲದ ಋಣಕ್ಕೆ ಕಾರಣಗಳು ಮತ್ತು ಬಂಡವಾಳ ಕ್ರೋಡೀಕರಣದ ಮೇಲೆ ಅದರ ಪರಿಣಾಮಗಳು

ಲಂಬಾಣಿಗಳು ಜೀವನದ ಬಗೆಗೆ ತಳೆದಿರುವ ಪಾರಂಪರಿಕ ಪ್ರವೃತ್ತಿಯ ದೃಷ್ಟಿಕೋನ, ಅವರ ಸಂಪ್ರದಾಯಗಳು ಮತ್ತು ನಂಬಿಕೆಗಳು ಬಂಡವಾಳದ ಕ್ರೋಡೀಕರಣದಲ್ಲಿ ಕೆಲವು ಮಟ್ಟಿಗೆ ಅಡೆತಡೆಗಳನ್ನುಂಟುಮಾಡಿದೆ. ಕೃಷಿ ಭೂಮಿ ಹಾಗೂ ಜಾನುವಾರುಗಳನ್ನು ಕೊಂಡುಕೊಳ್ಳುವುದರಲ್ಲಿ ಅವರಿಗೆ ಆಸಕ್ತಿಯಿದೆಯಾದರೂ ಈ ಕಾರಣಗಳಿಂದಾಗಿ ಅವರಿಗೆ ಬಂಡವಾಳವನ್ನು ಕೂಡಿಸಲು ಅವಕಾಶವಿಲ್ಲವಾಗಿದೆ. ಅವರು ಸಾಕಷ್ಟು ಶ್ರಮವಹಿಸಿ ದುಡಿಯುತ್ತಾರೆ. ಆದರೆ ಭವಿಷ್ಯದ ಅಗತ್ಯಗಳ ಬಗೆಗೆ ಯೋಚಿಸದೆ ಮಾಡುವ ದುಂದು ವೆಚ್ಚದಿಂದಾಗಿ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಕೆಲವು ಅಪರೂಪದ ಅಪವಾದಗಳೂ ಇವೆ ಎಂಬುದು ಸತ್ಯವಾದರೂ ಬಹುಪಾಲು ಜನರ ಸ್ಥಿತಿ ಇದೇ ತೆರನಾಗಿದೆ. ಉಳಿತಾಯ ಮಾಡಲು ಸಾಧ್ಯವಾಗದಾಗ ಅಥವಾ ಹೆಚ್ಚು ದುಡಿಮೆ ಮಾಡಿದಾಗ ಬಹು ಸಮಯದಿಂದ ಈಡೇರದೆ ಉಳಿದ ಋಣ ಭಾರಗಳನ್ನು (ಧಾರ್ಮಿಕ ವಿಧಿ ಆಚರಣೆಗಳು) ತೀರಸಲು ಹವಣಿಸುವುದೇ ಸಾಮಾನ್ಯವಾಗಿ ಎಲ್ಲ ಲಂಬಾಣಿಗಳ ಮನೋ ಪ್ರವೃತ್ತಿಯಾಗಿದೆ. ಅಭಿವೃದ್ಧಿ ನೀಯೋಗಗಳಿಂದ ಉತ್ಪಾದನಾ ಉದ್ದೇಶಗಳಿಗಾಗಿ ಕೊಡ ಮಾಡಲಾದ ಸಾಲ ಮತ್ತು ಸಹಾಯಧನವನ್ನು ಅನುಭೋಗಕ್ಕಾಗಿ. (ಮಾಂಸ, ಹೆಂಡ ಇತ್ಯಾದಿ) ಮತ್ತು ಆರ್ಥಿಕವಾಗಿ ಅನುತ್ಪಾದಕ ಚಟುವಟಿಕೆಗಳಿಗೆ (ಸಾಮಾಜಿಕ, ಧಾರ್ಮಿಕ) ಬಳಸಲಾಗುತ್ತದೆ. ವರ್ತಮಾನವನ್ನು ಮಾತ್ರವೇ ಗಮನಿಸುವ ಅವರ ಮನೋ ಪ್ರವೃತ್ತಿಯು ಆದಿವಾಸಿ ಪರಂಪರೆಯಿಂದ ಸಹಜವಾಗಿ ಬಂದ ಗುಣ ಲಕ್ಷಣವಾಗಿದೆ. ಬಹುಜಾತಿ ಕೃಷಿಕ ಸಮುದಾಯಗಳಲ್ಲಿ ಭವಿಷ್ಯದ ದಿನಗಳ ಅಗತ್ಯಕ್ಕಾಗಿ ಸ್ವಲ್ಪವನ್ನು ಉಳಿತಾಯ ಮಾಡುವ ಪ್ರವೃತ್ತಿ ಕಂಡುಬಂದರೆ, ಇವರು ತೀರ ಇತ್ತೀಚಿನವರೆಗೂ ತಾವಿದ್ದ ತಾಂಡವನ್ನು ಬಿಟ್ಟು ಹೋಗಲಾರದ ಸಮುದಾಯವಾಗಿದ್ದಾರೆ. ಲಂಬಾಣಿಗಳು ತಮ್ಮ ಗತಕಾಲದ ಅಲೆಮಾರಿ ಸಮುದಾಯದ 'ಇಂದಿನದಷ್ಟೇ ಯೋಚಿಸುವ' ಸ್ವಭಾವವನ್ನು ಉಳಿಸಿಕೊಂಡಿದ್ದಾರೆ. (ಇದು ಸ್ವಚ್ಛಂದವಾಗಿ ಅಲೆದಾಡುವ ಜೀಪ್ಸಿಗಳ ವಿಶಿಷ್ಟ ಗುಣ ಲಕ್ಷಣವಾಗಿದೆ). ನಾವು ಅಲೆಮಾರಿ ಜೀವನವನ್ನು ಬಯಸುವವರು ಎಂಬ ದಂತಕಥೆಗಳ ಉದಾಹರಣೆಗಳನ್ನು ಸ್ಮರಿಸಿಕೊಳ್ಳುತ್ತ ತಮ್ಮ ಬಡತನದ ಸ್ಥಿತಿಗಳಿಗೆ ಅನುಚಿತ ಸಮರ್ಥನೆಗಳನ್ನು, ಅರ್ಥಹೀನ ತರ್ಕಗಳನ್ನು ಸಾದರಪಡಿಸುತ್ತ, ತಮ್ಮ ಯಥಾ ಸ್ಥಿತಿಯನ್ನು ಬದಲಿಸಲು ಮುಂದಾಗದೇ ಇರುವುದು ಅವರ ದೌರ್ಬಲ್ಯವಾದರೂ, ಅದನ್ನು ಒಪ್ಪಲು ಸಿದ್ಧವಿಲ್ಲದ ಮನೋಭಾವ ಅವರ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಹಿನ್ನಡೆಗೆ ಒಂದು ಕಾರಣವಾಗಿದೆ.

ಸಾಲ ಮಾಡಲು, ಸಾಲ ನೀಡಲು ಅಥವಾ ಉಳಿತಾಯ ಮಾಡಲು ಎಲ್ಲ ಕುಟುಂಬಗಳಿಗೆ ಸಾಧ್ಯವಿಲ್ಲ ಎಂಬುದನ್ನು ವೆಚ್ಚವನ್ನು ಕುರಿತಾದ ಕೋಷ್ಟಕ ೨.೧೧ ಸೂಚಿಸುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿಯ ೭೯ ಕುಟುಂಬಗಳು ಹಾಗೂ ನಾಗಲಾಪುರ ತಾಂಡದಲ್ಲಿಯ ಕೇವಲ ೧೦ ಕುಟುಂಬಗಳು ಉಳಿತಾಯ ಮಾಡುವಲ್ಲಿ ಸಮರ್ಥವಾಗಿವೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ೭೫ ಕುಟುಂಬಗಳು ಹಾಗೂ ನಾಗಲಾಪುರ ತಾಂಡ ೧೪ ಕುಟುಂಗಳು ಇನ್ನು ಸಾಲಭಾರದಲ್ಲಿಯೇ ಇದ್ದು, ಸಾಲ ಮರುಪಾವತಿ ಮಾಡುತ್ತಲ್ಲೇ ಇವೆ. ನಾಗಲಾಪುರ ತಾಂಡದೊಂದಿಗೆ ಹೋಲಿಕೆ ಮಾಡಿದರೆ ಮರಿಯಮ್ಮನಹಳ್ಳಿ ತಾಂಡವು ಸ್ಥಿತಿವಂತವಾಗಿದ್ದರೂ ಉಳಿತಾಯಗಳ ಮೊತ್ತವು ತೀರ ಅಲ್ಪವಾಗಿದ್ದರಿಂದ ಲಂಬಾಣಿಗಳು ದೀರ್ಘಾವಧಿ ಸಾಲಗಳನ್ನು ಮಾಡುವ ಸ್ಥಿತಿಯಲ್ಲಿಲ್ಲ. ಅವರ ಸಾಲದ ಅಗತ್ಯಗಳನ್ನು ಸುತ್ತಮುತ್ತಲಿನ ಹಳ್ಳಿಗಾಡುಗಳ ಹಾಗೂ ಪಟ್ಟಣದ ಲಂಬಾಣೇತರ ಜನರು ಒದಗಿಸುತ್ತಾರೆ. ಲಂಬಾಣಿಗಳಿಗೆ ಸಾಲವಾಗಿ ಮುಂಗಡ ಹಣವನ್ನು ನೀಡುವ ಬೇರೆ ಬೇರೆ ಸ್ಥಳಗಳಲ್ಲಿಯ ಜನರ ಸಂಖ್ಯೆಯ ಪಟ್ಟಿ ಈ ಕೆಳಕಂಡಂತೆ ಇದೆ :

| | | |
|---|---|---|
| ೧. ಮರಿಯಮ್ಮನಹಳ್ಳಿ ತಾಂಡ | | ೬ |
| ೨. ಮರಿಯಮ್ಮನಹಳ್ಳಿ ಬಹು ಜಾತಿ ಕ್ಷೇತ್ರ | | ೩ |
| ೩. ಗಂಗಾವತಿ | | ೨೦ |
| ೪. ಹಗರಿಬೊಮ್ಮನಹಳ್ಳಿ | | ೨೦ |
| ೫. ಹೊಸಪೇಟೆ | | ೫೦ |
| ೬. ಕಂಪ್ಲಿ | | ೧೫ |
| ೭. ನಾಗಲಾಪುರ ತಾಂಡ | | ೪ |
| ೮. ನಾಗಲಾಪುರ ಬಹುಜಾತಿ ಕ್ಷೇತ್ರ | | ೧೦ |

ಸಾಲನೀಡಿಕೆಗೆ ಪ್ರತಿಯಾಗಿ ಒದಗಿಸುವ ಭದ್ರತೆ ಅಥವಾ ಅಡ ಇಡುವ ಸರಕುಗಳು ಎಂದರೆ ಜಾನುವಾರು, ಮನೆ, ಜಮೀನು, ಆಭರಣಗಳು ಹಾಗೂ ವೈಯಕ್ತಿಕ ವಿಶ್ವಾಸರ್ಹತೆ. ಸಾಲ ನೀಡುವವರು ವಿಧಿಸುವ ಬಡ್ಡಿದರ ಹೆಚ್ಚು ಭಾರವಾಗಿದ್ದು ವಾರ್ಷಿಕ ಶೇಕಡಾ ೨೦ರಿಂದ ೬೦ರವರೆಗೂ ಇದೆ. ಈ ಜನರ ಅಭಿವೃದ್ಧಿಗಾಗಿ ಸರಕಾರವು ಅತ್ಯಂತ ಕಡಿಮೆ ದರದ ಬಡ್ಡಿಯಲ್ಲಿ ಸಹಕಾರಿ ಸಂಘಗಳ ಹಾಗೂ ಬ್ಯಾಂಕುಗಳ ಮೂಲಕ ನೀಡುವ ಅವಕಾಶಗಳನ್ನು ಒದಗಿಸಿದೆ. ಈ ಸಾರ್ವಜನಿಕ ನಿಯೋಗಗಳಿಂದ ಸಾಲ ಪಡೆಯಬೇಕಾದರೆ ಅನೇಕ ಔಪಚಾರಿಕತೆಗಳನ್ನು ಅನುಸರಿಸಬೇಕಾಗುತ್ತದೆ. ಅಲ್ಲದೆ ಸಂದರ್ಭಕ್ಕೆ ಅನುಕೂಲವಾಗುವ ಹಾಗೆ ಸಾಲ ಸಿಕ್ಕುವುದಿಲ್ಲ. ಆದ ಕಾರಣ ಲಂಬಾಣಿಗಳು ಸಾಲಕ್ಕಾಗಿ ಖಾಸಗಿ (ಲೇವಾದೇವಿ) ವ್ಯಕ್ತಿ, ಸಂಸ್ಥೆಗಳ ಬಳಿ ಹೋಗಲು ಇಷ್ಟ ಪಡುತ್ತಾರೆ. ಆದರೆ ಇಂತಹ ವ್ಯಕ್ತಿ ಅಥವಾ ಸಂಸ್ಥೆಗಳು ಅಧಿಕ ಬಡ್ಡಿದರದಲ್ಲಿ ಸಾಲ ನೀಡುತ್ತವೆ. ವೈಯಕ್ತಿಕ ವಿಶ್ವಾಸಾರ್ಹತೆಯನ್ನಾಧರಿಸಿ ಸಾಲನೀಡುವುದು ನಷ್ಟ ಹೊಂದುವ ಭಯ ಇರುವುದರಿಂದ ಅಧಿಕ ಬಡ್ಡಿದರವನ್ನು ವಿಧಿಸಲಾಗುತ್ತದೆ. ಕೃಷಿಕ ಲಂಬಾಣಿಗಳಿಗೆ ಖಾಸಗಿ ಸಾಲ ನೀಡುವ ದಳ್ಳಾಳಿಗಳು, ಸಾಲ ನೀಡುವ ವರ್ಗದ ನಿಯೋಗಿಗಳಾಗಿದ್ದರೆ ಸುಗ್ಗಿಯ ನಂತರದಲ್ಲಿ ತಮಗೆ ಮಾತ್ರವೇ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗಿಂತ ಕಡಿಮೆ ದರದಲ್ಲಿ ನೀಡಿ ಸಾಲ ತೀರಿಸುವಂತೆ ಪ್ರಮಾಣ ಪತ್ರ ಬರೆಯಿಸಿಕೊಂಡು ಲಂಬಾಣಿ ಜನರನ್ನು ಶೋಷಿಸುತ್ತಾರೆ.

ಇತ್ತೀಚಿನ ವರ್ಷಗಳಲ್ಲಿ ಸಹಕಾರ ಸಂಘಗಳು ಹಾಗೂ ಬ್ಯಾಂಕುಗಳು ಲಂಬಾಣಿಗಳಿಗೆ ಸಾಲ ಸೌಲಭ್ಯಗಳ ಅಗತ್ಯಗಳನ್ನು ಪೂರೈಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಲಿವೆ. ಕೋಷ್ಟಕ ೨.೧೨ ಲಂಬಾಣಿಗಳನ್ನೊಳಗೊಂಡಂತೆ ಕೃಷಿಕ ಸದಸ್ಯರ ಸದಸ್ಯತ್ವ ಅಂಕಿ ಸಂಖ್ಯೆಗಳು, ಷೇರು ಬಂಡವಾಳ, ಮುಂಗಡವಾಗಿ ನೀಡಲಾದ ಸಾಲದ ಮೊತ್ತಗಳು ಮೊದಲಾದ ವಿವರಗಳನ್ನು ನೀಡುತ್ತದೆ.

ಕೃಷಿಯ ಉದ್ದೇಶಗಳಿಗಾಗಿ ಸಾಲ ಸೌಲಭ್ಯಗಳನ್ನು ಗ್ರಾಮೀಣ ಕೃಷಿ ಸಹಕಾರಿ ಸಂಘಗಳ ಮೂಲಕ ಸುಲಭ ಬಡ್ಡಿದರದಲ್ಲಿ (ಮೊದಲ ಮೂರು ವರ್ಷಗಳ ಅವಧಿಗೆ ವಾರ್ಷಿಕ ಶೇಕಡ ೭.೩೨ ಹಾಗೂ ಆನಂತರದ ಅವಧಿಗೆ ಶೇಕಡಾ ೧೨ ರಂತೆ) ನೀಡುವುದು ಸರಕಾರದ ನೀತಿಯಾಗಿದೆ. ಮರಿಯಮ್ಮನಹಳ್ಳಿ ಸಹಕಾರಿ ಸಂಘದಲ್ಲಿ ೧೯೯೫-೯೬ರ ಸಾಲಿನ ಕೊನೆಯಲ್ಲಿ ೩೪ ಜನ ಲಂಬಾಣಿಗಳಿಗೆ ನೀಡಲಾಗಿದ್ದ ಸಾಲ ಮೊತ್ತಗಳಲ್ಲಿ ಮೂವರು ಮಾತ್ರ ಸಂಪೂರ್ಣವಾಗಿ ಸಾಲ ಮರುಪಾವತಿ ಮಾಡಿದ್ದಾರೆ. ಇನ್ನುಳಿದವರು ಸಾಲ ಮರುಪಾವತಿ ಮಾಡಿರಲಿಲ್ಲ. ಈ ಸಾಲಗಳು ಎರಡರಿಂದ ಐದು ವರ್ಷಗಳ ಅವಧಿಯವುಗಳಾಗಿದ್ದವು. ಸಾಲ ಮರುಪಾವತಿಯಲ್ಲಿ ಆದ ವಿಳಂಬಕ್ಕೆ ಸಹಕಾರಿ ಸಂಘದ ಪದಾಧಿಕಾರಿಗಳು ವಸೂಲಿ ಮಾಡುವಲ್ಲಿ ತೋರಿದ ಸಡಿಲವಾದ ನೀತಿಯೂ ಪೂರಕ ಕಾರಣವಾಗಿತ್ತು. ಮರಿಯಮ್ಮನಹಳ್ಳಿ ಸಹಕಾರ ಸಂಘವು ತನ್ನ ಸಾಲಗಾರ ಸದಸ್ಯರಿಂದ ಸಾಲ ಮರುಪಾವತಿ ಮಾಡುವಲ್ಲಿ ವಿಫಲವಾದ್ದರಿಂದ ಜಿಲ್ಲಾ ಸಹಕಾರಿ ಸಂಘವು ಅದಕ್ಕೆ ಮುಂಗಡ

ಸಾಲದ ಮೊತ್ತವನ್ನು ಕೊಡಮಾಡಲು ನಿರಾಕರಿಸಿದ್ದರಿಂದ, ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ಸಹಕಾರಿ ಸಂಘಗಳಿಗೆ ೧೯೯೮-೯೯ರ ಹಣಕಾಸು ವರ್ಷದಲ್ಲಿ ಯಾವುದೇ ಮುಂಗಡವನ್ನು ಜಿಲ್ಲಾ ಸಹಕಾರಿ ಇಲಾಖೆಯು ನೀಡಿಲ್ಲ.

ಮರಿಯಮ್ಮನಹಳ್ಳಿ ಸಹಕಾರಿ ಸಂಘದಲ್ಲಿ ಐದುಜನ ಕಾರ್ಯನಿರ್ವಾಹಕ ಸದಸ್ಯರ ಮಂಡಳಿಯಲ್ಲಿ ಒಬ್ಬ ಲಂಬಾಣಿಯನ್ನು (ಎಸ್ ಸಿ.) ಆಯ್ದುಕೊಳ್ಳುವ ನಿಯಮವನ್ನು ಅನುಸರಿಸಿತ್ತು, ೧೯೯೮ರ ನಂತರದಲ್ಲಿ ಸಾಲದ ಮೊತ್ತವನ್ನು ಸಂಪೂರ್ಣವಾಗಿ ಮರುಪಾವತಿ ಮಾಡದ ಲಂಬಾಣಿಯನ್ನು ಹುಡುಕಲು ಸಾಧ್ಯವಾಗದೇ ಹೋಯಿತು. ಇತರ ಸ್ಥಳಗಳಲ್ಲಿಯ ಸಹಕಾರಿ ಸಂಘಗಳಲ್ಲಿ (ಕೋಷ್ಟಕ ೨.೧೨ ನೋಡಿ) ಲಂಬಾಣಿ ಸದಸ್ಯರು ಎಷ್ಟೊಂದು ಕಡಿಮೆ ಸಂಖ್ಯೆಯಲ್ಲಿದ್ದಾರೆ ಎಂದರೆ ಅವುಗಳ ಕಾರ್ಯನಿರ್ವಾಹಕ ಸಮಿತಿಗಳಲ್ಲಿ ಯಾವುದೇ ಲಂಬಾಣಿ ಸದಸ್ಯರಲ್ಲವಾಗಿದೆ.

ಮರಿಯಮ್ಮನಹಳ್ಳಿ ಸಹಕಾರ ಸಂಘವು ಆ ಗ್ರಾಮದ ಹಾಗೂ ಇತರ ನಾಲ್ಕು ನೆರೆಹೊರೆಯ ಗ್ರಾಮಗಳಿಗೆ ಸೇವೆ ಒದಗಿಸುವ ಕಾರ್ಯವ್ಯಾಪ್ತಿ ಹೊಂದಿರುತ್ತದೆ. ಇದು ೧೯೮೦ರಲ್ಲಿ ಸ್ಥಾಪಿತವಾದಾಗ, ಸಂಘದ ಒಟ್ಟು ೧೫೭ ಸದಸ್ಯರಲ್ಲಿ ೪೧ ಜನ ಲಂಬಾಣಿ ಸದಸ್ಯರಿದ್ದರು. ಲಂಬಾಣಿ ಜನರು ಸಂಘದ ಕಾರ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಲ್ಲಿ ತೋರಿದ ಔದಾಸೀನ್ಯ, ಅಸಮರ್ಥತೆ ಹಾಗೂ ಸಂಘದ ಅಲಕ್ಷ್ಯ ಆಡಳಿತದಿಂದಾಗಿ ೧೯೯೭-೯೮ರ ಅವಧಿಯಲ್ಲಿ ಲಂಬಾಣಿ ಸದಸ್ಯತ್ವವು ಅಷ್ಟೇ ಉಳಿದಿದ್ದು ೧೯೯೮ರ ನಂತರದಲ್ಲಿ ಇಬ್ಬರು ಸದಸ್ಯರು ಕಡಿಮೆಯಾಗಿದ್ದಾರೆ. ಆದರೆ ಲಂಬಾಣೇತರ ಕೃಷಿಕ ಸದಸ್ಯತ್ವವು ಹೆಚ್ಚಿದೆ. ಸಂಘದ ಒಟ್ಟಾರೆ ಸದಸ್ಯ ಸಂಖ್ಯಾಬಲವು ೧೯೯೮ರಲ್ಲಿ ೮೧ ಹೇರಿದೆ. ಹೊಸಪೇಟೆ ತಾಲೂಕಿನ ಇತರ ಸಹಕಾರಿ ಸಂಘಗಳಿಗಿಂತ ಸ್ವಲ್ಪ ವಿಶಿಷ್ಟವಾಗಿರುವ ಈ ಸಂಘವು ೧೯೯೪ರಲ್ಲಿ ತನ್ನದೇ ಆದ ಸ್ವಂತ ಕಛೇರಿ ಕಟ್ಟಡವನ್ನು ಹೊಂದಿದೆ ಒಟ್ಟಾರೆ ಇದು ಈ ಪ್ರದೇಶದ ಪ್ರಬಲ ಜಾತಿ ವರ್ಗದ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ.

## ಕೋಷ್ಟಕ ೨.೧೨

**ಸಹಕಾರ ಸಂಘಗಳಲ್ಲಿ ಮರಿಯಮ್ಮನಹಳ್ಳಿ ತಾಂಡ ಮತ್ತು ನಾಗಲಾಪುರ ತಾಂಡದ ಲಂಬಾಣಿಗಳು ಪಾಲ್ಗೊಳ್ಳುವಿಕೆ.**
**(೧೯೯೮-೯೯)**

| ಅ.ಸಂ. | ಸಂಘದ ಹೆಸರು | ಒಟ್ಟು | ಲಂಬಾಣಿ ಸದಸ್ಯತ್ವ | ಲಂಬಾಣಿ ಷೇರು ಸದಸ್ಯತ್ವ ರೂ.ಗಳಲ್ಲಿ | ಲಂಬಾಣಿ ಸಾಲಗಳು ಬಂಡವಾಳ ರೂ.ಗಳಲ್ಲಿ |
|---|---|---|---|---|---|
| ೧. | ಗ್ರಾಮೀಣ ಕೃಷಿ ಸಹಕಾರಿ ಪತ್ತಿನ ಸಂಘ. | ೨೦೨ | ೩೬ ಮ.ಮ.ಹಳ್ಳಿ | ೪,೯೧೦.೦೦ | ೧೩,೮೧೧.೦೦ (೩೨ ಸಾಲಗಳು) |
| ೨. | ಗ್ರಾಮೀಣ ಕೃಷಿ ಸಹಕಾರಿ ಪತ್ತಿನ ಸಂಘ | ೧೫೦ | ೧ ಮ.ಮ.ಹಳ್ಳಿ | ೩೦.೦೦ | ೧೩೨.೫೩ (೧ ಸಾಲ) |
| ೩. | ಗ್ರಾಮೀಣ ಕೃಷಿ ಸಹಕಾರಿ ಪತ್ತಿನ ಸಂಘ | ೧೨೩ | ೧ ನಾಗಲಾಪುರ | ೧೦೫.೦೦ | ೪೨೦.೦೦ (೧ ಸಾಲ) |
| ೪. | ಗ್ರಾಮೀಣ ವಿವಿಧೋದ್ದೇಶ ಸಹಾಕಾರ ಸಂಘ | ೧೬೧ | ೧೦ ನಾಗಲಾಪುರ | ೩೫೦.೦೦ | ೧,೬೨೦.೦೬ (೬ ಸಾಲಗಳು) |

ನಾಗಲಾಪುರ ತಾಂಡದ ಲಂಬಾಣಿಗಳೊಂದಿಗೆ ಹೋಲಿಕೆ ಮಾಡಿ ನೋಡಿದರೆ ಮರಿಯಮ್ಮನಹಳ್ಳಿ ಲಂಬಾಣಿಗಳು ಕೃಷಿ ಸಾಲ ಪಡೆಯುವುದರಲ್ಲಿ ಹೆಚ್ಚಿನ ಆಸಕ್ತಿ ತೋರಿರುವುದು ತಿಳಿಯುತ್ತದೆ. ಸಹಕಾರಿ ಸಂಘಗಳಲ್ಲಿ ಮರಿಯಮ್ಮನಹಳ್ಳಿ ತಾಂಡದ ೪೦ ಜನ ಸದಸ್ಯರಿದ್ದರೆ, ನಾಗಲಾಪುರ ತಾಂಡದಲ್ಲಿ ಕೇವಲ ೧೧ ಜನ ಸದಸ್ಯರಿದ್ದಾರೆ. ಕೃಷಿ ಸಾಲವು ಜಮೀನಿನ ಮಾಲೀಕತ್ವ ಹೊಂದಿದವರಿಗೆ ಮಾತ್ರ ಲಭ್ಯವಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ನಾಗಲಾಪುರ ತಾಂಡದ ಲಂಬಾಣಿಗಳು ಕೂಡ ಸಹಕಾರಿ ಸಂಘಗಳ ವಿಷಯದಲ್ಲಿ ಹೆಚ್ಚಿನ ಆಸಕ್ತಿ ತೋರುತ್ತಿದ್ದಾರೆ. ೧೯೯೩ರಲ್ಲಿ ಸಹಕಾರಿ ಸಂಘಗಳಲ್ಲಿ (ನಾಗಲಾಪುರ ಲಂಬಾಣಿ) ೨೬ ಜನ ಸದಸ್ಯರಿದ್ದಾರೆ. ಆದರೆ ವಿವಿಧ ಕಾರಣಗಳಿಂದಾಗಿ ನಾಗಲಾಪುರ ತಾಂಡದ ಲಂಬಾಣಿಗಳು ಸಹಕಾರಿ ಸಂಘಗಳ ವಿಷಯದಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿದ್ದಾರೆ. ಗೇಣಿ ಆಧಾರಿತ ಸಾಗುವಳಿದಾರರು ತಾವು ತಡೆಯುವ ಸಾಲಕ್ಕೆ ಇಬ್ಬರು ಸದಸ್ಯರ ಭದ್ರತೆ ಒದಗಿಸಬೇಕಾಗುತ್ತದೆ. ಹೀಗಾಗಿ ಈ ಷರತ್ತನ್ನು ಪೂರೈಸುವುದು ಲಂಬಾಣಿ ಜನರಿಗೆ ತೀರ ಕಷ್ಟವಾಗಿದೆ. ಬೇರೆ ರೀತಿಯಲ್ಲಿ ಸಹಕಾರಿ ಸಂಘದ ನಿಯಮಾವಳಿಗಳನ್ನು ರಚಿಸಿಕೊಳ್ಳುವುದು ಅವರಿಗೆ ಸಾಧ್ಯವಾಗಲಾರದು.

ಭೂಮಿ ಅಥವಾ ಜಮೀನನ್ನು ಸಾಗುವಳಿಗೆ ಯೋಗ್ಯವಾಗುವಂತೆ ಮಾಡುವುದು, ನೀರಾವರಿ ಸೌಲಭ್ಯಗಳಿಗೆ ಬಾವಿ ತೋಡುವುದು ಮೊದಲಾದ ಕೃಷಿ ಉದ್ದೇಶಗಳ ಪ್ರಮುಖ ಸ್ವರೂಪದ ಸಾಲಗಳಿಗೆ ಸಾಗುವಳಿದಾರರು ಭೂಅಭಿವೃದ್ಧಿ ಬ್ಯಾಂಕುಗಳಿಗೆ ಹೋಗಬೇಕಾಗುತ್ತದೆ. ಹೊಸಪೇಟೆಯಲ್ಲಿರುವ ಭೂಅಭಿವೃದ್ಧಿ ಬ್ಯಾಂಕಿನಲ್ಲಿ ನಾಗಲಾಪುರ ತಾಂಡದ ಒಬ್ಬ ಲಂಬಾಣಿ ಮಾತ್ರ ಸಾಲ ಪಡೆದಿದ್ದಾರೆ. ಕೃಷಿ ಹಾಗೂ ಚಿಕ್ಕಪುಟ್ಟ ವ್ಯಾಪಾರ ಉದ್ದೇಶಗಳಿಗಾಗಿ ರಾಷ್ಟ್ರೀಕೃತ ಬ್ಯಾಂಕುಗಳು ಅಲ್ಪಕಾಲಿಕ ಹಾಗೂ ಮಧ್ಯಾವಧಿಯ ಸಾಲಗಳನ್ನು ನೀಡುತ್ತವೆ. ಇಂತಹ ಸಾಲಗಳ ಮರುಪಾವತಿ ನಿಯತಕಾಲಿಕ ಕಂತುಗಳನ್ನು ತುಂಬುವುದು ಅಸಾಧ್ಯವಾಗುತ್ತದೆ ಎಂಬ ಕಾರಣದಿಂದ ಮೊದಲು ಲಂಬಾಣಿಗಳು ರಾಷ್ಟ್ರೀಕೃತ ಬ್ಯಾಂಕುಗಳ ನೆರವು ಪಡೆದಿರಲಿಲ್ಲ. ಈಗ ನಾಗಲಾಪುರ ತಾಂಡದ ೧೨ ಜನರು ಹಾಗೂ ಮರಿಯಮ್ಮನಹಳ್ಳಿ ತಾಂಡದ ೧೩ ಜನರು ರಾಷ್ಟ್ರೀಕೃತ ಬ್ಯಾಂಕುಗಳಿಂದ ಸಾಲ ಪಡೆದಿದ್ದಾರೆ.

ಆರ್ಥಿಕವಾಗಿ ಹಿಂದುಳಿದ ಇತರ ಜನರಂತೆಯೇ ಲಂಬಾಣಿಗಳು ಕೂಡ ಉಳಿತಾಯ ಮಾಡುವ ಸಾಮರ್ಥ್ಯ ಹೊಂದಿಲ್ಲ. ಅವರು ಸಾಲದ ರೂಪದಲ್ಲಿ ಪಡೆದ ಹಣವನ್ನು ಬಹುತೇಕವಾಗಿ ಉತ್ಪಾದಕ ಉದ್ದೇಶಗಳಿಗಾಗಿ ಬಳಸಲಾಗುವುದಿಲ್ಲ. ಸಾಲಕ್ಕೆ ಪ್ರತಿಯಾಗಿ ಅಡವಿಡಲು ಅವರಲ್ಲಿ ಬಹಳಷ್ಟು ಜನರಿಗೆ ಮೌಲ್ಯಯುತ ಆಸ್ತಿಗಳಿಲ್ಲ. ಸಾಲ ಮರುಪಾವತಿಯ ಬಗೆಗಿನ ಅವರ ವಿಶ್ವಾಸಾರ್ಹತೆ ಹಾಗೂ ಅವಕಾಶಗಳು ಕೂಡ ತೀರ ಕಡಿಮೆ ಇದೆ. ಉಳಿತಾಯ ಮಾಡುವ ಸಾಮರ್ಥ್ಯ ತೀರ ಸೀಮಿತವಾಗಿದ್ದು ಸಾಮಾಜಿಕ - ಧಾರ್ಮಿಕ ಕಾರಣಗಳಿಗಾಗಿ ಹಣವು ವ್ಯರ್ಥವಾಗಿ ವೆಚ್ಚವಾಗುವುದರಿಂದ ಬಂಡವಾಳದ ಕ್ರೋಢೀಕರಣವಾಗಲಿ ತೊಡಗಿಸುವುದಾಗಲಿ ಲಂಬಾಣಿಗಳಿಗೆ ಸಾಧ್ಯವಿಲ್ಲ. ಬಂಡವಾಳವನ್ನು ಹೊಂದಿದ ಕೆಲವು ಲಂಬಾಣಿಗಳು ಉದಾಹರಣೆಗೆ ಕೃಷಿಯ ಉದ್ದೇಶಗಳಿಗಾಗಿ ಮಾಡಿದ ಬಂಡವಾಳವು ಆಸ್ತಿಗಳನ್ನೊಳಗೊಂಡಿವೆ. ಜಮೀನು ಖರೀದಿ, ನಿರ್ದಿಷ್ಟ ಅವಧಿವರೆಗೆ ಜಮೀನುಗಳನ್ನು ಒತ್ತೆ ಇಟ್ಟುಕೊಳ್ಳಲು ನೀಡಲಾಗುವ ಮುಂಗಡ ಹಣ, ಜಾನುವಾರು ಖರೀದಿ, ಕೃಷಿ ಉಪಕರಣಗಳ ಮೊದಲಾದ ಕೃಷಿಯ ಉದ್ದೇಶಗಳಿಗಾಗಿ ಮಾಡಿದ ಬಂಡವಾಳಗಾರರು ಆಸ್ತಿಗಳನ್ನು ಹೊಂದಿದ ಕೆಲವು ಲಂಬಾಣಿಗಳ ಉದಾರಹಣೆ 'ಬಂಡವಾಳನ್ನುಳ್ಳ ಲಂಬಾಣಿಗಳ' ಸಂಖ್ಯೆಯಲ್ಲಿ ಸೇರ್ಪಡೆಯಾದವುಗಳಾಗಿವೆ. ಬ್ಯಾಂಕಿನ ಸೇವೆ ಹಾಗೂ ಸೌಲಭ್ಯ ಪಡೆಯುವ ಪ್ರವೃತ್ತಿ ಲಂಬಾಣಿ ಜನರಲ್ಲಿ ಇನ್ನೂ ಹೆಚ್ಚಾಗಿ ಮೂಡಿಬಂದಿಲ್ಲ. ಕೇವಲ ಕೆಲವು ಜನರು ಮಾತ್ರ ಸಹಕಾರಿ ಸಂಘಗಳಲ್ಲಿ ತಮ್ಮ ಉಳಿತಾಯಗಳನ್ನು ಠೇವಣಿ ರೂಪದಲ್ಲಿ ಇಟ್ಟಿದ್ದಾರೆ. ಮರಿಯಮ್ಮನಹಳ್ಳಿ ತಾಂಡದಲ್ಲಿಯ ಶೇಕಡಾ ೫ ರಷ್ಟು ಹಾಗೂ ನಾಗಲಾಪುರ ತಾಂಡದಲ್ಲಿ ಶೇಕಡಾ ೪ ರಷ್ಟು ಜನರು ಮಾತ್ರವೇ ತಮ್ಮ ಉಳಿತಾಯಗಳನ್ನು ಬ್ಯಾಂಕಿನಲ್ಲಿರಿಸಿದ್ದಾರೆ (ಕೋಷ್ಟಕ ೨.೧೨).

ಲಂಬಾಣಿಗಳಲ್ಲಿಯ ಬಂಡವಾಳದ ಕ್ರೋಡೀಕರಣ ಕೆಳಮಟ್ಟ ಸಾಮರ್ಥ್ಯವನ್ನು ಹೊಂದಿರುವ ನಿದರ್ಶನಗಳು ಇವುಗಳಾಗಿವೆ. ಹೆಚ್ಚುತ್ತಿರುವ ಜನಸಂಖ್ಯೆ ಹಾಗೂ ಆರ್ಥಿಕ ಪೂರೈಕೆಗಳು ಕೂಡ ಇದಕ್ಕೆ ಪೂರಕ ಕಾರಣಗಳಾಗಿವೆ. ದುಡಿಮೆಗಾರರು ಹಾಗೂ ಸಾಗುವಳಿದಾರರು ತಾವು ಉತ್ಪಾದಿಸಿದ್ದನ್ನೆಲ್ಲ ಅಥವಾ ದುಡಿದದ್ದನ್ನೆಲ್ಲ ಅನುಭೋಗ ವೆಚ್ಚಕ್ಕಾಗಿ ಬಳಸುವುದರಿಂದ ಉಳಿತಾಯದ ಪ್ರಮಾಣವು ತೀರ ಅಲ್ಪವಾಗುತ್ತದೆ. ಹೀಗಾಗಿ ಬಂಡವಾಳನ್ನು ಸೃಷ್ಟಿಮಾಡಲು ಸಾಧ್ಯವಾಗುವುದಿಲ್ಲ. ಅವರಲ್ಲಿ ಕೇವಲ ಕೆಲವು ಜನರು ಬಂಡವಾಳನ್ನು ಕ್ರೋಡೀಕರಿಸುವ ಸಾಮರ್ಥ್ಯ ಹೊಂದಿದ್ದರಿಂದ ಉತ್ತಮ ಆದಾಯದ ಗುಂಪಿನಲ್ಲಿ ಸೇರ್ಪಡೆಯಾಗಿದ್ದಾರೆ.

## ಆರ್ಥಿಕ ಬದಲಾವಣೆಗಳು ಮತ್ತು ಅವುಗಳ ಪರಿಣಾಮಗಳು

ಸುಮಾರು ಒಂದು ನೂರು ವರ್ಷಗಳ ಅವಧಿಯಲ್ಲಿ ಲಂಬಾಣಿ ಆರ್ಥಿಕ ಸಂಘಟನೆಯನ್ನು ಆವರಿಸಿದ ಬದಲಾವಣೆಗಳನ್ನು ಇನ್ನು ಮುಂದೆ ಸಾದರ ಪಡಿಸಲಾಗಿದೆ. ಲಂಬಾಣಿಗಳ ಆರ್ಥಿಕ ವ್ಯವಸ್ಥೆಯ ಕಾಲಾನುಕ್ರಮದಲ್ಲಿ ತಲೆದೋರಿದ ಬದಲಾವಣೆಗಳನ್ನು ಗುರುತಿಸಲು ಮುಂದಿನ ಪುಟಗಳಲ್ಲಿ ಪ್ರಯತ್ನಿಸಲಾಗಿದೆ.

ಕ್ರಿ.ಶ. ೧೮೬೦ ರ ವರೆಗೂ ಅಲೆಮಾರಿ ಸಾಗಾಣಿಕೆದಾರರಾಗಿ ಚಿಕ್ಕ ವ್ಯಾಪಾರಿಗಳಾಗಿದ್ದ ಲಂಬಾಣಿಗಳ ಮಧ್ಯಕಾಲೀನ ಆರ್ಥಿಕ ಪರಿಸ್ಥಿತಿಯು ಕ್ರಿ.ಶ. ೧೮೮೦ರವರೆಗೆ ಅರಣ್ಯ ಉತ್ಪನ್ನಗಳನ್ನು ಕದ್ದು ಸಂಗ್ರಹಿಸಿ ಮಾರಾಟ ಮಾಡುವಂಥ ಪ್ರವೃತ್ತಿಗಳನ್ನು ಬೆಳೆಸಿತ್ತು. ನಂತರ ಕ್ರಿ.ಶ. ೧೮೮೦ರಿಂದ ಕ್ರಿ. ಶ. ೧೯೩೦ರ ವರೆಗೆ ಅರಣ್ಯಗಳಲ್ಲಿ ಕೂಲಿಕೆಲಸ ಹಾಗೂ ಕೃಷಿ ಕೂಲಿ ಕೆಲಸದ ವೃತ್ತಿಗಳನ್ನು ಇವರು ಆಶ್ರಯಿಸಿದ್ದರು. ೨೦ನೆಯ ಶತಮಾನದ ಆರಂಭದಿಂದಲೂ ಕೃಷಿ ವ್ಯವಸಾಯ ಹಾಗೂ ಕೂಲಿ ಮಾಡಿ ಜೀವನ ನಿರ್ವಹಣೆ ಮಾಡುವ ಪರಿಸ್ಥಿತಿಗೆ ಅವರು ಹೊಂದಿಕೊಂಡರು. ಲಂಬಾಣಿ ಆರ್ಥಿಕತೆಯ ಬದಲಾವಣೆಯ ಗತಿಶೀಲತೆಯಲ್ಲಿ ವಿವಿಧ ಹಂತಗಳನ್ನು ಕ್ರಮಬದ್ಧ ಕಾಲಾವಧಿಗಳಲ್ಲಿ ವಿಂಗಡಿಸಲು ಬರುವುದಿಲ್ಲ. ಏಕೆಂದರೆ ಯಾವಾಗಲು ಎರಡು ಹಂತಗಳು ಒಂದಕ್ಕೊಂದು ಸೇರಿಕೊಳ್ಳುತ್ತವೆ. ಒಂದು ಹಂತದಿಂದ ಇನ್ನೊಂದು ಹಂತದ ಪರಿವರ್ತನೆ ಹಠತ್ತಾನೆ ಸಂಭವಿಸಲಾರದು. ಮೊದಲಿನಿಂದಲೂ ಎಂದರೆ, ಒಂದೆಡೆ ನೆಲೆನಿಂತ ಕಾಲದಿಂದ ಲಂಬಾಣಿ ಜನರು ಲಂಬಾಣೇತರ ಸಮುದಾಯಗಳ ಜೊತೆಗೆ ಹೆಚ್ಚಿನ ಸಂಪರ್ಕಗಳನ್ನು ಆರ್ಥಿಕ ಕ್ಷೇತ್ರದಲ್ಲಿಯೇ ಹೊಂದಿದ್ದಾರೆ. ಇತರ ಸಮುದಾಯಗಳೊಂದಿಗೆ ಆರ್ಥಿಕ ಸಂಪರ್ಕಗಳು, ಅವರ ಕ್ಷೇಮಾಭಿವೃದ್ಧಿಗಾಗಿ ಸರಕಾರ ಜಾರಿಗೊಳಿಸಿದ ಕಾರ್ಯಕ್ರಮಗಳು ಹಾಗೂ ಲಂಬಾಣಿ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಘಟನೆಯ ಮೇಲೆ ಅವುಗಳ ಪ್ರಭಾವ - ಪರಿಣಾಮಗಳನ್ನು ಈ ಕೆಳಗಿನಂತೆ ಪರಿಕಲ್ಪಿಸಬಹುದಾಗಿದೆ. ೧. ರೈತಾಪೀಕರಣ ೨. ನಗರ ಸಂಪರ್ಕ ೩. ಸರಕಾರಿ ಸೇವೆ ಮತ್ತು ೪. ಲಂಬಾಣಿ ಸಾಮಾಜಿಕ ಆರ್ಥಿಕ ಸ್ಥಿತಿಗಳನ್ನು ಸುಧಾರಿಸಲು ಸರಕಾರಿ ಹಾಗೂ ಖಾಸಗಿ ಕ್ರಮಗಳು.

## ಲಂಬಾಣಿಗಳಲ್ಲಿ ರೈತಾಪೀಕರಣದ ಪ್ರಕ್ರಿಯೆ

ರೈತ ಸಮುದಾಯಗಳನ್ನು ಕುರಿತು ಷಹನಿನ್ (೧೯೭೧) ತಮ್ಮ ಸಂಶೋಧನಾ ಪ್ರಬಂಧದಲ್ಲಿ ನಾಲ್ಕು ಪ್ರಧಾನ ಗುಣಲಕ್ಷಣಗಳನ್ನಾಧರಿಸಿದಂತೆ ಸಾಮಾನ್ಯ ವ್ಯಾಖ್ಯೆಯನ್ನು ನೀಡಲು ಪ್ರಯತ್ನಿಸಿದ್ದಾರೆ. ಆ ಗುಣ ಲಕ್ಷಣಗಳು ಹೀಗಿವೆ :

೧ ರೈತರ ಕುಟುಂಬವು ಬಹುರೂಪಿ ಸಾಮಾಜಿಕ ಸಂಘಟನೆಯ ಮೂಲಭೂತ ಘಟಕ

೨ ಕೃಷಿ ಸಾಗುವಳಿಯು ಬಹುಪಾಲು ಅನುಭೋಗ ಅಗತ್ಯಗಳನ್ನು ನೇರವಾಗಿ ಒದಗಿಸುವ ಪ್ರಮುಖ ಜೀವನೋಪಾಯದ ಸಾಧನ.

೩. ನಿರ್ದಿಷ್ಟ ಸಾಂಪ್ರದಾಯಿಕ ಸಂಸ್ಕೃತಿ, ಸಣ್ಣ ಸಮುದಾಯಗಳ ಜೀವನ ಮಾರ್ಗಕ್ಕೆ ಸಂಬಂಧಿತವಾಗಿದೆ.

೪. ರೈತಾಪಿ ಜನರು ತಮ್ಮ ಆರ್ಥಿಕ, ಸಾಮಾಜಿಕ ಸ್ಥಿತಿಯಿಂದಾಗಿ ಹೆಚ್ಚು ಪ್ರಬಲರಾದ ಹೊರಗಿನ ರೈತಾಪಿ ಜನರ ಪ್ರಾಬಲ್ಯಕ್ಕೆ ಒಳಗಾಗುತ್ತಿದ್ದಾರೆ. ರಾಜಕೀಯ ಪರಾಧೀನತೆ, ಆರ್ಥಿಕ ಶೋಷಣೆ ಹಾಗೂ ಸಾಂಸ್ಕೃತಿಕ ಅಧೀನತೆಗೆ ಎದುರುಬದುರಾಗಿ ಪ್ರಬಲ ಗುಂಪುಗಳೆಲ್ಲವೂ ಅಂತರಸಂಬಂಧಗಳನ್ನು ಹೊಂದಿವೆ. ಷಹನಿನ್‌ರ ವ್ಯಾಖ್ಯಾನವನ್ನು ಕೆಲವು ನಿರ್ದಿಷ್ಟ ರೈತಾಪಿ ಜನರ ವಿಷಯ ಅಥವಾ ವಿದ್ಯಮಾನಗಳಿಗೆ ಸಂಬಂಧಿಸಿದಂತೆ ಅನ್ವಯಿಸಿದರೆ, ಅದರಲ್ಲಿ ಕಂಡುಬರುವ ಕೆಲವು ಲೋಪದೋಷಗಳತ್ತ ಪ್ರಧಾನರು (೧೯೬೬) ಗಮನ ಸೆಳೆಯುತ್ತಾರೆ. ಉದಾಹರಣೆಗೆ, ಪ್ರಬಲ ಬಾಹ್ಯ ಜಾತಿ ಗುಂಪುಗಳಿಗೆ 'ರಾಜಕೀಯವಾಗಿ ಅಧೀನವಾಗುವ ಸ್ಥಿತಿ' ಎಂಬ ಗುಣಲಕ್ಷಣವು ಸಮರ್ಪಕವೆನಿಸುವುದಿಲ್ಲ. ದಕ್ಷಿಣ ಭಾರತದಲ್ಲಿಯ ಲಿಂಗಾಯತ, ಒಕ್ಕಲಿಗ, ರೆಡ್ಡಿ, ಮರಾಠಾ ಇತ್ಯಾದಿ ಹಾಗೂ ಉತ್ತರ ಭಾರತದಲ್ಲಿಯ ಜಾಟ, ರಜಪೂತ ಮೊದಲಾದ ಪ್ರಮುಖ ರೈತ ಸಮುದಾಯಗಳ ವಿಷಯದಲ್ಲಿ ಈ ಅಂಶವು ಸರಿಯೆನಿಸುವುದಿಲ್ಲ. ವಾಸ್ತವವಾಗಿ ಈ ಜಾತಿಗಳು ತಮ್ಮ ಪ್ರಾದೇಶಿಕ ನೆಲೆಗಳಲ್ಲಿ ಮಾತ್ರ ಪ್ರಬಲ ಜಾತಿಗಳಾಗಿವೆ.

ಬುಡಕಟ್ಟು ಜನಾಂಗವಾಗಿದ್ದ ಸಮುದಾಯ ರೈತಾಪೀಕರಣದ (ಬುಡಕಟ್ಟು ಶಿಥಿಲೀಕರಣದ) ಪ್ರಕ್ರಿಯೆಯನ್ನು 'ಹಾರ್ಡ್‌ಕೋರ್' (ಪೂರ್ವಾಚಾರ ಕ್ರಿಯೆ) ಪರಿಕಲ್ಪನೆಯ ಚೌಕಟ್ಟಿನಲ್ಲಿ ಕೃಷಿಕ ಗುಣಲಕ್ಷಣಗಳನ್ನು ಗುರುತಿಸಲು ಅನುವಾಗುವಂತೆ ಅರ್ಥಮಾಡಿಕೊಳ್ಳುವುದು ಪ್ರಸಕ್ತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಸಾಮಾನ್ಯ ರೀತಿಯ ಗುಂಪುಗಳಿಗೆ ಅನ್ವಯಿಸುವಂತೆ ಮೂಲಭೂತ ಗುಣಲಕ್ಷಣಗಳನ್ನು ಒಳಗೊಳ್ಳದಿರುವ ಗುಂಪುಗಳನ್ನು ಷಹನಿನ್ 'ವಿಭಜಿತ ಅಂಚಿನ ಗುಂಪು'ಗಳು ಎಂಬುದಾಗಿ ಕರೆದಿದ್ದಾರೆ. ಲಂಬಾಣಿಗಳು ರೈತಾಪಿ ಅಥವಾ ಕೃಷಿ ಆರ್ಥಿಕತೆಯ ಗುಣಲಕ್ಷಣಗಳನ್ನು ಅಂತರ್ಗತಿಸಿಕೊಂಡ ಬಗೆಗೆ ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ. ರೈತಾಪೀ ಕರಣದ ಪ್ರಕ್ರಿಯೆಯ ಇತರ ಅಂಶಗಳಾದ ನ್ಯಾಯಾಡಳಿತ, ರಾಜಕೀಯ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಬಂಧುತ್ವ, ವಿವಾಹ, ಸಾಮಾಜಿಕ ನಿಯಂತ್ರಣ ಮತ್ತು ಧರ್ಮ ಮೊದಲಾದ ವಿಷಯಗಳೂ ಕೂಡ ಅದೇ ವಿಭಾಗದಲ್ಲಿ ವಿಶ್ಲೇಷಣೆಗೆ ಒಳಪಟ್ಟಿವೆ.

ಸಾಮಾನ್ಯ ಸಾಮಾಜಿಕ ದೃಷ್ಟಿಯಿಂದ ಹೇಳುವುದಾದರೆ ಪುರಾತನ ಸಮಾಜ, ತೋಟಗಾರಿಕಾ ಸಮಾಜ ಮತ್ತು ಔದ್ಯಮಿಕ ಸಮಾಜದಲ್ಲಿ ಸಮಾಜದ ಇತರ ವರ್ಗಗಳ ಜನರಂತೆ ರೈತ ವರ್ಗದ ಜನರ ಜೀವನಕ್ರಮದಲ್ಲಿ ಸಂರಚನಾತ್ಮಕ, ಆರ್ಥಿಕ, ಸಾಮಾಜಿಕ ಹಾಗೂ ವೈಯಕ್ತಿಕ ಮೊದಲಾದ ಅಂಶಗಳಲ್ಲಿ ಸಾದೃಶ್ಯತೆ ಕಂಡುಬರುತ್ತದೆ (ಫೊಸ್ಟರ್ ೧೯೬೨:೨).

ಲಂಬಾಣಿ ಆರ್ಥಿಕತೆಯ ರಚನೆ ಮತ್ತು ಬದಲಾವಣೆಯ ಪ್ರಕ್ರಿಯೆಯನ್ನು ವಿಶ್ಲೇಷಿಸಲು 'ರೈತ ಬಹು ಉಪಕಾರಿ' ಎಂಬ ಲೊಪ್ರಿಯೊಟೊನ (೧೯೬೭ : ೪೨೧) ಪರಿಕಲ್ಪನೆಯನ್ನು ಬಳಸಿಕೊಳ್ಳಲಾಗಿದೆ. ಅವರ ಪ್ರಕಾರ 'ರೈತ' ಎನ್ನುವ ಪದವು 'ತನ್ನ ಪ್ರಮುಖ ವೃತ್ತಿಯಾದ ಕೃಷಿ ಸಾಗುವಳಿಯ ಮೂಲಕ ಶಾರೀರಿಕ ಶ್ರಮದ ಕೆಲಸದಲ್ಲಿ ನೇರವಾಗಿ ತೊಡಗಿರುವ ವ್ಯಕ್ತಿ' ಎಂಬ ವಿಶ್ಲೇಷಣೆಯನ್ನು ಒಳಗೊಂಡಿದೆ. ಕೃಷಿಯ ಕೆಲಸಗಳಲ್ಲಿ ನೇರವಾಗಿ ತೊಡಗದೇ ಮೇಲ್ವಿಚಾರಣೆಯ ಸ್ವರೂಪದ ಕೆಲಸಮಾಡುವ ಅನುಪಸ್ಥಿತ ಭೂ ಒಡೆಯರು, ನಿರ್ವಾಹಕರು, ಮೊದಲಾದವರು ಹಾಗೂ ಮಧ್ಯಮ ಮತ್ತು ಬೃಹತ್ ಬಂಡವಾಳದಾರ ರೈತರನ್ನು ಈ ಪದದಿಂದ ವಿಶ್ಲೇಷಣೆ ಮಾಡಲು ಬರುವುದಿಲ್ಲ. ಈ ಎರಡನೆಯ ವರ್ಗದ ಜನರ ವಿಷಯದಲ್ಲಿ ಕೃಷಿ ಚಟುವಟಿಕೆಗಳು ಆರ್ಥಿಕ ಅಧಿಕಾರದ ಅಂತಸ್ತನ್ನು ಹೊಂದಿರುತ್ತವೆ. ಹಾಗೂ ಬಹುಸಂಖ್ಯಾತ ಕೃಷಿಕರಿಗಿಂತ ಸಂಪೂರ್ಣವಾಗಿ ಭಿನ್ನವಾದ ಜೀವನ ಶೈಲಿಯನ್ನು ಒಳಗೊಂಡಿರುತ್ತದೆ.

ಲಂಬಾಣಿಗಳು ಸಣ್ಣ ಪ್ರಮಾಣದ ವ್ಯಾಪಾರ ಹಾಗೂ ಸಾಗಾಣಿಕೆಯ ವೃತ್ತಿಯನ್ನು ಸಂಪೂರ್ಣವಾಗಿ ೧೮೮೦ರ ದಶಕದಲ್ಲಿ ತೊರೆದ ನಂತರದಲ್ಲಿ ಕಳ್ಳತನ, ಬೇಟೆ, ಅರಣ್ಯಗಳಿಂದ ಕಾನೂನುಬಾಹಿರವಾಗಿ ಕಟ್ಟಿಗೆ ಸಂಗ್ರಹಣೆ ಮೊದಲಾದ ಕೆಲಸಗಳಲ್ಲಿ ತೊಡಗಿದರು. ಆನುವಂಶಿಕವಾದ ತಮ್ಮ ಸ್ವಾಭಾವಿಕ ಹಾಗೂ ಪರಂಪರೆಗೆ ಒಗ್ಗದ ಅನಿಯಮಿತ ಕೂಲಿ ದುಡಿಮೆ, ಇಲ್ಲವೆ ವಾರ್ಷಿಕ ಸೇವೆಯ ಆಧಾರದ ಕೂಲಿ ದುಡಿಮೆಯನ್ನು ಕೈಗೊಳ್ಳಲು ಅವರು ಇಷ್ಟಪಡಲಿಲ್ಲ. ಆರ್ಥಿಕ ಅಗತ್ಯ ಹಾಗೂ ಅನಿವಾರ್ಯತೆಗಳಿಂದಾಗಿ ಮಹಿಳೆಯರು ಅರಣ್ಯ ಉಪ ಉತ್ಪನ್ನಗಳ ಸಂಗ್ರಹಣೆಗೆ ತೊಡಗಿದರು. ಆ ನಂತರದಲ್ಲಿ ದುಡಿಮೆಯ ಬೇರೆ ಮಾರ್ಗಕ್ಕೆ ಕ್ರಮೇಣ ಲಂಬಾಣೇತರ ಕೃಷಿಕರ ಜಮಿನುಗಳಲ್ಲಿ ಕೂಲಿ ದುಡಿಮೆಗೆ ಮುಂದಾದರು. ಬ್ರಿಟಿಷ್ ಸರಕಾರವು ಅನುಶಾಸನಗೊಳಿಸಿದ ಕಟ್ಟುನಿಟ್ಟಿನ ನಿಯಮಗಳಿಂದಾಗಿ ಹಾಗೂ ಅವರ ಕಿರುಕುಳವನ್ನು ಸಹಿಸಿಕೊಳ್ಳಲಾಗದೆ, ಕೊಳ್ಳೆ ಹೊಡೆಯುವ ಅಥವಾ ಕಳ್ಳತನದ ವೃತ್ತಿಗೆ ಅಂಟಿಕೊಂಡಿರುವುದು ಲಂಬಾಣಿಗಳಿಗೆ ಅಸಾಧ್ಯವಾಯಿತು. ಆದಕಾರಣ ೧೮೮೦ರ ನಂತರ ಅರಣ್ಯಗಳಲ್ಲಿ ಕೆಲಸ ಹಾಗೂ ಅರಣ್ಯ ಉಪಉತ್ಪನ್ನಗಳ ಮಾರಾಟ ಅವರ ಮುಖ್ಯ ಕಸುಬುಗಳಾದವು. ೧೯೩೦ರ ಸುಮಾರಿಗೆ ಕಾಡುಗಳ ವೇಗವಾದ ನಾಶದಿಂದಾಗಿ ಅಳಿದುಳಿದ ಅರಣ್ಯ ವಲಯಗಳನ್ನು ಕಾಯ್ದಿರಿಸಿದ ಅರಣ್ಯ ಪ್ರದೇಶಗಳು ಎಂದು ಘೋಷಿಸಿದ್ದರಿಂದ ಲಂಬಾಣಿ ಆರ್ಥಿಕ ವ್ಯವಸ್ಥೆಯಲ್ಲಿ ಸ್ಥಳೀಯ ಅರಣ್ಯಗಳ ಮಹತ್ವವು ಕುಗ್ಗಿಹೋಯಿತು. ಅರಣ್ಯ ಪ್ರದೇಶ ತೀರ ಸಂಕುಚಿತವಾದಂತೆ ಅರಣ್ಯಗಳ ಆಡಳಿತವೂ ಕಟ್ಟುನಿಟ್ಟಾಯಿತು. ಸನ್ನಿವೇಶದಲ್ಲಾದ ಈ ಬದಲಾವಣೆಯು ಬೇರೆ ವೃತ್ತಿಗಳತ್ತ ಗಮನ ಹರಿಸುವಂತೆ ಲಂಬಾಣಿಗಳನ್ನು ಪ್ರೇರೇಪಿಸಿತು. ಕೂಲಿ ಆಧಾರದ ಮೇಲೆ ಕಟ್ಟಿಗೆ ಹೊಡೆಯುವುದು ಅಥವಾ ಕಡಿಯುವುದು ಹಾಗೂ ಸಾಗುವಳಿ ಕೆಲಸಗಳಲ್ಲಿ ಕೂಲಿಯಾಳಾಗಿ ದುಡಿಯುವುದು ಅವರಿಗೆ ಅನಿವಾರ್ಯವಾಯಿತು. ಬದಲಾದ ಸಾಮಾಜಿಕ ಸನ್ನಿವೇಶದಲ್ಲಿ ಆರ್ಥಿಕ ಅಗತ್ಯಗಳ ಒತ್ತಡಗಳಿಂದಾಗಿ ಲಂಬಾಣಿಗಳು ಕೂಲಿದುಡಿಮೆಯ ವೃತ್ತಿಯನ್ನು ಅನುಸರಿಸುವುದು ಅನಿವಾರ್ಯವಾಯಿತು. ಮಹಿಳೆಯರ ಸಂಪಾದನೆಗೆ ಪೂರಕವಾಗುವಂತೆ ಅವರು ಹೀಗೆ ದುಡಿಯಬೇಕಾದುದು ಅಗತ್ಯವಾಯಿತು. ಜೀವನಾವಶ್ಯಕ ವಸ್ತುಗಳ ಬೆಲೆಗಳ ಹೆಚ್ಚಳದಿಂದ ಕೇವಲ ಮಹಿಳೆಯರ ದುಡಿಮೆ ಮಾತ್ರದಿಂದಲೇ ಜೀವನೋಪಾಯ ಮಾಡುವುದು ಸಾಧ್ಯವಾಗದೇ ಇದ್ದುದರಿಂದ ಲಂಬಾಣಿ ಪುರುಷರು ಕೂಲಿ ಕೆಲಸವನ್ನು ಮಾಡಲಾರಂಭಿಸಿದರು. ಒಂದು ನೂರು ವರ್ಷಗಳಿಂದ ಲಂಬಾಣಿ ಆರ್ಥಿಕತೆಯಲ್ಲಿ ಜೀವನೋಪಾಯದ ಪ್ರಮುಖ ಹಾಗೂ ಏಕೈಕ ಮೂಲವಾಗಿದ್ದ ಅರಣ್ಯ ಉತ್ಪನ್ನಗಳು ಕಳೆಗುಂದಿ, ೨೦ನೆಯ ಶತಮಾನದ ಆರಂಭದಲ್ಲಿ ಲಂಬಾಣಿಗಳು ಕೂಲಿ ದುಡಿಮೆಯನ್ನೇ ಜೀವನೋಪಾಯದ ಪ್ರಮುಖ ಆಧಾರವನ್ನಾಗಿ ಆಶ್ರಯಿಸಿದರು.

ಲಂಬಾಣೇತರ ಸಾಗುವಳಿದಾರ ಜಮೀನುಗಳಲ್ಲಿ ಕೆಲಸಮಾಡುತ್ತಿರುವಾಗಲೇ ಲಂಬಾಣಿಗಳು ಸ್ಥಳೀಯ ಕೃಷಿ ಸಾಗುವಳಿ ಪದ್ಧತಿಯ ರೀತಿನೀತಿಗಳನ್ನು ಕಲಿತುಕೊಂಡರು ಎಂಬುದಾಗಿ ಅನೇಕ ವೃದ್ಧ ಅನುಭವಿಗಳು ತಿಳಿಸಿದ್ದಾರೆ. ಲಂಬಾಣೇತರ ಕೃಷಿಕರ ಮನೆಗಳಲ್ಲಿ ವಾರ್ಷಿಕ ಗುತ್ತಿಗೆ ಆಧಾರದ ಕೂಲಿಗಳಾಗಿ ಕೆಲಸಮಾಡುತ್ತಿದ್ದವರಿಗೆ ಕೃಷಿಯ ಕಾರ್ಯಾಚರಣೆಗಳ ಬಗೆಗೆ ಹಾಗೂ ಕೃಷಿ ಜೀವನದ ಮೌಲ್ಯಗಳ ಬಗೆಗೆ ತಿಳುವಳಿಕೆಯಾಗತೊಡಗಿತು. ಅಂತಹ ಕೆಲವು ಉದ್ಯಮಶೀಲ ಲಂಬಾಣಿಗಳು ತಮ್ಮ ಉಳಿತಾಯದ ಹಣವನ್ನು ಕ್ರೋಢೀಕರಿಸಿ ಕಾಲಾನುಕ್ರಮದಲ್ಲಿ ಗೇಣಿ ಸಾಗುವಳಿದಾರರಾಗಿ ಅಥವಾ ಸ್ವಂತ ಭೂಮಿಯನ್ನು ಖರೀದಿಸಿ ಸಾಗುವಳಿ ಮಾಡಲಾರಂಭಿಸಿದರು. ಮುಂದುವರೆದ ರೈತ ಕುಟುಂಬಗಳ ಬಳಿ ಜೀತದಾಳುಗಳಾಗಿ ದುಡಿಯುತ್ತಿರುವಾಗಲೇ ಪರಕೀಯ ಜೀವನ ಮಾರ್ಗಕ್ಕೆ ಹೊಂದಿಕೊಳ್ಳಲು ಇದರಿಂದ ಅವಕಾಶವಾಯಿತು. ಹೀಗೆ ಲಂಬಾಣಿಗಳು ಕೃಷಿ ಮೌಲ್ಯಾಧಾರಿತ ಜೀವನ ಮಾರ್ಗವನ್ನು ಅಳವಡಿಸಿಕೊಂಡು ಹೊಂದಿಕೊಂಡರು. ಜೀತದಾಳುಗಳು, ಕೃಷಿ ಕಾರ್ಯಾಚರಣೆಗಳ ಪರಿಚಯ ಮಾಡಿಕೊಳ್ಳುವುದರೊಂದಿಗೆ ಆಹಾರ ಬೇಯಿಸುವ, ಸ್ಥಳೀಯ ಭಾಷೆಯನ್ನು

ಮಾತನಾಡುವ, ಆಲೋಚನೆ ಮಾಡುವ ರೀತಿನೀತಿಗಳು, ಸ್ಥಳೀಯ ಸಾಂಪ್ರದಾಯಿಕ ನಂಬಿಕೆ - ಮೌಲ್ಯಗಳು ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಲಿಂಗಾಯತ, ಮರಾಠ, ಜೈನ, ಕುರುಬ ಮೊದಲಾದ ಪ್ರಾದೇಶಿಕ ಪ್ರಬಲ ಸಮುದಾಯಗಳ ಜೀವನ ಕ್ರಮವನ್ನು ಸಹಜವಾಗಿಯೇ ತಮ್ಮ ಚಟುವಟಿಕೆಗಳಲ್ಲಿ ಅಂತರ್ಗತಿಸಿಕೊಂಡರು. ವಾರ್ಷಿಕ ಗುತ್ತಿಗೆ ಆಧಾರದ ಮೇಲೆ ಕೂಲಿ ಮಾಡದಿದ್ದ ಲಂಬಾಣಿಗಳು ಇತರೆ ಬೇಸಾಯಗಾರರೊಂದಿಗೆ ಕೂಲಿ ಕೆಲಸ ಮಾಡುತ್ತಿದ್ದುದರಿಂದ (ಸಂಬಂಧಿತ ಗುಂಪಿನ ವರ್ತನೆಗಳಿಗೆ) ಲಿಂಗಾಯತ ಕೃಷಿಯ ಜೀವನ ಮಾರ್ಗವು ಅನುಕರಣೆಯ ಮಾದರಿಯಾಯಿತು. ದುಡಿದ ಹಣ ಉಳಿತಾಯ ಮಾಡಲು ಸಾಧ್ಯವಾದ ಕೆಲವು ಲಂಬಾಣಿಗಳು ಮಾರಾಟಕ್ಕೆ ಬಂದ ಅಲ್ಪ ಸ್ವಲ್ಪ ಭೂಮಿಗಳನ್ನು ಖರೀದಿಸಿದರು. ೨೦ನೆಯ ಶತಮಾನದ ಮೊದಲ ಕಾಲುಭಾಗದ ಅವಧಿಯಲ್ಲಿ ಅಂದಿನ ದೃಷ್ಟಿಯಿಂದ ಇದು ತೀರ ಅಲ್ಪವಾಗಿದ್ದವು. ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಭೂಮಿಗಳನ್ನು ಖರೀದಿಸಿದ ಅವಧಿಯ ಕೆಲವು ವಿವರಗಳು ಈ ಕೆಳಗಿನಂತಿವೆ :

| ವರ್ಷ | ಜಮೀನಿನ ಕ್ಷೇತ್ರ ಎಕರೆ - ಕುಂಟೆ | ಮೌಲ್ಯ (ರೂ.ಗಳಲ್ಲಿ) |
|---|---|---|
| ೧೮೯೨ | ೮ - ೨೮ | ೧೦೦.೦೦ |
| ೧೮೯೭ | ೧೦ - ೧೧ | ೯೮.೦೦ |
| ೧೯೦೩ | ೨ - ೩ | ೬೨.೦೦ |
| ೧೯೧೮ | ೨೨ - ೭ | ೧೫೦.೦೦ |
| ೧೯೨೩ | ೧೪ - ೨೯ | ೨೦೦.೦೦ |

ಭೂಮಿಯನ್ನು ಖರೀದಿಸಲಿಕ್ಕಾಗದಿದ್ದವರು ಗೇಣಿ ಆಧಾರಿತ ಸಾಗುವಳಿದಾರರಾಗಿ ಕೃಷಿ ಸಾಗುವಳಿಗೆ ಹೊಂದಿಕೊಂಡರು. ಕೂಲಿ ದುಡಿಮೆಗಿಂತ ಗೇಣಿ ಆಧಾರಿತ ಸಾಗುವಳಿ ಹೆಚ್ಚು ಲಾಭದಾಯಕ ಎಂದು ಅರಿತ ಕೆಲವರು ಎತ್ತು, ಕೃಷಿಸಲಕರಣೆಗಳನ್ನು ಖರೀದಿಸಲು ಬೇಕಾಗುವಷ್ಟು ಹಣವನ್ನು ಉಳಿತಾಯಮಾಡಿ ಗೇಣಿ ಆಧಾರಿತ ಸಾಗುವಳಿ ಮಾಡಲಾರಂಭಿಸಿದರು.

ಮೊಟ್ಟಮೊದಲಿಗೆ ಸಾಗುವಳಿದಾರರಾದ ಲಂಬಾಣಿಗಳ ಸಾಧನೆ, ಸಾಗುವಳಿದಾರರಲ್ಲದ ಲಂಬಾಣಿಗಳ ಮೇಲೆ ಪ್ರಭಾವ ಬೀರಿತು. ಅವರು ಕೂಡ ಸಾಗುವಳಿದಾರರಾಗಲು ಹವಣಿಸತೊಡಗಿದರು. ಲಂಬಾಣಿಗಳು ಕೊಂಡುಕೊಂಡ ಭೂಮಿಯ ನಿಧಾನಗತಿಯ ಹೆಚ್ಚಳವು ಈ ಮಾತನ್ನು ಸಮರ್ಥಿಸುತ್ತದೆ. ೨೦ನೆಯ ಶತಮಾನದ ಮೊದಲ ದಶಕದಲ್ಲಿ ಮರಿಯಮ್ಮನಹಳ್ಳಿ ತಾಂಡದ ೩೦ ಕುಟುಂಬಗಳಲ್ಲಿ ೧೮ ಕುಟುಂಬಗಳು ಹಾಗೂ ನಾಗಲಾಪುರ ತಾಂಡದಲ್ಲಿನ ೪೦ ಕುಟುಂಬಗಳಲ್ಲಿ ೫ ಕುಟುಂಬಗಳು ಮಾತ್ರ ಕೃಷಿಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದವು. ಮರಿಯಮ್ಮನಹಳ್ಳಿ ಲಂಬಾಣಿಗಳು ಅಂದು ಕೇವಲ ೩೨ ಎಕರೆ ೭ ಕುಂಟೆ ಭೂಮಿಯನ್ನು ಹೊಂದಿದ್ದರು. ನಾಗಲಾಪುರ ಲಂಬಾಣಿಗಳು ಕೃಷಿ ಭೂಮಿ ಖರೀದಿಸಿರಲಿಲ್ಲವಾದರೂ, ಗೇಣಿ ಆಧಾರದ ಮೇಲೆ ಕೃಷಿಕ ವೃತ್ತಿಯನ್ನು ಅವಲಂಬಿಸಿದ್ದರು.

೧೯೧೭-೧೯೯೮ರ ಮಧ್ಯೆ ಮರಿಯಮ್ಮನಹಳ್ಳಿ ತಾಂಡದಲ್ಲಿ ಕೃಷಿಯನ್ನು ಆಶ್ರಯಿಸಿದ ಕುಟುಂಬಗಳ ಸಂಖ್ಯೆ ೮ ಪಟ್ಟು ಅಧಿಕವಾಯಿತು. ೧೯೧೭ರಲ್ಲಿ ಕೇವಲ ೮ ಕುಟುಂಬಗಳು ಕೃಷಿಯನ್ನು ಆಶ್ರಯಿಸಿದರೆ ೧೯೯೮ರ ಸುಮಾರಿಗೆ ಕೃಷಿಯನ್ನು ಆಶ್ರಯಿಸಿದ ಕುಟುಂಬಗಳ ಸಂಖ್ಯೆ ೬೪ಕ್ಕೇರಿತ್ತು. ನಾಗಲಾಪುರ ತಾಂಡದಲ್ಲಿ ೧೯೦೫ರಿಂದ ೧೯೯೮ ಅವಧಿಯಲ್ಲಿ ಕೃಷಿಯನ್ನು ಅವಲಂಬಿಸಿದ

ಕುಟುಂಬಗಳ ಸಂಖ್ಯೆ ೫ ಪಟ್ಟು ಹೆಚ್ಚಾಗಿದೆ. ೧೯೦೫ರಲ್ಲಿ ಕೃಷಿಕ ಕುಟುಂಬಗಳ ಸಂಖ್ಯೆ ಕೇವಲ ೫ ಇದ್ದರೆ ೧೯೯೮ರಲ್ಲಿ ಈ ಸಂಖ್ಯೆ ೨೬ಕ್ಕೇರಿತ್ತು. ಈ ವಿಷಯಕ್ಕೆ ಸಂಬಂಧಿಸಿದಂತೆ ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳನ್ನು ಹೋಲಿಕೆ ಮಾಡಿನೋಡಿದರೆ ನಾಗಲಾಪುರ ತಾಂಡಕ್ಕಿಂತ ಮರಿಯಮ್ಮನಹಳ್ಳಿ ತಾಂಡವು ಕೃಷಿ ಸಾಗುವಳಿಗೆ ಹೆಚ್ಚು ಬೇಗನೆ ಚಮತ್ಕಾರಿಕ ರೀತಿಯಲ್ಲಿ ಹೊಂದಿಕೊಂಡಿದೆ. ೮೦ ವರ್ಷಗಳ ಹಿಂದೆ ಮರಿಯಮ್ಮನಹಳ್ಳಿ ತಾಂಡನಲ್ಲಿ ಕೇವಲ ಕೆಲವು ಜನರು ಕೃಷಿಯಲ್ಲಿ ಆಸಕ್ತಿ ಹೊಂದಿದ್ದರು. ಮರಿಯಮ್ಮನಹಳ್ಳಿ ಪ್ರದೇಶದ ಆಚೀಚೆಯ ಹಾಗೂ ನೆರೆಯ ಗ್ರಾಮದ ಭೂಮಿಗಳಿಗೆ ಮಾತ್ರವೇ ಅವರ ಆಸಕ್ತಿ ಸೀಮಿತವಾಗಿತ್ತು. ೧೯೭೧ರಲ್ಲಿ ೮ ಕೃಷಿಕ ಕುಟುಂಬಗಳಲ್ಲಿ ೫ ಕುಟುಂಬಗಳು ಮರಿಯಮ್ಮನಹಳ್ಳಿ ಪ್ರದೇಶದ ಗಡಿಯೊಳಗೆ ಭೂಮಿಗಳನ್ನು ಹೊಂದಿದ್ದವು; ೨ ಕುಟುಂಬಗಳು ನೆರೆಹೊರೆಯ ಗ್ರಾಮಗಳಲ್ಲಿ ಹಾಗೂ ಒಂದು ಕುಟುಂಬವು ಎರಡೂ ಗ್ರಾಮಗಳಲ್ಲಿ ಕೃಷಿ ಭೂಮಿಯನ್ನು ಹೊಂದಿದ್ದವು. ಹಣಕಾಸಿನ ತೊಂದರೆಯಿಂದಾಗಿ ಇತರ ಗ್ರಾಮಗಳ ಪರಿಧಿಯಲ್ಲಿನ ಭೂಮಿಗಳನ್ನು ಖರೀದಿಸುವಲ್ಲಿ ಅವರು ಆಸಕ್ತಿ ಹೊಂದಿರಲಿಲ್ಲ. ನಾಗಲಾಪುರ ತಾಂಡದ ಆರ್ಥಿಕ ಸ್ಥಿತಿ ಕೂಡ ಅಂದು ಉತ್ತಮವಾಗಿರಲಿಲ್ಲ.

ಮೊದಲ ಜಾಗತಿಕ ಮಹಾಯುದ್ಧದ ನಂತರ ಕೃಷಿ ಉತ್ಪನ್ನಗಳ ಬೆಲೆಗಳಲ್ಲಿ ಕಂಡುಬಂದ ಹೆಚ್ಚಳ, ಕೂಲಿದರಗಳ ಇಳಿತ, ಕೃಷಿ ಸಾಗುವಳಿಯೊಡನೆ ಹೊಂದಾಣಿಕೆ ಮೊದಲಾದ ಅಂಶಗಳು ಕೃಷಿಯನ್ನು ಜೀವನೋಪಾಯದ ಸಾಧನವನ್ನಾಗಿ ಮಾಡಿಕೊಳ್ಳಲು ಲಂಬಾಣಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಪ್ರೇರೇಪಿಸಲು ಕಾರಣವಾದವು. ೧೯೩೦ರ ಸುಮಾರಿಗೆ ಲಂಬಾಣಿ ಕೃಷಿ ಸಾಗುವಳಿದಾರರ ಸಂಖ್ಯೆಯಲ್ಲಿ ಕಂಡುಬಂದ ಗಮನಾರ್ಹ ಹೆಚ್ಚಳ ಈ ಸಂಗತಿಯನ್ನು ದೃಢಪಡಿಸುತ್ತದೆ. ೫೦ ವರ್ಷಗಳ ಅವಧಿಯಲ್ಲಿ ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ನೆರೆಹೊರೆಯ ೪ ಗ್ರಾಮಗಳ ಗಡಿ ಪ್ರದೇಶಕ್ಕೆ ತಮ್ಮ ಕೃಷಿ ಭೂಮಿಯನ್ನು ವಿಸ್ತರಿಸಿದರು. ಸಾಗುವಳಿಗಾಗಿ ಕೃಷಿ ಭೂಮಿಯನ್ನು ಹುಡುಕುತ್ತ ೫ ಕುಟುಂಬಗಳು ಬೇರೆ ಗ್ರಾಮಗಳಿಗೆ ವಲಸೆ ಹೋದದ್ದೂ ಇದೆ.

'ಹೊಸ ಸಾಗುವಳಿ ಪದ್ಧತಿ'ಯ ಅಡಿಯಲ್ಲಿ ಸರಕಾರವು ಲಂಬಾಣಿಗಳಿಗೆ ಕೆಲವೊಂದು ಭೂಮಿಗಳನ್ನು ರಿಯಾಯಿತಿ ದರಗಳಲ್ಲಿ ಮಂಜೂರು ಮಾಡಿದೆ. ೧೯೫೩ರಿಂದ ೧೯೫೪ರ ಅವಧಿಯಲ್ಲಿ ಮರಿಯಮ್ಮನಹಳ್ಳಿ ತಾಂಡದ ಹತ್ತು ಕುಟುಂಬಗಳಿಗೆ-ಗ್ರಾಮದ ಬಳಿ ಹಾಗೂ ಎರಡು ನೆರೆಯ ಗ್ರಾಮಗಳ ಬಳಿ ಒಟ್ಟು, ೭೩ ಎಕರೆ ೧೯ ಕುಂಟೆ ಭೂಮಿಯನ್ನು ನೀಡಲಾಯಿತು. ನಾಗಲಾಪುರ ತಾಂಡದಲ್ಲಿ ಯಾರಿಗೂ ಅವರ ತಾಂಡಕ್ಕೆ ಹತ್ತಿರವಾಗುವ ಭೂಮಿ ಸಿಕ್ಕಿಲ್ಲವಾದರೂ ೨೦ ಕುಟುಂಬಗಳಿಗೆ ಬೇರೆ ಗ್ರಾಮಗಳ ಬಳಿ ಲಭ್ಯವಿದ್ದ ಭೂಮಿಯನ್ನು ಮಂಜೂರುಮಾಡಲಾಗಿದೆ.

ಲಂಬಾಣಿಗಳು ಕೃಷಿ ಸಾಗುವಳಿ ವೃತ್ತಿಗೆ ಸ್ವಲ್ಪ ನಿಧಾನವಾಗಿ ಸೇರ್ಪಡೆಯಾದ ಬಗೆಗೆ ಲಂಬಾಣಿ ಭಾಷೆಯ ಅಧ್ಯಯನವು ಬೆಳಕನ್ನು ಚೆಲ್ಲುತ್ತದೆ. ಬಂಜಾರಿ ಭಾಷೆಯಲ್ಲಿ ಕೃಷಿಯ ಕೆಲವು ಉಪಕರಣಗಳಿಗೆ ಪದಗಳೇ ಇಲ್ಲವಾದ್ದರಿಂದ ಕನ್ನಡದ ಅನೇಕ ಸ್ಥಳೀಯ ಪದಗಳನ್ನು ಅವರು ಬಳಸುತ್ತಾರೆ. ಕೃಷಿಯು ಲಂಬಾಣಿಗಳ ಜೀವನೋಪಾಯದ ವೃತ್ತಿಯಾಗಿರಲಿಲ್ಲವಾದ್ದರಿಂದ ಆ ವೃತ್ತಿಗೆ ಸಂಬಂಧಿಸಿದ ಪದಗಳು ಅವರ ಭಾಷೆಯಲ್ಲಿ ಉತ್ಪತ್ತಿಯಾಗಿಲ್ಲದಿರಬಹುದು. ಉತ್ತರ ಭಾರತದಿಂದ ಮೊದಲಿಗೆ ಈ ಪ್ರದೇಶಕ್ಕೆ ಆಗಮಿಸಿದ ಲಂಬಾಣಿಗಳು ಕೃಷಿ ಪರಿಭಾಷೆಯ ಸಂಪರ್ಕದ ಪದಗಳನ್ನು ತಮ್ಮೊಡನೆ ತಂದಿರಲಿಲ್ಲ ಎಂದು ಭಾವಿಸಬಹುದಾಗಿದೆ. ಹೀಗಾಗಿ ಅವರು ಕೃಷಿಯನ್ನು ತಮ್ಮ ಜೀವನೋಪಾಯದ ವೃತ್ತಿಯನ್ನಾಗಿ ಸ್ವೀಕರಿಸಿದ ನಂತರ ಸ್ಥಳೀಯ ಭಾಷೆಯ ಪದಗಳನ್ನು ಎರವಲು ಪಡೆಯಬೇಕಾಯಿತು ಎಂದು

ಕಂಡುಬರುತ್ತದೆ. ಬಂಜಾರ ಭಾಷೆಯ ಉಚ್ಚರಣಾ ರೀತಿಯು ಕೂಡ ಗಣನೀಯವಾಗಿ ಕನ್ನಡ ಭಾಷೆಯ ಪ್ರಭಾವಕ್ಕೀಡಾಗಿದೆ ಎಂಬುದೂ ಗಮನಾರ್ಹ ಸಂಗತಿಯಾಗಿದೆ.

ಅಲೆಮಾರಿ ಜೀವನದ ಹಂತದಲ್ಲಿ ಜೀವನೋಪಾಯಕ್ಕಾಗಿ ಮಾಡುತ್ತಿದ ಸಣ್ಣಪುಟ್ಟ ವ್ಯಾಪಾರದ ವೃತ್ತಿಗಳನ್ನು ತೊರೆದು ಕೃಷಿಯನ್ನು ಪ್ರಧಾನ ಜೀವನೋಪಾಯ ವೃತ್ತಿಯಾಗಿ ಸ್ವೀಕರಿಸಿದ ಪರಿವರ್ತನೆಯ ಅವಧಿಗೆ ಲಂಬಾಣಿಗಳು ಅಂದಿನ ಜೀವನ ಕ್ರಮವನ್ನು ಹೋಲಿಸಿ ನೋಡಿದರೆ ಅವರ ಜೀವನ ಶೈಲಿಯಲ್ಲಿ ಹಾಗೂ ಜೀವನ ಮಟ್ಟದಲ್ಲಿ ಸಾಕಷ್ಟು ಸುಧಾರಣೆಗಳಾಗಿರುವುದು ಕಂಡುಬರುತ್ತದೆ. ಕೃಷಿಯಿಂದ ಲಭ್ಯವಾಗತೊಡಗಿದ ಆದಾಯದ ಮೂಲಗಳ ಹೆಚ್ಚಳದಿಂದ ಈ ಸುಧಾರಣೆ ಸಾಧ್ಯವಾಯಿತು. ತಮ್ಮ ನೆರೆಹೊರೆಯವರ ಜೀವನಶೈಲಿಯನ್ನು ಅವರು ಅನುಸರಿಸಲಾರಂಭಿಸಿದರು. ಮೊದಲಿಗೆ ಉಪಯೋಗಿಸುತ್ತಿದ್ದ ಮಣ್ಣಿನ ಮಡಿಕೆಗಳಿಗೆ ಬದಲಾಗಿ, ಲೋಹಗಳಿಂದ ಮಾಡಿದ ಪಾತ್ರೆಗಳನ್ನು ಬಳಸಿತೊಡಗಿದರು. ಹುಲ್ಲಿನ ಗುಡಿಸಲುಗಳಿಗೆ ಬದಲಾಗಿ ನೂತನವಾಗಿ ಹೆಂಚುಗಳ ಮನೆ ಕಟ್ಟಿಕೊಳ್ಳಲಾರಂಭಿಸಿದರು. ಅದೇ ರೀತಿ ಅವರ ಆಹಾರ ಸೇವನೆಯ ರೀತಿ ನೀತಿಗಳಲ್ಲಿಯೂ ಸುಧಾರಣೆಗಳಾದವು.

೧೯೯೭ರಲ್ಲಿ ಮರಿಯಮ್ಮನಹಳ್ಳಿ ತಾಂಡದ ೩೬ ಕುಟುಂಬಗಳು ಗುಡಿಸಲುಗಳಲ್ಲಿ ವಾಸವಾಗಿದ್ದರೆ ೬೬ ಕುಟುಂಬಗಳು ಹಂಚಿನ ಮನೆಗಳಲ್ಲಿ (ಅವುಗಳಲ್ಲಿ ೨೧ ಪಕ್ಕ ಹಾಗೂ ೪೫ ಕಚ್ಚಾ ಮನೆಗಳಾಗಿದ್ದವು) ವಾಸಿಸುತ್ತಿದ್ದವು. ನಾಲ್ಕು ಕುಟುಂಬಗಳನ್ನು ಬಿಟ್ಟು ಉಳಿದೆಲ್ಲ ಕುಟುಂಬಗಳಿಗೆ ತಮ್ಮದೇ ಆದ ಸ್ವಂತ ನಿವೇಶನಗಳಿದ್ದವು. ಆ ನಾಲ್ಕು ಕುಟುಂಬಗಳು ತಮ್ಮ ಸಂಬಂಧಿಕರ ನಿವೇಶನಗಳಲ್ಲಿ ಮನೆಗಳನ್ನು ಪಡೆದಿದ್ದವು. ಒಟ್ಟು ಅಧ್ಯಯನಕ್ಕೆ ಒಳಪಡಿಸಿದ ೧೦೨ ಕುಟುಂಬಗಳಲ್ಲಿ ೮೪ ಕುಟುಂಬಗಳು ಸ್ವತಂತ್ರ ಮನೆಗಳನ್ನು ಹೊಂದಿದ್ದರೆ ಉಳಿದ ೧೮ ಕುಟುಂಬಗಳು (ಎರಡು ಮನೆಗಳಲ್ಲಿ ಪ್ರತಿಯೊಬ್ಬರಲ್ಲಿ ಮೂರು ಕುಟುಂಬಗಳು ಹಾಗೂ ಆರು ಮನೆಗಳಲ್ಲಿ ಪ್ರತಿಯೊಬ್ಬರಲ್ಲಿ ಎರಡು ಕುಟುಂಬಗಳು) ವಸತಿಗಳನ್ನು ಪಡೆದಿದ್ದವು. ಈ ಅಧ್ಯಯನ ಕೈಗೊಂಡ ನಾಗಲಾಪುರ ತಾಂಡದಲ್ಲಿಯ ಒಟ್ಟು ೯೯ ಕುಟುಂಬಗಳಲ್ಲಿ ೧೬ ಕುಟುಂಬಗಳು ಗುಡಿಸಲುಗಳಲ್ಲಿ ವಾಸವಾಗಿದ್ದವು; ಉಳಿದ ೮೩ ಕುಟುಂಬಗಳು ನಾಟಿ ಹಂಚಿನ ಮನೆಗಳಲ್ಲಿ (೪೦ ಕಚ್ಚಾ ಮತ್ತು ೪೧ ಪಕ್ಕ ಹಾಗೂ ೨ ಸುಸಜ್ಜಿತ ಮನೆಗಳಲ್ಲಿ) ವಾಸವಾಗಿದ್ದವು. ೪ ಕುಟುಂಬಗಳನ್ನು ಬಿಟ್ಟರೆ ಉಳಿದೆಲ್ಲವುಗಳಿಗೆ ಸ್ವಂತ ಮನೆಗಳಿದ್ದವು. ಆ ಕುಟುಂಬಗಳು ತಮ್ಮ ಸಂಬಂಧಿಕರು ಹಾಗೂ ಸ್ನೇಹಿತರ ನಿವೇಶನಗಳಲ್ಲಿ ವಾಸವಾಗಿದ್ದವು. ೭೨ ಕುಟುಂಬಗಳಿಗೆ ಸ್ವತಂತ್ರ ಮನೆಗಳಿದ್ದರೆ, ೨೭ ಕುಟುಂಬಗಳು ಇತರ ಕುಟುಂಬಗಳೊಂದಿಗೆ ವಸತಿಯನ್ನು ಹಂಚಿಕೊಂಡಿದ್ದವು.

೧೯೯೫ರ ಬೇಸಗೆಯಲ್ಲಿ ಮರಿಯಮ್ಮನಹಳ್ಳಿ ಲಂಬಾಣಿಗಳು ೮೬ ಹೊಸ ಮನೆಗಳನ್ನು (ಹಳೆಯ ಮನೆಗಳನ್ನು ಕೆಡವಿ) ಕಟ್ಟಿದರು. ಸುಡದೇ ಇರುವ ಇಟ್ಟಿಗೆಗಳಿಂದ ಕಟ್ಟಲಾದ ಈ ಮನೆಗಳಿಗೆ ಕೆಂಪು ಹಂಚಿನ ಮೇಲ್ಹಾವಣಿಯನ್ನು ಹಾಕಲಾಯಿತು. ಹೊಸಪೇಟೆ ತಾಲೂಕಿನ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ವರ್ಗಗಳ ಹಾಗೂ ಇತರೆ ಹಿಂದುಳಿದ ವರ್ಗಗಳ ನಿವೇಶನ ಸಂಘವು ಪ್ರತಿ ಲಂಬಾಣಿ ಕುಟುಂಬಕ್ಕೆ ಮನೆಕಟ್ಟಿಕೊಳ್ಳಲು ೨೦೦೦ ರೂ.ಗಳ ಸಹಾಯ ಧನ ನೀಡಿತ್ತು. ಲಂಬಾಣಿಗಳು ಹಿಂದೊಮ್ಮೆ ಅಲೆಮಾರಿ ಜನಾಂಗವಾಗಿದ್ದಾಗ ಸಾಂಪ್ರದಾಯಿಕ ನಂಬಿಕೆಯ ಪ್ರಕಾರ ಸುಸಜ್ಜಿತ ಮನೆ ಎಂಬುದು ಅವರಿಗೆ ನಿಷಿದ್ಧವಾಗಿತ್ತು. ತಾಂಡದಲ್ಲಿಯ ಲಂಬಾಣಿಗಳು ಸ್ಥಿರವಾದ ಹೊಸ ನಿವೇಶನಗಳನ್ನು ಕಟ್ಟಿಕೊಂಡದ್ದು ಅವರ ನಂಬಿಕೆಗಳಲ್ಲಿ ಆದ ಬದಲಾವಣೆಗಳನ್ನು ಸೂಚಿಸುವ ಘಟನೆಯಾಗಿತ್ತು. ಅವರು ಹಿಂದೆ ಹುಲ್ಲಿನ ಛಾವಣಿಗಳ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಅವರ ಪೂರ್ವಿಕರಲ್ಲಿ ಒಬ್ಬ ವ್ಯಕ್ತಿ ಉತ್ತಮ ಮನೆ ಕಟ್ಟಿಕೊಂಡು ವಾಸಿಸುತ್ತಿದ್ದಾಗ ಆ ಮನೆಯ

ಮೇಲ್ಛಾವಣಿ ಕುಸಿದು ಬಿದ್ದು ಆ ಕುಟುಂಬದ ಎಲ್ಲಾ ಸದಸ್ಯರು ಸತ್ತುಹೋಗಿದ್ದರಂತೆ. ಆ ಕಾರಣದಿಂದಾಗಿ ಹಂಚಿನ ಮೇಲ್ಛಾವಣಿಯ ಮನೆ ಅವರಿಗೆ ನಿಷಿದ್ಧವಾಗಿತ್ತು (ಕ್ಯಾಂಪ್‌ಬೆಲ್, ೧೮೮೪ : ೧೨೧).

ಗಟ್ಟಿಮುಟ್ಟಾದ ಮನೆಗಳ ಬಗೆಗೆ ಲಂಬಾಣಿಗಳ ಅನಾಸಕ್ತಿಗೆ ಮತ್ತೊಂದು ಕಾರಣವೆಂದರೆ ಅವರು ಆಗಾಗ್ಗೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಿದ್ದುದು. ಒಂದು ನಿರ್ದಿಷ್ಟ ಸ್ಥಳದಲ್ಲಿ ಬಹುಕಾಲ ನೆಲೆನಿಂತರೆ ದೇವರು ಮೆಚ್ಚುವುದಿಲ್ಲ ಎಂಬ ನಂಬಿಕೆಯೂ ಅವರಲ್ಲಿತ್ತು. ಇಂತಹ ನಂಬಿಕೆ ಅವರನ್ನು ಅಲೆಮಾರಿ ಜನಾಂಗವಾಗಿಸಲೂ ಸ್ವಲ್ಪ ಮಟ್ಟಿಗೆ ಕಾರಣವಾಗಿತ್ತು. ಅವರ ನಂಬಿಕೆ ಮತ್ತು ಆಚರಣೆಗಳ ಮಧ್ಯೆ ಸಾಕಷ್ಟು ವಿರೋಧವಿದ್ದಿತು ಎಂಬುದನ್ನು ನಂಜುಂಡಯ್ಯ ಹಾಗೂ ಅಯ್ಯರ್ ಸೂಚಿಸಿದ್ದಾರೆ. ಹಂಚಿನ ಮನೆಗಳಲ್ಲಿ ವಾಸವಾಗಿರಕೂಡದೆಂಬುದು ಅವರ ನಂಬಿಕೆಯಾಗಿದ್ದರೂ, ಅವರಲ್ಲಿ ಕೆಲವರು ಪ್ರತ್ಯೇಕ ಅಡುಗೆ ಮನೆ, ವಿಶ್ರಾಂತಿಕೋಣೆ, ಕುಳಿತುಕೊಳ್ಳುವ ಕೋಣೆ, ಧಾನ್ಯಗಳ ದಾಸ್ತಾನು ಕೋಣೆಗಳು ಇರುವ ವಿಶಾಲವಾದ ಮನೆಗಳಲ್ಲಿ ವಾಸಿಸುತ್ತಿದ್ದರು (ನಂಜುಂಡಯ್ಯ ಹಾಗೂ ಅಯ್ಯರ್, ೧೯೨೮ : ೧೪೮-೧೪೯). ಆದರೆ ನಂಬಿಕೆಗಳು ಒಂದು ನಿರ್ದಿಷ್ಟ ಸ್ವರೂಪದ ಜೀವನ ಕ್ರಮವನ್ನು ಸಮರ್ಥಿಸುತ್ತವೆ ಮತ್ತು ಸ್ಥಿರೀಕರಿಸುತ್ತವೆ. ನಂಬಿಕೆಗಳಲ್ಲಾಗುವ ಬದಲಾವಣೆಯ ಗತಿ ನಿಧಾನವಾಗಿದ್ದರೂ ಜೀವನದ ರೀತಿನೀತಿಗಳು, ಬದಲಾದ ನಂಬಿಕೆಗಳು ಮತ್ತೆ-ಮತ್ತೆ ಮಾರ್ಪಾಡಾಗುತ್ತಿವೆ. ನಿವೇಶನಗಳಿಗೆ ಸಂಬಂಧಿಸಿದಂತೆ ಲಂಬಾಣಿಗಳ ನಂಬಿಕೆಗಳಲ್ಲಾದ ಬದಲಾವಣೆಗಳಿಂದಾಗಿ ಅವರು ಉತ್ತಮ (ಪಕ್ಕಾ) ಮನೆಗಳಲ್ಲಿ ವಾಸಿಸಲು ಅವಕಾಶವಾಯಿತು. ನಂಬಿಕೆ ಮತ್ತು ಆಚರಣೆಗಳಲ್ಲಿಯ ಈ ವೈರುಧ್ಯಗಳು ಪರಿವರ್ತನೆಯ ಕಾಲದಲ್ಲಿ ಸಾಮಾನ್ಯವಾಗಿ ಕಂಡುಬರುವಂತಹವುಗಳಾಗಿವೆ. ಆದರೆ ಕೆಲವು ಸಮಯದ ನಂತರ ಮತ್ತೆ ಹೊಸ ಮೌಲ್ಯಗಳು ಗಟ್ಟಿಗೊಳ್ಳುತ್ತವೆ. ಆದಕಾರಣ ಸ್ಥಿರ ಸ್ವರೂಪದ ನಿವೇಶನಗಳನ್ನು ಲಂಬಾಣಿಗಳು ಇಂದು ನಿಷಿದ್ಧ ಎಂದು ಭಾವಿಸುವುದಿಲ್ಲ. ಕೆಲವು ಸ್ಥಿತಿವಂತ ಲಂಬಾಣಿಗಳಿಗೆ ಸುಸಜ್ಜಿತ ನಿವೇಶನಗಳು ಸಿರಿವಂತಿಕೆಯನ್ನು ಸಾರುವ ಮತ್ತು ಸಾಮಾಜಿಕ ಸ್ಥಾನದ ಪ್ರತಿಷ್ಠೆಯ ಸಂಕೇತವಾಗಿವೆ.

೧೯೫೦ರಲ್ಲಿ ಮರಿಯಮ್ಮನಹಳ್ಳಿ ಮತ್ತು ೧೯೮೦ರ ಸುಮಾರಿನಲ್ಲಿ ನಾಗಲಾಪುರ ತಾಂಡಗಳು ಬೆಂಕಿಯ ಪರಿಣಾಮದಿಂದ ತೀವ್ರ ನಷ್ಟಕ್ಕೊಳಗಾಗಿದ್ದವು. ಆಕಸ್ಮಿಕವಾಗಿ ಅಂಟಿಕೊಂಡ ಬೆಂಕಿಯಿಂದ ಬಹುತೇಕ ಗುಡಿಸಿಲುಗಳು ಸುಟ್ಟು ಭಸ್ಮವಾಗಿದ್ದವು. ಆದಕಾರಣ, ಅವರು ಇಂದು ಮಣ್ಣಿನ ಗೋಡೆ ಹಾಗೂ ಹಂಚಿನ ಮೇಲ್ಛಾವಣಿಯ ಮನೆಗಳನ್ನು ಕಟ್ಟಿಕೊಳ್ಳಲು ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದಾರೆ. ೧೯೫೦ಕ್ಕೆ ಮೊದಲು ಮರಿಯಮ್ಮನಹಳ್ಳಿ ತಾಂಡದಲ್ಲಿ ಎರಡು ಮನೆಗಳು ಮಾತ್ರ ಗಟ್ಟಿಮುಟ್ಟಾಗಿದ್ದು ಉಳಿದೆಲ್ಲವೂ ಗುಡಿಸಲುಗಳೇ ಆಗಿದ್ದವು. ೧೯೫೦ರ ಬೆಂಕಿ ಅನಾಹುತದ ನಂತರ ಬಹುತೇಕ ಲಂಬಾಣಿಗಳು ಸುಡದೇ ಇದ್ದ ಇಟ್ಟಿಗೆಗಳು ಹಾಗೂ ಹಳ್ಳಿಗಾಡುಗಳಲ್ಲಿ ಮಾಡಿದ ಹಂಚುಗಳನ್ನು ಬಳಸಿ ಮನೆ ಕಟ್ಟಿಕೊಂಡರು. ೧೯೯೯ರಲ್ಲಿ ಹೊಸಪೇಟೆ ತಾಲೂಕು ಪಂಚಾಯಿತಿಯು ೧೭ ಕುಟುಂಬಗಳಿಗೆ ನಿವೇಶನ ಕಟ್ಟಿಕೊಳ್ಳಲು ಕಟ್ಟಿಗೆ ಹಾಗೂ ಹಂಚುಗಳನ್ನು ಉಚಿತವಾಗಿ ಕೊಡಮಾಡಿತು.

ಒಟ್ಟಾರೆ, ಬೆಂಕಿಯ ಭೀತಿ, ಚಳಿ, ಮಳೆ ಮತ್ತು ಬಿಸಿಲು - ಇವುಗಳಿಂದ ರಕ್ಷಿಸಿಕೊಳ್ಳಲು ಗಟ್ಟಿಮುಟ್ಟಾದ ಹಂಚಿನ ಮನೆಗಳಲ್ಲಿ ವಾಸಿಸುತ್ತಿದ್ದ ಲಂಬಾಣೇತರರ ರೈತರ ಸಂಪರ್ಕ ಮೊದಲಾದವುಗಳಿಂದಾಗಿ ಉತ್ತಮವಾದ ನಿವೇಶನಗಳ ಬಗೆಗಿನ ಅವರ ವಿಚಾರಗಳಲ್ಲಿ ಬದಲಾವಣೆಗಳು ಮೂಡಿಬಂದವು. ಅಲೆಮಾರಿ ಜೀವನಕ್ಕೆ ಹಂಗಾಮಿ ಸ್ವರೂಪದ ನಿವೇಶನ ಅನುಕೂಲಕರವಾಗಿದ್ದರೆ, ಒಂದು ಸ್ಥಳದಲ್ಲಿ ಸ್ಥಿರ ಜೀವನಕ್ಕೆ ಗಟ್ಟಿಮುಟ್ಟಾದ ನಿವೇಶನದ ಅವಶ್ಯಕತೆ ಇದೆ.

ಅಲೆಮಾರಿ ಜೀವನದಲ್ಲಿ ಲಂಬಾಣಿಗಳು ಕೈಕೊಂಡಿದ್ದ ಜೀವನೋಪಾಯದ ಮಾರ್ಗಗಳು - ಸಣ್ಣಪುಟ್ಟ ವ್ಯಾಪಾರ, ಸರಕುಗಳ ಸಾಗಾಣಿಕೆ, ಆ ನಂತರದಲ್ಲಿ ಕಳ್ಳತನ, ಬೇಟೆ ಹಾಗೂ ಅರಣ್ಯ ಉಪ ಉತ್ಪನ್ನಗಳ ಮಾರಾಟ ಮೊದಲಾದವುಗಳಿಗಿಂತ ಭಿನ್ನವಾದ ರೀತಿಯಲ್ಲಿ ಒಂದೆಡೆ ನೆಲೆನಿಂತು ಒಕ್ಕಲುತನವನ್ನು ಪ್ರಮುಖ ಜೀವನೋಪಾಯದ ವೃತ್ತಿಯನ್ನಾಗಿ ಆಯ್ದುಕೊಂಡನಂತರ ಅವರ ಜೀವನಕ್ರಮದಲ್ಲಿ ಗಮನಾರ್ಹ ಬದಲಾವಣೆಗಳು ಉಂಟಾಗಿವೆ. ಕೃಷಿ ಸಾಗುವಳಿ, ಕೂಲಿದುಡಿಮೆ, ಸುಧಾರಿಸಿದ ಜೀವನಮಟ್ಟ ಅವರ ಜೀವನಕ್ರಮದಲ್ಲಿ ಇಂದು ಕಂಡುಬರುತ್ತಿರುವ ಮಹತ್ವದ ಬದಲಾವಣೆಗಳಾಗಿವೆ.

ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರ ತಾಂಡಗಳ ಆದಾಯ ಮಾದರಿಗಳ ವಿವರಣದ ಅಧ್ಯಯನವು ಸಾಮಾನ್ಯ ಬಡತನದ ಚಿತ್ರಣವನ್ನು ನೀಡುತ್ತದೆ. ಮುಕ್ಕಾಲುಪಾಲು (ಶೇಕಡ ೭೫) ಕುಟುಂಬಗಳು ಬಡತನದ ರೇಖೆಯ ಕೆಳಗೆ ಜೀವಿಸುತ್ತಿವೆ. ಆದಾಯದ ಬಹುಪಾಲನ್ನು ಜೀವನದ ಮೂಲಭೂತ ಅಗತ್ಯಗಳಾದ ಆಹಾರ, ಬಟ್ಟೆಗಳಿಗೆ ವೆಚ್ಚ ಮಾಡುವುದು; ಜೀವನೋಪಾಯ ಆರ್ಥಿಕತೆಯ ಸಾಮಾನ್ಯ ಲಕ್ಷಣವಾಗಿದ್ದು ಲಂಬಾಣಿ ಆರ್ಥಿಕತೆಯು ಜೀವನೋಪಾಯದ ಆರ್ಥಿಕತೆಯೇ ಆಗಿದೆ ಎಂಬುದು ಅವರ ಸಾಮುದಾಯಿಕ ಜೀವನದ ಅನುಭೋಗ ವೆಚ್ಚದ ವಿವರಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಇಂದು ಲಂಬಾಣಿ ಜನರ ಜೀವನಕ್ರಮದಲ್ಲಿ ಬದಲಾವಣೆಗಳು ಹೆಚ್ಚುತ್ತಲಿವೆ. ರೈತಾಪಿ ಜೀವನ ದೃಷ್ಟಿಯ ಚೌಕಟ್ಟಿನಲ್ಲಿ ಅವರ ಅಗತ್ಯಗಳು, ಅಪೇಕ್ಷೆಗಳು ಅಧಿಕವಾಗುತ್ತ ಇವೆ (ಹೆಚ್ಚಿನ ವಿವರಗಳಿಗೆ ಅಧ್ಯಾಯ ೩.೩ ನೋಡಿರಿ)[೪]. ಶಿಕ್ಷಣ ಹಾಗೂ ದೈಹಿಕ ಶ್ರಮವಿಲ್ಲದ ಅಧಿಕ ವೇತನದ ಬಿಳಿಕಾಲರಿನ ಉದ್ಯೋಗಗಳಿಗಾಗಿ ಅವರು ಹಂಬಲಿಸುತ್ತಿಲ್ಲ. ಆದರೆ ಫಲವತ್ತಾದ ಭೂಮಿಗಾಗಿ, ಉತ್ತಮ ತಳಿಯ ಜಾನುವಾರುಗಳಿಗಾಗಿ ಮತ್ತು ನಿಶ್ಚಿತ ಫಸಲಿಗಾಗಿ ಅವರು ಹಂಬಲಿಸುತ್ತಿದ್ದಾರೆ. ಈ ವಿಷಯದಲ್ಲಿ ಕೃಷಿ ಜೀವನಕ್ಕೆ ಇನ್ನೂ ಸಮರ್ಪಕವಾಗಿ ಹೊಂದಿಕೊಳ್ಳಲಾಗದ ಪಶ್ಚಿಮ ರಾಜಸ್ಥಾನದ ಅರೆ-ಅಲೆಮಾರಿ ಬಂಜಾರುಗಳಿಗಿಂತ ಉತ್ತರ ಕರ್ನಾಟಕದ ಲಂಬಾಣಿಗಳು ಕೃಷಿ ವ್ಯವಸಾಯದ ಜೀವನಕ್ರಮಕ್ಕೆ ಹೆಚ್ಚು ಹೊಂದಿಕೊಂಡಿದ್ದಾರೆ (ಮಲ್ಹೋತ್ರ ಮತ್ತು ಬೋಸ್ ೧೯೭೩ : ೭೮-೮೦). ಅದೇನೆ ಇದ್ದರೂ ಈ ಅಧ್ಯಯನಕ್ಕೆ ಸಂಬಂಧಿಸಿದ ಲಂಬಾಣಿಗಳು ಈ ರಾಜ್ಯದ ಹಾಗೂ ಇತರ ಕೆಲವು ಹೊರರಾಜ್ಯಗಳ ತಮ್ಮ ಸಂಬಂಧಿಕರಿಗಿಂತ ಕಡಿಮೆ ಮುಂದುವರೆದವರಾಗಿದ್ದಾರೆ. ಸಾಂಪ್ರದಾಯಿಕ ಮನೋಭಾವ ಮತ್ತು ತಮ್ಮ ನಂಬಿಕೆಗಳಿಗೆ ಗಟ್ಟಿಯಾಗಿ ಅಂಟಿಕೊಳ್ಳಲಿಚ್ಚಿಸುವ ಹಾಗೂ ಒಂದೆಡೆ ನೆಲೆ ನಿಲ್ಲಲು ನಿರಾಕರಿಸುತ್ತಿರುವ ರಾಜಸ್ಥಾನಿ ಅಲೆಮಾರಿ ಸಮುದಾಯಗಳಾದ ಗದೂಲಿಯಾ, ಲೊಹಾರ್‌ಗೆ ಪುನರ್ವಸತಿ ಕಲ್ಪಿಸಿಕೊಡಲು ಸರಕಾರವು ಮಾಡಿದ ಪ್ರಯತ್ನಗಳು ವಿಫಲವಾಗಿವೆ (ರುಹೆಲಾ ೧೯೭೦). ಆದಕಾರಣ, 'ಸಂಸ್ಕೃತೀಕರಣದ ನಿರಂತರತೆ'ಗೆ (ಸ್ಪಿಂಡ್ಲರ್) ಅವಕಾಶ ಕಲ್ಪಿಸಿಕೊಡಬೇಕಾದ ಅಗತ್ಯವಿದೆ. ಸಂಸ್ಕೃತೀಕರಣಗೊಳ್ಳುತ್ತಿರುವ ವ್ಯತ್ಯಾಸಗಳಿಂದ ಕೂಡಿದ ವಿಭಿನ್ನ ಲಂಬಾಣಿ ವರ್ಗಗಳಿಗೆ ವಿವಿಧ ರೀತಿಯ ಸಾಮಾಜಿಕ-ಆರ್ಥಿಕ ಸೌಲಭ್ಯಗಳನ್ನು ನಿರಂತರವಾಗಿ ಒದಗಿಸುವ ವ್ಯವಸ್ಥೆ ಮಾಡಬೇಕಾದುದು ಅವಶ್ಯಕವಾಗಿದೆ.

ಲಂಬಾಣಿಗಳು ಒಡೆತನ ಹೊಂದಿದ ಚಿಕ್ಕ ಪ್ರಮಾಣದ ಭೂಮಿಗಳ ಮೂಲಕ ಇಲ್ಲವೆ, ಗೇಣಿ ಆಧಾರಿತ ಅಥವಾ ಬೆಳೆ ಹಂಚಿಕೆಯ ಆಧಾರದ ಮೇಲೆ ಕೈಗೊಳ್ಳುವ ಸಾಗುವಳಿ ಕೃಷಿ, ಜೀವನ ಕ್ರಮಕ್ಕೆ ಹೊಂದಿಕೊಳ್ಳುತ್ತಿರುವ ಹಾಗೂ ಜೀವನೋಪಾಯಕ್ಕಾಗಿ ಕೃಷಿಯನ್ನು ನೇರವಾಗಿ ಅವಲಂಬಿಸದೇ ಇರುವ ಲಂಬಾಣಿಗಳು ಕೂಡ ಕೃಷಿಯಾಧಾರಿತ ಮೌಲ್ಯಗಳನ್ನು ದಿನನಿತ್ಯದ ಜೀವನದಲ್ಲಿ ಅಂತರ್ಗತಿ

*೪. ಗ್ರಾಮೀಣ ಭಾರತದ ಕೃಷಿ ಸಮುದಾಯಗಳಲ್ಲಿ ಕಂಡುಬರುವ ಆರ್ಥಿಕ ಚಟುವಟಿಕೆಗಳು, ಪ್ರಚೋದನೆ - ಪ್ರೇರಣೆಗಳ ರೀತಿಯೇ ಕೃಷಿ ವ್ಯವಸಾಯದ ಜೀವನ ಕ್ರಮಕ್ಕೆ ಹೊಂದಿಕೊಂಡ ಮಧ್ಯಭಾರತದ ೧೫ ಬುಡಕಟ್ಟುಗಳ ಜೀವನ ಉತ್ತಮವಾಗಿದೆ ಎಂಬುದನ್ನು ಸಕ್ಸೇನಾ ಕೂಡ ಕಂಡುಕೊಂಡಿದ್ದರೂ, ಅವರು 'ರೈತ' ಪದವನ್ನು ಬಳಸಿಲ್ಲ. ರೈತಾಪೀಕರಣಗೊಂಡ ಬುಡಕಟ್ಟುಗಳು ಹಾಗೂ ಬಹುಜಾತಿ ಗ್ರಾಮಸ್ಥರ ಮಧ್ಯೆ ಅವರು ಕಂಡುಕೊಂಡ ಏಕಮಾತ್ರ ವ್ಯತ್ಯಾಸವೆಂದರೆ ಬುಡಕಟ್ಟು ಸಮುದಾಯಗಳ ನಿಕೃಷ್ಟ ಬಡತನ ಹಾಗೂ ಮುಂದುವರೆದ ಬುಡಕಟ್ಟೇತರ ಸಮುದಾಯಗಳಿಂದ ಅವರ ಶೋಷಣೆ, (೧೯೬೪: ೩೯).*

ಸಿಕೊಳ್ಳುತ್ತಿರುವುದು 'ಹೈಬ್ರೀಡ್ ಪೆಜೆಂಟ್ರೀ', (ಡಾಲ್ಟನ್ ೧೯೭೧ : ೮೭) ಅಥವಾ 'ಎಂಬ್ರಾನಿಕ್ ಪ್ರೆಜೆಂಟ್ರೀ' (ಗೀರ್ಟ್ಸ್) ಎಂದು ಕರೆಯುವುದನ್ನು ಸಮರ್ಥಿಸುತ್ತಾರೆ. ದೀರ್ಘಾವಧಿಯಲ್ಲಿ ನೆಲೆನಿಂತ ಇತರ ರೈತಾಪಿ ಜನರಿಗಿಂತ ಭಿನ್ನವಾಗಿ ಇತ್ತೀಚೆಗೆ ನೆಲೆನಿಂತ ಸಮ್ಮಿಶ್ರ ರೈತಾಪಿ ಜನ ಇವರಾಗಿದ್ದಾರೆ ಎಂಬುದರಿಂದಲೇ ಅಥವಾ ಈ ಗುಣಲಕ್ಷಣಗಳಿಂದ ಇವರನ್ನು ಸಂಬೋಧಿಸಲಾಗಿದೆ.

ಚಾರಿತ್ರಿಕ ಹಾಗೂ ಆರ್ಥಿಕ ಕಾರಣಗಳಿಂದ ಅನಿವಾರ್ಯವಾಗಿ ಆರಂಭಗೊಂಡ ರೈತಾಪೀಕರಣದ ಪ್ರಕ್ರಿಯೆಯು ಮುಂದುವರೆದ ರೈತ ಸಮೂಹಗಳೊಂದಿಗಿನ ಲಂಬಾಣಿಗಳ ಸಂಪರ್ಕಗಳಿಂದ ಇನ್ನಷ್ಟು ಚುರುಕುಗೊಂಡಿತು. ಪಟ್ಟಣ - ನಗರಗಳೊಡನೆ ಅವರ ಸಂಪರ್ಕಗಳು ಹಲವಾರು ಅನಪೇಕ್ಷಣೀಯ ಬದಲಾವಣೆಗಳನ್ನುಂಟುಮಾಡಿವೆ. ನಗರ ಸಂಪರ್ಕಗಳು ಇವರ ಸಾಮಾಜಿಕ ನಿಯಂತ್ರಣದ ನಿಯೋಗಗಳನ್ನು ಹಾಗೂ ಪಾರಂಪಾರಿಕ ಮೌಲ್ಯಗಳನ್ನು ಛಿದ್ರಗೊಳಿಸಿವೆ. ತತ್ಪರಿಣಾಮವಾಗಿ ಕಳ್ಳಭಟ್ಟಿ ಸರಾಯಿ ತಯಾರಿಸುವುದು ಮತ್ತು ಮಾರಾಟ ಮಾಡುವುದು, ಕೆಲವು ಮಹಿಳೆಯರು ವೇಶ್ಯಾವೃತ್ತಿಗೆ ತೊಡಗುವುದು ಮೊದಲಾದ ಹೊಸ ಸಾಮಾಜಿಕ ಸಮಸ್ಯೆಗಳಿಗೆ ದಾರಿಮಾಡಿಕೊಟ್ಟಿದೆ. ಅಲೆಮಾರಿ ವ್ಯಾಪಾರ ಹಾಗೂ ಸಾಗಾಣಿಕೆಯಿಂದ, ನೆಲೆನಿಂತು ಕೃಷಿ ಸಾಗುವಳಿಯವರೆಗಿನ ವೃತ್ತದ ಪೂರ್ಣ ಬದಲಾವಣೆಯು ಸಮಗ್ರವಾಗಿಲ್ಲ. ಮೈಸೂರು ಜಿಲ್ಲೆಯ ಹುಣಸೂರು ಬಳಿ ವಿನೋಬಾ ಕಾಲೊನಿಯ ಮಣ್ಣುವಡ್ಡರನ್ನು ಕುರಿತಾದ ಚಂದ್ರಶೇಖರ ಭಟ್ಟ ಅವರು ಕೈಗೊಂಡ ಅಧ್ಯಯನ (೧೯೮೨ : ೨೭೯-೨೮೫) ಕೂಡ ಇಂತಹದೇ ಸ್ಥಿರ ಜೀವನಕ್ಕೆ ಅಂಟಿಕೊಂಡು ನೆಲೆನಿಲ್ಲುವ ಹಾಗೂ ರೈತಾಪೀಕರಣದ ಪ್ರಕ್ರಿಯೆಯನ್ನು ಸಾದರ ಪಡಿಸಿದೆ. ಹುಣಸೂರು ವಡ್ಡರ ಪೂರ್ವಿಕರು ಒರಿಸ್ಸಾದಿಂದ ಆಂಧ್ರಪ್ರದೇಶದ ನೆಲ್ಲೂರು ಪರಿಸರದಿಂದ ಆಗಮಿಸಿ ಅಲ್ಲಿ ನೆಲೆನಿಂತು ಕೃಷಿ ಸಾಗುವಳಿಯಲ್ಲಿ ತೊಡಗುವವರೆಗೆ ಅಲೆಮಾರಿಗಳಾಗಿದ್ದರು. ಬತ್ತ ಬೆಳೆಯುವ ಕೆಲಸದಲ್ಲಿ ತೊಡಗಿ, ಮಣ್ಣುಕಡಿಯುವ ತಮ್ಮ ಪಾರಂಪರಿಕ ಉದ್ಯೋಗದ ಮೂಲಕ ಜೀವನೋಪಾಯ ಮಾಡತೊಡಗಿದರು. ಆನಂತರ ಕೆ.ಆರ್. ಸಾಗರ ಅಣೆಕಟ್ಟು ನಿರ್ಮಾಣದ ಕೆಲಸಕ್ಕೆ ಬಂದು, ಮೈಸೂರಿನಲ್ಲಿ ವಾಸ್ತವ್ಯ ಹೂಡಿದರು. ಅಣೆಕಟ್ಟಿನ ಕೆಲಸ ಪೂರ್ಣಗೊಂಡ ನಂತರ ಹುಣಸೂರಿನ ವಿನೋಬಾ ಕಾಲೊನಿಯಲ್ಲಿ ಸ್ಥಿರವಾಗಿ ನೆಲೆನಿಂತರು. ಈಗ ಅವರು ತಮ್ಮ ಜೀವನೋಪಾಯಕ್ಕಾಗಿ ಪ್ರಧಾನವಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಇದರ ಪರಿಣಾಮವಾಗಿ ಮಣ್ಣು ಕಡಿಯುವ ತಮ್ಮ ಮೊದಲಿನ ಪಾರಂಪರಿಕ ವೃತ್ತಿಯನ್ನು ಬಿಟ್ಟಿದ್ದಾರೆ.

ಕೃಷಿ ವ್ಯವಸಾಯಕ್ಕೆ ಹೊಂದಿಕೊಳ್ಳುವ ಮೂಲಕ ವಿನೋಬಾ ಕಾಲೋನಿಯ ವಡ್ಡರು ತಮ್ಮ ಹಾಗೂ ತಮ್ಮ ಸುತ್ತಮುತ್ತಲಿನ ಜನರ ನಡುವೆ ಹೊಸ ರೀತಿಯ ಆರ್ಥಿಕ - ಸಾಮಾಜಿಕ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದಾರೆ. ಈ ಬದಲಾವಣೆ ಕೇವಲ ಆರ್ಥಿಕ ದೃಷ್ಟಿಯಿಂದ ಮಾತ್ರ ಮಹತ್ವದ್ದಾಗಿರದೆ, ಸ್ಥಳೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಗೂ ಸ್ಥಳೀಯ ಮತ್ತು ಪ್ರಾದೇಶಿಕ ಆರ್ಥಿಕ ವ್ಯವಸ್ಥೆಯಲ್ಲಿ ಅವರು ಒಂದುಗೂಡಿರುವ ದೃಷ್ಟಿಯಿಂದ ಮಹತ್ವದ್ದಾಗಿದೆ.

ಮಣ್ಣುಕಡಿಯುವ ವಡ್ಡರು ಆರ್ಥಿಕ ಸಂಘಟನೆಯಲ್ಲಿ ಪರಸ್ಪರರೊಂದಿಗೆ ಮೂರು ಪ್ರಮುಖ ಪಾತ್ರಗಳ ಮೂಲಕ ಪ್ರತಿಕ್ರಿಯಿಸಿದ್ದಾರೆ. ಗುತ್ತಿಗೆದಾರರಾಗಿ, ಗಾರೆಕೆಲಸಗಾರರಾಗಿ ಹಾಗೂ ಕೂಲಿ ಆಳುಗಳಾಗಿ ಕೆಲಸಮಾಡಿದ ಅವರು ಒಕ್ಕಲುತನದಲ್ಲಿ ಪಾಲುಗೊಳ್ಳಲು ಹೊಸ ಪಾತ್ರಗಳನ್ನು ನಿರ್ವಹಿಸಬೇಕಾಯಿತು. ಕೂಲಿಯಾಳುಗಳಾಗಿ, ಕೃಷಿಕಾರ್ಮಿಕರಾಗಿ, ಹಿಡುವಳಿದಾರರಾಗಿ ಕೃಷಿ ಸಾಗುವಳಿಯನ್ನು ಮಾಡಲು ಅವರು ನಿಧಾನಗತಿಯಲ್ಲಿ ಸ್ಥಳೀಯ ಕೃಷಿಕ ಜಾತಿಗಳೊಂದಿಗೆ ಮತ್ತು ಇತರ ಸೇವಾ ವೃತ್ತಿಗಳನ್ನು ಮಾಡುವ ಕಮ್ಮಾರರು, ಬಡಗಿಗಳು, ವ್ಯಾಪಾರಿಗಳು, ಲೇವಾದೇವಿದಾರರು, ಸಹಕಾರಿಸಂಘಗಳು ಹಾಗೂ ಬ್ಯಾಂಕುಗಳು ಇತ್ಯಾದಿ ಜನರೊಡನೆ - ಸಂಘಟನೆಗಳೊಂದಿಗೆ ಆರ್ಥಿಕ ಸಂಬಂಧ - ಸಂಪರ್ಕಗಳನ್ನು ನಿಧಾನವಾಗಿ ಹೊಂದಿದರು.

## ಕಾನೂನುಬಾಹಿರ ಸಾರಾಯಿ ಭಟ್ಟಿ ಇಳಿಸುವಿಕೆ ಮತ್ತು ಮಾರಾಟ

ಲಂಬಾಣಿ ದಂತಕತೆಗಳಲ್ಲಿ ಹಾಗೂ ಸಮಕಾಲೀನ ಧಾರ್ಮಿಕ ವಿಧಿ ಆಚರಣೆಗಳಲ್ಲಿ ಹಾಗೂ ಸಮಾರಂಭಗಳಲ್ಲಿ ಸಾರಾಯಿ ಅಥವಾ ಮದ್ಯ ಮಹತ್ವದ ಸ್ಥಾನವನ್ನು ಪಡೆದಿದೆ. ಈ ಸಮುದಾಯದಲ್ಲಿ ಸ್ತ್ರೀ ಪುರುಷರಿಬ್ಬರೂ ಮದ್ಯಪಾನ ಮಾಡುತ್ತಾರೆ. ಅವರ ಅಲೆಮಾರಿ ಜೀವನದಲ್ಲಿ ಸಾರಾಯಿಯನ್ನು ಭಟ್ಟಿ ಇಳಿಸುತ್ತಿದ್ದರೆಂದು ತೋರುತ್ತದೆ. ಇಲ್ಲವೆ ಸಾರಾಯಿಯನ್ನು ಕೊಂಡುಕೊಳ್ಳುತ್ತಿರಬಹುದು. ಒಂದೆಡೆ ನೆಲೆನಿಂತು ಸ್ಥಿರ ಜೀವನಕ್ಕೆ ಹೊಂದಿಕೊಂಡಾಗ ಸಾರಾಯಿ ಭಟ್ಟಿ ಇಳಿಸುವಿಕೆ ಹಾಗೂ ಮರದ ರಸವನ್ನು (ನೀರಾ) ತೆಗೆಯುವುದನ್ನು ನಿಷೇಧಿಸಿದ್ದರಿಂದ ಅವರು ಹೆಂಡ ಮತ್ತು ಮದ್ಯವನ್ನು ಸರಕಾರದಿಂದ ಪರವಾನಿಗೆ ಪಡೆದ ಅಂಗಡಿಗಳಿಂದ ಕೊಂಡುಕೊಳ್ಳಬೇಕಾಯಿತು. ಸ್ವಾತಂತ್ರ್ಯ ನಂತರದಲ್ಲಿ ಭಾರತ ಸರಕಾರವು ಸಾರಾಯಿ ಉತ್ಪಾದನೆ, ಅಮಲನ್ನುಂಟುಮಾಡುವ ಪಾನೀಯ ಹಾಗೂ ಸಾರಾಯಿ ಮಾರಾಟದ ಮತ್ತು ಸೇವನೆಯನ್ನು ಸಾರ್ವಜನಿಕವಾಗಿ ಪ್ರತಿಬಂಧಿಸಿತು. ಮುಂಬೈ ಸರಕಾರ ಹಾಗೂ ನಿಜಾಮರ ಸರಕಾರ ೧೯೪೯ರ ಸುಮಾರಿಗೆ ಪಾನ ನಿಷೇಧವನ್ನು ಜಾರಿಗೊಳಿಸಿದವು. ಆ ನಂತರದಲ್ಲಿ ಕಾನೂನುಬಾಹಿರವಾಗಿ ಮದ್ಯ ತಯಾರಿಸುವ ಹಾಗೂ ಮಾರಾಟಮಾಡುವ ಚಟುವಟಿಕೆಗಳು ವ್ಯವಸ್ಥಿತವಾಗಿಯೇ ಪ್ರಾರಂಭವಾದುವು.

ಈ ಪ್ರದೇಶದಲ್ಲಿ ಮದ್ಯದ ಉತ್ಪಾದನೆ ಹಾಗೂ ಮದ್ಯದ ಮಾರಾಟವು ಅಪವಿತ್ರ ಉದ್ಯೋಗ ಎಂದು ಭಾವಿಸಲಾದ್ದರಿಂದ, ಉತ್ತಮ ಜಾತಿಗಳ ಜನರು ಈ ವೃತ್ತಿಯಲ್ಲಿ ತೊಡಗಲಿಲ್ಲ.[೫೭] ಮಹಾನಗರಗಳಲ್ಲಿಯ ಉತ್ತಮ ಜಾತಿಯ ಕಾನೂನು ಬಾಹಿರ ಮದ್ಯ ತಯಾರಕ ಜನರಿಗೆ ಇದು ಅನ್ವಯವಾಗುವುದಿಲ್ಲ. ಲಂಬಾಣಿಗಳು ಕೆಳಸ್ತರದ ಸಾಮಾಜಿಕ ಸ್ಥಾನವನ್ನು ಹೊಂದಿದ್ದರಿಂದ, ಈ ವೃತ್ತಿ ಕ್ಷೇತ್ರದಲ್ಲಿ ಪ್ರವೇಶಿಸಿದಾಗ ಅವರು ತಮ್ಮ ಸಾಮಾಜಿಕ ಅಂತಸ್ತನ್ನು ಕಳೆದುಕೊಳ್ಳಲಿಲ್ಲ. ಈ ವೃತ್ತಿಯನ್ನು ಆಶ್ರಯಿಸುವ ಮೂಲಭೂತ ಅಗತ್ಯವು ಆರ್ಥಿಕ ಪರಿಗಣನೆಯಾಗಿತ್ತು. ಹಣವನ್ನು ಸಂಪಾದಿಸುವ ಹೆಚ್ಚುವರಿ ಆದಾಯದ ಮೂಲವಿದಾಗಿತ್ತು. ಆದಕಾರಣ, ಬಡತನದಲ್ಲಿದ್ದ ಲಂಬಾಣಿಗಳು ಕೆಲವು ಲಂಬಾಣೇತರರೊಂದಿಗೆ ಕಾನೂನುಬಾಹಿರ ಸಾರಾಯಿ ಉತ್ಪಾದನೆಯಲ್ಲಿ ಸೇರಿಕೊಂಡರು. ಪೋಲೀಸರನ್ನು ವಿಶ್ವಾಸದಲ್ಲಿ ತೆಗೆದುಕೊಂಡೇ ಈ ವೃತ್ತಿಯನ್ನು ಅನುಸರಣೆ ಮಾಡಬೇಕಾಗಿತ್ತಾದ್ದರಿಂದ ಅವರಿಗೆ ನಿಯಮಿತವಾಗಿ ಹಣವನ್ನು (ಲಂಚದ ಬಾಬತ್ತನ್ನು) ಸಲ್ಲಿಸಬೇಕಾಗುತ್ತಿತ್ತು. ೧೯೫೦ ಹಾಗೂ ೧೯೬೦ರ ದಶಕಗಳಲ್ಲಿ ಪೋಲೀಸ್ ದೌರ್ಜನ್ಯ ಎಷ್ಟೊಂದು ತೀವ್ರತರವಾಯಿತು ಎಂದರೆ ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಸ್ವಯಂಪ್ರೇರಣೆಯಿಂದಲೇ ಈ ವೃತ್ತಿಯನ್ನು ತ್ಯಜಿಸಿದರು. ಪ್ರತಿಬಂಧವನ್ನು ಧಿಕ್ಕರಿಸುವವರನ್ನು ಪಂಚಾಯಿತಿಯು ದಂಡವಿಧಿಸುವ ಮೂಲಕ ಶಿಕ್ಷೆ ನೀಡುತ್ತಿತ್ತು. ಖರೀದಿಗೆಂದು ಪಟ್ಟಣಕ್ಕೆ ಹೋದಾಗ ಮದ್ಯ ಕುಡಿಯುತ್ತಿದ್ದರು. ಹೀಗಾಗಿ ೭-೮ ವರ್ಷಗಳ ಕಾಲ ಭಟ್ಟಿಸರಾಯಿ ಮಾಡುವ ದಂಧೆ ನಿಷ್ಕ್ರಿಯಗೊಂಡಿತು. ಇದೇ ರೀತಿ ಸ್ವಯಂಪ್ರೇರಿತ ನಿಷೇಧವನ್ನು ಕಲಬುರ್ಗಿ ಜಿಲ್ಲೆಯ ಕಾಳಭಾವಿ, ಭೋಗಲಿಂಗದಳ್ಳಿ ತಾಂಡಗಳಲ್ಲಿಯೂ ಅನುಸರಿಸಲಾಗಿತ್ತು ಎಂದು ವರದಿಗಳು ತಿಳಿಸುತ್ತವೆ.

---

*೫೭. ಸ್ಥಳೀಯ ಜಾತಿ ವರ್ಣ-ಶ್ರೇಣಿ ವ್ಯವಸ್ಥೆಯಲ್ಲಿ ಲಂಬಾಣಿಗಳು ಇತರೆ ಅನೇಕ ಕೃಷಿಕ ಜಾತಿಗಳಿಗಿಂತ ಕೆಳಸ್ತರದ ಸಾಮಾಜಿಕ ಸ್ಥಾನವನ್ನು ಹೊಂದಿರುವವರಾದರೂ, ಮುಸ್ಲಿಮರು, ಕ್ರಿಶ್ಚಿಯನ್ ಹಾಗೂ ಕೆಲವು ಅಸ್ಪೃಶ್ಯ ವರ್ಗಗಳು ಎಂದು ಪರಿಗಣಿಸಿದ ವರ್ಗಗಳಿಗಿಂತ ಸ್ವಲ್ಪ ಮೇಲಿನ ಸ್ಥಾನವನ್ನು ಹೊಂದಿದ್ದಾರೆ.*

೧೯೬೭ರವರೆಗೂ ಮರಿಯಮ್ಮನಹಳ್ಳಿ ತಾಂಡದಲ್ಲಿ ಸ್ವಯಂಪ್ರೇರಿತ ನಿಷೇಧವು ಮುಂದುವರೆಯಿತು. ಪುನಃ ೧೯೬೮ರಲ್ಲಿ ಭಟ್ಟಿ ಸಾರಾಯಿ ವೃತ್ತಿಯು ಆರಂಭಗೊಂಡಿತು. ನೆರೆಹೊರೆಯ ಲಂಬಾಣೇತರ ಕಳ್ಳಭಟ್ಟಿ ಸಾರಾಯಿ ತಯಾರಕರು ಲಂಬಾಣಿಗಳಿಗೆ

ರಹಸ್ಯವಾಗಿ ಕಳ್ಳಭಟ್ಟಿಯನ್ನು ಮಾರಲು ಪ್ರಾರಂಭಿಸಿದರು. ಈ ಅವಧಿಯಲ್ಲಿ ಪಂಚಾಯತಿ ಸದಸ್ಯರು ತಮ್ಮ ಮೊದಲಿನ ಕಟ್ಟುನಿಟ್ಟಿನ ಕಾರ್ಯಾಚರಣೆಗಳನ್ನು ತಟಸ್ಥಗೊಳಿಸಿದ್ದರು. ಹೀಗಾಗಿ ತಾಂಡಗಳಲ್ಲಿ ಸಾರಾಯಿ ಕುಡಿಯುವ ಪ್ರವೃತ್ತಿಗೆ ಪ್ರೋತ್ಸಾಹ ಸಿಕ್ಕಂತಾಗಿತ್ತು. ೧೯೬೭ರಲ್ಲಿ ಮೈಸೂರು ಸರಕಾರವು ಪಾನಪ್ರತಿಬಂಧ ನೀತಿಯನ್ನು ಕಿತ್ತುಹಾಕಿ ಅಧಿಕೃತ ಮದ್ಯ ಉತ್ಪಾದಕರಿಂದ ಮದ್ಯವನ್ನು ಖರೀದಿಸಿ ಮಾರಾಟಮಾಡುವ ಗುತ್ತಿಗೆದಾರರಿಗೆ ಕಾನೂನಿನನ್ವಯ ಪರವಾನಿಗೆ ನೀಡಲಾರಂಭಿಸಿತು. ಮದ್ಯಪಾನ ಪ್ರತಿಬಂಧ ಕಿತ್ತುಹಾಕಿದ ನಂತರ ಅನುಮತಿ ಪಡೆದ ಹೆಂಡದಂಗಡಿಗಳಲ್ಲಿ ಮದ್ಯ ಸಿಕ್ಕುವುದರಿಂದ ಕಾನೂನುಬಾಹಿರ ಭಟ್ಟಿ ಇಳಿಸುವಿಕೆ ತಾನಾಗಿಯೇ ಕೊನೆಗೊಳ್ಳಬಹುದೆಂದು ಸರಕಾರ ಭಾವಿಸಿತ್ತು. ಆದರೆ ಈ ನಿರೀಕ್ಷೆಗೆ ವಿರುದ್ಧವಾಗಿ ಕಾನೂನುಬಾಹಿರ ಭಟ್ಟಿ ಸರಾಯಿ ತಯಾರಿಕೆ ನಿಲ್ಲದಂತೆ ನಡೆಯಿತು. ತೀರ ಅಗ್ಗದ ದರದ ಸೇಂದಿ ಮತ್ತು ಸಾರಾಯಿಗೆ ಗಿರಾಕಿಗಳಿದ್ದುದರಿಂದ ಈ ವೃತ್ತಿಯು ನಾಗಲಾಪುರ ತಾಂಡದಲ್ಲಿ ಲಾಭದಾಯಕವಾಗಿಯೇ ನಡೆಯಿತು. ಮರಿಯಮ್ಮನಹಳ್ಳಿ ತಾಂಡದಲ್ಲಿ ಸಾರಾಯಿಯೊಂದಿಗೆ ವೇಶ್ಯಾವೃತ್ತಿಯೂ ನಡೆಯಲಾರಂಭಿಸಿತು. ತಾಂಡಗಳಲ್ಲಿ ಸಾರಾಯಿ ಮಾರುವುದರಿಂದ ವೇಶ್ಯಾವೃತ್ತಿ ಕೂಡ ಆರಂಭಗೊಂಡಿತು ಎಂದು ಕೆಲವರು ಹೇಳುತ್ತಾರೆ. 21.10.2010

## ವೇಶ್ಯಾವೃತ್ತಿ

ಕಡುಬಡತನ ಹಾಗೂ ಪಟ್ಟಣದ ಪುರುಷರೊಡನೆ ಲಂಬಾಣಿ ಮಹಿಳೆಯರ ಸಂಪರ್ಕ ಹೆಚ್ಚಿದ್ದರ ಪರಿಣಾಮವಾಗಿ ಕೆಲವು ಲಂಬಾಣಿ ಮಹಿಳೆಯರಿಗೆ ವೇಶ್ಯಾವೃತ್ತಿಯು ಜೀವನೋಪಾಯದ ಹೊಸ ಆದಾಯದ ಮೂಲವಾಗಿ ಹುಟ್ಟಿಕೊಂಡಿದೆ. ಲಂಬಾಣಿ ಪಂಚಾಯಿತಿಗೆ ಇದೊಂದು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ ಎಂದರೂ ತಪ್ಪಾಗಲಾರದು. ಬಡತನ, ಮದ್ಯದ ವ್ಯಾಪಾರ, ಒರಟಾದ ಸಾಂಪ್ರದಾಯಿಕ ಬಟ್ಟೆಗಳಿಗೆ ಬದಲಾಗಿ ಅಂದಚೆಂದದ ಬೆಡಗಿನ ಸೀರೆಗಳನ್ನು ಉಡುವ ಬದಲಾವಣೆ, ವೈವಾಹಿಕ ಜೀವನದಲ್ಲಿಯ ಲೈಂಗಿಕ ಅತೃಪ್ತಿ, ವಿವಾಹ ಬಂಧನಗಳ ಮುರಿದುಬೀಳುವಿಕೆ (ವಿಧವೆಯರಾಗುವುದು, ಅವಿವಾಹಿತತನ, ವಿಚ್ಛೇದನ ಇಲ್ಲವೆ ಪತಿ-ಪತ್ನಿಯರು ಪರಸ್ಪರರನ್ನು ತ್ಯಜಿಸುವುದು) ಮೊದಲಾದವುಗಳಿಂದ ಜೀವನೋಪಾಯದ ಆದಾಯಲ್ಲಿ ಕೊರತೆಯುಂಟಾಗುವುದು, ಜಾತಿಪಂಚಾಯಿತಿಗಳ ಕಾರ್ಯಾಚರಣೆಗಳಲ್ಲಿ ಪೋಲೀಸ್ ಹಸ್ತಕ್ಷೇಪ, ಪಂಚಾಯಿತಿ ಸದಸ್ಯರ ಪಕ್ಷಪಾತ ಪ್ರವೃತ್ತಿ ಇತ್ಯಾದಿಗಳು ಲಂಬಾಣಿಗಳಲ್ಲಿ ವೇಶ್ಯಾವೃತ್ತಿ ಹೆಚ್ಚಾಗಲು ಪ್ರಮುಖ ಕಾರಣಗಳಾಗಿವೆ ಎಂಬುದು ತನಿಖೆಯಲ್ಲಿ ತಿಳಿದುಬಂದಿರುವ ಸಂಗತಿಗಳಾಗಿವೆ.

ಕಾನೂನುಬಾಹಿರ ಸಾರಾಯಿ ಮಾರಾಟ ವೃತ್ತಿಯನ್ನು ಕೈಕೊಂಡ ಆರಂಭದಿಂದ (೧೯೫೦ ರ ದಶಕದ ಮಧ್ಯ ಭಾಗದಲ್ಲಿ) ಹೊಸಪೇಟೆ ತಾಲೂಕಿನ ಸುತ್ತಮುತ್ತಲಿನ ತಾಂಡಗಳಲ್ಲಿಯ ಕೆಲವು ಮಹಿಳೆಯರು ವೇಶ್ಯಾವೃತ್ತಿಗೆ ಅಂಟಿಕೊಂಡರು. ರಾಷ್ಟ್ರೀಯ ಹೆದ್ದಾರಿ ನಂ. ೧೩ಕ್ಕೆ ತೀರ ಸಮೀಪದಲ್ಲಿರುವ ಮರಿಯಮ್ಮನಹಳ್ಳಿ ತಾಂಡ ಹಾಗೂ ಸುತ್ತಮುತ್ತಲಿನ ಹಳ್ಳಿಯ ಕೆಲವು ಮಹಿಳೆಯರು ಪಟ್ಟಣದ ಜನರೊಂದಿಗೆ ನಿಕಟ ಸಂಪರ್ಕಗಳನ್ನು ಹೊಂದಲು ಅವಕಾಶವಾಯಿತು. ಪಟ್ಟಣಗಳ ಸಂಪರ್ಕಗಳು ಅಹಿತಕಾರಿ ಪರಿಣಾಮಗಳನ್ನು ಬೀರಲಾರಂಭಿಸಿದವು. ನಾಗಲಾಪುರ ತಾಂಡ ಇಂತಹ ಪ್ರಭಾವಕ್ಕೀಡಾಗದೇ ಉಳಿಯಿತು. ಬಸ್ಸುಗಳ ಸಾಗಾಣಿಕೆ ಸೌಲಭ್ಯಗಳು ಇತ್ತೀಚೆಗೆ ತೀರ ಹೆಚ್ಚಾ

ಗಿದ್ದು ಬರಲಿರುವ ದಿನಗಳಲ್ಲಿ ಇದೆಲ್ಲದರ ಪ್ರಭಾವ-ಪರಿಣಾಮಗಳೇನಾಗಬಹುದು ಎಂಬುದನ್ನು ನಿರ್ದಿಷ್ಟವಾಗಿ ಹೇಳಲಾಗದು. ಪಟ್ಟಣದೊಂದಿಗೆ ಸಂಪರ್ಕಗಳು ಅನೇಕ ವರ್ಷಗಳಿಂದ ಇದ್ದರೂ ಕೂಡ ಸಾರಾಯಿ ತಯಾರಿಸುವ ವೃತ್ತಿಯನ್ನು ಕೈಕೊಳ್ಳುವುದಕ್ಕಿಂತ ಮೊದಲಿಗೆ ಲಂಬಾಣಿ ಮಹಿಳೆಯರು ವೇಶ್ಯಾವೃತ್ತಿಗೆ ಇಳಿದಿರಲಿಲ್ಲ. ಮದ್ಯ ಮಾರಾಟ ವ್ಯವಹಾರದಲ್ಲಿ ಸ್ವಚ್ಛಂದವಾಗಿ ತೊಡಗಿದ್ದರಿಂದ ಕೆಲವು ಪಟ್ಟಣವಾಸಿಗಳು ಮರೆಮಾಚಿ ಮದ್ಯಸೇವನೆಗೆ ತಾಂಡಗಳಿಗೆ ಆಗಮಿಸತೊಡಗಿದರು. ಮದ್ಯದ ಪ್ರಭಾವ ಲೈಂಗಿಕ ಸಂಬಂಧಗಳಿಗೆ ಪೂರಕವಾಯಿತು. ಕೆಲವು ಲಂಬಾಣಿ ಮಹಿಳೆಯರು ಪಟ್ಟಣದ ವ್ಯಾಪಾರಿಗಳೊಂದಿಗೆ ಮುಜುಗರವಿಲ್ಲದೆ ವ್ಯವಹರಿಸತೊಡಗಿದರು. ಮಹಿಳೆಯರ ಇಂತಹ ವರ್ತನೆಗೆ ಲಂಬಾಣಿ ಪುರುಷರು ಭಾಗಶಃ ಹೊಣೆಗಾರರಾಗಿದ್ದಾರೆ. ಸ್ಥಿತಿವಂತ ವರ್ತಕರನ್ನು ಒಲೈಸಲು ಹಾಗೂ ಅವರಿಂದ ಹಣ ತೆಗೆದುಕೊಳ್ಳಲು ಲಂಬಾಣಿ ಪುರುಷರು ಇಂತಹ ಕ್ರಮಕ್ಕೆ ಮುಂದಾದರು. ಆಕಸ್ಮಿಕ ಲೈಗಿಂಕ ಸಂಬಂಧಗಳು ಅಂತಿಮವಾಗಿ ಈ ಮಹಿಳೆಯರನ್ನು ವೃತ್ತಿನಿರತ ವೇಶ್ಯೆಯರನ್ನಾಗಿ ಮಾರ್ಪಡಿಸಿದವು. ಸಾರಾಯಿ ಮಾರಾಟ ಮತ್ತು ತಮ್ಮ ಮಹಿಳೆಯರ ವೇಶ್ಯಾವೃತ್ತಿಯಿಂದ ಕೆಲವು ಪುರುಷರು ಪ್ರಯಾಸವಿಲ್ಲದ ಜೀವನಕ್ಕೆ ಹೊಂದಿಕೊಂಡರು. ಕೃಷಿ ಸಾಗುವಳಿದಾರ ಲಂಬಾಣಿ ಮನೆತನಗಳಲ್ಲಿ ವೇಶ್ಯಾವೃತ್ತಿಗಿಳಿದವರು ಬಹುತೇಕವಾಗಿ ಇಲ್ಲವೇ ಇಲ್ಲ ಎಂದು ಹೇಳಬಹುದು.

ಮೊದಲಿಗೆ ಮರಿಯಮ್ಮನಹಳ್ಳಿ ತಾಂಡದ ಕೆಲವು ಲಂಬಾಣಿ ಮಹಿಳೆಯರು ವೇಶ್ಯಾವೃತ್ತಿಗೆ ಅಂಟಿಕೊಂಡರು ಎಂಬುದಾಗಿ ಕೆಲವು ಹಿರಿಯರಿಂದ ತಿಳಿದುಬರುತ್ತದೆ. ಲಂಬಾಣಿ ಶಿಕ್ಷಕಿಯೊಬ್ಬರು ಹಾಗೂ ಸುಧಾರಕರೊಬ್ಬರು, ಲಂಬಾಣಿ ಮಹಿಳೆಯರಿಗೆ ಸ್ವಚ್ಛತೆ ಕಾಪಾಡಿಕೊಳ್ಳುವಂತೆ ಆಗ್ರಹಿಸಿ ಹಲವಾರು ರೀತಿಯಲ್ಲಿ ಅವರಿಗೆ ತರಬೇತಿ ನೀಡಿದರಂತೆ. ಸಾಂಪ್ರದಾಯಿಕ ಉಡುಪನ್ನು ಬಿಟ್ಟು ಸೀರೆ ಉಡುವುದನ್ನು ಕಲಿಸಿದರಂತೆ. ಅಂದಚೆಂದದ, ಬೆಡಗು-ಬಿನ್ನಾಣದ ಸೀರೆಗಳನ್ನುಟ್ಟ ಲಂಬಾಣಿ ಮಹಿಳೆಯರು ನೋಡಲು ಆಕರ್ಷಕವಾಗಿ ಕಾಣತೊಡಗಿದರು. ಅವರನ್ನು ಲಂಬಾಣಿಗಳು ಎಂದು ಗುರುತಿಸಲಾಗದಾಯಿತು. ಇದರಿಂದ ಅವರು ಪಟ್ಟಣವಾಸಿಗಳಿಗೆ ಆಕರ್ಷಕವಾಗಿ ಸ್ವೀಕಾರಾರ್ಹವಾದರು. ಸಮಾಜ ಸುಧಾರಕರು ಸದುದ್ದೇಶದಿಂದ ಮಾಡಿದ ಸುಧಾರಣೆ ಬಹುತೇಕ ಒಳ್ಳೆಯದನ್ನುಂಟುಮಾಡಿತಾದರೂ, ಅನಿರೀಕ್ಷಿತ ಅಹಿತಕರ ಪರಿಣಾಮಗಳನ್ನು ಕೂಡ ಸೃಷ್ಟಿ ಮಾಡಿತು.

ಜಾನಾಂಗಿಕ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವುದು ತೀರ ಮಹತ್ವದ್ದೆಂದು ಭಾವಿಸುತ್ತಿದ್ದ ಸಾಂಪ್ರದಾಯಿಕ ಮನೋಭಾವದ ಲಂಬಾಣಿಗಳು ಪ್ರಾಚೀನ ಕಾಲದಲ್ಲಿ ಅಕ್ರಮ ಲೈಂಗಿಕ ಪ್ರಣಯಗಳನ್ನು ಬಹಳ ಗಂಭೀರವಾಗಿ ಪರಿಗಣಿಸುತ್ತಿದ್ದರು. ಅಂತಹ ತಪ್ಪುಗಳನ್ನು ಮಾಡಿದವರಿಗೆ ಕಠಿಣ ಶಿಕ್ಷೆಯನ್ನು ವಿಧಿಸುತ್ತಿದ್ದರು. ಆದರೆ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಸಮುದಾಯದ ಅಂತಸ್ತು ಹಾಗೂ ಕುಲಸಂಬಂಧೀ ಏಕರೂಪತೆಯ ರಕ್ಷಣೆಗೆ ಮಾರಕಪ್ರಾಯವಾಗಿರುವ ಅಪರಾಧಗಳನ್ನು ನಿಯಂತ್ರಿಸುವಲ್ಲಿ ಸಾಂಪ್ರದಾಯಿಕ ನಿಯಂತ್ರಣ ವ್ಯವಸ್ಥೆ ಅಸಹಾಯಕವಾಗಿದೆ. ವೇಶ್ಯಾವೃತ್ತಿಯನ್ನು ತಡೆಗಟ್ಟುವಲ್ಲಿ ಪಂಚಾಯಿತಿಯು ಅಸಮರ್ಥವಾಗಲು ಕೆಲವು ಪಟ್ಟಣವಾಸಿಗಳು  ಹಾಗೂ ಪೋಲೀಸರು ಕಾರಣ ಎಂದು ಹಿರಿಯರು ಹಾಗೂ ಪಂಚಾಯಿತಿ ಸದಸ್ಯರು ದೂರುತ್ತಾರೆ. ಪಂಚಾಯಿತಿಗಳು ಕೂಡ ಒಡೆದ ಮನೆಗಳಾಗಿವೆ. ಪಂಚಾಯಿತಿ ಸದಸ್ಯರು ತಮ್ಮ ಸಂಬಂಧಿಕರ ಹಾಗೂ ಪ್ರಭಾವಿ ವ್ಯಕ್ತಿಗಳ ಆಕ್ಷೇಪಾರ್ಹ ವರ್ತನೆಯನ್ನು ಖಂಡಿಸದೇ ಇರುವಾಗ, ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿದ ತೀರಾ ಸಾಮಾನ್ಯರು ಕೂಡ ಅವರ ಪ್ರಾಮಾಣಿಕತೆ ಮತ್ತು ನಿಷ್ಪಕ್ಷಪಾತತೆಯನ್ನು  ಪ್ರಶ್ನಿಸುತ್ತಾರೆ. ಒಟ್ಟಾರೆ ಈ ಎಲ್ಲಾ ಅಂಶಗಳಿಂದ ಓಡಿತ ತಪ್ಪಿದ ಸಾಮಾಜಿಕ ಸನ್ನಿವೇಶಕ್ಕೆ ಕಾರಣವಾಗಿವೆ. ನಿಷ್ಪಕ್ಷಪಾತವಾಗಿ ವರ್ತಿಸಲು ಅಸಮರ್ಥವಾಗಿರುವ ಪಂಚಾಯಿತಿಗಳು ಇಂತಹ ವಿಷಯಗಳ ಬಗೆಗೆ ಅನಾಸಕ್ತಿ ತಳೆದಿವೆ. ಪಂಚಾಯಿತಿಗಳು

ವೇಶ್ಯಾವೃತ್ತಿಯನ್ನು ನಿಯಂತ್ರಿಸುವಲ್ಲಿ ಮಾತ್ರವೇ ವಿಫಲವಾಗಿಲ್ಲ. ಇತರ ಕಾರ್ಯಗಳಲ್ಲಿಯೂ ಅವು ತಮ್ಮ ಬಿಗುವನ್ನು ಕಳೆದುಕೊಂಡಿವೆ. ಅನ್ಯಪ್ರದೇಶಗಳಲ್ಲಿ ವಾಸವಾಗಿರುವ ಲಂಬಾಣಿಗಳು ಮದ್ಯ ಮಾರಾಟ ಮಾಡಿದರೂ ತಮ್ಮ ಅಂಗಡಿಗಳನ್ನು ತಮ್ಮ ವಾಸಸ್ಥಾನಗಳಾದ ತಾಂಡಗಳಿಂದ ದೂರದಲ್ಲಿರಿಸಿಕೊಂಡಿವೆ.

ಮರಿಯಮ್ಮನಹಳ್ಳಿ ತಾಂಡದೊಡನೆ ಹೋಲಿಸಿನೋಡಿದರೆ ನಾಗಲಾಪುರ ತಾಂಡದಲ್ಲಿ ವೇಶ್ಯಾವೃತ್ತಿ ಹೆಚ್ಚು ಪ್ರಮಾಣದಲ್ಲಿಲ್ಲ. ಕೆಲವೇ ಮಹಿಳೆಯರು ವೇಶ್ಯಾವೃತ್ತಿಯನ್ನು ಕೈಕೊಂಡಿದ್ದರೂ ಕೇವಲ ೧೦ ಮಹಿಳೆಯರು ಮಾತ್ರವೇ ವೃತ್ತಿನಿರತರು ಎಂದು ಗುರುತಿಸಲ್ಪಟ್ಟಿದ್ದಾರೆ. ಈ ವೃತ್ತಿನಿರತ ವೇಶ್ಯೆಯರು ಯುವತಿಯರನ್ನು, ಮಹಿಳೆಯರನ್ನು ವೇಶ್ಯಾವೃತ್ತಿಗೆ ಎಳೆಯಲು ಯತ್ನಿಸುತ್ತಾರೆ. ಆಧುನಿಕ ಶೈಲಿಯ ಬೆಡಗಿನ ಜೀವನ ಸಾಗಿಸಬೇಕೆಂಬ ಹಂಬಲವನ್ನುಳ್ಳವರು, ಆರ್ಥಿಕ ತೊಂದರೆಯಲ್ಲಿರುವ ಯುವತಿಯರು, ವಿಧವೆಯರು, ಗಂಡಬಿಟ್ಟ ಮಹಿಳೆಯರು ಮೊದಲಾದವರು ಈ ವೇಶ್ಯೆಯರ ತಂತ್ರಗಳಿಗೆ ಸುಲಭವಾಗಿ ಬಲಿಯಾಗುತ್ತಾರೆ. ಇತರ ಹಳ್ಳಿಗಾಡುಗಳಲ್ಲಿ ಸಾಗುವಳಿ ಮಾಡುವ ಹಾಗೂ ವಾರ್ಷಿಕ ಗುತ್ತಿಗೆಯಾಧಾರದ ಕೂಲಿಯಾಳುಗಳಾದ ಪುರುಷರು ಬಹು ಸಮಯದವರೆಗೆ ಮನೆಯಿಂದ ದೂರವಿರುವುದರಿಂದ ಮತ್ತು ನಿಯಮಿತ ಕಾಲದಲ್ಲಿ ಬೇರೆ ಊರುಗಳಿಗೆ ಕೆಲಸಕ್ಕೆ ಹೋಗುವ ಪುರುಷರು ಮೊದಲಾದವರ ಮನೆಗಳಲ್ಲಿಯಾ ಮಹಿಳೆಯರನ್ನು ಪ್ರಭಾವಿಸಲು ವೇಶ್ಯೆಯರಿಗೆ ಅವಕಾಶವಾಗುತ್ತದೆ.

ವೇಶ್ಯಾ ವೃತ್ತಿಯಿಂದ ಲಭಿಸುವ ಲಾಭಾಂಶಗಳ ಒಟ್ಟಾರೆ ಆದಾಯವನ್ನು ಅಂದಾಜು ಮಾಡಲು ಸಾಧ್ಯವಾಗದು. ಈ ಪ್ರದೇಶದಲ್ಲಿ ಅತ್ಯಂತ ಬಡತನದಿಂದ ಜೀವನ ಸಾಗಿಸುತ್ತಿದ್ದವರು ವೇಶ್ಯಾವೃತ್ತಿಯನ್ನು ಕೈಕೊಂಡ ಮೇಲೆ ಸಾಕಷ್ಟು ಸಂಪತ್ತನ್ನು ಗಳಿಸಿದ್ದಾರೆ ಎಂಬುದು ಕೆಲವರ ಅಭಿಪ್ರಾಯ.

ವೇಶ್ಯಾವೃತ್ತಿಯಲ್ಲಿ ತೊಡಗಿರುವ ಮಹಿಳೆ ಮತ್ತು ಅವರ ಕುಟುಂಬಗಳ ಸಾಮಾಜಿಕ ಅಂತಸ್ತು ಕುಗ್ಗಿಹೋಗಿದ್ದು, ಇತರ ಲಂಬಾಣಿಗಳು, ಇಂತಹ ಕುಟುಂಬದ ಕನ್ಯೆಯರನ್ನು ಆಯ್ಕೆ ಮಾಡಲು ಹಿಂಜರಿಯುತ್ತಾರೆ. "ಅವರು ನಿಜವಾದ ಲಂಬಾಣಿಗಳು ಎಂದು ನೀವು ಭಾವಿಸುವಿರಾ? ಅವರು ..... ಮಕ್ಕಳು" ಎಂಬುದಾಗಿ ಒಬ್ಬ ಹಿರಿಯ ಲಂಬಾಣಿಯು ವ್ಯಭಿಚಾರದಲ್ಲಿ ತೊಡಗಿರುವ ಲಂಬಾಣಿಗರ ಬಗೆಗೆ ಬಹು ತೀಕ್ಷ್ಣವಾಗಿ ಪ್ರತಿಕ್ರಿಯಿಸಿದನು. ಈ ಜನರ ಬಗೆಗೆ ಲಂಬಾಣೇತರ ಜನರ ಪ್ರತಿಕ್ರಿಯೆಗಳು ವಿಭಿನ್ನ ರೀತಿಯಾಗಿವೆ. ವೇಶ್ಯಾವೃತ್ತಿನೊಡನೆ ನಂಟು ಇರುವವರು ಲಂಬಾಣಿಗಳ ಬಗೆಗೆ ಬಹಳಷ್ಟು ಕೀಳಾಗಿ ಮಾತನಾಡುತ್ತಾರೆ. ಅವರ ಬಗೆಗೆ ಅಶ್ಲೀಲ ಹಾಸ್ಯ ಮಾಡುತ್ತಾರೆ. ವ್ಯಭಿಚಾರ ಮಾಡದವರು ಈ ಅನಿಷ್ಟದ ಬಗೆಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸುತ್ತ ಅದನ್ನು ಹೇಗೆ ತಡೆಗಟ್ಟಲಾಗುತ್ತದೆಯೋ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಅದು ತಮ್ಮ ಕುಟುಂಬದ ಮಹಿಳೆಯರ ಮೇಲೆ ಪ್ರಭಾವ ಬೀರಿತ್ತು ಎಂಬ ಆತಂಕವನ್ನೂ ವ್ಯಕ್ತಪಡಿಸುತ್ತಾರೆ.

ಸ್ಥಳೀಯ ಜನರು ವೇಶ್ಯಾವೃತ್ತಿಯನ್ನು ನಿರ್ಮೂಲನ ಮಾಡುವ ಬಗೆಗೆ ಸೂಚಿಸುವ ಅಭಿಪ್ರಾಯ ಅಥವಾ ಪರಿಹಾರೋಪಾಯಗಳು ಭಿನ್ನವಾಗಿವೆ. ಪೋಲೀಸರು ಕಟ್ಟುನಿಟ್ಟಾದ ಕ್ರಮಗಳನ್ನು ಜಾರಿಗೊಳಿಸಿದ್ದೇ ಆದರೆ ಇದನ್ನು ತಡೆಯಲು ಸಾಧ್ಯ ಎಂದು ರಾಜಕೀಯ ನಾಯಕರು ಅಭಿಪ್ರಾಯಪಡುತ್ತಾರೆ. ವೇಶ್ಯಾವೃತ್ತಿಗೆ ಇಳಿದವರನ್ನು ಕಂಡೂ ಕಾಣದಂತೆ ಇರುವ ಪೋಲಿಸರನ್ನು ಹಾಗೂ ಜಾತಿ ನಾಯಕರು ಪಂಚಾಯಿತಿಗಳನ್ನು ಅವರು ದೂಷಿಸುತ್ತಾರೆ. ವೇಶ್ಯಾವೃತ್ತಿಯನ್ನು ತಡೆಗಟ್ಟಲು ಪೋಲಿಸರು ಕಠಿಣ ಕ್ರಮಗಳನ್ನು ಅನುಸರಿಸುವುದನ್ನು ತಾವು ಬೆಂಬಲಿಸುವುದಾಗಿ ಜಾತಿ ಪಂಚಾಯಿತಿಯ ಸದಸ್ಯರುಗಳು ಹೇಳುತ್ತಾರೆ. ಪೋಲಿಸರು ತಮ್ಮ ಅಧಿಕಾರವನ್ನು ಯಾವುದೇ ಭೀತಿ, ಮುಜುಗರ, ಮುಲಾಜು ಇಲ್ಲದೆ ಚಲಾಯಿಸಬೇಕು ಎಂದು ಪಂಚಾಯಿತಿಯ ಸದಸ್ಯರು ಸೂಚಿಸುತ್ತಾರೆ.

ವೇಶ್ಯಾವೃತ್ತಿಯನ್ನು ತಡೆಗಟ್ಟುವ ಬಗೆಗೆ ಸಾಮಾಜಿಕ ಕಾರ್ಯಕರ್ತರ ಅಭಿಪ್ರಾಯ ಇದಕ್ಕಿಂತ ಭಿನ್ನವಾಗಿದೆ. ಯಾವುದೇ ಹೊರಗಿನ ವ್ಯಕ್ತಿಗಳು ಈ ಮಹಿಳೆಯರನ್ನು ರಕ್ಷಿಸಲಾರರು; ಸ್ವಂತಿಕೆಯ ಬಗೆಗಿನ ಅರಿವು ಹಾಗೂ ಶಿಕ್ಷಣ ಮಾತ್ರವೇ ಈ ಮಹಿಳೆಯರನ್ನು ಸ್ಥಿರ ಜೀವನಕ್ಕೆ ಮರಳಿ ತರಬಲ್ಲದು ಎಂಬುದು ಅವರ ಅಭಿಪ್ರಾಯವಾಗಿದೆ. ಈ ಉದ್ದೇಶವನ್ನು ಸಾಧಿಸಲು ಲಂಬಾಣಿ ಸಮುದಾಯದಿಂದಲೇ ನಾಯಕತ್ವ ಹಾಗೂ ಮಾರ್ಗದರ್ಶನ ಬರಬೇಕು.

## ಸರಕಾರಿ ಸೇವೆ

ಅಧ್ಯಯನಕ್ಕೆ ಒಳಪಡಿಸಿದ ಎರಡು ತಾಂಡದ ಲಂಬಾಣಿಗಳಿಗೆ ಸರ್ಕಾರಿ ಸೇವೆ ಅಥವಾ ನೌಕರಿ ಪ್ರಮುಖವಾದ ಆರ್ಥಿಕ ಮೂಲವಾಗಿಲ್ಲ. ಹೆಚ್ಚಿನವರಿಗೆ ಉತ್ತಮ ವೃತ್ತಿ ಮತ್ತು ನೌಕರಿ ದೊರೆತಿಲ್ಲ. ಮರಿಯಮ್ಮನಹಳ್ಳಿ ತಾಂಡದಲ್ಲಿ ೯ ಜನರು ಸರ್ಕಾರಿ ನೌಕರಿಯಲ್ಲಿ ಇದ್ದಾರೆ. ಇಬ್ಬರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದಾರೆ. ಅರಣ್ಯ ಇಲಾಖೆಯಲ್ಲಿ ಇಬ್ಬರು ಕಾವಲುಗಾರರಾಗಿದ್ದಾರೆ. ಭೂ ದಾಖಲಾತಿ ಇಲಾಖೆಯಲ್ಲಿ ಒಬ್ಬರು ಜವಾನರಾಗಿದ್ದಾರೆ. ಕಂದಾಯ ಇಲಾಖೆಯಲ್ಲಿ ಒಬ್ಬರು ಹಿರಿಯ ಸಹಾಯಕರಾಗಿದ್ದಾರೆ. ಮೂರು ಜನರು ಪೋಲಿಸ್ ಇಲಾಖೆಯಲ್ಲಿ ಪೋಲಿಸ್ ಪೇದೆಗಳಾಗಿದ್ದಾರೆ. ನಾಗಲಾಪುರ ತಾಂಡದಲ್ಲಿ ಒಬ್ಬರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದಾರೆ, ಒಬ್ಬರು ಪೋಲಿಸ್ ಪೇದೆಯಾಗಿದ್ದಾರೆ, ಒಬ್ಬರು ತಾಲ್ಲೂಕ್ ಪಂಚಾಯಿತಿ ಕಛೇರಿಯಲ್ಲಿ ಜವಾನರಾಗಿ ಕೆಲಸ ಮಾಡುತ್ತಿದ್ದಾರೆ. (ಈ ಮೂರು ಜನರು ಪ್ರಾಥಮಿಕ ಶಾಲಾ ಶಿಕ್ಷಕರೊಬ್ಬರ ಮಕ್ಕಳು). ಆರ್ಥಿಕ - ಸಾಮಾಜಿಕ ಪರಿಣಾಮ ಮತ್ತು ಆಧುನಿಕ ಉಪವೃತ್ತಿಗಳ ಪ್ರಭಾವ, ಅಧ್ಯಯನ ನಡೆಸಿದ ಎರಡು ತಾಂಡದ ಲಂಬಾಣಿಗಳ ಮೇಲೆ ನಿರ್ಲಕ್ಷಿಸಬಹುದಾದ ರೀತಿ ಇದೆ. ಏಕೆಂದರೆ ಅತ್ಯಂತ ಕಳಪೆ ಮಟ್ಟದಲ್ಲಿ ಶಾಲೆಯನ್ನು ತಾಂಡಗಳಲ್ಲಿ ನಡೆಸುತ್ತಿರುವುದು ಮತ್ತು ಲಂಬಾಣಿಗಳಲ್ಲಿ ಮಕ್ಕಳನ್ನು ಶಾಲೆಗೆ ಕಳುಹಿಸುವುದಕ್ಕೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳಿರುವುದರ ಪರಿಣಾಮದಿಂದ ಅತ್ಯಂತ ಕಡಿಮೆ ಸಂಖ್ಯೆಯ ಜನರು ಸರ್ಕಾರಿ ನೌಕರಿಗೆ ಹೋಗಿರುವುದು ತಿಳಿಯುತ್ತದೆ. ಧಾರವಾಡ, ಬೆಳಗಾವಿ ಮತ್ತು ಹಾವೇರಿ ಜಿಲ್ಲೆಯಲ್ಲಿ ಈ ಸಮುದಾಯಕ್ಕೆ ಸೇರಿದ ಕೆಲವರು ಉತ್ತಮ ಆಡಳಿತಾತ್ಮಕ ಹುದ್ದೆಗಳಲ್ಲಿ ಹಾಗೂ ರಾಜಕೀಯ ಸ್ಥಾನಗಳಲ್ಲಿ ಇದ್ದಾರೆ.

ಸರಕಾರಿ ಸೇವೆಯು ಜೀವನೋಪಾಯಕ್ಕೆ ಸುರಕ್ಷಿತ ಸಾಧನ ಮಾತ್ರವಾಗಿರದೆ ಅದನ್ನು ಅವಲಂಬಿಸುವವರ ಜೀವನ ಶೈಲಿಯಲ್ಲಿ ಮಹತ್ತರ ಮಾರ್ಪಾಡುಗಳನ್ನುಂಡುಮಾಡುವ ವಾಸ್ತವಿಕ ಶಕ್ತಿಯಾಗಿದೆ. ಇದು ಆರ್ಥಿಕತೆಯ ವೈವಿಧ್ಯಕ್ಕೆ ಅವಕಾಶಮಾಡಿಕೊಡುವ ಅಂಶವೂ ಆಗಿದೆ. ಸಾಗುವಳಿದಾರರ ಹಾಗೂ ಸಾಂಪ್ರದಾಯಿಕ ಕೌಟುಂಬಿಕ ಆರ್ಥಿಕ ವ್ಯವಸ್ಥೆಯಲ್ಲಿ ಮಕ್ಕಳು ಬೆಳೆಯುತ್ತಿರುವಾಗಲೇ ತಂದೆ ತಾಯಿಗಳ ಪಾರಂಪರಿಕ ವೃತ್ತಿಯನ್ನು ಕಲಿಯುತ್ತಾರೆ. ಇಲ್ಲವೆ ಪಟ್ಟಣ ಹಾಗೂ ನಗರ ಪ್ರದೇಶಗಳಲ್ಲಿ ಕೇಂದ್ರೀಕೃತವಾದ ಶೈಕ್ಷಣಿಕ ಸಂಸ್ಥೆಗಳಲ್ಲಿ ಆಧುನಿಕ ಆಡಳಿತಾತ್ಮಕ ಉದ್ಯೋಗಗಳನ್ನು ಅರಸಲು ತಕ್ಕುದಾದ ಔಪಚಾರಿಕ ಶಿಕ್ಷಣ ಹಾಗೂ ತರಬೇತಿಯನ್ನು ಪಡೆಯುತ್ತಾರೆ. ಉನ್ನತ ಶಿಕ್ಷಣಕ್ಕಾಗಿ ಗ್ರಾಮೀಣ ಪ್ರದೇಶಗಳಿಂದ ಬಂದ ವಿದ್ಯಾರ್ಥಿಗಳು ಹಳೆಯ ವಿಚಾರಗಳನ್ನು ತ್ಯಜಿಸಿ ಹೊಸ ವಿಷಯಗಳನ್ನು, ರೂಢಿಗಳನ್ನು ಹಾಗು ವರ್ತನೆಯ ಮಾದರಿಗಳನ್ನು ಕಲಿತುಕೊಳ್ಳುತ್ತಾರೆ. ಸರಕಾರಿ ಸೇವೆಯಲ್ಲಿ ತೊಡಗಿದ ವ್ಯಕ್ತಿ ತನಗೆ ವಹಿಸಿಕೊಡಲಾದ ಸಂಘಟನಾತ್ಮಕ ಕರ್ತವ್ಯ-ಹೊಣೆಗಾರಿಕೆಗಳನ್ನು ನಿಭಾಯಿಸಬೇಕಾಗುತ್ತದೆ. ಆಧುನಿಕ ಪರಿಣತಿ ವೃತ್ತಿಗಳಿಗೆ ಅನುಗುಣವಾದ ವೃತ್ತಿ ನೀತಿಗಳನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಈ ವೃತ್ತಿ ನೀತಿಯು ಕೆಲಸದ ಹೊಸ ರೂಢಿಗಳನ್ನು, ವೇಳೆ ಪ್ರಜ್ಞೆಯನ್ನು, ಊಟೋಪಚಾರ, ವೇಷಭೂಷಣ, ಮನರಂಜನೆ ಮತ್ತು ಮಾತನಾಡುವ ಶೈಲಿಗಳನ್ನು ಒಳಗೊಳ್ಳುತ್ತದೆ. ನಿಗದಿತ ಮತ್ತು ನಿಯಮಿತ ಆದಾಯಕ್ಕೆ ಅನುಗುಣವಾಗಿ ವೆಚ್ಚ,

ಮಾಡುವ ಕ್ರಮಬದ್ಧತೆಗೆ ಹೊಂದಿಕೊಳ್ಳಬೇಕಾಗುತ್ತದೆ. ಆದರೆ ಹವಾಮಾನದ ಅನಿಶ್ಚಿತ ಸ್ಥಿತಿಗತಿಗಳನ್ನು ಅವಲಂಬಿಸಿಕೊಂಡೇ ಬದುಕಬೇಕಾದ ರೈತಾಪಿ ಜನರ ಜೀವನಕ್ರಮು ಇದಕ್ಕಿಂತ ಭಿನ್ನವಾಗಿರುತ್ತದೆ. ಆದಕಾರಣ, ಸರಕಾರಿ ಸೇವೆಯಲ್ಲಿರುವ ಲಂಬಾಣಿಗಳ ಜೀವನ ಕ್ರಮ ಹಾಗೂ ಶೈಲಿಯು ಸಾಮಾನ್ಯ ಲಂಬಾಣಿಯ ಜೀವನಕ್ರಮ ಹಾಗೂ ಶೈಲಿಗಿಂತ ಭಿನ್ನವಾಗಿರುತ್ತದೆ. ಉನ್ನತ ಸರಕಾರಿ ಅಧಿಕಾರಿಯಾದ ಓರ್ವ ಲಂಬಾಣಿಯ ಜೀವನ ಶೈಲಿಯಲ್ಲಿ ಆದ ಬದಲಾವಣೆ, ಹೊಸದೊಂದು ರೀತಿಯ ಜೀವನಕ್ರಮಕ್ಕೆ ಆತನು ಹೊಂದಿಕೊಂಡ ರೀತಿನೀತಿಗಳನ್ನು ಹೇಗೆ ಸಾದರಪಡಿಸಿದರು ಎಂಬುದಕ್ಕೆ ದಾಖಲಾತಿಗಳಿವೆ. ಸರಕಾರಿ ಅಧಿಕಾರಿಯಾಗಿ ಆ ವ್ಯಕ್ತಿಯ ಬದುಕಿನ ರೀತಿನೀತಿಗಳು ಆತನ ಕುಟುಂಬದ ಇತರ ಸದಸ್ಯರಿಗಿಂತ ಭಿನ್ನವಾಗಿ ಆಧುನಿಕ ಜೀವನಕ್ರಮಕ್ಕೆ ಹೊಂದಿಕೊಂಡ ಬಗೆಯನ್ನು ನಿರೂಪಿಸುವ ವಿಶಿಷ್ಟ ನಿದರ್ಶನವಿದಾಗಿದೆ.

ಸರಕಾರಿ ಸೇವೆ ಅಥವಾ ಆಧುನಿಕ ವೃತ್ತಿಗಳು, ಆಧುನಿಕ ಜೀವನೋಪಾಯ ಮಾರ್ಗಗಳ ಅನುಸರಣೆಯು ನಗರ ಪ್ರದೇಶದ ವಾಸವನ್ನು ಅನಿವಾರ್ಯಗೊಳಿಸುತ್ತದೆ. ಅದೇನೇ ಇದ್ದರೂ, ನಗರವಾಸ ಮಾತ್ರವೇ ಅಂತಹ ವ್ಯಕ್ತಿಗಳ ಸಾಮಾಜಿಕ ಜೀವನವನ್ನು ಪರಿವರ್ತಿಸಲು ಸಾಕೆನಿಸದು. ನಗರದಲ್ಲಿ ಒಬ್ಬ ವ್ಯಕ್ತಿ ಏನನ್ನು ಮಾಡುತ್ತಾನೆ ಎಂಬುದು ಮಹತ್ವದ್ದಾಗಿದೆ. ಏಕೆಂದರೆ ನಗರವಾಸಿಗಳಾದ ಕೆಲವು ಲಂಬಾಣಿಗಳು ಸಾಮಾನ್ಯ ಶ್ರಮಿಕ ಕೆಲಸಗಾರರಾಗಿದ್ದು, ಆಧುನಿಕ ವೃತ್ತಿಗಳನ್ನು ಆಯ್ದುಕೊಳ್ಳುವಲ್ಲಿ ಸಮರ್ಥರಾಗಿಲ್ಲ. ಇಂತಹ ಬಡತನದಲ್ಲಿಯೇ ಇರುವ ಲಂಬಾಣಿಗಳ ಜೀವನ ಶೈಲಿಯು ಹಳ್ಳಿಗಾಡುಗಳಲ್ಲಿ ವಾಸಿಸುತ್ತಿರುವ ಲಂಬಾಣಿಗಳಂತೆಯೇ ಇದೆ.

### ಕೇಸ್ ಸ್ಟಡಿ

ಶ್ರೀ ಕುಮಾರಿ ನಾಯಕ ಎಂಬುವರು ಬೆಂಗಳೂರಿನಲ್ಲಿ ಕರ್ನಾಟಕ ಸರಕಾರದ ಸೇವೆಯಲ್ಲಿ ಮೊದಲ ದರ್ಜೆಯ ಅಧಿಕಾರಿಯಾಗಿ ಕೆಲಸಮಾಡುತ್ತಿದ್ದಾರೆ. ೪೮ ವರ್ಷದ ಹರೆಯದ ಅವರು ಬಳ್ಳಾರಿ ಜಿಲ್ಲೆಯ ದಕ್ಷಿಣ ವಲಯದಲ್ಲಿರುವ ಚಿಕ್ಕಜೋಗೆಹಳ್ಳಿ ಎಂಬ ತಾಂಡದಲ್ಲಿ ಜನಿಸಿದವರು. ಅವರಿಗೆ ಇಬ್ಬರು ಸಹೋದರರಿದ್ದಾರೆ - ಒಬ್ಬರು ಕೇಂದ್ರ ಅಬಕಾರಿ ಇಲಾಖೆಯಲ್ಲಿ ಸಹಾಯಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನೊಬ್ಬರು ವೈದ್ಯಕೀಯ ವೃತ್ತಿಯಲ್ಲಿದ್ದಾರೆ. ನಾಯಕರಿಗೆ ಐದು ಜನ ಸಹೋದರಿಯರಿದ್ದು ಅವರಲ್ಲಿ ಒಬ್ಬಾಕೆ ಮಾತ್ರವೇ ತಕ್ಕಮಟ್ಟಿಗಿನ ಪ್ರಾಥಮಿಕ ಶಿಕ್ಷಣ ಪಡೆದಿದ್ದಾರೆ.

ಬಡವಿದ್ಯಾರ್ಥಿಯಾಗಿದ್ದ ನಾಯಕರಿಗೆ ಆತನ ಕಾಲೇಜಿನ ಪ್ರಾಚಾರ್ಯರು ಒಂದಿಷ್ಟು ನೆರವು ನೀಡಿ ಪ್ರೋತ್ಸಾಹಿಸಿದರು. ವಿದ್ಯಾರ್ಥಿವೇತನ ಪಡೆದುಕೊಂಡ ನಾಯಕ ಅವರು ವಕೀಲನಾಗಬೇಕೆಂದು ಬಯಸಿದ್ದರು. ಆದರೆ ವಕೀಲಿ ವೃತ್ತಿಯಲ್ಲಿ ಯಶಸ್ಸು ಸಾಧಿಸಲು ಹಲವಾರು ವರ್ಷಗಳ ಶ್ರಮ ಹಾಗೂ ಹಣದ ಅಗತ್ಯವಿದ್ದುದರಿಂದ ಬಿ.ಎ. ಪದವಿ ಪಡೆದ ಕೂಡಲೇ ಸರಕಾರದ ಸೇವೆಯಲ್ಲಿ ಸೇರಿಕೊಂಡರು.

ನಾಯಕರ ಪತ್ನಿ ಹಿರಿಯೂರಿನ ಪ್ರಮುಖ ಲಂಬಾಣಿ ಕುಟುಂಬಕ್ಕೆ ಸೇರಿದವರಾಗಿದ್ದು ನೆರೆಯ ಜಿಲ್ಲೆಯ ಗ್ರಾಮದವರು. ಪ್ರೌಢ ಶಾಲೆಯವರೆಗಿನ ಶಿಕ್ಷಣ ಪಡೆದವರು. ಅವರ ಚಿಕ್ಕಪ್ಪ ವಿಧಾನಸಭೆಯ ಸದಸ್ಯರಾಗಿ ಎರಡು ಬಾರಿ ಆಯ್ಕೆಯಾಗಿದ್ದರು. ಶ್ರೀಮತಿ ನಾಯಕರ ಒಬ್ಬ ದಿವಂಗತ ಸಹೋದರನು ಪದವೀಧರನಾಗಿ ಆದಾಯ ತೆರಿಗೆ ಇಲಾಖೆಯಲ್ಲಿ ಉದ್ಯೋಗಿಯಾಗಿದ್ದನು. ನಾಯಕ ದಂಪತಿಗಳಿಗೆ ಐವರು ಮಕ್ಕಳಿದ್ದಾರೆ-ಮೂವರು ಪುತ್ರರು ಹಾಗೂ ಇಬ್ಬರು ಪುತ್ರಿಯರು. ಹಿರಿಯ ಪುತ್ರಿ ಬಿ.ಎ. ಅಂತಿಮ ತರಗತಿಯಲ್ಲಿ ಓದುತ್ತಿದ್ದಳು.

ಇನ್ನೊಬ್ಬಳು ಹತ್ತನೇ ತರಗತಿಯಲ್ಲಿದ್ದಳು. ಪುತ್ರರಲ್ಲಿ ಮೊದಲನೆಯವನು ಪಿ.ಯು.ಸಿ ಯಲ್ಲಿ, ಎರಡನೆಯವನು ಎಸ್.ಎಸ್.ಎಲ್.ಸಿ. ಹಾಗೂ ಮೂರನೆಯವನು ಐದನೆಯ ತರಗತಿಯಲ್ಲಿ ಓದುತ್ತಿದ್ದನು.

ನಾಯಕರು ನಗರವಾಸಿಯಾದ್ದರಿಂದ ತಮ್ಮ ಸಮೀಪದ ಸಂಬಂಧಿಕರ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ನೆರವಾಗುತ್ತಿದ್ದರು. ಶ್ರೀಮತಿ ನಾಯಕರು ಸಹೋದರರನ ಮಗನನ್ನು ಮನೆಯಲ್ಲಿಟ್ಟುಕೊಂಡು ಶಿಕ್ಷಣ ಕೊಡಿಸಿ ವೈದ್ಯಕೀಯ ವೃತ್ತಿಗೆ ತೊಡಗಿಸಿದ್ದರು. ತಮ್ಮ ಪುತ್ರಿಯನ್ನು ಆತನಿಗೆ ಕೊಟ್ಟು ವಿವಾಹ ಮಾಡಬೇಕೆಂದು ನಾಯಕರು ಯೋಚಿಸುತ್ತಿದ್ದರು. ನಾಯಕರ ಸಹೋದರಿಯ ಮಗ ಹಾಗೂ ಶ್ರೀಮತಿ ನಾಯಕರ ಸಹೋದರಿಯ ಮಗ ಇವರ ಮನೆಯಲ್ಲಿ ಪಿ.ಯು.ಸಿ ಕಲಿಯುತ್ತಿದ್ದರು.

ನಾಯಕರು ೩,೯೦,೦೦೦ ರೂ. ಮೌಲ್ಯದ ಸುಸಜ್ಜಿತ ಆರ್.ಸಿ.ಸಿ.ಮನೆ ಕಟ್ಟಿಕೊಂಡಿದ್ದಾರೆ. ಅವರ ಜೀವನ ಶೈಲಿಯು ಯಾವುದೇ ಇತರ ಉನ್ನತ ಜಾತಿಯ ಅಧಿಕಾರಿಯ ಜೀವನ ಕ್ರಮದ ರೀತಿಯಂತೆ ಇದೆ. ಶಿಕ್ಷಣ, ಸರಕಾರಿ ಸೇವೆ ಹಾಗೂ ಲಂಬಾಣೇತರ ಸಹೋದ್ಯೋಗಿಗಳೊಡನೆ ನಿಕಟ ಸಂಪರ್ಕದ ಪ್ರಭಾವ, ಪರಿಣಾಮ ಅವರ ಜೀವನ ಶೈಲಿಯ ಮೇಲೆ ಗಾಢವಾದ ಪ್ರಭಾವ ಬೀರಿದೆ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ನಾಯಕರು ರಾಜಕೀಯದಲ್ಲಿಯೂ ಆಸಕ್ತಿಯನ್ನು ಹೊಂದಿದ್ದರು. (೧೯೯೯ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತೀಯ ಬಂಜಾರ ಸಮಾವೇಶದಲ್ಲಿ ಅವರು ಪಾಲುಗೊಂಡಿದ್ದರು) ತಮ್ಮ ಸಮುದಾಯವು ಸೇರ್ಪಡೆಯಾಗಿದ್ದ ಹಿಂದುಳಿದ ವರ್ಗಗಳ ಹಕ್ಕುಗಳನ್ನು ಪಡೆಯಲು ಅವರು ಹೋರಾಟ ಮಾಡಿದರು. ಒಬ್ಬ ಲಂಬಾಣಿ ಸ್ನೇಹಿತ ಸಚಿವ ಪದವಿ ಪಡೆಯುವಲ್ಲಿ ಅವರ ಕೊಡುಗೆಯೂ ಇದೆ.

ನಾಯಕರು ಶಿರಡಿಯ ಸಾಯಿಬಾಬಾನ ಭಕ್ತರು. ತಿರುಪತಿಯ ವೆಂಕಟರಮಣಸ್ವಾಮಿ ಅವರ ಆರಾಧ್ಯ ದೈವ. ಕನಿಷ್ಠ ಎರಡು ವರ್ಷಗಳಿಗೊಮ್ಮೆ ನಾಯಕರು ತಿರುಪತಿಗೆ ಹೋಗಿ ಬರುತ್ತಾರೆ.

ಈ ಪರಿಶೋಧನಾತ್ಮಕ (ಕೇಸ್ ಸ್ಟಡಿ) ಅಧ್ಯಯನವು ಅನಕ್ಷರರಾಗಿ ಶಿಕ್ಷಣ, ಸರಕಾರಿ ಸೇವೆಗಳ ಮೂಲಕ ಮುಂದುವರೆದ ಜನರೊಂದಿಗೆ ಏರ್ಪಡುವ ಸಂಪರ್ಕಗಳಿಂದಾಗುವ ಉತ್ತಮ ಜೀವನಮಟ್ಟ, ಕಿರಿಯ ಪೀಳಿಗೆಗೆ ಉನ್ನತ ಶಿಕ್ಷಣದ ಅವಕಾಶಗಳು, ಬದಲಾದ ಜೀವನಶೈಲಿ, ವಿಶಾಲ ಜಾಗತಿಕ ದೃಷ್ಟಿಕೋನ ಹಾಗೂ ರಾಷ್ಟ್ರೀಯ ಧ್ಯೇಯೋದ್ದೇಶ-ಗುರಿಗಳಲ್ಲಿ ಪಾಲುಗೊಳ್ಳುವಿಕೆ ಮೊದಲಾದ ಪ್ರಭಾವ-ಪರಿಣಾಮಗಳನ್ನು ನಿದರ್ಶಿಸುತ್ತದೆ.

### ಲಂಬಾಣಿಗಳ ಸಾಮಾಜಿಕ - ಆರ್ಥಿಕ ಸ್ಥಿತಿಗಳನ್ನು ಸುಧಾರಿಸಲು ಸರಕಾರದ ಕ್ರಮಗಳು

ಲಂಬಾಣಿ ಸಮುದಾಯವು ಅನುದ್ದೇಶಿತ ಬದಲಾವಣೆಗಳನ್ನು ಅನುಭವಿಸಿದೆ. ಈ ಬದಲಾವಣೆಗಳು ಯೋಜಿತ ಉದ್ದೇಶದ ಕಾರ್ಯಕ್ರಮಗಳ ಮೂಲಕ ನಡೆದವುಗಳಲ್ಲ ಎಂಬ ಅರ್ಥದಲ್ಲಿ ಇವುಗಳನ್ನು ಅನುದ್ದೇಶಿತ ಬದಲಾವಣೆಗಳೆಂದು ಹೇಳಲಾಗಿದೆ. ಈ ಪ್ರಕ್ರಿಯೆಯಲ್ಲಿ ಸಾಂಪ್ರದಾಯಿಕ ವೃತ್ತಿ ಕೈಬಿಟ್ಟು ಹೋಗಿದ್ದರಿಂದ ಬುಡಕಟ್ಟು ಸಮುದಾಯವು ತನಗೆ ಸರಿಹೊಂದುವ ಪರ್ಯಾಯ ಆರ್ಥಿಕತೆಯನ್ನು ಅನುಸರಣೆ ಮಾಡುವಲ್ಲಿ ರೈತಾಪಿಕರಣದತ್ತ ಆದ ಪರಿವರ್ತನೆ ಹಾಗೂ ಬದಲಾವಣೆಯ ಈ ಪ್ರಕ್ರಿಯೆಗಳಲ್ಲಿ ಕಾನೂನು

ಬಾಹಿರ ಸಾರಾಯಿ ಉತ್ಪಾದನೆ, ವೇಶ್ಯಾವೃತ್ತಿ ಮೊದಲಾದ ದುಷ್ಟ ಹಾಗೂ ಅವನತಿಕಾರಕ ಬದಲಾವಣೆಗಳೂ ಕಂಡುಬಂದಿವೆ. ಇನ್ನೊಂದೆಡೆಗೆ, ವಸಾಹತು ಸರಕಾರದ ಬಿಗುವಿನ ಕ್ರಮಗಳು-ಲಂಬಾಣಿ ಬುಡಕಟ್ಟನ್ನು ಅಪರಾಧಿ ಬುಡಕಟ್ಟು ಎಂದು ಘೋಷಿಸಲಾದದ್ದು, ಆನಂತರದಲ್ಲಿ ಸ್ವತಂತ್ರಭಾರತ ಸರಕಾರವು ಅದನ್ನು ರದ್ದುಪಡಿಸಿದ್ದು, ಲಂಬಾಣಿ ಸಮುದಾಯಕ್ಕೆ ಮಾರಕಪ್ರಾಯವಾಗುವಂತಹ ಅರಣ್ಯ ಸಂರಕ್ಷಣಾ ನೀತಿ, ಮಾದಕ ವಸ್ತುಗಳ ಉತ್ಪಾದನೆ, ಮಾರಾಟ, ಸೇವನೆಯನ್ನು ಪ್ರತಿಬಂಧಿಸಿದ್ದು- ಇವೇ ಮೊದಲಾದ ಕ್ರಮಗಳು ಲಂಬಾಣಿಗರ ಜೀವನಕ್ರಮವನ್ನು ಕಾಡಿಸಿವೆ. ಈ ಎಲ್ಲ ಕ್ರಮಗಳು ತಾತ್ವಿಕ ನಿಲುವುಗಳಿಗೆ ಅನುಗುಣವಾಗಿ ಕೈಕೊಳ್ಳಲಾದವುಗಳು. ಲಂಬಾಣಿ ಸಮುದಾಯದ ಮೇಲೆ ಇವುಗಳಿಂದ ಕೆಲವು ಅಹಿತಕಾರಕ ಪರಿಣಾಮಗಳಾಗಿದ್ದರೆ, ಆ ಕ್ರಮಗಳು ಅಂತಹ ಯಾವುದೇ ಉದ್ದೇಶದಿಂದ ಮಾಡಿದವುಗಳಾಗಿರಲಿಲ್ಲ. ಆನಂತರದಲ್ಲಿ ಸರಕಾರ ಹಾಗೂ ಸರಕಾರೇತರ ನಿಯೋಗಗಳು, ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಪ್ರಜ್ಞಾಪೂರ್ವಕವಾಗಿ ಒಳ್ಳೆಯದಾಗುವುದನ್ನು ಉದ್ದೇಶಿಸಿ ರೂಪಿಸಲಾದ ಯೋಜಿತ ಕಾರ್ಯಕ್ರಮಗಳು. ಅವುಗಳು ಅಪೇಕ್ಷಿತ ಸಾಮಾಜಿಕ ಪರಿವರ್ತನೆಯನ್ನು ಉಂಟುಮಾಡುವಂತಹವುಗಳಾಗಿದ್ದು, ಪ್ರಯೋಜನಕಾರಿಯೂ ಆದಂತೆ, ಫಲಾನುಭವಿ ಸಮುದಾಯದ ಸರಂಚನೆ ಹಾಗೂ ಮೌಲ್ಯಗಳಿಂದಾಗಿ ಅಡಚಣೆಗಳನ್ನು ಒಡ್ಡಿರಬಹುದಾಗಿದೆ. ಉದ್ದೇಶಿತ ಬದಲಾವಣೆಗಳು ತಿಳುವಳಿಕೆಯನ್ನಾಧರಿಸಿ ಶಾಲೆಗಳು, ಸಮುದಾಯ ಅಭಿವೃದ್ಧಿ ಯೋಜನೆ, (ಸಮಾಜ ಕಲ್ಯಾಣ, ಅರಣ್ಯ ಹಾಗೂ ಸಾರ್ವಜನಿಕ ಆರೋಗ್ಯ ಇಲಾಖೆಗಳು), ಇತರೆ ಸರಕಾರಿ ಇಲಾಖೆಗಳು ಹಾಗೂ ಸುಧಾರಕರ ಪಾತ್ರ ಮೊದಲಾದ ನಿಯೋಗಗಳು ಲಂಬಾಣಿಗಳ ಸಾಮುದಾಯಿಕ ಜೀವನದ ಮೇಲೆ ಬೀರಿದ ಪ್ರಭಾವ-ಪರಿಣಾಮಗಳನ್ನು ಅಂದಾಜಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಶಾಲೆಗಳು

ಹೊಸಪೇಟೆ ತಾಲ್ಲೂಕು ಪಂಚಾಯಿತಿಯು ಮರಿಯಮ್ಮನಹಳ್ಳಿ ತಾಂಡದಲ್ಲಿ ೧೯೭೦ರ ದಶಕದಲ್ಲಿ ಒಂದು ಬಾಲವಾಡಿ ಶಾಲೆಯನ್ನು ಸ್ಥಾಪಿಸಿತು. ಈ ಶಾಲೆಯಲ್ಲಿ ಎರಡೂವರೆ ವರ್ಷದಿಂದ ಆರು ವರ್ಷಗಳ ವಯೋಮಿತಿಯ ಮಕ್ಕಳಿಗೆ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಕೂಡ ಏರ್ಪಡಿಸಲಾಯಿತು. ೧೯೯೯ರ ಜೂನ್ ತಿಂಗಳಿನಲ್ಲಿ ಶಾಲೆಯಲ್ಲಿ ೪೦ ಮಕ್ಕಳು ಪ್ರವೇಶ ಪಡೆದಿದ್ದರು.

ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳೆರಡರಲ್ಲೂ ೪ನೆಯ ತರಗತಿಯವರೆಗಿನ ಪ್ರಾಥಮಿಕ ಶಿಕ್ಷಣದ ಶಾಲೆಗಳಿವೆ. ೧೯೯೮-೯೯ರಲ್ಲಿ ಮರಿಯಮ್ಮನಹಳ್ಳಿ ಶಾಲೆಯಲ್ಲಿ (ಮರಿಯಮ್ಮನಹಳ್ಳಿ ತಾಂಡ ಹಾಗೂ ಬಹುಜಾತಿ ವರ್ಗದ ವಿದ್ಯಾರ್ಥಿಗಳು ಓದುತ್ತಿದ್ದ ಶಾಲೆ) ಮರಿಯಮ್ಮನಹಳ್ಳಿಯಲ್ಲಿ ೩೬ ಬಾಲಕರು ಹಾಗೂ ೨೦ ಬಾಲಕಿಯರು ಅಭ್ಯಸಿಸುತ್ತಿದ್ದರು. ಮಾಧ್ಯಮಿಕ ಶಾಲಾ ಶಿಕ್ಷಣಕ್ಕೆ ವಿದ್ಯಾರ್ಥಿಗಳು ಹಾಗೂ ಪ್ರೌಢಶಾಲೆ, ಪದವಿ ಪೂರ್ವ ಕಾಲೇಜು ಶಿಕ್ಷಣದ ನಂತರ ಬೇರೆ ಪಟ್ಟಣಗಳಿಗೆ ಹೋಗಬೇಕಿತ್ತು.[೬] ೧೯೯೮-೯೯ರಲ್ಲಿ ನಾಗಲಾಪುರ ಶಾಲೆಯಲ್ಲಿ ೧೯ ಬಾಲಕರು ಹಾಗೂ ೨೮ ಬಾಲಕಿಯರು ಕಲಿಯುತ್ತಿದ್ದು ಅವರಲ್ಲಿ ಕೇವಲ ೭ ಲಂಬಾಣಿ ವಿದ್ಯಾರ್ಥಿಗಳು ಪಾಸಾಗಿದ್ದರು. ನಾಗಲಾಪುರದಲ್ಲಿರುವ ಶಾಲೆಯು ಕೇವಲ ಲಂಬಾಣಿ ಮಕ್ಕಳಿಗೆ ಮಾತ್ರವೇ ಸಿಮೀತವಾಗಿಲ್ಲ. ಮಾಧ್ಯಮಿಕ ಶಾಲೆಯ ನಂತರ ಪ್ರೌಢ ಶಾಲಾ ಶಿಕ್ಷಣಕ್ಕಾಗಿ ನಾಗಲಾಪುರ ತಾಂಡದ ಮಕ್ಕಳು ಬೇರೆ ಗ್ರಾಮಗಳಿಗೆ ಹೋಗುತ್ತಾರೆ. ಶಾಲೆ ಹಾಗು ಕಾಲೇಜು ಶಿಕ್ಷಣ ಪಡೆದ ಕೆಲವು ವಿದ್ಯಾರ್ಥಿಗಳು ಸ್ಥಿತಿವಂತ ಕುಟುಂಬದವರಾಗಿದ್ದರು. ಶಾಲೆಯಲ್ಲಿಯ ಕಳಪೆ ಸಾಧನೆ ಹಾಗೂ ಶಿಕ್ಷಣದ ಬಗೆಗೆ ಲಂಬಾಣಿಗಳ ತಾತ್ಸಾರದ ಮನೋಭಾವ ಮೊದಲಾದ ಅಂಶಗಳನ್ನು ಮರಿಯಮ್ಮನಹಳ್ಳಿ ಮತ್ತು ನಾಗಲಾಪುರದ ಲಂಬಾಣಿಗಳ ಸಾಕ್ಷರತೆಯ ಪ್ರಮಾಣವನ್ನು ವಿವರಿಸುವ ಕೋಷ್ಟಕ ೨.೧೩ರ ಮೂಲಕ ತಿಳಿಯಬಹುದಾಗಿದೆ.

---

*೬. ೧೯೯೭ರಲ್ಲಿ ಮರಿಯಮ್ಮನಹಳ್ಳಿಯಲ್ಲಿ ಪದವಿ ಪೂರ್ವ ಕಾಲೇಜು ಆರಂಭಗೊಂಡಿದೆ.*

# ಕೋಷ್ಟಕ ೨.೧೩

**ಮರಿಯಮ್ಮನಹಳ್ಳಿ (೧೯೯೮-೯೯) ಮತ್ತು ನಾಗಲಾಪುರ (೧೯೯೮-೯೯) ತಾಂಡಗಳ ಸಾಕ್ಷರರ ಸಂಖ್ಯೆ (ವಯೋಗುಂಪನ್ನು ಆಧರಿಸಿದಂತೆ)**

| ವಯೋ ಗುಂಪುಗಳು | ಮರಿಯಮ್ಮನಹಳ್ಳಿ | | | | | | ನಾಗಲಾಪುರ | | | | | |
|---|---|---|---|---|---|---|---|---|---|---|---|---|
| | ಪುರುಷರು | | ಮಹಿಳೆಯರು | | ಒಟ್ಟು | | ಪುರುಷರು | | ಮಹಿಳೆಯರು | | ಒಟ್ಟು | |
| | ಒಟ್ಟು ಜನ ಸಂಖ್ಯೆ | ಸಾಕ್ಷರರು | ಒಟ್ಟು ಜನ ಸಂಖ್ಯೆ | ಸಾಕ್ಷರರು | ಒಟ್ಟು ಜನ ಸಂಖ್ಯೆ | ಸಾಕ್ಷರರು | ಒಟ್ಟು ಜನ ಸಂಖ್ಯೆ | ಸಾಕ್ಷರರು | ಒಟ್ಟು ಜನ ಸಂಖ್ಯೆ | ಸಾಕ್ಷರರು | ಒಟ್ಟು ಜನ ಸಂಖ್ಯೆ | ಸಾಕ್ಷರರು |
| ೦-೪ | ೬೩ | - | ೬೪ | - | ೧೨೭ | - | ೩೮ | - | ೩೯ | - | ೭೭ | - |
| ೫-೧೪ | ೯೯ | ೩೬ | ೭೬ | ೨೦ | ೧೭೫ | ೫೬ | ೮೮ | ೨೧ | ೯೬ | ೨೮ | ೧೮೪ | ೪೯ |
| ೧೫-೨೪ | ೪೭ | ೩ | ೩೪ | - | ೮೧ | ೩ | ೪೦ | ೮ | ೪೨ | ೨ | ೮೨ | ೧೦ |
| ೨೫-೩೪ | ೩೬ | ೪ | ೪೬ | - | ೮೨ | ೪ | ೩೪ | ೭ | ೩೫ | ೧ | ೬೯ | ೮ |
| ೩೫-೪೪ | ೩೪ | ೨ | ೨೮ | - | ೬೨ | ೨ | ೩೨ | ೪ | ೩೧ | - | ೬೩ | ೧ |
| ೪೫-೫೪ | ೨೭ | ೪ | ೧೮ | - | ೪೫ | ೪ | ೨೮ | ೩ | ೧೭ | - | ೪೫ | ೩ |
| ೫೫-೫೯ | ೫ | ೪ | ೧೦ | - | ೧೫ | ೪ | ೫ | ೧ | ೧೧ | - | ೧೬ | ೧ |
| ೬೦ ಹಾಗೂ ಅಧಿಕ | ೧೨ | ೧ | ೧೧ | - | ೨೩ | ೧ | ೧೧ | - | ೧೮ | - | ೨೯ | - |
| ಒಟ್ಟು | ೩೨೩ | ೫೪ | ೨೮೭ | ೨೦ | ೬೧೧ | ೨೪ | ೨೭೬ | ೪೪ | ೨೮೬ | ೩೧ | ೫೬೫ | ೭೨ |
| | | | | | (ಶೇಕಡಾ ೭೦.೧೧) | | | | | | (ಶೇಕಡಾ ೧೩.೨೭) | |

ವ್ಯಕ್ತಿಗಳನ್ನು ಸಾಕ್ಷರರು ಎನ್ನಬೇಕಾದರೆ ಕನಿಷ್ಠ ಅರ್ಹತೆಯಾಗಿ ಅವರಿಗೆ ತಮ್ಮ ಹೆಸರನ್ನು ಓದುವ ಹಾಗೂ ಬರೆಯುವ ಸಾಮರ್ಥ್ಯ ವಿರಬೇಕು. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಎಲ್ಲ ವಯೋಮಾನದ ಜನರಲ್ಲಿಯ ಸಾಕ್ಷರತೆಯು ಶೇಕಡಾವಾರು ಪ್ರಮಾಣಗಳು ಕ್ರಮವಾಗಿ ೧೨.೧೧ ಹಾಗೂ ೧೩.೨೭ ಇವೆ. ಈ ಪ್ರಮಾಣಗಳು ೧೯೯೧ರ ಜನಗಣತಿಯ ಭಾರತದ ಸಾಕ್ಷರತಾ ಶೇಕಡಾವಾರು ಪ್ರಮಾಣಕ್ಕಿಂತ ಅರ್ಧದಷ್ಟು ಕಡಿಮೆಯಿದೆ. ಲಂಬಾಣಿಗಳಲ್ಲಿ ಹಿರಿಯ ವಯೋಮಾನದ ಜನರು ನಿರಕ್ಷರಿಗಳು. ಆದ್ದರಿಂದ ಒಟ್ಟಾರೆ ಸಾಕ್ಷರತೆಯ ಪ್ರಮಾಣವು ಇಳಿಕೆಯಾಗಿದೆ. ಬಳ್ಳಾರಿ ಜಿಲ್ಲಾ ಶಾಲಾ ಅಭಿವೃದ್ಧಿ ಮಂಡಳಿಯು ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳಲ್ಲಿ ಕ್ರಮವಾಗಿ ೧೯೪೯ ಹಾಗೂ ೧೯೫೮ರಲ್ಲಿ ಶಾಲೆಗಳನ್ನು ಆರಂಭಿಸಿತು. ೧೯೬೬ರಲ್ಲಿ ಶಾಲಾ ಮಂಡಳಿಯನ್ನು ರಾಜ್ಯಸರಕಾರವು ತನ್ನ ನೇರ ಆಡಳಿತಕ್ಕೊಳಪಡಿಸಿಕೊಂಡಿತು. ಇತರ ಎಲ್ಲ ಸಮುದಾಯಗಳಲ್ಲಿ ಸಾಮಾನ್ಯವಾಗಿ ಕಾಣ ಬರುವಂತೆಯೇ ಲಂಬಾಣಿಗಳ ಸಮುದಾಯದಲ್ಲಿಯೂ ಎಲ್ಲಾ ವಯೋಮಾನದವರಲ್ಲಿ ಮಹಿಳೆಯರು ಪುರುಷರಿಗಿಂತ ಸಾಕ್ಷರತೆಯಲ್ಲಿ ಹಿಂದೆ ಇರುವುದನ್ನು ಕೋಷ್ಟಕ ೨.೧೩ ಸೂಚಿಸುತ್ತದೆ.

ನಾಗಲಾಪುರ ತಾಂಡದಲ್ಲಿ ೬-೧೪ರ ವಯೋಮಾನದಲ್ಲಿ (೨೧ ಬಾಲಕರು ಹಾಗೂ ೨೮ ಬಾಲಕಿಯರು)ಮಾತ್ರ ಸೋಜಿಗ ಸಂಗತಿಯಂತೆ ತೋರುತ್ತದೆ. ಕೂಲಿ ದುಡಿಮೆಯಲ್ಲಿ ತೊಡಗಿದ ನಾಗಲಾಪುರ ತಾಂಡದ ಜನರು ಬಾಲಕರನ್ನು ಶಾಲೆಗೆ ಬದಲಾಗಿ ದುಡಿಮೆಯಲ್ಲಿ ತೊಡಗಿಸಿದ್ದೇ ಇದಕ್ಕೆ ಕಾರಣವಾಗಿತ್ತು.

೧೯೬೭ರವರೆಗೆ ಮರಿಯಮ್ಮನಹಳ್ಳಿ ತಾಂಡದಲ್ಲಿ ಪ್ರಾಥಮಿಕ ಶಿಕ್ಷಣದ ಹಂತಕ್ಕಿಂತ ಹೆಚ್ಚಿನ ಶಿಕ್ಷಣ ಪಡೆದವರು ಯಾರೂ ಇರಲಿಲ್ಲ ವಾದ್ದರಿಂದ ಆಧುನಿಕ ವೃತ್ತಿಗಳಿಗೆ ಅವರು ಅನರ್ಹರಾದರು. ೧೯೭೧ರ ಅಂಕಿಸಂಖ್ಯೆಗಳ ಪ್ರಕಾರ ನಾಗಲಾಪುರ ತಾಂಡದ ಒಬ್ಬ ವಿದ್ಯಾರ್ಥಿ ಪಿ.ಯು.ಸಿ ವರೆಗೆ ತಲುಪಿದ್ದನು. ಆದರೆ ಪರೀಕ್ಷೆಯಲ್ಲಿ ಅನುತ್ತೀರ್ಣನಾದ್ದರಿಂದ ಆತನು ಶಿಕ್ಷಣವನ್ನು ಅಲ್ಲಿಗೇ ನಿಲ್ಲಿಸಿದನು. ಒಬ್ಬ ಎಸ್.ಎಸ್.ಎಲ್.ಸಿ. ವರೆಗೆ ಓದಿ ಶಿಕ್ಷಕರ ತರಬೇತಿ ಕೋರ್ಸನ್ನು ಪಾಸುಮಾಡಿ ಪ್ರಾಥಮಿಕ ಶಾಲಾ ಶಿಕ್ಷಕನಾದನು. ನಾಗಲಾಪುರ ತಾಂಡದ ಐದು ಜನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಹೊಸಪೇಟೆಗಳಲ್ಲಿ ಹೈಸ್ಕೂಲು ಶಿಕ್ಷಣ ಪಡೆಯುತ್ತಿದ್ದರು. ನಾಗಲಾಪುರದಲ್ಲಿಯ ಇತರ ಎಲ್ಲ ಸಾಕ್ಷರರು ಕೇವಲ ಪ್ರಾಥಮಿಕ ಶಿಕ್ಷಣದ ಹಂತವನ್ನು ಮುಗಿಸಿದ್ದರು. ಒಟ್ಟಾರೆ ನಾಗಲಾಪುರ ತಾಂಡದಲ್ಲಿ ಶಿಕ್ಷಣವು ಸರಕಾರಿ ಸೇವೆಯಲ್ಲಿ ಸೇರಲು ಕೆಲವರಿಗಾದರೂ ಅವಕಾಶ ಕಲ್ಪಿಸಿಕೊಟ್ಟಿತು.

ಶಾಲೆಗೆ ಹೋಗಬೇಕಾದ ೬-೧೪ ವಯೋಗುಂಪಿನ ಮಕ್ಕಳು ಶಾಲೆಗೆ ದಾಖಲಾಗುವ ಪ್ರಮಾಣವು ತೀರ ಕಡಿಮೆಯಿದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಈ ವಯೋಮಾನವು ಶೇಕಡಾ ೩೨ ಹಾಗೂ ನಾಗಲಾಪುರ ತಾಂಡದಲ್ಲಿ ಶೇಕಡಾ ೨೦.೬೬ ರಷ್ಟು ಮಕ್ಕಳು ಮಾತ್ರವೇ ಶಾಲೆಯಲ್ಲಿ ದಾಖಲಾಗುತ್ತಿದ್ದಾರೆ. ಮುಂದುವರೆದ ಸಮುದಾಯಗಳ ಮಕ್ಕಳ ದಾಖಲಾತಿ ಪ್ರಮಾಣವು ಉತ್ತಮ ಪಟ್ಟಣಕೇಂದ್ರಗಳಲ್ಲಿ ಶೇಕಡಾ ೯೨ರವರೆಗಿದೆ. ಸ್ಥಳೀಯವಾಗಿ ೪ನೆಯ ತರಗತಿಯ ನಂತರದ ಶೈಕ್ಷಣಿಕ ಅವಕಾಶಗಳ ಕೊರತೆ, ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರ ಅದಕ್ಷತೆ, ತಮ್ಮ ಮಕ್ಕಳ ಶಿಕ್ಷಣದ ಬಗೆಗಿನ ಪೋಷಕರ ನಿರ್ಲಕ್ಷ್ಯ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವ ಬದಲು ದುಡಿಮೆಗೆ ಕಳುಹಿಸುವ ಪ್ರವೃತ್ತಿ ಮೊದಲಾದವುಗಳು ಲಂಬಾಣಿಗಳಲ್ಲಿಯ ಸಾಕ್ಷರತೆಯ ಪ್ರಮಾಣ ತೀರ ಕಡಿಮೆ ಇರುವುದಕ್ಕೆ ಪ್ರಮುಖ ಕಾರಣಗಳಾಗಿವೆ. ನಾಲ್ಕನೆಯ ತರಗತಿಯವರೆಗೆ ಓದಿದ ಮಕ್ಕಳು ಅನಂತರದಲ್ಲಿ ಶಾಲೆ ಬಿಡಲು ಸ್ಥಳೀಯ ಶೈಕ್ಷಣಿಕ ಸೌಲಭ್ಯಗಳ ಕೊರತೆ ಕಾರಣವಾಗಿದೆ. ಪಟ್ಟಣ-ನಗರಗಳಿಗೆ ಮಕ್ಕಳನ್ನು ಶಾಲೆಗೆ ಕಳುಹಿಸಲು ಆರ್ಥಿಕ ಸಾಮರ್ಥ್ಯವಿಲ್ಲದಿರುವುದು ಹಾಗೂ ಆ ಬಗೆಗಿನ ಜವಾಬುದಾರಿಯುತ ಒತ್ತಾಸೆ ಇಲ್ಲದಿರುವುದು ಕಾರಣವಾಗಿದೆ. ಶಾಲೆಯಲ್ಲಿ ದಾಖಲಾದ ಅನೇಕ ವಿದ್ಯಾರ್ಥಿಗಳು ಶಾಲೆಗೆ ಹೋಗ ದಿರುವುದಕ್ಕೆ ತಂದೆ-ತಾಯಿಗಳ ಮೇಲ್ವಿಚಾರಣೆಯ ಕೊರತೆ ಕಾರಣವಾಗಿದೆ. ಹೀಗಾಗಿ ಶಾಲೆಗಳನ್ನು ನಡೆಸುವಲ್ಲಿ ತೊಡಗಿಸಲಾಗುವ ಸಾರ್ವಜನಿಕ ಹಣಕ್ಕೆ ತಕ್ಕ ಪ್ರತಿಫಲ ಸಿಗದಂತಾಗುತ್ತದೆ. ಒಟ್ಟಾರೆ ಶಾಲೆಗೆ ಹೋಗುವ ಮಕ್ಕಳಲ್ಲಿ ಕೇವಲ ಶೇಕಡಾ ೨೦ರಷ್ಟು ಮಾತ್ರವೇ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಾರೆ.

ಪ್ರಾಥಮಿಕ ಶಾಲೆಗಳಲ್ಲಿಯ ಬೋಧನಾ ಮಾಧ್ಯಮದ ಸಮಸ್ಯೆ ಲಂಬಾಣಿಗಳ ಶಿಕ್ಷಣದಲ್ಲಿ ಹೆಚ್ಚಿನ ತೊಂದರೆಯನ್ನುಂಟುಮಾಡಿದ ಅಂಶವಾಗಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಬೋಧನಾ ಮಾಧ್ಯಮವಾಗಿರುವ ಕನ್ನಡ ಭಾಷೆಯು ೬- ೯ ವಯೋಗುಂಪಿನ ಲಂಬಾಣಿ ಮಕ್ಕಳಿಗೆ ತಿಳಿಯದು. ಲಂಬಾಣಿ ಸಮುದಾಯದಲ್ಲಿ ಮನೆಗಳಲ್ಲಿ ಹೆಚ್ಚಾಗಿ ಮಾತನಾಡುವ ಭಾಷೆ ಬಂಜಾರಾ ಆಗಿರುವುದರಿಂದ ಹಾಗೂ ಆ ವಯಸ್ಸಿನ ಮಕ್ಕಳು ಕನ್ನಡ ಮಾತನಾಡುವ ಸಮುದಾಯಗಳ ಜನರೊಂದಿಗೆ ಸಾಕಷ್ಟು ಸಂಪರ್ಕಗಳನ್ನು ಹೊಂದಿರುವುದಿಲ್ಲವಾದ್ದರಿಂದ ಪ್ರಾಥಮಿಕ ಶಾಲಾ ಶಿಕ್ಷಕರಿಗೂ ಈ ಮಕ್ಕಳಿಗೆ ಆರಂಭಿಕ ಹಂತದ ತರಗತಿಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಕಲಿಸುವುದು ದುಸ್ತರವಾಗಿದೆ. ಈ ಲಂಬಾಣಿ ಮಕ್ಕಳು ಅನಂತರದಲ್ಲಿ ತಾಂಡಗಳಿಂದ ಹೊರಹೋಗಿ ಜನರೊಂದಿಗೆ ಸಂಪರ್ಕಗಳನ್ನು ಹೊಂದುವಾಗ ಕನ್ನಡ ಮಾತನಾಡಲು ಕಲಿತುಕೊಳ್ಳುತ್ತಾರೆ. ಈ ಭಾಷಾ ಮಾಧ್ಯಮದ ಸಮಸ್ಯೆಯನ್ನು ನೀಗಿಸುವ ಒಂದು ಪರಿಹಾರವೆಂದರೆ ಲಂಬಾಣಿ ತಾಂಡಗಳಲ್ಲಿಯ ಶಾಲೆಗಳಲ್ಲಿ ಆರಂಭಿಕ ಹಂತದ ತರಗತಿಗಳಲ್ಲಿ ಬೋಧಿಸಲು ಎರಡೂ ಭಾಷೆಗಳನ್ನು (ಬಂಜಾರಾ ಹಾಗೂ ಕನ್ನಡ) ಅನುಭವಿ ಲಂಬಾಣಿ ಶಿಕ್ಷಕರನ್ನು

ಆಯ್ಕೆಮಾಡಬೇಕು. ನಾಗಲಾಪುರ ತಾಂಡದ ಪ್ರಾಥಮಿಕ ಶಾಲೆಗೆ ಇಬ್ಬರು ಲಂಬಾಣಿ ಶಿಕ್ಷಕರನ್ನು ಒಬ್ಬರನಂತರ ಮತ್ತೊಬ್ಬರಂತೆ ನೇಮಿಸಲಾಗಿದ್ದರೂ ಮಕ್ಕಳ ದಾಖಲಾತಿಯಲ್ಲಿ ಹೇಳಿಕೊಳ್ಳುವಂತಹ ಹೆಚ್ಚಳವಾಗಲಿಲ್ಲ. ಒಟ್ಟಾರೆ ದಾಖಲಾದ ಲಂಬಾಣಿ ಮಕ್ಕಳಲ್ಲಿ ಶೇಕಡಾ ೫೦ ರಿಂದ ೭೦ರಷ್ಟು ಮಕ್ಕಳು ಬಹುತೇಕ ಅನುಪಸ್ಥಿತರಿರುವುದು ಅವರ ಶೈಕ್ಷಣಿಕ ಸಾಧನೆಯನ್ನು ಸೂಚಿಸುತ್ತದೆ. ಪೋಷಕರು ತಮ್ಮ ಮಕ್ಕಳನ್ನು ನಿಯಮಿತವಾಗಿ ಶಾಲೆಗೆ ಕಳುಹಿಸುವುದಿಲ್ಲ ಎಂಬುದು ಶಿಕ್ಷಕರ ಆಕ್ಷೇಪಣೆಯಾಗಿದ್ದರೆ, ಶಿಕ್ಷಕರು ಸರಿಯಾಗಿ ಶಾಲೆಗೆ ಬರುವುದಿಲ್ಲ ಹಾಗೂ ನಿಷ್ಠೆಯಿಂದ ಬೋಧಿಸುವುದಿಲ್ಲ ಎಂಬುದಾಗಿ ಪೋಷಕರು ದೂರುತ್ತಾರೆ.

ಲಂಬಾಣಿಗಳಂತಹ ಹಿಂದುಳಿದ ಸಮುದಾಯದ ಮಕ್ಕಳಿಗೆ ಮನೆಯ ಅಭ್ಯಾಸ ಮಾಡಲು ಸೌಲಭ್ಯಗಳು ಇರುವುದಿಲ್ಲವಾದ್ದರಿಂದ ಸರಕಾರವು ಅಂತಹ ಮಕ್ಕಳಿಗಾಗಿ ವಸತಿ ಅಥವಾ ಆಶ್ರಮ (ರೆಸಿಡೆನ್ಸಿಯಲ್) ಶಾಲೆಗಳನ್ನು ಆರಂಭಿಸಿದೆ. ಹೊಸಪೇಟೆಯಲ್ಲಿ ಹಿಂದುಳಿದ ವರ್ಗಗಳ ಮಕ್ಕಳಿಗಾಗಿ ಸಮಾಜ ಕಲ್ಯಾಣ ಇಲಾಖೆಯು ಒಂದು ವಸತಿಗೃಹವನ್ನು ನಡೆಸುತ್ತಿದೆ. ಈ ವಸತಿಗೃಹದಲ್ಲಿ ಮಕ್ಕಳಿಗೆ ವಸತಿ, ಊಟ ಹಾಗೂ ಬೋಧನೆಯನ್ನು ಉಚಿತವಾಗಿ ನೀಡಲಾಗುತ್ತಿದೆ. ೧೯೯೮ರಲ್ಲಿ ಗ್ರಾಮ ಮಟ್ಟದ ಕೆಲಸಗಾರರು ಸಾಕಷ್ಟು ಮನವೊಲಿಸಿದರೂ ಮರಿಯಮ್ಮನಹಳ್ಳಿ ತಾಂಡದಲ್ಲಿ ಯಾರೊಬ್ಬರೂ ತಮ್ಮ ಮಕ್ಕಳನ್ನು ಈ ವಸತಿಗೆ ಕಳುಹಿಸಿರಲಿಲ್ಲ. ಆದರೆ ನಾಗಲಾಪುರ ತಾಂಡದಿಂದ ೧೯೯೭-೯೮ರಲ್ಲಿ ಈ ವಸತಿ ಸೌಲಭ್ಯಕ್ಕೆ ಐದು ಜನ ಮಕ್ಕಳನ್ನು ಕಳುಹಿಸಿದ್ದರು. ಈ ರೀತಿಯ ವಸತಿ ವ್ಯವಸ್ಥೆಯಲ್ಲಿ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲ ಎಂದು ಕೆಲವು ಲಂಬಾಣಿಗಳು ಆಕ್ಷೇಪಿಸುತ್ತಾರೆ.

ಸರಕಾರವು ಸಾಕಷ್ಟು ಕಳಕಳಿಯನ್ನು ಶಿಕ್ಷಣದ ಬಗ್ಗೆ ತೋರಿದ್ದರೂ ಸಾಕ್ಷರತಾ ಆಂದೋಲನದ ಕಾರ್ಯಕ್ರಮದ ಸಾಧನೆಗಳು ಅದಕ್ಕಾಗಿ ವ್ಯಯಿಸಿದ ವೆಚ್ಚದ ಲೆಕ್ಕಾಚಾರದಲ್ಲಿ ಸಾಧನೆಯು ತೀರ ಕಳಪೆಯಾಗಿದ್ದವು. ಸಾಂಪ್ರದಾಯಿಕ ಮನೋಭಾವ ಪ್ರವೃತ್ತಿಯಿಂದಾಗಿ ಸಾಕ್ಷರತಾ ಆಂದೋಲನದಲ್ಲಿ ಜನತೆಯ ಪಾಲುಗೊಳ್ಳುವಿಕೆ ಹೆಚ್ಚು ವ್ಯವಸ್ಥಿತವಾಗಿ ನಡೆಯಲಿಲ್ಲ. ಸಾರ್ವಜನಿಕರಲ್ಲಿ ಶಿಕ್ಷಣದ ಪಾತ್ರ ಮತ್ತು ಮಹತ್ವದ ಬಗೆಗಿನ ಅರಿವಿನ ಕೊರತೆ, ಶಿಕ್ಷಕ ಸಿಬ್ಬಂದಿಯಲ್ಲಿ ಈ ಆಂದೋಲನದ ಔಚಿತ್ಯದ ಕಲ್ಪನೆಯ ಕೊರತೆ, ತಮಗೆ ಕೊಡಮಾಡಲಾದ ಒಳ್ಳೆಯ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಲಾರದಂತೆ ಅವರನ್ನು ಅಸಹಾಯಕರನ್ನಾಗಿ ಮಾಡಿದ ಬಡತನ ಹಾಗೂ ಅಜ್ಞಾನದ ಸ್ಥಿತಿಗತಿಗಳು - ಈ ಶೈಕ್ಷಣಿಕ ಪ್ರಯತ್ನಗಳ ಕಳಪೆ ಸಾಧನೆಗೆ ಕಾರಣಾಂಶಗಳಾಗಿದ್ದವು. ಲಂಬಾಣಿಗಳ ಶೈಕ್ಷಣಿಕ ಹಿಂದುಳಿಯುವಿಕೆಯು ಅವರ ಆರ್ಥಿಕ ಹಾಗೂ ಸಾಮಾಜಿಕ ಸುಧಾರಣೆಯನ್ನು ತಡೆಗಟ್ಟಿವೆ. ಹಾಗೆಯೇ ಸಮುದಾಯದ ಸಾಮಾಜಿಕ - ಆರ್ಥಿಕ ಹಿನ್ನೆಲೆಯು ತಮಗೆ ಒದಗಿಸಲಾದ ಶೈಕ್ಷಣಿಕ ಸೌಲಭ್ಯಗಳನ್ನು ಪ್ರಯೋಜನಕಾರಿಯಾಗಿ ಬಳಸಿಕೊಳ್ಳುವ ಸಾಮರ್ಥ್ಯವನ್ನು ನೀಡಬೇಕು. ಅಂತಹ ಪ್ರೇರಣೆ ಒದಗಿ ಬಂದರೆ ಈ ವಿಷಚಕ್ರವು ಪೂರ್ಣಗೊಳ್ಳಲಾರದು.

## ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು

ಹೊಸಪೇಟೆ ತಾಲ್ಲೂಕಿನಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ೧೯೫೦ರ ದಶಕದಲ್ಲಿ ಆರಂಭಿಸಲಾಗಿದೆ. ೧೯೫೨ರಲ್ಲಿ ಕೆಲವು ಆಯ್ದ ಪ್ರದೇಶಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮವನ್ನು ಆರಂಭಿಸಿದ್ದಕ್ಕಿಂತ ೬ ವರ್ಷಗಳ ಕಾಲ ಹಂತ ಹಂತವಾಗಿ ಇಲ್ಲಿ ಆರಂಭಿಸಲಾಗಿತ್ತು. ೧೯೬೫ರಲ್ಲಿ ಈ ಕಾರ್ಯಕ್ರಮವು ಎರಡನೆಯ ಹಂತದಲ್ಲಿ ತೀವ್ರತರವಾದ ಕಾರ್ಯಚಟುವಟಿಕೆಯನ್ನು ಪ್ರಾರಂಭಿಸಿತು.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಪ್ರಮುಖ ಉದ್ದೇಶವು ಕೃಷಿ ಸಾಗುವಳಿಯ ಆಧುನೀಕರಣವಾಗಿದ್ದರೂ, ಈ ಪ್ರದೇಶದ ಲಂಬಾಣಿಗಳು ಕೃಷಿ ಸಾಗುವಳಿಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಲಿಲ್ಲ. ನೀರಾವರಿ ಸೌಲಭ್ಯಗಳಿಲ್ಲದ ಅವರ ಕೃಷಿ ಭೂಮಿಗಳು ಇನ್ನೂ ಕಳಪೆಗುಣಮಟ್ಟದವುಗಳಾಗಿವೆ. ಕೃಷಿಗೆ ತೊಡಗಿಸಬೇಕಾದ ಅವಶ್ಯಕ ಪ್ರಾರಂಭದ ಬಂಡವಾಳ ಸಂಪನ್ಮೂಲಗಳು ಲಂಬಾಣಿಗಳಲ್ಲಿ ಇಲ್ಲ. ಕೃಷಿ ಸಾಗುವಳಿಯ ಸುಧಾರಿತ ವಿಧಾನಗಳ ಬಗೆಗೆ ಲಂಬಾಣಿ ಕೃಷಿಕರಿಗೆ ಸಾಕಷ್ಟು ತಿಳುವಳಿಕೆಯಾಗಿದೆ. ಸುತ್ತ ಮುತ್ತಲಿನ ಗ್ರಾಮಗಳಲ್ಲಿಯ ಲಂಬಾಣೇತರ ಕೃಷಿಕರು ಅನುಸರಿಸುವ ಸುಧಾರಿತ ವಿಧಾನಗಳನ್ನು ಅವರು ಬಲ್ಲವರಾಗಿದ್ದರೂ ಮರಿಯಮ್ಮನಹಳ್ಳಿ ತಾಂಡದ ನಾಲ್ವರು ಕೃಷಿಕರು ಹಾಗೂ ನಾಗಲಾಪುರ ತಾಂಡದ ಇಬ್ಬರು ಕೃಷಿಕರು ಮಾತ್ರವೇ ಹೊಸ ವಿಧಾನಗಳನ್ನು ಅನುಸರಿಸಿದ್ದಾರೆ. ಸುಧಾರಿತ ತಳಿಯ ಬೀಜಗಳನ್ನು ಹಾಗೂ ಗೊಬ್ಬರಗಳನ್ನು ಅವರು ಬಳಸುತ್ತಿದ್ದಾರೆ. ಉಳಿದವರು ಹಳೆಯ ಜಾಡಿನಲ್ಲಿಯೇ ಕೃಷಿ ಸಾಗುವಳಿ ಮಾಡುತ್ತಿದ್ದು, ಸುಧಾರಿತ ತಳಿಯ ಬೀಜಗಳ ಹಾಗೂ ಗೊಬ್ಬರದ ಬಳಕೆಯಿಂದ ಇಳುವರಿ ಅಧಿಕವಾಗುತ್ತದೆ ಎಂಬುದು ಅವರಿಗೆ ತಿಳಿದಿದ್ದರೂ, ದೊಡ್ಡ ಮೊತ್ತದ ಬಂಡವಾಳದ ತೊಡಗಿಸಲು ಸಾಧ್ಯವಿಲ್ಲವಾದ್ದರಿಂದ ಅವರು ಹೊಸ ವಿಧಾನಗಳನ್ನು ಅನುಸರಿಸುತ್ತಿಲ್ಲ. ಆಡಳಿತ ಯಂತ್ರದಲ್ಲಿ ವಿಳಂಬ ನೀತಿ, ವಿಧಿವಿಧಾನಗಳ ಜಟಿಲತೆ, ಸರಕಾರಿ ನೆರವು ಪಡೆಯುವ ಬಗೆಗೆ ಅವರಿಗಿರುವ ಅಜ್ಞಾನ ಮೊದಲಾದವುಗಳು ಸರಕಾರಿ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವಲ್ಲಿಯ ಅಡ್ಡಿಆತಂಕಗಳಾಗಿವೆ.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಕೃಷಿ ಕ್ಷೇತ್ರ ವಿಸ್ತರಣಾ ಸಿಬ್ಬಂದಿ ವರ್ಗವು ಒಳಗೊಳ್ಳುವ ಕೃಷಿ ವಿಸ್ತರಣಾಧಿಕಾರಿ, ತೋಟಗಾರಿಕೆ ಅಧಿಕಾರಿ, ಹಾಗೂ ಗ್ರಾಮ ಮಟ್ಟದ ಕೆಲಸಗಾರ ಮೊದಲಾದವರ ಕರ್ತವ್ಯ, ಗ್ರಾಮೀಣ ಜನತೆಯನ್ನು ಸಂಪರ್ಕಿಸಿ ಸರಕಾರಿ ಕಾರ್ಯಕ್ರಮಗಳ ಪ್ರಯೋಜನಗಳನ್ನು ಅವರು ಪಡೆದುಕೊಳ್ಳಲು ಮುಂದಾಗುವಂತೆ ಪ್ರೇರೇಪಿಸುವುದಾಗಿದೆ. ಆದರೆ ಈ ಅಧಿಕಾರಿಗಳು ಲಂಬಾಣಿಗಳನ್ನು ಸಂಪರ್ಕಿಸುವುದು ಬಹಳ ಅಪರೂಪವಾದ್ದರಿಂದ ಲಂಬಾಣಿಗಳಿಗೆ ಈ ಕಾರ್ಯಕ್ರಮಗಳ ಬಗೆಗೆ ಸಮಗ್ರ ಅರಿವು ಇಲ್ಲವಾಗಿದೆ. ಹೊಸ ವಿಧಾನಗಳನ್ನು ಅನುಸರಿಸಬಲ್ಲ ಹಾಗೂ ತಮಗೆ ಲಂಚಕೊಡಲು ಸಮರ್ಥರಾದ ಕೇವಲ ಕೆಲವು ಸ್ಥಿತಿವಂತ ಲಂಬಾಣಿ ಸಾಗುವಳಿದಾರರನ್ನು ಮಾತ್ರವೇ ಈ ಅಧಿಕಾರಿಗಳು ಸಂಪರ್ಕಿಸುತ್ತಾರೆ.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಸಹಕಾರ ವಿಸ್ತರಣಾಧಿಕಾರಿಯ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯ ಮೂಲಕ ಸಹಕಾರಿ ಆಂದೋಲನದ ಪ್ರಗತಿ ಲಂಬಾಣಿಗಳ ವಿಷಯದಲ್ಲಿ ಸಾಕಷ್ಟಾಗಿಲ್ಲ. ಸ್ಥಿತಿವಂತ ಲಂಬಾಣೇತರ ಸಾಗುವಳಿದಾರರು ಕೃಷಿ ಸಹಕಾರಿ ಸಂಘಗಳಿಂದ ಹೆಚ್ಚಿನ ಲಾಭಗಳನ್ನು ಪಡೆದುಕೊಳ್ಳುತ್ತಾರೆ. ಗ್ರಾಮೀಣ ಋಣಭಾರದ ಸಮಸ್ಯೆಯನ್ನು ನೀಗಿಸಲು ಹಾಗೂ ರೈತರ ಕೃಷಿ ಸಾಲದ ಅಗತ್ಯಗಳನ್ನು ಪೂರೈಸಲೆಂದೇ ಸರಕಾರವು ಸಹಕಾರಿ ಸಂಘಗಳನ್ನು ಸ್ಥಾಪಿಸಲು ಉದ್ದೇಶಿಸಿದ್ದರೂ ಕೃಷಿ ಪತ್ತಿನ ಸಹಕಾರಿ ಸಂಘಗಳಲ್ಲಿ ಅನೇಕ ಲಂಬಾಣಿಗಳು ಸದಸ್ಯತ್ವವನ್ನು ಪಡೆದಿಲ್ಲ ಎಂಬುದು ಯೋಜನೆಗಳ ದಿವಾಳಿತನವನ್ನು ನಿದರ್ಶಿಸುತ್ತದೆ. ಈ ಸಂಘಗಳಲ್ಲಿ ನೀತಿ ನಿಷ್ಠೆಗಳಿಲ್ಲದ ಕಾರ್ಯದರ್ಶಿ ಹಾಗೂ ಆಡಳಿತ ಸಮಿತಿಯ ಸದಸ್ಯರು ಅಧಿಕಾರದಲ್ಲಿದ್ದಾರೆ. ೧೯೬೦ರಲ್ಲಿ ಸ್ಥಾಪನೆಯಾದ ಮರಿಯಮ್ಮನಹಳ್ಳಿ ಸಂಘವು ೧೯೯೯ರವರೆಗೂ ವಂಚಕ ಕಾರ್ಯದರ್ಶಿಗಳ ಕಪಿಮುಷ್ಠಿಯಲ್ಲಿ ನಲುಗಿ ಅಭಿವೃದ್ಧಿ ಹೊಂದಲೇ ಇಲ್ಲ. ಮುಂದುವರೆದ ಸಮುದಾಯಗಳನ್ನು ಮಾತ್ರ ಪ್ರತಿನಿಧಿಸುವ ಪಟ್ಟಭದ್ರ ಹಿತಾಸಕ್ತಿಗಳು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ದುರ್ಬಲರು ಹಾಗೂ ನಿರಕ್ಷರಸ್ಥರು ಮತ್ತು ಹಿಂದುಳಿದ ಸಮುದಾಯಗಳನ್ನು ಪ್ರತಿನಿಧಿಸುವವರ ಮಧ್ಯೆ ಸಂಘರ್ಷವಿದೆ. ಕೃಷಿ ಪತ್ತಿನ ಸಹಕಾರಿ ಸಂಘಗಳು ಕೇವಲ ಭೂಒಡೆತನವುಳ್ಳ ಸಾಗುವಳಿದಾರರಿಗೆ ಮಾತ್ರವೇ ಪ್ರಯೋಜನಕಾರಿಯಾಗಿವೆ. ಲಂಬಾಣಿಗಳಲ್ಲಿ ಭೂಒಡೆತನ ಹೊಂದದ

ಇರುವವರು ಅಧಿಕವಾದ್ದರಿಂದ ಈ ಸಂಘಗಳಿಂದ ಕೇವಲ ಕೆಲವರು ಮಾತ್ರವೇ ತಮ್ಮ ಸಾಲದ ಅಗತ್ಯಗಳನ್ನು ತೀರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಭೂರಹಿತ ಜನರಿಗೆ ನೆರವಾಗಬಲ್ಲ ಸೇವೆಗಳು ಮತ್ತು ಗ್ರಾಹಕ ಸಹಕಾರಿ ಸಂಘಗಳು ಗ್ರಾಮೀಣ ಪ್ರದೇಶಗಳಲ್ಲಿ ಆರಂಭಗೊಂಡಿಲ್ಲ.

ಸಹಕಾರಿ ಸಂಘಗಳ ಮಹತ್ವ ಹಾಗೂ ಅವುಗಳ ಸಂಪೂರ್ಣ ಪ್ರಯೋಜನ ಪಡೆದುಕೊಳ್ಳುವ ಬಗೆಯನ್ನು ಲಂಬಾಣಿಗಳಿಗೆ ಮನಗಾಣಿಸಿಕೊಡುವ ಅಗತ್ಯವಿದೆ. ಇಂತಹ ವ್ಯಾವಹಾರಿಕ ಪ್ರಜ್ಞೆಯನ್ನು ಅವರಲ್ಲಿ ಮೂಡಿಸುವುದು ಅವಶ್ಯವಿದೆ. ಸಹಕಾರಿ ವಿಸ್ತರಣಾ ಕಾರ್ಯದ ಉಸ್ತುವಾರಿ ಮಾಡುತ್ತಿರುವ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಸಿಬ್ಬಂದಿ ವರ್ಗ ಅಷ್ಟೊಂದು ಉತ್ಸುಕವಾಗಿಲ್ಲ. ಈ ಅಧಿಕಾರಿ ವರ್ಗವು ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದ್ದಾರೆ. ಆದರೆ ಈ ಪ್ರದೇಶದಲ್ಲಿ ಅಸಂಭವ ಎನಿಸಬಹುದಾದ ಚಮತ್ಕಾರವನ್ನು ಮಾಡಬಹುದು ಎಂಬುದು ಈ ಕೆಳಗೆ ನಿರೂಪಿಸಲಾದ ನಿವೇಶನ ಸಂಘವೊಂದರ ಸಾಧನೆಯ ಉದಾಹರಣೆಯಿಂದ ಸಾಬೀತಾಗುತ್ತದೆ. ಹೊಸಪೇಟೆ ತಾಲೂಕಿನ ಪರಿಶಿಷ್ಟ ಜಾತಿಗಳು ಹಾಗೂ ಇತರ ಹಿಂದುಳಿದ ವರ್ಗಗಳ ನಿವೇಶನ ಸಂಘವು ೧೯೭೧ರಲ್ಲಿ ಸ್ಥಾಪನೆಗೊಂಡಿತು. ತಾಲೂಕು ಪಂಚಾಯಿತಿಯ ಅಂಗವಾಗಿ, ಅತ್ಯಂತ ಬಡವರ್ಗಗಳ ಜನರು ಮಾಲಿಕತ್ವದ ಆಧಾರದ ಮೇಲೆ ಮನೆಗಳನ್ನು ಕಟ್ಟಿಕೊಳ್ಳಲು ಸಾಲದ ಸೌಲಭ್ಯ ನೀಡುವ ಉದ್ದೇಶವನ್ನು ಈ ಸಂಘವು ಹೊಂದಿತ್ತು. ಲಂಬಾಣಿಗಳು ಈ ಸಂಘದಲ್ಲಿ ತಲಾ ೧೦೦ ರೂಪಾಯಿಗಳ ಷೇರು ಬಂಡವಾಳ ತೊಡಗಿಸಿ ಸದಸ್ಯತ್ವ ಪಡೆದರು. ತಾಲೂಕು ಮಟ್ಟದ ಇಂತಹ ನಿವೇಶನ ಸಂಘಗಳಿಗೆ ನೆರವು ನೀಡುವ ಹಣಕಾಸು ಸಂಸ್ಥೆ ಎಂದರೆ, ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳ ಸಹಕಾರಿ ನಿವೇಶನ ಕಾರ್ಪೊರೇಷನ್. ಪ್ರತಿಯೊಂದು ಸಂಘಕ್ಕೆ ಇಂತಿಷ್ಟು ಮೊತ್ತದ ಸಾಲವನ್ನು ಈ ಸಂಸ್ಥೆ ಮುಂಗಡವಾಗಿ ನೀಡುತ್ತದೆ. ನಿವೇಶನ ಸಂಘವು ಈ ಹಣವನ್ನು ತನ್ನ ಸದಸ್ಯರಿಗೆ ಶೇಕಡಾ ೬ರಷ್ಟು ಬಡ್ಡಿದರದಲ್ಲಿ ಸಾಲವಾಗಿ ಹಂಚುತ್ತದೆ. ಪ್ರತಿಯೊಬ್ಬ ಸದಸ್ಯನಿಗೆ ನೀಡಲಾಗುವ ರೂ. ೨೦೦೦ ಮೊತ್ತವನ್ನು ಅಸಲು ಮತ್ತು ಬಡ್ಡಿಯ ಸಮೇತ ೨೦ ಸುಲಭ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗುತ್ತದೆ. ಈ ಸಂಘಗಳ ಬಂಡವಾಳ ವೃತ್ತಾಕಾರವಾಗಿ ಮರುಪಾವತಿಯಾದರೆ, ಹಳೆಯ ಸಾಲಗಳು ವಾರ್ಷಿಕ ಕಂತುಗಳ ರೂಪದಲ್ಲಿ ಸಂದಾಯವಾಗುತ್ತದೆ. ಹಾಗೂ ಅದೇ ಹಣವನ್ನು ಸಾಲಕ್ಕಾಗಿ ಕಾಯುತ್ತಿರುವ ಸದಸ್ಯರಿಗೆ ಹೊಸ ಸಾಲವಾಗಿ ನೀಡಲಾಗುತ್ತದೆ. ಆದ ಕಾರಣ ಹಳೆಯ ಸಾಲಗಾರರು ತಮ್ಮ ಸಾಲದ ಕಂತುಗಳನ್ನು ನಿಯಮಿತವಾಗಿ ಮರುಪಾವತಿ ಮಾಡದಿದ್ದರೆ ಇತರ ಸದಸ್ಯರಿಗೆ ನಿವೇಶನ ಸಾಲ ಸಿಗಲಾರದು.

ಇಂತಹ ಸಂಘಗಳ ಸದಸ್ಯರು ಸಾಮಾನ್ಯವಾಗಿ ಕಡುಬಡವರಾಗಿರುವುದರಿಂದ ಸಾಲದ ಮರುಪಾವತಿ ತೀರ ನಿರಾಶಾದಾಯಕವಾಗಿರುತ್ತದೆ. ಹಾಗಾಗಿ ಹೊಸ ಸಾಲಗಳನ್ನು ಮಂಜೂರು ಮಾಡುವಲ್ಲಿ ವಿಳಂಬವಾಗುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿಯ ಲಂಬಾಣಿಗಳು ಸಾಲ ಪಡೆಯುವ ತಮ್ಮ ಸರದಿಗಾಗಿ ಹತ್ತು ವರ್ಷಗಳಿಂದ ಕಾಯಬೇಕಾಗಿದೆ. ಪರಿಶಿಷ್ಟ ಜಾತಿಗಳ ಜನರು ಸಂಖ್ಯಾಬಲದಿಂದ ಪ್ರಬಲವಾದ್ದರಿಂದ ಅವರಿಗೆ ರಾಜಕೀಯ ಬೆಂಬಲ ಸಾಕಷ್ಟಿದೆ ಅವರು ವ್ಯವಸ್ಥಿತವಾಗಿ ಪ್ರಯೋಜನಗಳನ್ನು ಪಡೆಯುವಲ್ಲಿ ಮೊದಲಿಗರಾಗುತ್ತಾರೆ ಎಂದು ಲಂಬಾಣಿ ಸಮುದಾಯಗಳ ಜನರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ಸಾಲಗಳನ್ನು ಮಂಜೂರು ಮಾಡುವಲ್ಲಿ ಅಧಿಕಾರಿ ವರ್ಗದಲ್ಲಿ ಲಂಚದ ಹಾವಳಿ ಇದೆ ಎಂದೂ ಲಂಬಾಣಿಗಳು ದೂರುತ್ತಾರೆ.

## ಕೋಷ್ಟಕ ೨.೧೪

**ಹೊಸಪೇಟೆ ತಾಲೂಕಿನ ತಾಲೂಕು ಪಂಚಾಯಿತಿ ಲಂಬಾಣಿಗಳಿಗೆ ೧೯೮೪-೮೫ ರಿಂದ ೧೯೯೮-೯೯ರವರೆಗಿನ ಅವಧಿಯಲ್ಲಿ ಕೊಡಮಾಡಲಾದ ಹಣಕಾಸು ಸಹಾಯಧನ ನೆರವಿನ ವಿವರಗಳು.**

| ವರ್ಷ | ಹಣದ ಮೊತ್ತ (ರೂ.ಗಳಲ್ಲಿ) | ಉದ್ದೇಶ | ಪ್ರಯೋಜನ ಪಡೆದ ಕುಟುಂಬಗಳು | ತಾಂಡಾವಾರು ಕುಟುಂಬಗಳ ಸಂಖ್ಯಾ ವಿವರಗಳು |
|---|---|---|---|---|
| ೧೯೮೪-೮೫ | ೬,೪೦೦ | ನಿವೇಶನ ಕಟ್ಟಲು | ೧೬ | ಮ.ಮ.ಹಳ್ಳಿ ೩ ;ನಾಗಲಾಪುರ ೬, ಕಮಲಾಪುರ ತಾಂಡ ೩; ಕಡ್ಡಿರಾಮಪುರ ೨; ಬೆಂಡಾಲಗಟ್ಟಿ ೧; ಅಗಸಗಟ್ಟಿ ೧ |
| ೧೯೮೫-೮೬ | ೪,೦೨೫ | ಹೈನು ಅಥವಾ ವೃತ್ತಿಯ ಸಲಕರಣೆಗಳ ಖರೀದಿಗೆ | - | ವಿವರಗಳು ಲಭ್ಯವಿಲ್ಲ |
| ೧೯೮೬-೮೭ | ೭೫ | - | - | - |
| ೧೯೮೭-೮೮ | ೪,೪೦೦ | ನಿವೇಶನ ಕಟ್ಟಲು | ೧೧ | ಮ.ಮ.ಹಳ್ಳಿ ೪; ನಾಗಲಾಪುರ ೪; ಕಮಲಾಪುರ ತಾಂಡ ೨; ಕಡ್ಡಿರಾಮಪುರ ತಾಂಡ ೧ |
| ೧೯೮೮-೮೯ | ೪,೦೦೦ | ಆರ್ಥಿಕವಾಗಿ ಮೇಲೆತ್ತಲು | - | - |
| ೧೯೮೯-೯೦ | ೩೦೦ | ಬಡಿಗತನ ಸಲಕರಣೆಗಳ ಖರೀದಿಗೆ | - | - |
| ೧೯೯೦-೯೧ | ೧೫೦ | ಕೃಷಿ ಉಪಕರಣಗಳಿಗಾಗಿ | ೩ | ಮ.ಮ.ಹಳ್ಳಿ ೧; ನಾಗಲಾಪುರ ೨ |
| ೧೯೯೧-೯೨ | ೩೦೦ | ಹೈನು ಜಾನುವಾರುಗಳಿಗಾಗಿ | ೩ | ಮ.ಮ.ಹಳ್ಳಿ ೧; ನಾಗಲಾಪುರ ೨ |
| ೧೯೯೨-೯೩ | ೨೦೦೦ | ಉಪ ವೃತ್ತಿಗಳ ಉಪಕರಣಗಳಿಗಾಗಿ | ೨೦ | ಮ.ಮ.ಹಳ್ಳಿ ೪; ಕಡ್ಡಿರಾಮಪುರ ೮; ಕಮಲಾಪುರ ೮ |
| ೧೯೯೩-೯೪ | ೨೫೦ | ಎತ್ತುಗಳಿಗಾಗಿ | ೧ | ಮ.ಮ.ಹಳ್ಳಿ ೧ |
| ೧೯೯೪-೯೫ | ೪೦೦ | ನಿವೇಶನಗಳಿಗಾಗಿ | ೧ | ಮ.ಮ.ಹಳ್ಳಿ ೧ |
| ೧೯೯೫-೯೬ | ೧೦೦ | ಹೈನು ಜಾನುವಾರುಗಳಿಗಾಗಿ | ೧ | ನಾಗಲಾಪುರ ೧ |
| ೧೯೯೬-೯೭ | ೩೦೦ | ಎತ್ತುಗಳಿಗಾಗಿ | ೧ | ನಾಗಲಾಪುರ ೧ |
| ೧೯೯೭-೯೮ | ೨೫೦ | ಎತ್ತುಗಳಿಗಾಗಿ | ೧ | ನಾಗಲಾಪುರ ೧ |
| ೧೯೯೮-೯೯ | ೧೦೦ | ಬೀಜಗಳಿಗಾಗಿ | ೨ | ಮ.ಮ.ಹಳ್ಳಿ ೨ |

ಸಹಾಯಧನದ ರೂಪದಲ್ಲಿ ನೀಡಲಾಗುವ ಸೌಲಭ್ಯವು ನಿವೇಶನ ಸಾಲಗಳಿಗೆ ಇರುವ ಇನ್ನೊಂದು ಪರ್ಯಾಯವಾಗಿದೆ. ತಾಲೂಕು ಪಂಚಾಯತಿಯು ಸಹಾಯಧನದ ರೂಪದಲ್ಲಿ ನಿವೇಶನಗಳನ್ನು ಕಟ್ಟಲು ಪ್ರತಿ ಕುಟುಂಬಕ್ಕೆ ೨೫೦೦ ರೂ. ಮೌಲ್ಯದ ಮರಮುಟ್ಟು ಸಾಮಗ್ರಿಗಳು ಹಾಗೂ ಹಂಚುಗಳನ್ನು ಮತ್ತು ೨೫೦೦ ರೂ. ಮೊತ್ತದ ಕಟ್ಟಿಗೆಯನ್ನು ಪೂರೈಸಿತು. ನಿವೇಶನಗಳನ್ನು ಕಟ್ಟಲು ನೀಡುವ ಈ ಸಹಾಯಧನದ ಸೌಲಭ್ಯವನ್ನು ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದ ಕೆಲವು ಲಂಬಾಣಿಗಳು ಪಡೆದುಕೊಂಡಿದ್ದಾರೆ.

ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸುವ, ಮಾರ್ಗದರ್ಶಿಸುವ ಹಾಗೂ ಮೇಲ್ವಿಚಾರಣೆ ಮಾಡುವ ಹೊಣೆಗಾರಿಕೆಯು ತಾಲೂಕು ಪಂಚಾಯಿತಿ ವಿಸ್ತರಣಾ ಅಧಿಕಾರಿಗೆ ಸೇರಿದೆ. ಒಂದು ಗ್ರಾಮವು ಗ್ರಾಮ ಪಂಚಾಯಿತಿಯನ್ನು ರಚಿಸಲು ತೀರ ಚಿಕ್ಕದಾಗಿದ್ದರೆ ಅದನ್ನು ಅದರ ಸಮೀಪದ ಇತರ ಚಿಕ್ಕ ಗ್ರಾಮಗಳೊಂದಿಗೆ ಸೇರಿಸಿ ಒಂದು ಗ್ರಾಮ ಪಂಚಾಯಿತಿಯನ್ನು ರೂಪಿಸಲಾಗುತ್ತದೆ. ಮರಿಯಮ್ಮನಹಳ್ಳಿ ಜೊತೆಗೆ ಐದು ಗ್ರಾಮಗಳನ್ನು ಒಟ್ಟುಗೂಡಿಸಿ ಮರಿಯಮ್ಮನಹಳ್ಳಿ ಗ್ರಾಮ ಪಂಚಾಯಿತಿ ರಚಿಸಲಾಗಿದೆ. ೧೯೯೯ರಲ್ಲಿ ಈ ಪಂಚಾಯಿತಿಯ

೧೩ ಸದಸ್ಯರಲ್ಲಿ ಇಬ್ಬರು ಲಂಬಾಣಿಗಳಾಗಿದ್ದರು. ಪಂಚಾಯಿತಿಯು ಮನೆತೆರಿಗೆ ಮೊದಲಾದ ತೆರಿಗೆಗಳನ್ನು ಸಂಗ್ರಹಿಸುವುದರಲ್ಲಿ ನಿಷ್ಕ್ರಿಯವಾಗಿದ್ದರಿಂದ ಪಂಚಾಯಿತಿಯಿಂದ ಲಂಬಾಣಿ ತಾಂಡಗಳಿಗೆ ಲಭಿಸಿದ ಪ್ರಯೋಜನ ತೀರ ಅಲ್ಪವಾಗಿದೆ. ಅಲ್ಲದೇ ಪ್ರಬಲ ಜಾತಿಗಳ ರಾಜಕೀಯ ಒತ್ತಡ ಇದಕ್ಕೆ ಕಾರಣವಾಗಿದೆ.

ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಹಾಗೂ ಮರಿಯಮ್ಮನಹಳ್ಳಿ ಬಹುಜಾತಿ ವರ್ಗದ ಜನರು ಕುಡಿಯುವ ನೀರಿಗಾಗಿ ಒಂದು ಹಳೆ ಬಾವಿಯೊಂದನ್ನು ಬಳಸುತ್ತಿದ್ದರು. ಆ ಬಾವಿಯ ನೀರು ನಾರುಹುಣ್ಣು ರೋಗಾಣುಗಳಿಂದ ಕಲುಷಿತವಾಗಿದೆ. ಲಂಬಾಣಿಗಳು ನೀರನ್ನು ಕುದಿಸದೇ ಬಳಸುತ್ತಿದ್ದುದರಿಂದ ಬೇಸಗೆ ಕಾಲದಲ್ಲಿ ಬಹುಸಂಖ್ಯೆಯಲ್ಲಿ ನಾರುಹುಣ್ಣಿನ ಬೇನೆಗೆ ಈಡಾದರು. ಹಾಗಾಗಿ ಸಾಗುವಳಿಯ ಮೊದಲ ಕಾರ್ಯಾಚರಣೆಗಳನ್ನು ಸಕಾಲಿಕವಾಗಿ ಮಾಡುವಲ್ಲಿ ಅಸಮರ್ಥರಾದ್ದರಿಂದ ಬೆಳೆ ಸಾಕಷ್ಟು ಬರದೆ ತೊಂದರೆಗೀಡಾದರು. ಮರಿಯಮ್ಮನಹಳ್ಳಿ ತಾಂಡದ ಹಳೆ ಬಾವಿಯನ್ನು ಸುರಕ್ಷಿತ ಬಾವಿಯನ್ನಾಗಿ ಮಾರ್ಪಡಿಸುವ ಹೊಣೆಗಾರಿಕೆಯನ್ನು ತಾಲೂಕು ಪಂಚಾಯಿತಿಯು ಸ್ಥಳೀಯ ಗ್ರಾಮ ಪಂಚಾಯಿತಿಗೆ ವಹಿಸಿಕೊಟ್ಟಿತು. ಆದರೆ ಹಣಕಾಸಿನ ಕೊರತೆಯಿಂದಾಗಿ ಅದನ್ನು ಸರಿಪಡಿಸಲು ಪಂಚಾಯಿತಿಗೆ ೧೯೯೫ರವರೆಗೂ ಸಾಧ್ಯವಾಗಲಿಲ್ಲ. ಹಲವು ವರ್ಷಗಳವರೆಗೆ ಕಾಯ್ದು ಸುಸ್ತಾಗಿದ್ದ ಮರಿಮ್ಮನಹಳ್ಳಿ ಲಂಬಾಣಿಗಳು ತಾವೇ ಈ ಕಾರ್ಯವನ್ನು ಮಾಡಲು ಮುತುವರ್ಜಿ ವಹಿಸಿ ತಾಲೂಕು ಪಂಚಾಯಿತಿಯ, ಎರಡನೆಯ ಬಾರಿಯ ಅನುದಾನದಲ್ಲಿ ಆ ಕೆಲಸವನ್ನು ೧೯೯೮ರಲ್ಲಿ ಪೂರ್ತಿಗೊಳಿಸಿದರು. ತಾಲೂಕು ಪಂಚಾಯಿತಿಯು ೧೯೯೯ರಲ್ಲಿ ಮರಿಯಮ್ಮನಹಳ್ಳಿ ತಾಂಡ ಮತ್ತು ಬಹು ಜಾತಿ ವರ್ಗದ ಜನರು ವಾಸಿಸುವ ಮಧ್ಯಭಾಗದಲ್ಲಿ ಬೋರ್‌ವೆಲ್ ಹಾಕಿದರೂ, ನೀರನ್ನು ಮೇಲಕ್ಕೆತ್ತಲು ವಿದ್ಯುತ್ ಅಭಾವದಿಂದಾಗಿ ಅದು ಹೆಚ್ಚು ಪ್ರಯೋಜನಕ್ಕೆ ಬಾರದಂತಾಗಿದೆ.

ನಾಗಲಾಪುರ ತಾಂಡವು ಗರಗ ಪಂಚಾಯಿತಿಯ ವ್ಯಾಪ್ತಿಯಲ್ಲಿ ಸೇರ್ಪಡೆಯಾಗಿರುವುದರಿಂದ ಒಬ್ಬ ನಾಗಲಾಪುರ ಲಂಬಾಣಿ ಮಹಿಳೆ (ಸ್ಥಿತಿವಂತ ಕುಟುಂಬದಿಂದ ಬಂದ ಮಹಿಳೆ) ಸಮಿತಿಯಲ್ಲಿ ಆ ತಾಂಡವನ್ನು ಪ್ರತಿನಿಧಿಸುತ್ತಿದ್ದಾಳೆ. ಪ್ರಜಾಪ್ರಭುತ್ವದ ಅಧಿಕಾರ ವಿಕೇಂದ್ರೀಕರಣದ ಸರಕಾರದ ನೀತಿಯನ್ನು ಪ್ರತಿನಿಧಿಸುವ ಈ ಸಹಕಾರಿ ಹಾಗೂ ಪಂಚಾಯಿತಿ ಸಂಸ್ಥೆಗಳು ಆಡಳಿತದಲ್ಲಿ ಸ್ಥಳೀಯ ಜನರ ಪಾಲುಗೊಳ್ಳುವಿಕೆಯನ್ನು ಉದ್ದೇಶಿಸಿವೆ. ಆದರೆ ಲಂಬಾಣಿಗಳಂತಹ ಹಿಂದುಳಿದ ಸಮುದಾಯಗಳ ಪಾಲುಗೊಳ್ಳುವಿಕೆಯು ಅರ್ಥಪೂರ್ಣವಾಗಬೇಕಾದರೆ, ಪರಿಣಾಮಕಾರಿಯಾಗಬೇಕಾದರೆ ಅವರು ಆರ್ಥಿಕವಾಗಿ ಪ್ರಬಲರಾಗಬೇಕು, ಸಾಕ್ಷರರಾಗಬೇಕು ಹಾಗೂ ಈ ಸಂಘ-ಸಂಸ್ಥೆಗಳಲ್ಲಿ ಪ್ರಾಬಲ್ಯವನ್ನು ಹೊಂದಿರುವ ಇತರೆ ಪ್ರಬಲ ಜಾತಿಗಳ ಜನರ ಸಂಪರ್ಕವನ್ನು ಹೆಚ್ಚಾಗಿ ಸಂಪಾದಿಸಬೇಕು. ಸದ್ಯ ಲಂಬಾಣಿಗಳಂತಹ ಅಲ್ಪಸಂಖ್ಯಾತ ಸಮುದಾಯಗಳು ಇಂತಹ ಸ್ಥಳೀಯ ಸಂಘ-ಸಂಸ್ಥೆಗಳಲ್ಲಿ ಮುಕ್ತಸ್ಪರ್ಧೆಯ ಮೂಲಕ ಪ್ರಾತಿನಿಧ್ಯತೆಯನ್ನು ಪಡೆಯಬೇಕಾಗಿಲ್ಲ. ಅವರಿಗೆ ಪ್ರಾತಿನಿಧ್ಯ ದೊರಕಿಸಿಕೊಡಲು ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿಕೊಡಲಾಗಿದೆ. ಆದರೂ ಕೂಡ ಅವರು ರಾಜಕೀಯವಾಗಿ ಹಿಂದುಳಿದಿರುವುದರಿಂದ ಇಂತಹ ಸಂಘ-ಸಂಸ್ಥೆಗಳಲ್ಲಿ ಪರಿಣಾಮಕಾರಿಯಾಗಿ ತಮ್ಮ ಪಾತ್ರಗಳನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ.

ಅಭಿವೃದ್ಧಿ ಯೋಜನೆಗಳಿಂದ ಇತರ ಎಲ್ಲರಿಗೂ ಸಿಕ್ಕುವ ಸಾಮಾನ್ಯ ಸೌಲಭ್ಯಗಳು ಮಾತ್ರವಲ್ಲದೆ ಲಂಬಾಣಿಗಳಿಗೆ ಕೆಲವು ವಿಶೇಷ ಸೌಲಭ್ಯಗಳೂ ಲಭಿಸುತ್ತಿವೆ. ಹೈನುಗಾರಿಕೆಗೆ ಜಾನುವಾರುಗಳನ್ನು ಖರೀದಿಸಲು, ಕೃಷಿ ಉಪಕರಣಗಳು ಹಾಗೂ ಸಲಕರಣೆ ಮೊದಲಾದವುಗಳನ್ನು ಖರೀದಿಸಲು, ನಿವೇಶನಗಳನ್ನು ಕಟ್ಟಿಕೊಳ್ಳಲು ಅವರಿಗೆ ಸಹಾಯಧನ ಮತ್ತು ನೆರವುಗಳ ರೂಪದಲ್ಲಿ ವಿಶೇಷ

ಸೌಲಭ್ಯಗಳನ್ನು ನೀಡಲಾಗುತ್ತದೆ. ಹಿಂದುಳಿದ ವರ್ಗಗಳಲ್ಲಿ ಸೇರ್ಪಡೆಯಾಗಿದ್ದ ಲಂಬಾಣಿಗಳನ್ನು ಈಗ ಪರಿಶಿಷ್ಟ ಜಾತಿಗಳಲ್ಲಿ ಸೇರಿಸಲಾಗಿದೆ. ಕೋಷ್ಟಕ ೨.೧೪ರಲ್ಲಿ ತಾಲ್ಲೂಕು ಪಂಚಾಯಿತಿಯು ೧೯೮೪-೮೫ ರಿಂದ ೧೯೯೮-೯೯ರವರೆಗೆ ಲಂಬಾಣಿಗರಿಗೆ ಕೊಡ ಮಾಡಲಾದ ವಿವಿಧ ನೆರವುಗಳ (ಸಹಾಯಧನ) ವಿವರಣೆಯಿದೆ.

### ಇತರ ಸರಕಾರಿ ಇಲಾಖೆಗಳು

ಹಿಂದುಳಿದ ಸಮುದಾಯಗಳ ಜನರ ಕಲ್ಯಾಣ ಕಾರ್ಯಗಳಲ್ಲಿ ತೊಡಗಿದ ವಿವಿಧ ಇಲಾಖೆಗಳ ಕಾರ್ಯಗಳನ್ನು ತಾಲೂಕು ಪಂಚಾಯತಿಯು ಜಾರಿಗೊಳಿಸುತ್ತದೆ. ಹಿಂದುಳಿದ ಸಮುದಾಯಗಳ ವಿದ್ಯಾರ್ಥಿಗಳಿಗೆ ಶಿಷ್ಯವೇತನಗಳನ್ನು ಹಾಗೂ ಇತರ ವೆಚ್ಚಗಳ ಮೊತ್ತವನ್ನು ಮಂಜೂರು ಮಾಡುತ್ತದೆ. ಈ ವರ್ಗಗಳ ಬಡವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕಟ್ಟಲಾದ ವಸತಿ ಗೃಹಗಳ (ಹಾಸ್ಟಲ್) ಮೇಲ್ವಿಚಾರಣೆ ಮಾಡುತ್ತದೆ.

ಇಂದಿಗೂ ಕೂಡ ಲಂಬಾಣಿಗಳು ತಮ್ಮ ಇತರ ವೃತ್ತಿಗಳ ಮೂಲಕ ಆದಾಯಕ್ಕೆ ಪೂರಕವಾಗಿ ಅರಣ್ಯ ಉಪಉತ್ಪನ್ನಗಳ (ಕೆಲವು ಭಾಗದಲ್ಲಿ ಮಾತ್ರ) ಸಂಗ್ರಹಣೆಯನ್ನು ಮಾಡುತ್ತಿದ್ದಾರೆ. ಅರಣ್ಯಗಳ ರಕ್ಷಣೆಯ ಹೊಣೆಯನ್ನು ಅರಣ್ಯ ಇಲಾಖೆಯು ಜೀವನೋಪಾಯಕ್ಕಾಗಿ ಅರಣ್ಯಗಳನ್ನು ಆಶ್ರಯಿಸಬೇಕಾಗಿರುವ ಲಂಬಾಣಿಗಳ ಬಗೆಗೆ ಉದಾರ ನಿಲುವನ್ನು ತಳೆದಿದೆ. ಅರಣ್ಯಗಳಲ್ಲಿ ನಡೆಯುವ ಕಾನೂನು ಬಾಹಿರ ಚಟುವಟಿಕೆಗಳನ್ನು ಕಟ್ಟುನಿಟ್ಟಾಗಿ ತಡೆಗಟ್ಟಲು ಹಾಗೂ ಗಿಡಮರಗಳನ್ನು ಕಡಿಯುವುದನ್ನು ನಿಷೇಧಿಸಲು ಅರಣ್ಯ ಅಧಿಕಾರಿಗಳಿಗೆ ಸೂಚಿಸಲಾಗಿದ್ದರೂ ಅರಣ್ಯಗಳಲ್ಲಿ ಲಂಬಾಣಿಗಳ ಪ್ರವೇಶವನ್ನು ಸಂಪೂರ್ಣವಾಗಿ ತಡೆಗಟ್ಟಲಾಗುವುದಿಲ್ಲ. ಅವರು ಅರಣ್ಯಗಳಲ್ಲಿ ಒಣಗಿದ ಕಟ್ಟಿಗೆಗಳನ್ನು ಸಂಗ್ರಹಿಸುತ್ತಾರೆ. ಹಾಗೂ ಇತರ ಅರಣ್ಯ ಉಪಉತ್ಪನ್ನಗಳನ್ನು ಸಂಗ್ರಹಿಸುತ್ತಾರೆ. ಬಹು ಪ್ರಾಚೀನ ಕಾಲದಿಂದಲೂ ಅರಣ್ಯಗಳನ್ನೇ ಆಶ್ರಯಿಸಿ ಬದುಕುತ್ತ ಬಂದಿರುವ ಲಂಬಾಣಿಗಳ ಆಸಕ್ತಿಗಳನ್ನು ಅಲಕ್ಷಿಸುವುದು ನ್ಯಾಯಬದ್ಧ ಎನಿಸಲಾರದು.

ವೈದ್ಯಕೀಯ ಹಾಗೂ ಸಾರ್ವಜನಿಕ ಆರೋಗ್ಯದ ಸೌಲಭ್ಯಗಳನ್ನು ಗ್ರಾಮೀಣ ಹಾಗೂ ಬುಡಕಟ್ಟು ಪ್ರದೇಶಗಳಿಗೆ ತಲುಪಿಸಲು ಕರ್ನಾಟಕ ರಾಜ್ಯದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಯು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ತೆರೆದಿದೆ. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಹೊಸಪೇಟೆಯ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಸ್ಥಾಪಿಸಲಾಯಿತು. ಆ ಕೇಂದ್ರದಲ್ಲಿ ತಜ್ಞ ವೈದ್ಯಕೀಯ ಹಾಗೂ ವೈದ್ಯಕೀಯೇತರ ಸಿಬ್ಬಂದಿ ಸಂಖ್ಯೆ ೩೬ ಇದ್ದಿತು. ಒಬ್ಬ ಶಸ್ತ್ರಚಿಕಿತ್ಸಕರು, ಒಬ್ಬ ಸಹಾಯಕ ಶಸ್ತ್ರ ಚಿಕಿತ್ಸಕರು, ಒಬ್ಬ ದಂತ ವೈದ್ಯರು ಹಾಗೂ ಹೆರಿಗೆ ವಿಭಾಗದ ಉಸ್ತುವಾರಿಗೆ ಮಹಿಳಾ ವೈದ್ಯರು ಮೊದಲಾದವರ ಸೇವೆ ಲಭ್ಯವಿದ್ದಿತು. ಆದರೆ ಇಷ್ಟು ಒಳ್ಳೆಯ ಸಿಬ್ಬಂದಿಯನ್ನುಳ್ಳ ಆಸ್ಪತ್ರೆಗೆ ಔಷಧಿಗಳ ಪೂರೈಕೆಗಾಗಿ ವಾರ್ಷಿಕವಾಗಿ ೧೭೦೦೦ ರೂ.ಗಳನ್ನು ಮಾತ್ರವೇ ನೀಡಲಾಗುತ್ತಿತ್ತು. ಗ್ರಾಮೀಣ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸುವ ಸರಕಾರದ ಉದ್ದೇಶವು ಗ್ರಾಮೀಣ ಸಮುದಾಯಗಳ ಜನರಿಗೆ ದಕ್ಷ ವೈದ್ಯಕೀಯ ಸೇವೆಯನ್ನು ನೀಡುವುದಾಗಿದೆ. ಜನರು ತಮಗೆ ಬೇಕಾದ ಔಷಧಿಗಳನ್ನು ತಾವೇ ಕೊಂಡುಕೊಳ್ಳುತ್ತಾರೆ ಎಂಬ ನಿರೀಕ್ಷೆಯಲ್ಲಿ ಸರಕಾರವು ವೈದ್ಯಕೀಯ ಸೇವೆಯ ನೆರವನ್ನು ಒದಗಿಸಿತ್ತು. ಆದರೆ ಗ್ರಾಮೀಣ ಪ್ರದೇಶಗಳಲ್ಲಿಯ ಜನರು ಸಾಮಾನ್ಯವಾಗಿ ನಿರಕ್ಷರಿಗಳೂ, ಅತ್ಯಂತ ಬಡವರೂ ಆಗಿರುವುದರಿಂದ ವೈದ್ಯರು ಬರೆದುಕೊಡುವ ಔಷಧಿಗಳನ್ನು ಕೊಂಡುಕೊಳ್ಳುವ ಸಾಮರ್ಥ್ಯ ಹೊಂದಿಲ್ಲ. ಇತ್ತೀಚೆಗೆ ಆಧುನಿಕ

ಔಷಧಿಗಳ ಬೆಲೆಗಳ ಹೆಚ್ಚಳದಿಂದ ಜನರು ತಮ್ಮ ಜೇಬಿನಿಂದಲೇ ಹಣವನ್ನು ಖರ್ಚುಮಾಡುವುದಾದರೆ, ಸರಕಾರಿ ಆಸ್ಪತ್ರೆಗೆ ಏಕೆ ಹೋಗಬೇಕು ಎಂದು ಲಂಬಾಣಿಗಳು ಕೇಳುತ್ತಾರೆ. ಲಂಬಾಣಿಗಳಲ್ಲಿ ಶೇಕಡಾ ೩೦ರಷ್ಟು ಜನರಿಗೆ ಮಾತ್ರ ಆರೋಗ್ಯ ಕೇಂದ್ರದಂತಹ ವೈದ್ಯಕೀಯ ಸೇವೆ - ಸೌಲಭ್ಯಗಳ ಅಗತ್ಯವಿದೆ. ಹೆಚ್ಚಿನ ಜನರು ಸ್ಥಳೀಯ ಹಾಗೂ ಖಾಸಗಿ ವೈದ್ಯದಲ್ಲಿ ಚಿಕಿತ್ಸೆ ಪಡೆಯುತ್ತಾರೆ. ಅಸ್ಪೃಶ್ಯ ಲಂಬಾಣಿಗಳು ತಮ್ಮ ಆರೋಗ್ಯ ಗಂಭೀರ ಹಾಗೂ ಚಿಂತಾಜನಕ ಸ್ಥಿತಿ ತಲುಪುವವರೆಗೂ ಆಧುನಿಕ ಔಷಧಿ ಹಾಗೂ ತಜ್ಞವೈದ್ಯರ ಮೊರೆ ಹೋಗುವುದಿಲ್ಲ. ಚಿಕಿತ್ಸೆ ಪಡೆಯಲು ಹೋದಾಗ ಸರಕಾರಿ ಆರೋಗ್ಯ ಕೇಂದ್ರದ ಸಿಬ್ಬಂದಿ ವರ್ಗವು ತಮ್ಮನ್ನು ನಿಕೃಷ್ಟವಾಗಿ ನೋಡುತ್ತಾರೆ ಎಂಬುದಾಗಿ ಬಹುತೇಕ ಲಂಬಾಣಿ ಹಾಗೂ ಲಂಬಾಣೇತರ ಬಡಜನರು ತಮ್ಮ ಅಳಲನ್ನು ಹೇಳಿಕೊಂಡಿದ್ದಾರೆ.

ಕೆಲವು ವರ್ಷಗಳ ಹಿಂದೆ ಕರ್ನಾಟಕ ಸರಕಾರ ಪ್ರತಿ ಗ್ರಾಮದಲ್ಲಿ ಆಯ್ದ ೧೦ ಅತ್ಯಂತ ಬಡಕುಟುಂಬಗಳಿಗೆ ಒಂದು ವಿದ್ಯುತ್ ದೀಪ ಸೌಲಭ್ಯವನ್ನು ಉಚಿತವಾಗಿ ನೀಡುವ 'ಭಾಗ್ಯಜ್ಯೋತಿ' ಯೋಜನೆಯನ್ನು ಅನುಷ್ಠಾನಗೊಳಿಸಿತು. ಭಾಗ್ಯಜ್ಯೋತಿ ಯೋಜನೆಯ ಅಡಿಯಲ್ಲಿ ಮರಿಯಮ್ಮನಹಳ್ಳಿಯಲ್ಲಿ - ೮ ಮತ್ತು ನಾಗಲಾಪುರ ತಾಂಡದ ಕೆಲವು ಮನೆಗಳು ವಿದ್ಯುತ್ ದೀಪದ ಸಂಪರ್ಕಗಳನ್ನು ಪಡೆದುಕೊಂಡಿವೆ.

**ಸುಧಾರಕರ ಪಾತ್ರ**

ದೇಶದಾದ್ಯಂತ ಎಲ್ಲ ಲಂಬಾಣಿಗಳನ್ನು (ಬಂಜಾರಾ ಜನರನ್ನು) ಒಂದುಗೂಡಿಸಲು ಹಾಗೂ ಅವರ ಆಸಕ್ತಿಗಳನ್ನು ರಕ್ಷಿಸುವ ಉದ್ದೇಶದಿಂದ ದೆಹಲಿಯಲ್ಲಿ ಅಖಿಲ ಭಾರತ ಬಂಜಾರಾ ಸೇವಾ ಸಂಘವನ್ನು ರಚಿಸಲಾಗಿದೆ. ಈ ಸಂಘವು ಅಖಿಲ ಭಾರತ ಮಟ್ಟದಲ್ಲಿ ಲಂಬಾಣಿಗಳ ಸಮಾವೇಶಗಳನ್ನು ಸಂಘಟಿಸುತ್ತದೆ. ಭಾರತದ ಎಲ್ಲೆಡೆಗಳಿಂದ ಲಂಬಾಣಿ ಪ್ರತಿನಿಧಿಗಳು ಸಮಾವೇಶಗಳಲ್ಲಿ ಪಾಲುಗೊಳ್ಳುತ್ತಾರೆ. ತಮ್ಮ ಸಮುದಾಯದ ಜನರು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ಚರ್ಚಿಸಿ ತಮ್ಮ ಬೇಡಿಕೆಗಳನ್ನು ಪಟ್ಟಿ ಮಾಡಿ, ಅವುಗಳನ್ನು ಈಡೇರಿಸುವಂತೆ ಸರಕಾರಕ್ಕೆ ಮನವಿ ಸಲ್ಲಿಸಿ ಒತ್ತಾಯಿಸುತ್ತಾರೆ. ಬುಡಕಟ್ಟು ಸಮುದಾಯಗಳ ಒಟ್ಟಾರೆ ಹಿತಾ ಸಕ್ತಿಗಳನ್ನು ಕಾಪಾಡುವ ಉದ್ದೇಶದಿಂದ ರಚಿಸಲಾದ ಇಂತಹವೇ ಸಂಘಟನೆಗಳಾದ ಭಾರತೀಯ ಆದಿಮ ಜಾತಿ (ಆದಿವಾಸಿ ಬುಡ ಕಟ್ಟುಗಳು) ಸೇವಕ ಸಂಘ, ಹಾಗೂ ಅಖಿಲ ಭಾರತೀಯ ವಿಮುಕ್ತ ಜಾತಿ (ಡೀನೋಟಿಫೈಡ್ ಬುಡಕಟ್ಟುಗಳು) ದೆಹಲಿಯ ಸೇವಕ ಸಂಘ ಮೊದಲಾದವುಗಳ ಕಾರ್ಯಕ್ರಮಗಳಲ್ಲಿ ಲಂಬಾಣಿ ನಾಯಕರು ಪಾಲುಗೊಳ್ಳುತ್ತಾರೆ. ಉತ್ತರ ಕರ್ನಾಟಕದ ಸ್ಥಿತಿವಂತ ಹಾಗೂ ಸುಶಿಕ್ಷಿತ ಲಂಬಾಣಿಗಳು ರಾಷ್ಟ್ರಮಟ್ಟದ ಇಂತಹ ಸಂಘಟನೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದಾರೆ. ಗುಲಬರ್ಗಾದಲ್ಲಿ ೮ನೆಯ ಅಖಿಲ ಭಾರತೀಯ ಬಂಜಾರಾ ಸಮಾವೇಶವನ್ನು ೧೯೭೭ರಲ್ಲಿ ಮೇ ತಿಂಗಳಿನಲ್ಲಿ ಸಂಘಟಿಸಲಾಗಿತ್ತು. ಈ ಸಮಾವೇಶದ ಅಧ್ಯಕ್ಷತೆಯನ್ನು ಮಹಾರಾಷ್ಟ್ರದ ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀ ವಿ.ಸಿ.ನಾಯಕ್ ವಹಿಸಿದ್ದರು.

ಬಳ್ಳಾರಿ ಜಿಲ್ಲೆಯ ದಕ್ಷಿಣ ಭಾಗದಿಂದ ಆಗಮಿಸಿದ ಇಬ್ಬರು ಲಂಬಾಣಿ ಪ್ರಾಥಮಿಕ ಶಿಕ್ಷಕರು ತಮ್ಮ ಸಮುದಾಯಕ್ಕೆ ಸಲ್ಲಿಸಿದ ಗಣನೀಯ ಸೇವೆಗೆ ಪ್ರತಿಯಾಗಿ ಈ ಪ್ರದೇಶದ ಲಂಬಾಣಿಗಳು ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಅವರಲ್ಲಿ ಒಬ್ಬರು ಶಂಕರಪ್ಪ ರಾಥೋಡ ನಾಗಲಾಪುರ ತಾಂಡಾಕ್ಕೆ ೧೯೭೨ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಆಗಮಿಸಿದ್ದರು. ಅವರ ಪ್ರಾಮಾಣಿಕ ಕಾರ್ಯ ಹಾಗೂ

ಜನಪ್ರಿಯತೆಯಿಂದಾಗಿ ೧೯೯೨ ರಲ್ಲಿ ಅವರು ಸೇವಾ ನಿವೃತ್ತಿ ಹೊಂದುವವರೆಗೂ ಅಂದರೆ ೩೦ ವರ್ಷಗಳವರೆಗೆ ಅವರನ್ನು ನಾಗಲಾಪುರ ಪ್ರಾಥಮಿಕ ಶಾಲೆಯಿಂದ ವರ್ಗಾವಣೆ ಮಾಡಲಿಲ್ಲ. ೧೯೫೦ ದಶಕದಲ್ಲಿ ಉತ್ತರ ಕರ್ನಾಟಕದ ಲಂಬಾಣಿಗಳು ಗದಗಿನಲ್ಲಿ ಸಮಾವೇಶವನ್ನು ಏರ್ಪಡಿಸಿದಾಗ ಶಂಕರಪ್ಪ ರಾಥೋಡ್ ಅವರ ಅಧ್ಯಕ್ಷತೆಯ ಕೆಲವು ಸುಧಾರಣಾತ್ಮಕ ಠರಾವುಗಳನ್ನು ಪಾಸು ಮಾಡಿದರು. ಲಂಬಾಣಿಗಳು ಕಳುವಿನ ಚಟವನ್ನು ತ್ಯಜಿಸಬೇಕು, ಶಾಲೆ ಹಾಗೂ ಕಾಲೇಜು ಶಿಕ್ಷಣದ ಸೌಲಭ್ಯಗಳನ್ನು ಪಡೆದುಕೊಳ್ಳಬೇಕು, ಸರಕಾರಿ ಸೇವೆಯಲ್ಲಿ ಸೇರಬೇಕು ಹಾಗೂ ಮಹಿಳೆಯರು ಹಳೆಯ ಉಡುಪುಗಳಿಗೆ ಬದಲಾಗಿ ಸರಳರೀತಿಯ ಉಡುಪನ್ನು ಧರಿಸಬೇಕು, ತೀರ ಸಮೀಪದ ಸಂಬಂಧಿಗಳಲ್ಲಿ ಮದುವೆಯಾಗಕೂಡದು, ಬಹು ಪತ್ನಿತ್ವವನ್ನು ತ್ಯಜಿಸಬೇಕು ಎಂಬವು ಈ ಠರಾವುಗಳಾಗಿದ್ದವು. ನಾಗಲಾಪುರದ ಲಂಬಾಣಿಗಳು ಮತ್ತು ಲಂಬಾಣೇತರ ಜನರು ಶಿಕ್ಷಕ ರಾಥೋಡ್ ಅವರನ್ನು ಅವರ ಸಾವಿನ ನಂತರದಲ್ಲಿಯೂ ಗೌರವಪೂರ್ವಕವಾಗಿ ಸ್ಮರಿಸಿಕೊಳ್ಳುತ್ತಿದ್ದಾರೆ. ಇತ್ತೀಚೆಗೆ ೧೯೯೯ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಬಂಜಾರ ಸಮಾವೇಶದಲ್ಲಿಯೂ ಮೇಲಿನ ಠರಾವುಗಳಿಗೆ ಪೂರಕವಾದ ರೀತಿಯಲ್ಲಿಯೇ ಕೆಲವು  ಠರಾವುಗಳನ್ನು ಸರ್ವ ಸದಸ್ಯರ ಸಭೆಯಲ್ಲಿ ಅಂಗಿಕರಿಸಿದ್ದಾರೆ.

ಲಂಬಾಣಿಗಳಲ್ಲಿ ಸುಧಾರಕರು ಸದುದ್ದೇಶದಿಂದ ಅನುಶಾಸನಗೊಳಿಸಲೆತ್ನಿಸಿದ ಸುಧಾರಣೆಗಳಲ್ಲಿ ಕೆಲವು ಅನಪೇಕ್ಷಿತ ಪರಿಣಾಮಗಳನ್ನು ಬೀರಿದವು. ಲಂಬಾಣಿ ಮಹಿಳೆಯರು ವೇಷಭೂಷಣಗಳಲ್ಲಿಯ ಬದಲಾವಣೆಗಳು ಕೆಲವು ಜನರ ವಿಷಯದಲ್ಲಿ ಕೆಟ್ಟ ಪರಿಣಾಮಗಳನ್ನುಂಟುಮಾಡಿದವು. ಶಿಕ್ಷಣವು ಜೀವನ ಶೈಲಿಯಲ್ಲಿ ಮಹತ್ತಾದ ಬದಲಾವಣೆಯನ್ನುಂಟುಮಾಡುತ್ತದೆ ಎಂದು ನಂಬಿದ್ದ ಆ ಶಿಕ್ಷಕರು ತಮ್ಮ ಮೂವರು ಪುತ್ರರಿಗೆ ಒಳ್ಳೆಯ ಶಿಕ್ಷಣ ಕೊಡಮಾಡಿದರು. ಅವರೆಲ್ಲರು ಈಗ ಉತ್ತಮವಾಗಿ ಜೀವನ ನಡೆಸುತ್ತಿದ್ದಾರೆ.

೧೯೫೮ರವರೆಗೂ ಮರಿಯಮ್ಮನಹಳ್ಳಿ ಸಂಯುಕ್ತ ಗ್ರಾಮದಲ್ಲಿ ಸರಕಾರಿ ಶಾಲೆ ಇರಲಿಲ್ಲ. ೧೯೫೫ರಲ್ಲಿನೆರೆಯ ಗ್ರಾಮದ ಸುಶಿಕ್ಷಿತ ಲಿಂಗಾಯತ ಸಂತ (ಜಂಗಮ) ಮರಿಯಮ್ಮನಹಳ್ಳಿಯಲ್ಲಿ ಒಂದು ಖಾಸಗಿ ಶಾಲೆ ಆರಂಭಿಸಿದರು. ಅವರು ಆರಂಭಿಸಿದ ಸಾಕ್ಷರತಾ ಆಂದೋಲನದಲ್ಲಿ ಲಂಬಾಣಿ ಹಾಗೂ ಲಂಬಾಣೇತರ ಯುವಕರು ಪಾಲುಗೊಂಡರು. ಈ ಉದ್ದೇಶಕ್ಕೋಸ್ಕರವೆ  ಈ ಸಂತರು ೧೯೫೮ರಲ್ಲಿ ಶಾಲೆ ಹಾಗೂ ಪೂಜೆಗಾಗಿ ಸೇವಾಭಯಾಯ ದೇವಾಲಯವನ್ನು ಗ್ರಾಮಸ್ಥರ ಸೇವೆಗಳಿಂದಲೇ ಕಟ್ಟಿಸಿದರು. ೧೯೫೮ರಲ್ಲಿ ಒಂದು ಖಾಯಂಶಾಲೆ ಸ್ಥಾಪನೆಗೊಳ್ಳಲು ಆ ಸಂತನೇ ಕಾರಣೀಭೂತನಾದರು. ಆ ಶಾಲೆಯಲ್ಲಿ ಬೋಧಿಸಲು ಅರ್ಹ ಶಿಕ್ಷಕ ಸಿಗುವಂತೆ ಕೂಡ ಆತ ವ್ಯವಸ್ಥೆಮಾಡಿದ್ದನು. ಈ ಸುಧಾರಕನು ಬೋಧನೆ ಮಾಡಿದ ಲಂಬಾಣಿಗಳು ಇಂದಿಗೂ ಆತನ ಸೇವೆಯನ್ನು ಕೃತಜ್ಞತಾ ಮನೋಭಾವದೊಂದಿಗೆ ಕೊಂಡಾಡುತ್ತಾರೆ; ಆತನೊಡನೆ ಕಳೆದ ತಮ್ಮ ತಾರುಣ್ಯದ ಅವಧಿಯ ಸಾಧನೆಗಳನ್ನು ಹಿರಿಯರು ಅಭಿಮಾನದಿಂದ ಸ್ಮರಿಸಿಕೊಳ್ಳುತ್ತಾರೆ. ಈ ಸಮಾಜ ಸುಧಾರಕನ ಸಹೋದರನು ಪ್ರತಿಭಾವಂತ ಕಲಾಕಾರನಾಗಿದ್ದನು. ಕನ್ನಡ ಜಾನಪದ ನಾಟಕಗಳನ್ನು ರಂಗಭೂಮಿಯ ಮೇಲೆ ಆಡಿ ತೋರಿಸುವ ಕಲೆಯಲ್ಲಿ ಆತನು ನಿಪುಣನಾಗಿದ್ದನು. ನಾಟಕ ಕಲೆಯ ತರಬೇತಿಯನ್ನು ಆತನು ಲಂಬಾಣಿ ಯುವಕರಿಗೆ ನೀಡಿದನು. ಮನರಂಜನೆಯೊಂದಿಗೆ ನೀತಿಬೋಧಕವಾದ ಈ ಹವ್ಯಾಸವು ರೈತಾಪಿ ಜನರಿಗೆ ಹೊಸ ಗೆಲುವನ್ನುಂಟುಮಾಡಿತು. ನಾಟಕ ತರಬೇತಿ ಪಡೆದ ಕೆಲವು ಲಂಬಾಣಿ ಯುವಕರು ಸಾಕ್ಷರತಾ ಆಂದೋಲನದಲ್ಲಿ ಹಾಗೂ ಇತರೆ ಸಂದರ್ಭಗಳಲ್ಲಿ, ಅನೇಕ ಲಂಬಾಣಿ ತಾಂಡಗಳಲ್ಲಿ ಬೀದಿ ನಾಟಕ ಮಾಡುವ ಮೂಲಕ ಸಾಮಾಜಿಕ ಬದಲಾವಣೆಗೆ ಬುನಾದಿ ಹಾಕಲು ಪ್ರಯತ್ನಿಸಿದ್ದಾರೆ.  ಕೆಲವು ಲಂಬಾಣಿಗಳು ಈ ಕಲೆಯಲ್ಲಿ ಪರಿಣತಿ ಸಾಧಿಸಿದ್ದು, ಮಹಾಕಾವ್ಯಗಳು, ಪುರಾಣಗಳು ಮೊದಲಾದವುಗಳ ಪ್ರಸಂಗಗಳನ್ನು ಉತ್ಸವದಂತಹ ಸನ್ನಿವೇಶಗಳಲ್ಲಿ ನಾಟಕ ರೂಪದಲ್ಲಿ ಆಡಿ ತೋರಿಸುತ್ತಾರೆ. ಈ ಪರಿಣಾಮಕಾರಿ (ಬೀದಿ ನಾಟಕ) ಮಾಧ್ಯಮದ ಮೂಲಕ ಯುವ ಲಂಬಾಣಿಗಳಿಗೆ ಬೋಧನೆ ಮಾಡುತ್ತಿದ್ದಾರೆ.

ಈ ಅಧ್ಯಾಯದಲ್ಲಿ ಲಂಬಾಣಿಗಳ ಆರ್ಥಿಕ ವ್ಯವಸ್ಥೆ ಮತ್ತು ಬದಲಾವಣೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದ ಲಂಬಾಣಿಗಳ ಆರ್ಥಿಕತೆಯ ಪ್ರಧಾನ ಲಕ್ಷಣಗಳನ್ನು ಮೊದಲಿಗೆ ಗುರುತಿಸಿ, ಆರ್ಥಿಕ ಬದಲಾವಣೆಯ ಪ್ರಕ್ರಿಯೆಗೆ ಕಾರಣವಾದ ಅಂಶಗಳಿಂದ ಲಂಬಾಣಿಗಳ ಸಂಪ್ರಾದಾಯಿಕ ಆರ್ಥಿಕ ವ್ಯವಸ್ಥೆಯು ಹೇಗೆ ರೂಪಾಂತರಗೊಂಡಿದೆ ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಚರ್ಚೆ ಮಾಡಿದೆ. ಅಲ್ಲದೆ ಆರ್ಥಿಕ ಸಂಪನ್ಮೂಲಗಳು, ಉತ್ಪಾದನಾ ಚಟುವಟಿಕೆಯ ಸಂಘಟನೆಗಳು ಮತ್ತು ಆರ್ಥಿಕ ಉಪ-ವ್ಯವಸ್ಥೆಗಳ ನಡುವೆ ಇರುವ ಅಂತರ್-ಸಂಬಂಧಗಳನ್ನು ವಿವರಿಸಿದೆ. ಲಂಬಾಣಿಗಳ ಆರ್ಥಿಕ ವ್ಯವಸ್ಥೆಯು ಬದಲಾವಣೆಯ ಗತಿಶೀಲತೆಯಲ್ಲಿ ವಿವಿಧ ಹಂತಗಳನ್ನು ಕ್ರಮಬದ್ಧ ಕಾಲಾವಧಿಗಳಲ್ಲಿ ವಿಂಗಡಿಸಲು ಬರುವುದಿಲ್ಲ. ಏಕೆಂದರೆ ಯಾವುದೇ ಸಮಾಜದಲ್ಲಿ ಒಂದು ಹಂತದಿಂದ ಇನ್ನೊಂದು ಹಂತದ ಪರಿವರ್ತನೆ ಹಠಾತ್ತನೆ ಸಂಭವಿಸಲಾರದು. ಈ ಕಾರಣದಿಂದ ಕ್ರಮಬದ್ಧ ಕಾಲಾವಧಿಯಲ್ಲಿ ಲಂಬಾಣಿಗಳ ಆರ್ಥಿಕ ವ್ಯವಸ್ಥೆಯನ್ನು ವಿಂಗಡಿಸಿ ಚರ್ಚಿಸುವುದು ಸರಿಯಲ್ಲ. ಹೀಗಾಗಿ ಸುಮಾರು ೧೫೦ ವರ್ಷಗಳ ಅವಧಿಯಲ್ಲಿ ಲಂಬಾಣಿಗಳ ಆರ್ಥಿಕ ಸಂಘಟನೆಯನ್ನು ಆವರಿಸಿದ ಬದಲಾವಣೆಗಳನ್ನು ಅಧ್ಯಯನಮಾಡಿ ತಾತ್ಪರ್ಯವನ್ನು ಕಂಡುಕೊಳ್ಳಲಾಗಿದೆ. ಲಂಬಾಣಿಗಳಲ್ಲಿ ಉಂಟಾಗಿರಬಹುದಾದ ಸಾಮಾಜಿಕ-ಆರ್ಥಿಕ ಬದಲಾವಣೆಗಳನ್ನು, ಅಧ್ಯಯನ ನಡೆಸಿದ ತಾಂಡಗಳಲ್ಲಿ ಇರುವ ಲಂಬಾಣಿ ಕುಟುಂಬಗಳ ಆದಾಯ ಹಾಗೂ ವೆಚ್ಚದ ಮಾದರಿ, ಅನುಭೋಗ ಮತ್ತು ಜೀವನ ಮಟ್ಟ, ಹಂಚಿಕೆ ಮತ್ತು ವಿನಿಮಯ, ಉಳಿತಾಯ, ಸಾಲ, ಬಂಡವಾಳ ಹೂಡಿಕೆ, ಮಾರುಕಟ್ಟೆಯಲ್ಲಿನ ಸಂಬಂಧ ಮುಂತಾದ ಆರ್ಥಿಕ ಉಪ-ವ್ಯವಸ್ಥೆಗಳನ್ನು ಅಧ್ಯಯನ ಮಾಡಿ ಪ್ರಧಾನವೆನಿಸಿದ ತತ್ವಗಳನ್ನು ವಿಶ್ಲೇಷಿಸಿದೆ. ಲಂಬಾಣಿಗಳು ಇತರ ಸಮುದಾಯಗಳೊಂದಿಗೆ ಹೊಂದಿರುವ ಆರ್ಥಿಕ ಸಂಪರ್ಕಗಳು, ಯಾವ ರೀತಿಯಲ್ಲಿ ಲಂಬಾಣಿ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಘಟನೆಯ ಮೇಲೆ ಪ್ರಭಾವ ಮತ್ತು ಪರಿಣಾಮಗಳನ್ನು ಬೀರಿವೆ ಎಂಬುದನ್ನು ಕೂಡ ಇಲ್ಲಿ ವಿವರಿಸಿದೆ. ಹೀಗೆ ಚರ್ಚಿಸುವಾಗ ರೈತಾಪಿಕರಣ, ನಗರ ಸಂಪರ್ಕ, ಸರ್ಕಾರಿ ಸೇವೆ, ಶಿಕ್ಷಣ ಮತ್ತು ಹಿಂದುಳಿದ ಸಮುದಾಯಗಳ ಸಮಾಜಿಕ-ಆರ್ಥಿಕ ಸ್ಥಿತಿಗಳನ್ನು ಸುಧಾರಿಸಲು ಜಾರಿಗೊಳಿಸಿದ ಸರ್ಕಾರಿ ಹಾಗೂ ಖಾಸಗಿ ಕಾರ್ಯಕ್ರಮಗಳು ಹೇಗೆ ಈ ಸಮುದಾಯದ ಸಾಮಾಜಿಕ -ಆರ್ಥಿಕ ರಚನೆಯಲ್ಲಿ ಹೇಗೆ ಬದಲಾವಣೆಯನ್ನು ಉಂಟುಮಾಡಿವೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

# References

Bhat, Chandrasekhar. "Social Adjustment and Change among the Wadders" in Misra, P.K. and K.C. Malhotra (eds.) ***Indian Nomads***, Calcutta : Anthropological Survey of India, 1982.

Campbell, James M. ***Bombay Gazetteer - Karnataka (Dharwar)***,Bombay: Government of Bombay Presidency, 1884.

Campbell, James M. ***Bombay Gazetteer- Karnataka (Bijapur)***, Bombay: Government of Bombay Presidency, 1884.

Craufurd, Q. ***"Sketches Chiefly relating to the History, Religion, Learning, and Manners of the Hindus***," London: Printed for T.Cadale, in the Strand, Second Edn. Vol. II, 1742.

Dalton, George.(ed.). ***Economic Development and Social Change.*** New York : Natural History Press, 1971.

Dalton, George. ***Economic Anthropology and Development,*** New York : Basic Books I no,1971.

Epstein, T.S. ***Economic Development and Social Change in South India***, Bombay: Oxford University Press, 1962.

Foster,G.M. ***"The Dyadic Contract: a Model for the Social Structure of a Mexican Peasant Village"*** in Potter, et. al. (eds.) Peasant Society (A Reader), Boston: Little Brown & Co., 1967

Malhotra,S.P. & A.B. Bose "Problems of Rehabilitation of Nomadic Banjaras of Western Rajasthan," ***Annals of Arid Zone***, Vol.2, No. 1., 1963.

Nanjundayya, H.V.& L.K. Ananthakrishna Iyer. ***The Mysore Tribes and Castes***, Vol.II, Mysore: University of Mysore Press, 1928.

Nash, Manning. ***Primitive and Peasant Economic Systems,*** San Francisco: Chandler, 1966.

Pradhan, M.C. ***The Political System of the Jats of Northern India***,Bombay: Oxford University Press, 1966.

Saxena, Rabir Prakash. ***Tribal Economy of Central India,*** Calcutta: Firma K.L. Mukhopadhyaya, 1964.

Shanin,T. "Peasantry: Delineation of Concept and a field of Study", ***European Journal of S ociology***, Vol. XII, 1971.

# ಅಧ್ಯಾಯ ೩

# ಲಂಬಾಣಿಗಳ ಸಾಮಾಜಿಕ ಜೀವನದ ಪ್ರಮುಖ ಮುಖಗಳು

ಸಾಮಾಜಿಕ ಸಂಘಟನೆ ಮತ್ತು ಬದಲಾವಣೆ

ಲಂಬಾಣಿಗಳ ಸಾಮಾಜಿಕ ನಿಯಂತ್ರಣದ ಸಂಘಟನೆ ಮತ್ತು ಬದಲಾವಣೆಗಳು

ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳು

ಲಂಬಾಣಿಗಳ ಲೋಕದೃಷ್ಟಿ

ಆರ್ಥಿಕ ಬದಲಾವಣೆ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಎದುರಾಗುವ ಸಮಸ್ಯೆಗಳು.

ಅಧ್ಯಾಯ ೩

# ಲಂಬಾಣಿಗಳ ಸಾಮಾಜಿಕ ಜೀವನದ ಪ್ರಮುಖ ಮುಖಗಳು

ಲಂಬಾಣಿ ಆರ್ಥಿಕ ವ್ಯವಸ್ಥೆಯ ಸಾಂಪ್ರದಾಯಿಕ ಮತ್ತು ಸಮಕಾಲೀನ ಸ್ಥಿತಿ ಗತಿಗಳನ್ನು ಇದುವರೆಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಅಧ್ಯಾಯದಲ್ಲಿ ಆರ್ಥಿಕ ಪರಿವರ್ತನೆಗಳಿಂದ ಅವರ ಸಾಮಾಜಿಕ ಸಂಘುಟನೆಗಳು ಹೇಗೆ ಪರಿವರ್ತನೆಗೊಳ್ಳುತ್ತಿವೆ ಎಂಬುದನ್ನು ಚರ್ಚಿಸಲು ಪ್ರಯತ್ನಿಸಿಲಾಗಿದೆ. ತಂತ್ರಜ್ಞಾನದಲ್ಲಾದ ಮೂಲಭೂತ ಬದಲಾವಣೆಗಳು, ಜೀವನೋಪಾಯದ ಅವಶ್ಯಕತೆಗಳು, ಪ್ರಾರಂಭಿಕ ಹಂತದ ಆರ್ಥಿಕ ವೈವಿಧ್ಯತೆ, ನಗದು ಕೂಲಿ ಹೆಚ್ಚಳದಿಂದ ವ್ಯಕ್ತಿಗಳ ಪರಿಶ್ರಮಕ್ಕೆ ಪ್ರಾಮುಖ್ಯತೆ, ಇವು ಸಾಮಾಜಿಕ ಸಂಬಂಧಗಳ ವ್ಯಾಪ್ತಿಯನ್ನು ವಿಸ್ತರಿಸಿವೆಯಾದರೂ ಸ್ವಲ್ಪಮಟ್ಟಿನ ಪ್ರಾದೇಶಿಕ ಚಲನೆಗೆ ಕಾರಣವಾಗಿವೆ. ಇವೆಲ್ಲವೂ ಲಂಬಾಣಿಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಘಟನೆಯಲ್ಲಿ ಗಣನೀಯವಾದ ಬದಲಾವಣೆಗಳನ್ನು ಹುಟ್ಟುಹಾಕಿವೆ. ವಿಶೇಷವಾಗಿ ಈ ಅಧ್ಯಾಯದಲ್ಲಿ ಲಂಬಾಣಿ ಸಮುದಾಯದ ಸಾಮಾಜಿಕ ಸಂಘುಟನೆಯಲ್ಲಿ, ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣದಲ್ಲಿ, ಅವರ ಧಾರ್ಮಿಕ ಮತ್ತು ನಂಬಿಕೆ ವ್ಯವಸ್ಥೆಗಳಲ್ಲಿ ಉಂಟಾಗಿರುವ ಬದಲಾವಣೆಗಳಿಗೆ ವಿಶೇಷವಾದ ಒತ್ತನ್ನು ನೀಡಲಾಗಿದೆ.

## ಸಾಮಾಜಿಕ ಸಂಘುಟನೆ ಮತ್ತು ಬದಲಾವಣೆಗಳು

ಲಂಬಾಣಿ ತಾಂಡಗಳು ಸಾಮಾನ್ಯವಾಗಿ ಬಂಧುತ್ವ ಮತ್ತು ವಾಸಸ್ಥಾನಗಳೆಂಬ ಎರಡು ಮೂಲಭೂತ ನಿಯಮಗಳನ್ನಾಧರಿಸಿ ಸಂಘುಟಿಸಲ್ಪಟ್ಟಿರುತ್ತವೆ. ಈ ಎರಡೂ ವ್ಯವಸ್ಥೆಗಳ ಮೂಲಕ ಲಂಬಾಣಿ ಸಮಾಜವನ್ನು ವಿವರವಾಗಿ ಅಧ್ಯಯನ ಮಾಡಿ ತಿಳಿದುಕೊಳ್ಳುವ ಈ ಪ್ರಯತ್ನ ದೂರದರ್ಶಕದ ಒಂದು ತುದಿಯ ಮುಖಾಂತರ ವೀಕ್ಷಿಸಿದಂತೆಯೇ ಸರಿ. ಬಂಧುತ್ವ ಮತ್ತು ವಾಸಸ್ಥಾನಗಳ ಆಧಾರದ ಮೇಲೆ ಸಂಘುಟಿತವಾದ ಈ ಗುಂಪುಗಳು ಗುರುತಿಸಬಹುದಾದ ರೀತಿಯಲ್ಲಿ ಒಂದರ ಮೇಲೊಂದು ವಿಸ್ತೃತಗೊಂಡಿರುವುದರಿಂದ, ಅವುಗಳ ಗುಣಲಕ್ಷಣ ಮತ್ತು ಕಾರ್ಯಗಳನ್ನು ಪ್ರತ್ಯೇಕಿಸುವುದು ಸ್ವಲ್ಪ ಕಠಿಣವಾಗುತ್ತದೆ. ಒಟ್ಟಿನಲ್ಲಿ ಲಂಬಾಣಿಗಳ ದಿನನಿತ್ಯ ಜೀವನದ ವ್ಯವಹಾರಗಳನ್ನು ಸ್ಥೂಲವಾಗಿ ಗಮನಿಸಿದರೆ, ಅವರು ತಮ್ಮ ವಾಸಸ್ಥಾನಕ್ಕೆ ಹೆಚ್ಚು ಒತ್ತು ಕೊಡುವಂತೆ ಕಂಡು ಬರುತ್ತದೆ. ಮೊದಲಿಗೆ ವಾಸಸ್ಥಾನವನ್ನಾಧರಿಸಿದ ಗುಂಪುಗಳ ಬಗ್ಗೆ ಚರ್ಚಿಸಲಾಗಿದೆ. ನಂತರ ಬಂಧುತ್ವವನ್ನಾಧರಿಸಿದ ಗುಂಪುಗಳನ್ನು ಕುರಿತ ವಿಶ್ಲೇಷಣೆಯನ್ನು ನೀಡಲಾಗಿದೆ.

### ಕುಟುಂಬ

ಲಂಬಾಣಿ ತಾಂಡಗಳಲ್ಲಿ ವಾಸಸ್ಥಾನವನ್ನು ಆಧರಿಸಿ ಮೂರು ಪ್ರಮುಖ ಸಾಂಸ್ಥಿಕ ಚೌಕಟ್ಟುಗಳನ್ನು ಗುರುತಿಸಬಹುದು ಅವುಗಳೆಂದರೆ ಕುಟುಂಬ, ನೆರೆಹೊರೆ ಮತ್ತು ನೆಲೆಯೂರಿದ ಸಮುದಾಯ. ಮೊದಲಿಗೆ ಕುಟುಂಬವನ್ನು ಕುರಿತ ವಿವರಣೆ-ವಿಶ್ಲೇಷಣೆ ಕಂಡುಬರುತ್ತದೆ.

ಕುಟುಂಬವು ವಾಸಸ್ಥಾನವನ್ನಾಧರಿಸಿದ ಸಂಬಂಧಗಳ ವಲಯದಲ್ಲಿ (ಅಣು ಅಥವಾ ಅವಿಭಕ್ತ ಕುಟುಂಬ) ಮೂಲಭೂತ ಘಟಕ. ಕೇವಲ ಆರ್ಥಿಕ ದೃಷ್ಟಿಯಿಂದ, ಸಾಮಾಜಿಕ ಆಚಾರ ಮತ್ತು ಒಂದೇ ಸೂರಿನಡಿ ವಾಸಿಸುವ ಗುಂಪನ್ನು ಲಂಬಾಣಿಗಳು ಕುಟುಂಬವೆಂದು ಪರಿಗಣಿಸುತ್ತಾರೆ. ಲಂಬಾಣಿಗಳು ಜಗಳ/ಕಲಹದಿಂದ ವಿಭಜನೆಗೊಂಡ ಕುಟುಂಬದ ಸದಸ್ಯರ ಪುನರ್‌ಮಿಲನವನ್ನು ಸಾಮೂಹಿಕ ಅಡಿಗೆ ಮತ್ತು ಔತಣದ ಮೂಲಕ ಪುನಃ ಹುಟ್ಟುಹಾಕುತ್ತಾರೆ. ಈ ವ್ಯವಸ್ಥೆಯು ಸಾಮಾನ್ಯವಾಗಿ ಸದಸ್ಯರಿಂದಲೇ ಉತ್ಪಾದಿಸಲಾಗುವ ಎಲ್ಲಾ ಸಂಪನ್ಮೂಲಗಳನ್ನು ಸಾಮಾನ್ಯ ನಿಧಿಗೆ ಸೇರಿಸುವುದು ಮತ್ತು ಸರಿಸಮನಾಗಿ ಹಂಚಿಕೊಳ್ಳುವ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ಕುಟುಂಬದ ಮೂಲಭೂತ ಕಾರ್ಯವೇ ಉತ್ಪಾದನೆ. ಕುಟುಂಬವೇ ಉತ್ಪಾದನಾ ಘಟಕ ಎಂಬುದನ್ನು ಇದು ಸೂಚಿಸುತ್ತದೆ. ಅಧ್ಯಯನಕ್ಕೆ ಒಳಪಡಿಸಿದ ತಾಂಡಗಳ ಆದಾಯದ ಮೂಲಗಳು, ವೆಚ್ಚದ ಮಾದರಿ, ಮುಂತಾದವುಗಳನ್ನು ೨ನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇವೆಲ್ಲವೂ ಪ್ರತಿ ಕುಟುಂಬದ ಆಯವ್ಯಯವನ್ನು ಅಂದಾಜು ಮಾಡಲಾದ ಅಂಕಿ ಅಂಶವನ್ನು ಆಧರಿಸಿದೆ.

ಲಂಬಾಣಿಗಳು ತಮ್ಮ ಜೀವನೋಪಾಯಕ್ಕಾಗಿ ಇತ್ತೀಚೆಗೆ ಹೆಚ್ಚು-ಹೆಚ್ಚಾಗಿ ಕೃಷಿ ಸಾಗುವಳಿ ಹಾಗೂ ಕೂಲಿ ಕೆಲಸಗಳನ್ನು ಅವಲಂಬಿಸಿದ್ದಾರೆ. ಹೀಗಾಗಿ ಹೆಚ್ಚು ಸದಸ್ಯರನ್ನೊಳಗೊಂಡ ಕುಟುಂಬಗಳು ಸಮರ್ಥವಾಗಿ ಆದಾಯವನ್ನು ರೂಪಿಸಿಕೊಳ್ಳಬಲ್ಲವು. ಆದ್ದರಿಂದಲೇ ಎರಡು ಅಥವಾ ಹೆಚ್ಚು ಅಣು ಕುಟುಂಬಗಳು ಜೊತೆಯಾಗಿ (ಒಂದೇ ಕುಟುಂಬವಾಗಿ) ಕಾರ್ಯ ನಿರ್ವಹಿಸುತ್ತವೆ. ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳಲ್ಲಿ ಕ್ರಮವಾಗಿ ಶೇಕಡ ೩೪.೩ ಮತ್ತು ೩೫.೪ರಷ್ಟು ವಿಸ್ತೃತ ಕುಟುಂಬಗಳನ್ನು ಲಂಬಾಣಿಗಳಲ್ಲಿ ನಾವು ಕಾಣುತ್ತೇವೆ (ಕೋಷ್ಟಕ ಸಂಖ್ಯೆ ೩.೧). ವಿಸ್ತೃತ ಕುಟುಂಬಗಳಲ್ಲಿ ಉತ್ಪಾದನೆ ಮತ್ತು ಅನುಭೋಗ ಸಾಮೂಹಿಕವಾಗಿ ಇರುವುದರಿಂದ ಇವುಗಳನ್ನು ಅವಿಭಕ್ತ ಕುಟುಂಬಗಳೆಂದು ಕರೆಯುತ್ತಾರೆ. ಏಕೆಂದರೆ ಕುಟುಂಬದ ಪಿತ್ರಾರ್ಜಿತ ಆಸ್ತಿಯ ಒಡೆತನ ಸಾಮಾನ್ಯವಾಗಿ ಜಂಟಿಯಾಗಿರುವುದು. ಇದೇ ರೀತಿ ಕುಟುಂಬದ ಹಿರಿಯನ (ಯಜಮಾನನ) ನೇತೃತ್ವದಲ್ಲಿ ಪ್ರತಿ ಅವಿಭಕ್ತ ಕುಟುಂಬವು ಸಂಘಟಿಸಲ್ಪಟ್ಟಿರುತ್ತದೆ. ವ್ಯವಸ್ಥಿತವಾಗಿ ಅಭಿವೃದ್ಧಿ ಹೊಂದಿದ ಶ್ರಮ ವಿಭಜನೆ ಲಂಬಾಣಿ ಅವಿಭಕ್ತ ಕುಟುಂಬಗಳ ವಿಶಿಷ್ಟ ಗುಣಲಕ್ಷಣವಾಗಿದೆ. ಮಹಿಳೆಯರ ಚಟುವಟಿಕೆಗಳನ್ನು ಮನೆಯ ಹಿರಿಯ ಮಹಿಳೆ, ಕುಟುಂಬದ ಯಜಮಾನನ ಹೆಂಡತಿ ಸಾಮಾನ್ಯವಾಗಿ ಮೇಲ್ವಿಚಾರಣೆ ಮಾಡುತ್ತಾಳೆ. ಆದರೆ ಕೆಲವು ಸಂದರ್ಭಗಳಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಮಾತ್ರ ಸಂಬಂಧಿ ಕುಟುಂಬ ವ್ಯವಸ್ಥೆಗೆ ಎಡೆ ಮಾಡಿಕೊಡುತ್ತದೆ. ಆ ಸಂದರ್ಭ ಏಕೆಂದರೆ ತಂದೆ ಜೀವಿಸಿದ್ದರೂ, ಅನಾರೋಗ್ಯದಿಂದ ಅಥವಾ ಕುಟುಂಬವನ್ನು ಪೋಷಣೆ ಮಾಡಲು ಅಸಮರ್ಥನಾದಾಗ ತಂದೆ ಅಧಿಕಾರವನ್ನು ತನ್ನ ಹಿರಿಯ ಮಗನಿಗೆ ವಹಿಸಿಕೊಡುತ್ತಾನೆ. ಇನ್ನೂ ಕೆಲವು ಸಂದರ್ಭಗಳಲ್ಲಿ ತಂದೆ ಶಕ್ತನಾಗಿದ್ದರೂ, ಕುಟುಂಬದ ವ್ಯವಹಾರವನ್ನು ಸರಿಯಾದ ರೀತಿ ನಿಭಾಯಿಸಲು ಅಸಮರ್ಥನಾದಾಗ ಮಹತ್ವಾಕಾಂಕ್ಷಿಯಾದ ಮಗ ತಂದೆಯಿಂದ ಕುಟುಂಬದ ಆಧಿಪತ್ಯವನ್ನು ಕಸಿದುಕೊಳ್ಳುತ್ತಾನೆ. ಕೇವಲ ಎರಡೇ ತಲೆಮಾರಿನ ಹಿಂದೆ ಕುಟುಂಬದ ಆಧಿಪತ್ಯವನ್ನು(ಯಜಮಾನಿಕೆ) ಕುಟುಂಬದ ಕಿರಿಯ ಸದಸ್ಯರು ಕಸಿದುಕೊಳ್ಳುತ್ತಿರುವುದು ಊಹಿಸಲು ಸಾಧ್ಯವಾಗದ ವಿಷಯ ಎಂಬುದು ಕೆಲವು ಹಿರಿಯ ಮಾಹಿತಿದಾರರ ಅಭಿಪ್ರಾಯ. ಆದರೆ ಸಾಕ್ಷರತೆ, ಪಟ್ಟಣದ ಸಂಪರ್ಕ ಮತ್ತು ಯುವ ಜನಾಂಗದ ತೀಕ್ಷ್ಣ ಬುದ್ಧಿಯ ಪರಿಣಾಮದಿಂದ ಇದನ್ನು ನಂಬುವಂತೆ ಮಾಡಿವೆ. ಕೌಟುಂಬಿಕ ಒಡೆತನದಲ್ಲೂ ಉಂಟಾಗುತ್ತಿರುವ ಧೋರಣೆಗಳಿಗೆ ಸಾಮಾಜಿಕ ಮೌಲ್ಯಗಳ ಕುಸಿತವೇ ಕಾರಣವೆಂದು ಲಂಬಾಣಿ ಸಮಾಜದ (ವೃದ್ಧರು) ಹಿರಿಯರು ವಿಷಾದಿಸುತ್ತಾರೆ. ಈ ರೀತಿಯ ಪ್ರವೃತ್ತಿಗಳು ಕುಟುಂಬಗಳ ವಿಘಟನೆಗೆ ಮೂಲ ಕಾರಣಗಳಾಗಿವೆ.

ಅವಿಭಕ್ತ ಕುಟುಂಬವು ಅನೇಕ ಕಾರಣಗಳಿಂದಾಗಿ, ಒಂದೇ ರಕ್ತ ಸಂಬಂಧದ ಮತ್ತು ವಿವಾಹ ಸಂಬಂಧವುಳ್ಳವರನ್ನು, ಕಾನೂನುಬದ್ಧವಾಗಿ ಬೇರೆ ಕುಟುಂಬಕ್ಕೆ ಸೇರಿದವರನ್ನು ಮತ್ತು ಕೆಲಸಗಾರರನ್ನು ಒಳಗೊಂಡಿರಬಹುದು. ಉದಾಹರಣೆಗೆ ಮರಿಯಮ್ಮನಹಳ್ಳಿ ತಾಂಡದಲ್ಲಿ ಇರುವ, ಸ್ವಲ್ಪಮಟ್ಟಿಗೆ ಮುಂದುವರಿದ ಲಂಬಾಣಿ ಅವಿಭಕ್ತ ಕುಟುಂಬವು ಮೂರು ಅಣು ಕುಟುಂಬಗಳನ್ನು ಒಳಗೊಂಡಿದೆ. ಇಬ್ಬರು ವಿವಾಹಿತ ಗಂಡು ಮಕ್ಕಳು, ಅವರ ಪತ್ನಿಯರು, ಮಕ್ಕಳು, ಒಬ್ಬ ವಿವಾಹಿತ ಮಗಳು, ಅವಳ ಪತಿ ಹಾಗೂ ಮಕ್ಕಳು, ಮೂವರು ಲಂಬಾಣಿ ವಾರ್ಷಿಕ ಕೆಲಸಗಾರರು ಮತ್ತು ಇಬ್ಬರು ವೃದ್ಧ ಆಶ್ರಿತರು (ಬೇರೆ ಸಮುದಾಯಕ್ಕೆ ಸೇರಿದ) ಸೇರಿ ಒಂದು ಅವಿಭಕ್ತ ಕುಟುಂಬವಾಗಿದೆ. ಇವರನ್ನು ಕುಟುಂಬವು ಕೃಷಿಗೆ ಸಹಾಯ ಮಾಡುವುದಕ್ಕೆ ಪ್ರತಿಯಾಗಿ ಪೋಷಿಸುತ್ತದೆ. ವಿವಾಹದ ನಂತರ ವಾಸಸ್ಥಾನ ಸಾಮಾನ್ಯವಾಗಿ ಪಿತೃಪ್ರಧಾನವಾಗಿದ್ದರೂ, ಕೆಲವು ಸಂದರ್ಭಗಳಲ್ಲಿ ಮಾತೃಪ್ರಧಾನ ವಸತಿಗಳನ್ನೂ 'ವಧು ಸೇವಾ' ಸಂಪ್ರದಾಯದ ಹಿನ್ನೆಲೆಯಲ್ಲಿ ಗುರುತಿಸಬಹುದು. ಒಂದು ಆದರ್ಶ ಕುಟುಂಬವು, ಒಬ್ಬ ಪುರುಷ, ಅವನ ಹೆಂಡತಿ, ಆತನ ವಿವಾಹಿತ ಮಕ್ಕಳು, ಅವರ ಹೆಂಡತಿಯರು ಮತ್ತು ಮಕ್ಕಳು, ಅವರ ಅವಿವಾಹಿತ ಗಂಡು ಹಾಗೂ ಹೆಣ್ಣು ಮಕ್ಕಳನ್ನು ಹೊಂದಿರುತ್ತದೆ. ಕೋಷ್ಟಕ ೬.೧ರಲ್ಲಿ ತೋರಿಸಿರುವಂತೆ ಹತ್ತಕ್ಕಿಂತಲೂ ಹೆಚ್ಚು ಸದಸ್ಯರನ್ನೊಳಗೊಂಡ ವಿಸ್ತೃತ ಕುಟುಂಬಗಳು ಸಾಮಾನ್ಯವಾಗಿ ಇದೇ ಮಾದರಿಯವೇ ಆಗಿವೆ. ವಿವಾಹಿತ ಗಂಡು ಮಕ್ಕಳು ಯಾವುದೇ ಸಮಯದಲ್ಲಿ ಅವಿಭಕ್ತ ಕುಟುಂಬದಿಂದ ಬೇರೆಯಾಗಬಹುದಾದರೂ ಸಾಮಾನ್ಯವಾಗಿ ತಂದೆಯ ಮರಣಾನಂತರವೇ ಪ್ರತ್ಯೇಕಗೊಳುತ್ತಾರೆ. ಕೌಟುಂಬಿಕ ಸಂಘಟನೆಯು ಸಾಮಾನ್ಯವಾಗಿ ಅವಿಭಕ್ತ ಕುಟುಂಬದ ಮಾದರಿಯಲ್ಲಿಯೇ ಇರುತ್ತದೆ. ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರದ ತಾಂಡಗಳಲ್ಲಿ ಒಟ್ಟು ಸಂಖ್ಯೆಯ ಮೂರನೇ ಒಂದಕ್ಕಿಂತಲೂ ಹೆಚ್ಚು ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿವೆ. ಅನೇಕ ಜೈವಿಕ, ಸಾಮಾಜಿಕ ಹಾಗೂ ಆರ್ಥಿಕ ಕಾರಣದಿಂದ ಕೆಲವು ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿ ಉಳಿಯಲು ಸಾಧ್ಯವಾಗುವುದಿಲ್ಲ. ಅವುಗಳಲ್ಲಿ ಬ್ರಹ್ಮಚರ್ಯ, ವೈಧವ್ಯ, ವಿವಾಹ ವಿಚ್ಛೇದನ, ಬಂಜೆತನ ಮತ್ತು ಆರ್ಥಿಕ ಸಂಪನ್ಮೂಲಗಳ ಕೊರತೆ - ಇವು ಗಮನಾರ್ಹ ಕಾರಣಗಳಾಗಿವೆ. ಕೆಲವು ಕುಟುಂಬಗಳು ಗಂಡು ಮಕ್ಕಳ ವಿವಾಹದ ನಂತರ ಮತ್ತು ಮೊಮ್ಮಕ್ಕಳ ಜನನದ ನಂತರ ವಿಸ್ತೃತಗೊಳ್ಳುತ್ತವೆ. ಅವಿಭಕ್ತ ಕುಟುಂಬಗಳು ಕೇವಲ ಕೆಲವು ಸಂದರ್ಭಗಳಲ್ಲಷ್ಟೇ ಉದ್ದೇಶಪೂರ್ವಕವಾಗಿ ವಿಘಟನೆಯಾಗುತ್ತವೆ. ಪ್ರತಿಯೊಂದು ಅವಿಭಕ್ತ ಕುಟುಂಬದಲ್ಲಿಯೂ ಯಾವುದಾದರೂ ಒಂದು ಸಂದರ್ಭದಲ್ಲಿ ವಿಘಟನೆ ಉಂಟಾಗಬಹುದು. ಆದರೆ ಈ ವಿಘಟನೆ ಅವಿಭಕ್ತ ಕುಟುಂಬದ ಆದರ್ಶವನ್ನು ಉಲ್ಲಂಘಿಸಿದೆ ಎಂದು ಹೇಳಲಾಗದು. ಸ್ವಾಭಾವಿಕವಾಗಿಯೇ ಅದು ಈ ಆದರ್ಶವನ್ನು ಸಾಧಿಸುವಲ್ಲಿ ವಿಫಲವಾಗಿರಬಹುದು. ಪ್ರತಿಯೊಂದು ಕೌಟುಂಬಿಕ ವ್ಯವಸ್ಥೆಯು ಆದರ್ಶಗಳ ಪ್ರಕಾರ ಸಂತಾನಾಭಿವೃದ್ಧಿಯಿಂದಾಗಿ ಅವಿಭಕ್ತ ಕುಟುಂಬವಾಗಿ ಬೆಳೆಯುತ್ತದೆ. ನಂತರ ಗಂಡು ಮಕ್ಕಳ ವಿವಾಹದಿಂದಾಗಿ ವೃದ್ಧಿಸುತ್ತಾ, ಕೊನೆಗೆ ಮೊಮ್ಮಕ್ಕಳ ಜನನದಿಂದಾಗಿ ಅವಿಭಕ್ತ ಕುಟುಂಬವಾಗಿ ರೂಪುಗೊಳ್ಳುತ್ತದೆ. ಆದಾಗ್ಯೂ ಅವಿಭಕ್ತ ಕುಟುಂಬದ ಸಂಸ್ಥಾಪಕನ ಅಥವಾ ಯಜಮಾನನ ಮರಣಾನಂತರ ತಕ್ಷಣವೇ, ಅವಿಭಕ್ತ ಕುಟುಂಬವು ಸರಳವಾಗಿ ಅಣುಕುಟುಂಬಗಳಾಗಿ ವಿಭಜನೆಯಾಗಲು ಎಡೆ ಮಾಡಿಕೊಡುವುದಿಲ್ಲ. ಸಾಮಾನ್ಯವಾಗಿ ಹಿರಿಯ ಮಗನೇ ಅವಿಭಕ್ತ ಕುಟುಂಬದ ಮುಖ್ಯಸ್ಥನ ಸ್ಥಾನವನ್ನು ವಹಿಸಿಕೊಳ್ಳುತ್ತಾನೆ. ಆದರೂ ಸ್ವಲ್ಪ ಸಮಯದ ನಂತರ ಸಹೋದರರು ತಮ್ಮದೇ ಆದ ಅಣುಕುಟುಂಬಗಳನ್ನು ರೂಪಿಸಿಕೊಳ್ಳುವ ಮೂಲಕ ಹೊಸ ಪ್ರಕ್ರಿಯೆ ಆರಂಭವಾಗುತ್ತದೆ. ಎಲ್ಲರೂ ಅವಿಭಕ್ತ ಕುಟುಂಬದ ಸದಸ್ಯರಾಗಿರುವುದು ಸಾಧ್ಯವಾಗದೇ ಇದ್ದಾಗ ಲಂಬಾಣಿಗಳು ಆಸ್ತಿಯನ್ನು ಸಮನಾಗಿ ಹಂಚಿಕೊಂಡು, ಪಿತ್ರಾರ್ಜಿತ ಆಸ್ತಿಯನ್ನು ವಿಭಜನೆ ಮಾಡುತ್ತಾರೆ. ವಿಭಜನೆ ಮಾಡುವಾಗ ಒಂದು ಭಾಗವನ್ನು ಪ್ರತ್ಯೇಕವಾಗಿ ತೆಗೆದಿರಿಸಿ, ಆ ನಿಧಿಯನ್ನು ತಂದೆ ತಾಯಿಗಳಿಗಾಗಿ (ತಂದೆ ಗತಿಸಿದ್ದರೆ ತಾಯಿಗೆ ಅಥವಾ ತಾಯಿ

ಗತಿಸಿದ್ದರೆ ತಂದೆಗೆ), ಕುಟುಂಬದ ಕುಲ ದೇವತಾರಾಧನೆ ಮತ್ತು ಪೂರ್ವಜರಿಗೆ ಸಂಬಂಧಿಸಿದ ಆಚರಣೆಗಳಿಗಾಗಿ ವಿನಿಯೋಗಿಸುತ್ತಾರೆ. ಲಂಬಾಣಿಗಳ ಸಂಪ್ರದಾಯದ ಪ್ರಕಾರ ಅವಿಭಕ್ತ ಕುಟುಂಬದ ವಿಭಜನೆಯ ನಂತರ ಕಿರಿಯ ಸಹೋದರನೇ ತಂದೆ ತಾಯಿಯರನ್ನು ನೋಡಿಕೊಳ್ಳುವ ಹೊಣೆಯನ್ನು ಸಾಂಪ್ರದಾಯಿಕವಾಗಿ ವಹಿಸಿಕೊಳ್ಳಬೇಕು. ಹೀಗಾಗಿ, ಅವನೇ ಕುಟುಂಬದ ಕುಲ ದೇವತಾರಾಧನೆ ಮತ್ತು ಪೂರ್ವಜರಿಗೆ ಸಂಬಂಧಿಸಿದ ಆಚರಣೆಗಳನ್ನು ನಿಭಾಯಿಸಬೇಕಾಗುವುದರಿಂದ ಪ್ರತ್ಯೇಕವಾಗಿ ತೆಗೆದಿರಿಸಿದ ಹಣವನ್ನು ಮೇಲಿನ ಉದ್ದೇಶಗಳಿಗೆ ವಿನಿಯೋಗಿಸುವ ಹಕ್ಕನ್ನು ಪಡೆದುಕೊಳ್ಳುತ್ತಾನೆ. ಒಂದೇ ಮನೆ ಇದ್ದು ಅದರಲ್ಲಿ ಒಂದಕ್ಕಿಂತ ಹೆಚ್ಚಿನ ಕುಟುಂಬಗಳು ವಾಸಿಸಲು ಸ್ಥಳಾವಕಾಶವಿಲ್ಲದಿದ್ದಾಗ, ಮನೆಯನ್ನು ವಿಭಜಿಸಲು ಸಾಧ್ಯವಿಲ್ಲದಿದ್ದಾಗ, ಆ ಮನೆಯನ್ನು ಕಿರಿಯ ಸಹೋದರನಿಗೆ ಬಿಟ್ಟು ಕೊಡಲಾಗುತ್ತದೆ. ಉಳಿದವರು ಸ್ವಂತ ಹೊಸ ಮನೆಗಳನ್ನು ಕಟ್ಟಿಕೊಳ್ಳುವ ಮೂಲಕ ತಮ್ಮ ತಂದೆ ತಾಯಿಯರನ್ನು ಭಾವನಾತ್ಮಕವಾಗಿ ಮತ್ತು ಬೌದ್ಧಿಕವಾಗಿ ಅವಲಂಬಿಸಿರುತ್ತಾರೆ. ಅವನು ತಂದೆ ತಾಯಿಗಳಿಂದ ಪ್ರತ್ಯೇಕಗೊಳ್ಳುವುದು ಅತ್ಯಂತ ವಿರಳ. ಹಾಗೊಂದು ವೇಳೆ ಕಿರಿಯ ಸಹೋದರ ಪ್ರತ್ಯೇಕ ಕುಟುಂಬವನ್ನು ಸ್ಥಾಪಿಸಿದರೆ ಅದು ಸಾಮಾನ್ಯವಾಗಿ ಅವನ ವಿವಾಹವಾದ ಕೆಲವು ವರ್ಷಗಳ ನಂತರ ಮಾತ್ರ. ತಂದೆ ತಾಯಿಯರ ಮರಣಾನಂತರ ಅವರಿಗಾಗಿ ತೆಗೆದಿರಿಸಿದ ಪ್ರತ್ಯೇಕ ನಿಧಿ ಅಥವಾ ಆಸ್ತಿಯನ್ನು ಎಲ್ಲಾ ಸಹೋದರರು ಸಮನಾಗಿ ಹಂಚಿಕೊಳ್ಳುತ್ತಾರೆ.

ಲಂಬಾಣಿ ಹಿರಿಯರು ಕಿರಿಯ ಮಗನ ಜೊತೆ ವಾಸಿಸಲು (ತಂದೆ ತಾಯಿಗಳು) ನೀಡುವ ಕಾರಣವೆಂದರೆ, ಸಾಮಾನ್ಯವಾಗಿ ಕಿರಿಯ ಮಗನು ಕುಟುಂಬದ ನಿರ್ವಹಣೆಯಲ್ಲಿ ಅನನುಭವಿಯಾಗಿರುತ್ತಾನೆ. ಅವನಿಗೆ ಕೌಟುಂಬಿಕ ನಿರ್ವಹಣೆಯ ಬಗ್ಗೆ ಮಾರ್ಗದರ್ಶನದ ಅವಶ್ಯಕತೆ ಇರುತ್ತದೆ. ಆದ್ದರಿಂದ ಕಿರಿಯ ಮಗನೊಟ್ಟಿಗೆ ವಾಸಿಸುವುದು ಸಮಂಜಸವೆಂದು ಲಂಬಾಣಿ ಹಿರಿಯರು (ತಂದೆ ತಾಯಿಗಳು) ಅಭಿಪ್ರಾಯ ಪಡುತ್ತಾರೆ. ಕೆಲವು ನಿದರ್ಶನಗಳನ್ನು ನೋಡಿದರೆ, ಅವಿಭಕ್ತ ಕುಟುಂಬದ ವಿಭಜನೆಯ ಸಂದರ್ಭದಲ್ಲಿ ಕಿರಿಯ ಮಗ ಅವಿವಾಹಿತನಾಗಿದ್ದು, ತಂದೆ ತಾಯಿಗಳ ನೆರವು ಅವನಿಗೆ ಅವಶ್ಯಕವಾಗಿರುತ್ತದೆ. ಆದರೂ ಬಡತನದಲ್ಲಿ ಇರುವ ಕುಟುಂಬಗಳಲ್ಲಿ ಈ ಪದ್ಧತಿಯನ್ನು ಅಲಕ್ಷಿಸಿ ತಂದೆ ತಾಯಿಗಳನ್ನು ಅವರ ಪಾಡಿಗೆ ಬಿಡಲಾಗುತ್ತದೆ. ಇನ್ನೂ ಕೆಲವು ವಿದ್ಯಮಾನಗಳಲ್ಲಿ ವಿವಾಹದನಂತರ ಮಕ್ಕಳು ಪ್ರತ್ಯೇಕವಾಗಿ ತಮ್ಮ ಕುಟುಂಬಗಳನ್ನು ಸರಿಪಡಿಸಿಕೊಂಡು, ತಂದೆ ತಾಯಿಯರನ್ನು ಅಲಕ್ಷಿಸಿದ್ದಾರೆ. ಹಿರಿಯರು ಅವರ ವಿಧಿನಿಯಮಗಳಿಗೆ ಒಳಪಡುತ್ತಿದ್ದಾರೆ. ಇಂಥ ತಂದೆ ತಾಯಿಯರಲ್ಲಿ ಮಕ್ಕಳ ಅಲಕ್ಷದಿಂದಾಗುವ ದುರವಸ್ಥೆ, ದುಃಖ ಹಾಗೂ ನಷ್ಟಗಳನ್ನು ಅನುಭವಿಸಿದ ವೃದ್ಧರು "ಮಕ್ಕಳಿದ್ದರೂ (ಗಂಡು) ಅಷ್ಟೆ ಇಲ್ಲದಿದ್ದರೂ ಅಷ್ಟೆ ಎರಡೂ ನಿರರ್ಥಕ" ಎಂಬ ನಿಷ್ಠುರ ನುಡಿಗಳನ್ನು ಆಡುತ್ತಾರೆ.

೧೯೫೬ರಲ್ಲಿ ಜಾರಿಗೆ ಬಂದ ಹಿಂದೂ ಉತ್ತರಾಧಿಕಾರದ ಕಾಯ್ದೆಯಂತೆ ಕುಟುಂಬದ ಆಸ್ತಿಯಲ್ಲಿ ಹೆಣ್ಣು ಮಕ್ಕಳು ಸಹ ಆಸ್ತಿ ಹಕ್ಕನ್ನು ಹೊಂದಿರುತ್ತಾರೆ. ಆದರೂ ಲಂಬಾಣಿಗಳಿಗೆ ಹೆಚ್ಚಿನ ಪ್ರಮಾಣದ ಭೂಒಡೆತನ (ಆಸ್ತಿ) ಇಲ್ಲದಿರುವುದರಿಂದ, ಸಾಮಾನ್ಯವಾಗಿ ತಮ್ಮ ವಿವಾಹಿತ ಸಹೋದರಿಯರಿಗೆ (ಇನಾಮು) ಕಾಣಿಕೆಗಳನ್ನು ಕೊಡುತ್ತಾರೆ. ಅಲ್ಲದೇ ಅವರಿಂದ ಲಿಖಿತ ರೂಪದಲ್ಲಿ ನಾವು ನಮ್ಮ ಆಸ್ತಿಯ ಪಾಲನ್ನು ತಮ್ಮ ಸೋದರಿಗೆ ಮಾರಿರುವುದಾಗಿ ಬರೆಯಿಸಿ ಪ್ರಕಟಿಸುತ್ತಾರೆ.

ಲಂಬಾಣಿಗಳು ಅವಿಭಕ್ತ ಕುಟುಂಬದಲ್ಲಿ ಅಂತರ್ಗತವಾಗಿರುವ ಸಾಮಾಜಿಕ, ಮಾನಸಿಕ, ಆರ್ಥಿಕ ಅನುಕೂಲಗಳನ್ನು ಮಾನ್ಯ ಮಾಡುತ್ತಾರೆ. ವಾಸ್ತವವಾಗಿ ಆಸ್ತಿ ವಿಭಜನೆಗೆ ನಿರ್ಧಾರ ತೆಗೆದುಕೊಳ್ಳುವಾಗ ಎಷ್ಟೋ ಅವಿಭಕ್ತ ಕುಟುಂಬಗಳು, ನೀಡುವ ಪ್ರಮುಖ

ಕಾರಣವೆಂದರೆ ಸಂಪನ್ಮೂಲಗಳ ಕೊರತೆ. ಇದು ಲಂಬಾಣಿಗಳು ಜೀವನೋಪಾಯಕ್ಕಾಗಿ ಬೇರೆ ಬೇರೆ ಸ್ಥಳಗಳಿಗೆ ವಲಸೆ ಹೋಗುವಂತೆ ಒತ್ತಡವನ್ನು ಅವರ ಮೇಲೆ ಉಂಟುಮಾಡಿದೆ. ಅನೇಕ ಪರಿಸ್ಥಿತಿಗಳಲ್ಲಿ ಸಹೋದರರ ಪತ್ನಿಯರಲ್ಲಿ ಸಾಮರಸ್ಯವಿಲ್ಲದಿರುವುದು ವಿಭಜನೆಗೆ ಕಾರಣವಾಗಿದೆ. ಸಹೋದರರೆಲ್ಲರೂ ಒಡಹುಟ್ಟಿದ ರಕ್ತ ಸಂಬಂಧಿಗಳಾದ್ದರಿಂದ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುವರಾದ್ದರಿಂದ, ಅವಿಭಕ್ತ ಕುಟುಂಬದ ಒತ್ತಡ, ಶ್ರಮ ಮತ್ತು ನೋವುಗಳನ್ನು ಸಹಿಸಿಕೊಂಡು ಬೆಳೆದು ಬಂದವರಾಗಿದ್ದಾರೆ. ಆದರೆ ಅವರ ಪತ್ನಿಯರು ಬೇರೆ ಬೇರೆ ಕುಟುಂಬಗಳಿಂದ, ಬೇರೆ ತಾಂಡಗಳಿಂದ (ನಾಗಲಾಪುರ ತಾಂಡದಲ್ಲಿ - ೧೪೯ ರಲ್ಲಿ - ೪೬, ಮರಿಯಮ್ಮನಹಳ್ಳಿ ತಾಂಡದಲ್ಲಿ - ೧೪೯ ರಲ್ಲಿ - ೪೭) ಬಂದವರಾಗಿರುತ್ತಾರೆ. ಹೀಗಾಗಿ ಸೋದರ ಸಂಬಂಧಿಗಳಲ್ಲಿನ ಒಗ್ಗಟ್ಟಿನ ಬಗ್ಗೆ ಅವರು ಅಷ್ಟಾಗಿ ಚಿಂತಿಸುವುದಿಲ್ಲ. ಅವಿಭಕ್ತ ಕುಟುಂಬದ ಯಜಮಾನಿಯ ನಿಯಂತ್ರಣದಿಂದ ತಪ್ಪಿಸಿಕೊಂಡು ತನ್ನದೇ ಆದ ಅಣುಕುಟುಂಬದತ್ತ ಹೆಚ್ಚಿನ ಆಸಕ್ತಿ ಹೊಂದಿ ತನ್ನದೇ ಕುಟುಂಬದ ಒಡತಿಯಾಗುವ ಕನಸು ಪ್ರತಿಯೊಬ್ಬ ಮಹಿಳೆಗೂ ಸಾಮಾನ್ಯವಾಗಿ ಇರುತ್ತದೆ. ವಿಧವೆಯಾದ ತಾಯಿ ಜೀವಿಸಿದ್ದಲ್ಲಿ ಅವಿಭಕ್ತ ಕುಟುಂಬವು ಅಖಂಡವಾಗಿ ಉಳಿದಿದ್ದರೂ ಅವಳ ಮರಣಾನಂತರ ತಕ್ಷಣವೇ ವಿಭಜನೆಯಾಗುತ್ತದೆ. ಈ ರೀತಿಯಾಗಿ ಅವಿಭಕ್ತ ಕುಟುಂಬದ ಬೆಳವಣಿಗೆಯ (ಹಂತಗಳ) ಚಕ್ರವನ್ನು ನಾವು ಪರಿಶೀಲಿಸಿದಾಗ, ಮಾತೃಪ್ರಧಾನವಾದ ಅವಿಭಕ್ತ ಕುಟುಂಬವು, ಪಿತೃಪ್ರಧಾನವಾದ ಅವಿಭಕ್ತ ಕುಟುಂಬಗಳಿಗಿಂತ ಅಸ್ಥಿರ ಹಾಗೂ ಬೇಗ ಶಿಥಿಲಗೊಳ್ಳುವಂತಹವೇ ಆಗಿರುತ್ತವೆ. ಪಿತೃ ಪ್ರಧಾನವಾದ ಅವಿಭಕ್ತ ಕುಟುಂಬಗಳು (ನಾಗಲಾಪುರ ತಾಂಡ : ೩೨, ಮರಿಯಮ್ಮನಹಳ್ಳಿ ತಾಂಡ : ೩೦), ಮಾತೃಪ್ರಧಾನ (ನಾಗಲಾಪುರ ತಾಂಡ:೩, ಮರಿಯಮ್ಮನಹಳ್ಳಿ ತಾಂಡ : ೫) ಅವಿಭಕ್ತ ಕುಟುಂಬಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲೂ ಕಂಡುಬರುತ್ತವೆ. ಇದರಿಂದ ನಮಗೆ ತಿಳಿದುಬರುವ ಅಂಶವೆಂದರೆ ಪಿತೃಪ್ರಧಾನ ಅವಿಭಕ್ತ ಕುಟುಂಬಗಳು ಯಶಸ್ವಿಯಾಗಿ ಮುಂದುವರೆಯುವ ಸಾಧ್ಯತೆಗಳೆ ಹೆಚ್ಚಾಗಿರುವುದು. ಏಕೆಂದರೆ ತಂದೆ-ತಾಯಿ ಮತ್ತು ಮಕ್ಕಳ ನಡುವಿನ ಬಾಂಧವ್ಯವು ಸಹೋದರ ಬಾಂಧವ್ಯಕ್ಕಿಂತಲೂ ಹೆಚ್ಚು ಸದೃಢವಾಗಿರುವುದು (ನೋಡಿ ಕೋಷ್ಟಕ ೩.೫). ಅವಿಭಕ್ತ ಕುಟಂಬದ ಅಸ್ಥಿರತೆಗೆ ಇನ್ನೊಂದು ಕಾರಣ ಹಿರಿಯ ಸೋದರನಲ್ಲಿರಬಹುದಾದ ಸ್ವಾರ್ಥ ಮನೋಭಾವ. ಈ ಮನೋಭಾವದಿಂದಾಗಿ ಇತರ ಸೋದರರರಿಗೆ ಅನ್ಯಾಯವಾಗುತ್ತದೆ ಎಂದು ಕೆಲವರು ಆಪಾದಿಸುತ್ತಾರೆ.

ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳಲ್ಲಿ ಕಂಡುಬರುವ ಕೆಲವು ದೊಡ್ಡ ಕುಟುಂಬಗಳು ಅವಿಭಕ್ತ ಕುಟುಂಬದ ನಿಯಮಕ್ಕೆ ಅಪವಾದಗಳಾದ ಸಂಗತಿಗಳಿವೆ. ಇವು ಸಾಂಪ್ರದಾಯಿಕ ಅವಿಭಕ್ತ ಕುಟುಂಬಗಳಾಗಿದ್ದು, ಗ್ರಾಮೀಣ ಭಾಗದ ಕೇವಲ ಕೆಲವೇ ಸ್ಥಿತಿವಂತ ಲಂಬಾಣಿಗಳಲ್ಲಿ ಕಂಡುಬರುತ್ತದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಅತ್ಯಂತ ದೊಡ್ಡ ಅವಿಭಕ್ತ ಕುಟುಂಬವು ೧೬ ಸದಸ್ಯರನ್ನು ಒಳಗೊಂಡಿದ್ದು, ಇವರಲ್ಲಿ ವಿಧವೆಯಾದ ತಾಯಿ, ಇಬ್ಬರು ವಿವಾಹಿತ ಸೋದರರು, ಅವರ ಪತ್ನಿಯರು, ಮದುವೆಯಾಗದ ಮಕ್ಕಳು ಹಾಗೂ ಒಬ್ಬ ಮಗಳು ವಿವಾಹ ವಿಚ್ಛೇದನಗೊಂಡು ಹುಟ್ಟಿದ ಮನೆಗೆ ಹಿಂತಿರುಗಿ ಬಂದು ವಾಸವಾಗಿದ್ದಾರೆ. ನಾಗಲಾಪುರ ತಾಂಡದಲ್ಲಿಯೂ ಒಂದು ಅವಿಭಕ್ತ ಕುಟುಂಬವು ೧೬ ಸದಸ್ಯರನ್ನು ಒಳಗೊಂಡಿದೆ. ತಂದೆ, ತಾಯಿ, ಅವಿವಾಹಿತ ಮಕ್ಕಳು, ಇಬ್ಬರು ವಿವಾಹಿತ ಸೋದರರು ಅವರ ಪತ್ನಿಯರು ಮಕ್ಕಳೊಂದಿಗೆ ವಾಸವಾಗಿದ್ದಾರೆ. ಎರಡೂ ತಾಂಡಗಳಲ್ಲಿ ಪ್ರತಿ ಮೂರರಲ್ಲಿ ಒಂದು ಕುಟುಂಬವು ಸುಮಾರು ಒಂದು ತಲೆಮಾರಿಗಿಂತಲೂ ಹೆಚ್ಚಿನ ಕಾಲ ವಿಭಜನೆಯಾಗದೆ ಅವಿಭಕ್ತವಾಗಿ ಉಳಿದಿರುವುದು ಕಂಡು ಬರುತ್ತದೆ. ಈ ಕುಟುಂಬಗಳು ಅನೇಕ ವರ್ಷಗಳಿಂದಲೂ ಶಾಂತಿ, ಸುಭದ್ರತೆ, ನೆಮ್ಮದಿಯನ್ನು ಕಾಪಾಡಿಕೊಂಡು ಬಂದಿರುವುದಕ್ಕೆ ಯುವ ಜನರಲ್ಲಿ ಉತ್ತಮ ನಡವಳಿಕೆ ಮತ್ತು ಹಿರಿಯರ ಬಗ್ಗೆ ವಿಧೇಯತೆಗಳು ಇದಕ್ಕೆ ಪೂರಕವಾಗಿವೆ. ಇದಕ್ಕೆ ಪ್ರೋತ್ಸಾಹದಾಯಕವಾದ ಇನ್ನೊಂದು ಅಂಶವೆಂದರೆ ಏಕೀಕೃತ

ಸಂಪನ್ಮೂಲಗಳು. ಈ ಎಲ್ಲಾ ಕಾರಣಗಳಿಂದ ಈ ಕುಟುಂಬಗಳು ಸ್ಥಿತಿವಂತ ಕುಟುಂಬಗಳಾಗಿ, ಅಧ್ಯಯನ ನಡೆಸಿದ ಎರಡು ತಾಂಡಗಳಲ್ಲೇ ಅತ್ಯಂತ ಪ್ರತಿಷ್ಠಿತ ಕುಟುಂಬಗಳೆನ್ನಿಸಿವೆ.

ಪಿತೃಪ್ರಧಾನ ಪರಂಪರೆ, ಪಿತೃಸ್ಥಾನಿಕ ವಸತಿ ಮತ್ತು ಪಿತೃಪ್ರಧಾನ ಆಧಿಪತ್ಯಗಳು ಲಂಬಾಣಿ ಕುಟುಂಬದ ವಿಶಿಷ್ಟ ಗುಣ ಲಕ್ಷಣಗಳಾಗಿವೆ. ಕುಟುಂಬಗಳೇ ಮೂಲಭೂತ ಘಟಕಗಳಾದ್ದರಿಂದ ಅವುಗಳ ಮಾದರಿ ಮತ್ತು ಗಾತ್ರಗಳು ಸಾಮಾಜಿಕ-ಆರ್ಥಿಕ ಸಂಘಟನೆಗಳ ಪರಸ್ಪರ ಸಂಬಂಧದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಗಾತ್ರದ ಪ್ರಕಾರ ಕುಟುಂಬಗಳ ಹಂಚಿಕೆಯು ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಒಬ್ಬ ವ್ಯಕ್ತಿಯನ್ನೊಳಗೊಂಡ ಅಪೂರ್ಣ ಕುಟುಂಬದಿಂದ, ೧೬ ಸದಸ್ಯರನ್ನೊಳಗೊಂಡ ಅವಿಭಕ್ತ ಕುಟುಂಬಗಳು ಇವೆ (ನೋಡಿ ಕೋಷ್ಟಕ ೩.೧). ಮರಿಯಮ್ಮನಹಳ್ಳಿ ತಾಂಡದಲ್ಲಿ ೧೨ ಕುಟುಂಬಗಳು ಸಾಮಾನ್ಯ ಗಾತ್ರದ್ದಾಗಿವೆ (೬ ಜನ ವ್ಯಕ್ತಿಗಳು); ೫೬ ಕುಟುಂಬಗಳು ಸಾಮಾನ್ಯ ಗಾತ್ರಕ್ಕಿಂತ ಚಿಕ್ಕವಾಗಿವೆ. ಆದರೆ ೪೭ ಕುಟುಂಬಗಳು ಸಾಮಾನ್ಯಗಾತ್ರಕ್ಕಿಂತ ದೊಡ್ಡವಾಗಿವೆ. ನಾಗಲಾಪುರ ತಾಂಡದಲ್ಲಿಯೂ ೪೯ ಕುಟುಂಬಗಳು ಸಾಮಾನ್ಯ ಗಾತ್ರಕ್ಕಿಂತ ಚಿಕ್ಕವಾಗಿದ್ದು, ೫೦ ಕುಟುಂಬಗಳು ಸಾಮಾನ್ಯ ಗಾತ್ರಕ್ಕಿಂತ ದೊಡ್ಡವಾಗಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಎರಡೂ ತಾಂಡಗಳಲ್ಲಿ ಅಣುಕುಟುಂಬಗಳು (ಕೆಲವು ಉದಾಹರಣೆಗಳಲ್ಲಿ ಹೆಚ್ಚಿನ ಸಂಬಂಧಿಕರನ್ನೊಳಗೊಂಡ) ಸಂಖ್ಯಾ ಪ್ರಮಾಣದಲ್ಲಿ ಹೆಚ್ಚಿವೆ (ನೋಡಿ; ಕೋಷ್ಟಕ ೩.೫ ಮತ್ತು ೩.೧). ಈ ರೀತಿಯ ಕುಟುಂಬಗಳು ಹೆಚ್ಚಾಗಿರಲು ಮುಖ್ಯವಾದ ಆರ್ಥಿಕ ಕಾರಣವೆಂದರೆ ಅನೇಕ ಲಂಬಾಣಿಗಳಿಗೆ ಕಡಿಮೆ ಪ್ರಮಾಣದ ಸಂಪನ್ಮೂಲಗಳಿರುವುದರಿಂದ ದೊಡ್ಡ ಗಾತ್ರದ ಕುಟುಂಬಗಳನ್ನು ಸಂರಕ್ಷಿಸುವುದು ಕಠಿಣವಾಗುತ್ತದೆ. ಅವಿಭಕ್ತ ಕುಟುಂಬದ ಆದರ್ಶವನ್ನು ಸಾಧಿಸಬೇಕೆಂಬ ಹಂಬಲವಿದ್ದರೂ, ಆರ್ಥಿಕ ಕಾರಣಗಳಿಂದಾಗಿ ದೊಡ್ಡ ಕುಟುಂಬದ ನಿರ್ವಹಣೆ ಎಷ್ಟೋ ಲಂಬಾಣಿಗಳಿಗೆ ಸಾಧ್ಯವಾಗುವುದಿಲ್ಲ. ಹೀಗೆ ಆದರ್ಶ ಮತ್ತು ವಾಸ್ತವಿಕತೆಯ ನಡುವೆ ತೀವ್ರತರವಾದ ಅಂತರವಿದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ೧೦೨ ಲಂಬಾಣಿ ಕುಟುಂಬದಲ್ಲಿ ಶೇಕಡ ೬೫.೭ ಕುಟುಂಬಗಳು ಅಣುಕುಟುಂಬಗಳಾಗಿವೆ. ಈ ಅಣುಕುಟುಂಬಗಳಲ್ಲಿ ಎರಡು ಕುಟುಂಬಗಳು ತಮ್ಮ ಸದಸ್ಯರಲ್ಲದೇ ಕೆಲವು ರಕ್ತ ಸಂಬಂಧಿಗಳನ್ನು ಮತ್ತು ಒಂದೇ ವಂಶಕ್ಕೆ ಸೇರಿದ ಕೆಲವು ಸಂಬಂಧಿಗಳನ್ನು ಹೊಂದಿವೆ. ಉಳಿದ ಶೇಕಡ ೩೫.೩ ಅವಿಭಕ್ತ ಕುಟುಂಬಗಳಲ್ಲಿ ಒಂದೇ ಒಂದು ಕುಟುಂಬವು ವಿವಾಹ ಸಂಬಂಧಿಗಳನ್ನು ಒಬ್ಬ ಸಂಬಂಧಿಕರನ್ನು ಹೊಂದಿದೆ. ನಾಗಲಾಪುರ ತಾಂಡದಲ್ಲಿ ೯೯ ಕುಟುಂಬಗಳಲ್ಲಿ ಶೇಕಡ ೬೪.೬ ಕುಟುಂಬಗಳು ಅಣುಕುಟುಂಬಗಳಾಗಿದ್ದು, ಇವುಗಳಲ್ಲಿ ಐದು ಕುಟುಂಬಗಳು ತಮ್ಮ ಸದಸ್ಯರಲ್ಲದೆ ಬೇರೆ ಸಂಬಂಧಿಗಳನ್ನು ಒಳಗೊಂಡಿವೆ. ಶೇಕಡ ೩೫.೪ ಅವಿಭಕ್ತ ಕುಟುಂಬಗಳಲ್ಲಿ ೨ ಕುಟುಂಬಗಳು ವಿವಾಹ ಸಂಬಂಧಿಕರನ್ನು ಹೊಂದಿವೆ. ಹೀಗೆ ಎರಡು ತಾಂಡಗಳಲ್ಲಿ ಇರುವ ಕುಟುಂಬಗಳ ಮಾದರಿಗಳು ಸಮಾನ ರೂಪದ್ದಾಗಿವೆ.

## ಕೋಷ್ಟಕ - ೩.೧

ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಅಧ್ಯಯನಕ್ಕೆ ಒಡಪಡಿಸಿದ ಕುಟುಂಬಗಳ ಮಾದರಿ, ಗಾತ್ರ ಮತ್ತು ಜನರ ಸಂಖ್ಯೆ

| ಕುಟುಂಬಗಳ ಸಂಖ್ಯೆ | | | | | | |
|---|---|---|---|---|---|---|
| | ಮರಿಯಮ್ಮನಹಳ್ಳಿ ತಾಂಡ | | | ನಾಗಲಾಪುರ ತಾಂಡ | | |
| ವಾಸಿಸುವ ಜನರ ಸಂಖ್ಯೆ | ಅಣು ಕುಟುಂಬ | ಅವಿಭಕ್ತ ಕುಟುಂಬ | ಒಟ್ಟು ಕುಟುಂಬಗಳು | ಅಣು ಕುಟುಂಬ | ಅವಿಭಕ್ತ ಕುಟುಂಬ | ಒಟ್ಟು ಕುಟುಂಬಗಳು |
| ೧ | ೪ | - | ೪ | ೩ | - | ೩ |
| ೨ | ೫ | ೧ | ೬ | ೭ | ೧ | ೮ |
| ೩ | ೯ | - | ೯ | ೫ | - | ೫ |
| ೪ | ೧೩ | ೪ | ೧೭ | ೧೫ | ೪ | ೧೯ |
| ೫ | ೧೩ | ೪ | ೧೭ | ೮ | ೬ | ೧೪ |
| ೬ | ೮ | ೪ | ೧೨ | ೯ | ೪ | ೧೩ |
| ೭ | ೬ | ೫ | ೧೧ | ೧೧ | ೫ | ೧೬ |
| ೮ - ೯ | ೮ | ೫ | ೧೩ | ೬ | ೧೧ | ೧೭ |
| ೧೦ - ೧೨ | ೧ | ೭ | ೮ | - | - | - |
| ೧೩ - ೧೫ | - | ೪ | ೪ | - | ೩ | ೩ |
| ೧೬ | - | ೧ | ೧ | - | ೧ | ೧ |
| ಒಟ್ಟು | ೬೭ | ೩೫ | ೧೦೨ | ೬೪ | ೩೫ | ೯೯ |
| ಒಟ್ಟು ಶೇಕಡಾ | ೬೫.೭ | ೩೪.೩ | ೧೦೦.೦೦ | ೬೪.೬ | ೩೫.೪ | ೧೦೦.೦೦ |

ಲಂಬಾಣಿಗಳ ಹಿಂದಿನ ಅಲೆಮಾರಿ ಜೀವನವು ದೊಡ್ಡ ಅವಿಭಕ್ತ ಕುಟುಂಬದ ನಿರ್ವಹಣೆಯನ್ನು ಅಸಾಧ್ಯವಾಗಿಸಿತ್ತು. ಏಕೆಂದರೆ ಕುಟುಂಬದ ಗಾತ್ರವು, ತಾಂತ್ರಿಕತೆ ಮತ್ತು ಆರ್ಥಿಕ ಸಂಪನ್ಮೂಲಗಳಿಂದ ನಿರ್ಧಾರವಾಗುತ್ತದೆ (ಮೊಂಟೇಗೂ, ೧೯೬೦: ೧೨೫-೨೬). ಅಲೆಮಾರಿತನವು ಭೌತಿಕ ಮತ್ತು ಅಭೌತಿಕ ನಷ್ಟವನ್ನು ನಿರ್ವಹಿಸಲಾಗದೆ, ಅವಿಭಕ್ತ ಕುಟುಂಬಗಳನ್ನು ಎದೆಗುಂದಿಸಿದೆ. ಇತ್ತೀಚಿನ ದಿನಗಳಲ್ಲಿ ಅಲೆಮಾರಿ ಜೀವನವನ್ನು ನಡೆಸುತ್ತಿರುವ ಲಂಬಾಣಿಗಳ ಸಮೀಕ್ಷೆಗಳಿಂದ ಲಭ್ಯವಾಗಿರುವ ಮಾಹಿತಿ ಇದನ್ನು ದೃಢಪಡಿಸುತ್ತದೆ. ರಾಜಸ್ಥಾನದ ಪಶ್ಚಿಮ ಭಾಗದ ಅರೆ-ಅಲೆಮಾರಿ ೬೦೦ ಬಂಜಾರಾ ಕುಟುಂಬಗಳ ಪೈಕಿ ೧೦೦ ಕುಟುಂಬಗಳನ್ನು ಸಮೀಕ್ಷಿಸಿದಾಗ ಅವುಗಳಲ್ಲಿ ೯೪ ಕುಟುಂಬಗಳು ಅಣು ಕುಟುಂಬಗಳಾಗಿರುವುದು ಕಂಡುಬರುತ್ತದೆ (ಮಲ್ಹೋತ್ರಾ ಮತ್ತು ಬೋಸ್, .೧೯೬೩: ೭೦). ಒಂದೇ ಸ್ಥಳದಲ್ಲಿ ನೆಲೆನಿಂತುಕೊಂಡು ಒಕ್ಕಲುತನವನ್ನು ವೃತ್ತಿಯನ್ನಾಗಿ ಅವಲಂಬಿಸಿದರ ಪರಿಣಾಮವಾಗಿಯೇ ಅವಿಭಕ್ತ ಕುಟುಂಬ ವ್ಯವಸ್ಥೆ ರೂಪುಗೊಂಡಿದೆಯೆಂದು ಕೆಲವು ಹಿರಿಯ ಮಾಹಿತಿದಾರರೂ ಹೇಳುತ್ತಾರೆ. ೨೦ನೇ ಶತಮಾನದ ಮೊದಲ ಭಾಗದಲ್ಲಿ ಜೀವನೋಪಾಯಕ್ಕಾಗಿ ಲಂಬಾಣಿಗಳು ಕೃಷಿಯನ್ನು ಆರಂಭಿಸಿದಾಗ, ದೊಡ್ಡ ಪ್ರಮಾಣದಲ್ಲಿ ಅವಿಭಕ್ತ ಕುಟುಂಬಗಳು ಬೆಳವಣಿಗೆಯಾಗಿರುವುದನ್ನು ಇವರಲ್ಲಿ ಗುರುತಿಸಬಹುದು. ಈಗ ಮತ್ತೆ

ಹೆಚ್ಚುತ್ತಿರುವ ವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿಕೇಂದ್ರಿತವಾದ ಮತ್ತು ಕೂಲಿ ಕೆಲಸದಿಂದ ದುಡಿಯುತ್ತಿರುವ ಲಂಬಾಣಿಗಳಲ್ಲಿ ಹೆಚ್ಚುತ್ತಿರುವ ಬಡತನದಿಂದಾಗಿ ದೊಡ್ಡ ಪ್ರಮಾಣದ ಅವಿಭಕ್ತ ಕುಟುಂಬಗಳು ಕ್ಷೀಣಿಸುತ್ತಿವೆ.

ಆದರೂ, ಎರಡೂ ತಾಂಡಗಳಲ್ಲಿ ಮೂರನೇ ಒಂದಕ್ಕಿಂತಲೂ ಹೆಚ್ಚಿನ ಕುಟುಂಬಗಳು, ದೊಡ್ಡ ಪ್ರಮಾಣದ ಭೂ ಒಡೆತನ ಆರ್ಥಿಕ ಸುಧಾರಣೆ ಮತ್ತು ಕೃಷಿ ಉತ್ಪಾದನೆಯಲ್ಲಿ ಉಂಟಾಗಿರುವ ಹೆಚ್ಚಳದಿಂದಾಗಿ ಅವಿಭಕ್ತ ಕುಟುಂಬಗಳಾಗಿವೆ. ಇದೂ ಅಲ್ಲದೆ ಸ್ಥಳೀಯ ಜನರಿಂದ ಅವಿಭಕ್ತ ಕುಟುಂಬ ಮೌಲ್ಯಗಳು ಮತ್ತು ಮಹತ್ವವನ್ನು ಲಂಬಾಣಿಗಳು ಸ್ವೀಕರಿಸುತ್ತಾರೆ. ಹಿಂದಿನ ಅಲೆಮಾರಿ ಜೀವನದ ದಿನಗಳಲ್ಲಿ ಅಣುಕುಟುಂಬಗಳಿಗೇ ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದ ಲಂಬಾಣಿಗಳಲ್ಲಿ ಬದಲಾವಣೆ ಕಂಡುಬರುತ್ತಿದೆ. ಲಂಬಾಣಿಗಳು ಅವಿಭಕ್ತ ಕುಟುಂಬಗಳಿಗೆ ಹೆಚ್ಚಿನ ಒಲವು ತೋರಿಸಲು ಅವರ ಸಾಂಪ್ರದಾಯಿಕ ಆರ್ಥಿಕ ವ್ಯವಸ್ಥೆಯಲ್ಲಾಗಿರುವ ಬದಲಾವಣೆ ಮತ್ತು ಲಂಬಾಣೇತರ ಸಮುದಾಯಗಳಿಂದ ಅವಿಭಕ್ತ ಕುಟುಂಬದ ಆದರ್ಶವನ್ನು ಅನುಸರಿಸುತ್ತಿರುವುದೇ ಪ್ರಮುಖ ಕಾರಣವಾಗಿದೆ. ಇತ್ತೀಚಿನ ದಿನಗಳಲ್ಲಿ ಲಂಬಾಣೇತರ ಸಮುದಾಯಗಳಲ್ಲಿಯೂ ಸಹ ಅವಿಭಕ್ತ ಕುಟುಂಬಗಳು ಕ್ಷೀಣಿಸುತ್ತಿದ್ದರೂ, ಅವಿಭಕ್ತ ಕುಟುಂಬದ ಆದರ್ಶ ಸರಿಯಲ್ಲವೆಂದು ತೋರಿಸಿ ಹೇಳಿದರೂ ದೃಢವಾಗಿ ನಿಂತಿದೆ. ಲಂಬಾಣಿಗಳ ಮೇಲಿನ ನಮ್ಮ ಮಾಹಿತಿಯು ಕೃಷಿ ಮತ್ತು ಅವಿಭಕ್ತ ಕುಟುಂಬಗಳ ನಡುವೆ ಸ್ವಾಭಾವಿಕವಾದ ಪರಸ್ಪರ ನಿಕಟ ಸಂಬಂಧವಿದೆ ಎಂಬುದನ್ನು ತೋರಿಸುತ್ತದೆ. ಹೀಗೆ ಕುಟುಂಬಗಳಂತಹ ಸಾಮಾಜಿಕ ಸಂಸ್ಥೆಗಳ ಮೇಲೆ, ಆರ್ಥಿಕ ಅಂಶಗಳು ತನ್ನದೆ ಆದ ಪ್ರಭಾವವನ್ನು ಬೀರಿವೆ.

## ನೆರೆಹೊರೆ

ನೆರೆಹೊರೆ ಪ್ರಾಥಮಿಕ ಗುಂಪಿನ ಉದಾಹರಣೆಯಾದರೂ ಕುಟುಂಬಕ್ಕಿಂತ ದೊಡ್ಡದಾದ ಸಾಮಾಜಿಕ ಗುಂಪು. ಇದು ನೆರೆಹೊರೆಯ ಕುಟುಂಬಗಳನ್ನು ಹಾಗೂ ಇತರ ಸಣ್ಣ ಗುಂಪುಗಳನ್ನು ಒಳಗೊಳ್ಳುತ್ತದೆ. ಈ ನೆರೆಹೊರೆಯ ಗುಂಪುಗಳು ಬದಲಾಗುತ್ತ ಹೋಗುವ ಭಾವನೆಗಳೊಂದಿಗೆ ಮಾರ್ಪಾಡಾಗುತ್ತಾ ಹೋಗುತ್ತವೆ. ನೆರೆಹೊರೆಯ ಸದಸ್ಯರು ಬಂಧುತ್ವ ಸಂಬಂಧಿಕರಾಗಿದ್ದರೂ ನೆರೆಹೊರೆಯವರು ಎಂದೇ ಕರೆಯಲಾಗುತ್ತದೆ. ಲಂಬಾಣಿಗಳಲ್ಲಿ ವಾಸಸ್ಥಾನದ ಮಾದರಿಯು ಕಟ್ಟುನಿಟ್ಟಾಗಿ ಆನುವಂಶಿಕ ಸಂಬಂಧಗಳನ್ನು ಆಧರಿಸಿಲ್ಲ ವಾದ್ದರಿಂದ ಅವರು ಸಾಮಾನ್ಯವಾಗಿ ತಮ್ಮ ಸಂಬಂಧಿಗಳ ಸಮೀಪದಲ್ಲಿಯೇ ವಾಸವಾಗಿರಲು ಬಯಸುತ್ತಾರೆ. ನಿಧಾನವಾಗಿ ತಾಂಡಗಳಿಗೆ ಆಗಮಿಸಿದವರು ತಮ್ಮ ಸಂಬಂಧಿಗಳ ಪಕ್ಕದಲ್ಲಿ ಅಥವಾ ಸಮೀಪದಲ್ಲಿ ವಾಸಿಸಲು ಮನೆಗಳು ಸಿಗದಿದ್ದಾಗ ಅವರಿಂದ ಸ್ವಲ್ಪ ದೂರದಲ್ಲಿ ಇರಬೇಕಾಯಿತು. ಹೀಗಾಗಿ ತಾಂಡಗಳಲ್ಲಿ ಅನುವಂಶಿಕ ಸಂಬಂಧಗಳ ಏಕ ಮಾದರಿಯ ವಾಸಸ್ಥಾನಗಳಲ್ಲಿ ವೃತ್ತಿಗಳಲ್ಲಿಯ ಸಹಕಾರದ ಮಾದರಿಗಳು, ಪರಸ್ಪರರನ್ನು ಭೇಟಿಮಾಡುವ ಮಾದರಿಗಳು, ಕಷ್ಟಕಾಲದಲ್ಲಿ ಒಬ್ಬರು ಇನ್ನೊಬ್ಬರಿಗೆ ನೆರವಾಗುವ ರೀತಿ ನೀತಿಗಳು, ಮಾರುಕಟ್ಟೆಗೆ ಒಟ್ಟಾಗಿ ಹೋಗುವ ಗುಂಪುಗಳು, ಸಾಲ ಕೊಡುವ-ತೆಗೆದುಕೊಳ್ಳುವ ಆರ್ಥಿಕ ವ್ಯವಹಾರದ ಗುಂಪುಗಳು ಮೊದಲಾದವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ತಾಂಡಗಳಲ್ಲಿ ಲಂಬಾಣಿಗಳು ಪ್ರತಿನಿತ್ಯ ಪರಸ್ಪರ ಪ್ರಕ್ರಿಯೆಗಳಲ್ಲಿ ತೊಡಗುವ ಸಂಬಂಧಗಳನ್ನಾಧರಿಸಿ ಹತ್ತು-ಹದಿನೈದು ನೆರೆಹೊರೆಯ ಗುಂಪುಗಳನ್ನು ಗುರುತಿಸಬಹುದಾಗಿದೆ.

ತಾಂಡಗಳೊಳಗಿನ ನೆರೆಹೊರೆಯ ಸೀಮಾರೇಖೆಗಳು ಹೊರಗಿನವರಿಗೆ ತಿಳಿಯದಿದ್ದರೂ ಅಲ್ಲಿ ವಾಸಿಸುವ ಲಂಬಾಣಿಗಳ ನಿವೇಶನಗಳನ್ನು ಅನೇಕ ವಿಭಾಗಗಳಲ್ಲಿ ಅಥವಾ ಓಣಿಗಳಲ್ಲಿ ವಿಭಜಿಸಿದ್ದಾರೆ. ಅವುಗಳಿಗೆ ಆ ಸ್ಥಳದ ಪ್ರಮುಖ ಹಿರಿಯರ ಹೆಸರುಗಳನ್ನು ಇಟ್ಟಿದ್ದಾರೆ. ಕೆಲವು ವಿಷಯಗಳಲ್ಲಿ ಈ ಓಣಿಗಳು ಅಥವಾ ಗುಂಪುಗಳು ನೆರೆಹೊರೆಯ ಗುಂಪುಗಳನ್ನು ಒಳಗೊಂಡಂತೆಯೇ ತೋರುತ್ತವೆ. ಲಂಬಾಣಿಗಳು ತಮ್ಮ ಸಮೀಪ ಸಂಬಂಧಿಗಳ ಸಣ್ಣ ಗುಂಪುಗಳಿಗೆ ಮಾತ್ರವೇ ನಿಷ್ಠೆ ತೋರುವುದರಿಂದ ದೊಡ್ಡ ಗುಂಪಿಗೆ ಋಣಭಾರದ ಭಾವವನ್ನು ತಳೆಯುವಲ್ಲಿ ದುರ್ಬಲ ಮನಸ್ಕರಾಗಿದ್ದಾರೆ. ಒಟ್ಟಾರೆ ಗುಂಪುಗಳಿಗೆ ಸಂಬಂಧಿಸಿದ ವಿಷಯದಲ್ಲಿ 'ನಾನು-ನನ್ನದು' ಎಂಬ ಭಾವನೆಯನ್ನು ಅವರು ಹೊಂದಿರುವುದಿಲ್ಲ.

ಪಿತೃಪ್ರಧಾನ ಅನುವಂಶಿಕತೆ ಹಾಗೂ ಒಂದೇ ಸಮುದಾಯದವರು ಇರುವ ತಾಂಡಗಳು, ಅವಿಭಕ್ತ ಕುಟುಂಬಗಳ ವಿಭಜನೆಯಿಂದಾಗಿ ಸಾಮಾನ್ಯವಾಗಿ ನೆರೆಹೊರೆಯವರು ಪಿತೃಪ್ರಧಾನ ಬಂಧುಗಳೇ ಆಗಿರುತ್ತಾರೆ. ನೆರೆಹೊರೆಯವರಿಗಿಂತ ಸಮೀಪದ ಬಂಧುತ್ವದ ಏಕತೆಯು ಅವರ ವಾಸಸ್ಥಾನದ (ತಾಂಡ) ಮಾದರಿಗಳ ಮೇಲೆ ಗಾಢವಾದ ಪ್ರಭಾವ ಇರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಆದರೂ ಈ ಮೇಲಿನ ನೆರೆಹೊರೆಯ ಮಾದರಿಯ ಅನುಭವಗಳು ಸಣ್ಣ ಹಾಗೂ ದೊಡ್ಡ ನೆರೆಹೊರೆಯ ಗುಂಪುಗಳ ಸಂಘಟನಾತ್ಮಕ ತತ್ವವು ವಾಸಸ್ಥಾನವೇ ಹೊರತು ಬಂಧುತ್ವ ಸಂಬಂಧವಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ತಾಂಡ ಸ್ಥಾಪನೆಗೊಂಡು ವಾಸಸ್ಥಾನ ನಿಗದಿಯಾಗುತ್ತದೆ. ನಂತರ ಸಮೀಪದ ಬಂಧುತ್ವ ಸಂಬಂಧಿಕರು ಅಲ್ಲಿಗೆ ವಾಸಕ್ಕೆ ಬರುತ್ತಾರೆ. ಸ್ಥಳಾಭಾವದಿಂದ ಸಮೀಪದ ಸಂಬಂಧಿಗಳು ತಮ್ಮ ಬಂಧುತ್ವ ಸಂಬಂಧಿಕರ ಮನೆಯ ಪಕ್ಕದಲ್ಲಿಯೇ ಇರಲು ಬಯಸುತ್ತಾರೆ. ಇದು ಸಾಧ್ಯವಾಗದೆ ಇದ್ದಾಗ ಅದೇ ತಾಂಡದಲ್ಲಿ ಅವರಿಂದ ಸ್ವಲ್ಪದೂರದಲ್ಲಿ ವಾಸಿಸಬೇಕಾಗುತ್ತದೆ. ಹೀಗಾಗಿ ಬಂಧುತ್ವವನ್ನೇ ಆಧರಿಸಿದ ತತ್ವದ ಮೇಲೆ ಅವರ ವಾಸಸ್ಥಾನ ನಿಗದಿಯಾಗಲಾರದು. ಇತ್ತೀಚೆಗೆ ನಿಧಾನವಾಗಿ ತಾಂಡಗಳಿಗೆ ಆಗಮಿಸಿದ ಲಂಬಾಣಿಗಳು ತಮ್ಮ ಬಂಧುತ್ವ ಸಂಬಂಧಿಗಳಲ್ಲದ ನೆರೆಹೊರೆಯವರೊಂದಿಗೆ ಯಾವುದೇ ಮುಜುಗರ ಅಥವಾ ಅನ್ಯರು ಎಂಬ ಸಂಕೋಚವಿಲ್ಲದೆ ವಾಸಿಸುತ್ತಿರುವುದು ಕಂಡುಬರುತ್ತದೆ.

**ತಾಂಡಗಳು ಸಮುದಾಯಗಳಂತೆ : ಸಾಮಾಜಿಕ -ಆರ್ಥಿಕ ಆಧಾರಗಳು**

ತಾಂಡವು ಒಂದು ಸಾಮಾಜಿಕ ಘಟಕವಾಗಿ ನೆರೆಹೊರೆಯ ಗುಂಪುಗಳಿಗಿಂತ ಬಹು ಮಹತ್ವದ್ದಾಗಿದೆ. ವಲಸೆಹೋಗಿ ಬಹುಜಾತಿ ಗ್ರಾಮಗಳಲ್ಲಿ ನೆಲೆಸುವ ಕೆಲವು ಲಂಬಾಣಿ ಕುಟುಂಬಗಳನ್ನು ಹೊರತುಪಡಿಸಿ, ಲಂಬಾಣಿ ತಾಂಡಗಳು ಬಹುಮಟ್ಟಿಗೆ ಏಕ ಜನಾಂಗೀಯ ಗುಂಪುಗಳಾಗಿವೆ. ಲಂಬಾಣೇತರರನ್ನೊಳಗೊಂಡ ದೊಡ್ಡ ಲಂಬಾಣಿ ತಾಂಡ ಸಂಶೋಧಕನ ಗಮನಕ್ಕೆ ಬಂದಿರುವುದಿಲ್ಲ.[೨] ಸಂಯುಕ್ತ ರೂಪವಲ್ಲದ ಪ್ರತ್ಯೇಕ ತಾಂಡ ಮತ್ತು ಅವರ ನಂಬಿಕೆಯ ಬಗೆಗೆ ಈಗಾಗಲೇ ಉಲ್ಲೇಖಿಸಲಾಗಿದೆ. ತಾಂಡದ ಏಕತಾ ಭಾವನೆಯು ಸಹಜೀವಿಗಳ ನಡುವೆ ಆಗಾಗ ಕೆಲಸಗಾರರ ವಿನಿಮಯಗಳೊಂದಿಗೆ ಸಂಬಂಧಿಸಿದ್ದಾಗಿತ್ತು ಈ ವ್ಯವಸ್ಥೆಯು ಸಾಮಾನ್ಯವಾದ ಹಾಗೂ ಸಮತೂಕದ ಪರಸ್ಪರ ಕೊಡುಕೊಳ್ಳುವಿಕೆಯನ್ನು ತಿಳಿಸುತ್ತದೆ. ತಾಂಡದ ಸಾಮಾಜಿಕ ಏಕತೆಯು ಇತರ ರೂಪಗಳಲ್ಲಿ ಕೂಡ ತಿಳಿದುಬರುತ್ತದೆ. ತಾಂಡಗಳು

*೨. ಲಂಬಾಣಿಗಳು ಇತರೆ ಬುಡಕಟ್ಟು ಗುಂಪುಗಳೊಂದಿಗೆ ಹಾಗೂ ಬಹುಜಾತಿಯ ಜನರ ಜೊತೆ ವಾಸಿಸುವ ತಾಂಡಗಳು ಆಂಧ್ರಪ್ರದೇಶದ ಆದಿಲಾಬಾದದ ಬಳಿ ಇವೆ ಎಂದು ವರದಿಯಾಗಿದೆ (ಫರರ್ - ಹೈಮೆನಡಾರ್ಫ್, ೧೯೭೯ : ೩೩ - ೩೪).*

ಸಂಪೂರ್ಣವಾಗಿ ಹೊರಬಾಂಧವ್ಯ ಅಥವಾ ಒಳಬಾಂಧವ್ಯದ ಗುಂಪುಗಳಾಗಿರುವುದಿಲ್ಲ. ಇತರ ತಾಂಡಗಳೊಂದಿಗೆ ಏರ್ಪಟ್ಟ ವಿವಾಹ ಸಂಬಂಧಗಳು ಅತ್ಯಂತ ಉತ್ಸುಕತೆಯ ಹಾಗೂ ಸಂಭ್ರಮದ ಸನ್ನಿವೇಶಗಳಾಗಿವೆ. ಈ ಸಂದರ್ಭದಲ್ಲಿ ಆಯಾ ಗುಂಪುಗಳು ತಮ್ಮ ತಾಂಡಗಳ ಬಗೆಗೆ ಪರಸ್ಪರರಲ್ಲಿ ಉತ್ತಮ ಅಭಿಪ್ರಾಯ ಮೂಡಿಸಲು ಹವಣಿಸುತ್ತವೆ. ಲಂಬಾಣಿಗಳ ಧಾರ್ಮಿಕ, ರಾಜಕೀಯ ಮತ್ತು ವೈಯಕ್ತಿಕ ವಿಷಯಗಳಿಗೆ ಸಂಬಂಧಿಸಿದಂತೆ ತಮ್ಮ ಸುತ್ತಮುತ್ತಲಿನ ಪ್ರದೇಶದಲ್ಲಿಯ (ಧಾರ್ಮಿಕ ವಿಷಯಕ್ಕೆ ಬ್ರಾಹ್ಮಣ ಪುರೋಹಿತರು) ಹಾಗೂ ರಾಜಕೀಯಕ್ಕೆ ಸಂಬಂಧಿಸಿದಂತೆ (ಲಂಬಾಣೇತರ ನಾಯಕರೊಂದಿಗೆ) ಸಂಪರ್ಕಗಳನ್ನಿರಿಸಿಕೊಂಡಿದ್ದಾರೆ. ಗ್ರಾಮಲೆಕ್ಕಿಗರು, ಶಾಲಾ ಶಿಕ್ಷಕರು ಹಾಗೂ ಗ್ರಾಮಮಟ್ಟದ ಕಾರ್ಯಕರ್ತರು ಮೊದಲಾದ ಅಧಿಕಾರಿಗಳ ಜೊತೆ ತಾಂಡಗಳಿಗೆ ಸೀಮಿತವಾದಂತೆ ಆಡಳಿತ ಸಂಬಂಧವನ್ನು ಹೊಂದಿದ್ದಾರೆ.

ಲಂಬಾಣಿಗಳು ಕೆಲವು ಆಸ್ತಿಗಳನ್ನು ಸಾಮಾನ್ಯ ಒಡೆತನದವುಗಳೆಂದು ಭಾವಿಸಿರುತ್ತಾರೆ. ಸೇವಾಭಯ ದೇವಾಲಯ, ಸಿತ್ಲಭವಾನಿ ಹಾಗೂ ಇತರ ದೇವರುಗಳ ದೇವಾಲಯಗಳು, ತಾಂಡದ - ಪ್ರದೇಶ ಮೊದಲಾದವುಗಳು ತಮ್ಮೆಲ್ಲರ ಒಟ್ಟಾರೆ ಆಸ್ತಿ (ಲಂಬಾಣಿಗಳ ಸಾರ್ವತ್ರಿಕ ಆಸ್ತಿ) ಎಂದು ಪರಿಗಣಿಸುತ್ತಾರೆ. ಕುಡಿಯುವ ನೀರಿನ ಬಾವಿಗಳಿಗಾಗಿ ಶಾಲಾ ಕಟ್ಟಡಕ್ಕಾಗಿ, ಓಣಿಯ ಚರಂಡಿ, ಹೊಸ ನಿವೇಶನಗಳಿಗೆ (ಜನತಾ ಮನೆಗಳು), ಸಾಮುದಾಯಿಕ ಉತ್ಸವಗಳು ಮತ್ತು ಸಮಾರಂಭಗಳನ್ನು ನಡೆಸುವುದಕ್ಕಾಗಿ ನೆರವು ಕೋರಲು ಸರಕಾರಕ್ಕೆ ಮನವಿ ಮಾಡುವ ಕಾರ್ಯದಲ್ಲಿ ಎಲ್ಲರೂ ಸಾಮಾನ್ಯವಾಗಿ ಪಾಲುಗೊಳ್ಳುತ್ತಾರೆ. ಇಂತಹ ಯೋಜನೆಗಳು ಸಾಮಾನ್ಯವಾಗಿ ಲಂಬಾಣಿ ಪಂಚಾಯಿತಿ ಮೂಲಕ ಕಾರ್ಯಗತಗೊಳ್ಳುತ್ತವೆ. ಇಂತಹ ಕಾರ್ಯಕ್ರಮಗಳನ್ನು ಸರ್ವಾನುಮತದ ಪ್ರಕ್ರಿಯೆಯ ಮೂಲಕ ಕೈಗೆತ್ತಿಕೊಳ್ಳಲಾಗುತ್ತದೆ. ಪಂಚಾಯಿತಿಯಲ್ಲಿ ಸಭೆ ಸೇರುವ ಮುಖ್ಯಸ್ಥರ ಎದುರಿನಲ್ಲಿ ಮೊದಲಿಗೆ ವಿಚಾರವನ್ನು ಪ್ರಸ್ತಾಪಿಸಲಾಗುತ್ತದೆ. ಆನಂತರ ಸುದೀರ್ಘ ಚರ್ಚೆ ನಡೆಯುತ್ತದೆ. ಕೆಲವು ಬಾರಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಸಭೆಗಳಲ್ಲಿ ಚರ್ಚೆ ನಡೆಯುತ್ತದೆ. ವಿಷಯವನ್ನು ಪ್ರಸ್ತಾಪ ಮಾಡುವವರು ಸ್ವಲ್ಪ ಸ್ಥಿತಿವಂತ ಸದಸ್ಯರನ್ನು ಒಲೈಸಲು ಪ್ರಯತ್ನಿಸುತ್ತಾರೆ. ಇದಾದ ನಂತರ ವಿಷಯವನ್ನು ವಿರೋಧಿಸುವವರು ಒಂದು ಒಪ್ಪಂದಕ್ಕೆ ಬರುತ್ತಾರೆ. ಕೆಲವು ಸಂದರ್ಭಗಳಲ್ಲಿ ಪ್ರತಿಭಟನೆ ವಿರೋಧಗಳನ್ನು ಉಪೇಕ್ಷಿಸಿ ತೀರ್ಮಾನ ಕೈಕೊಳ್ಳಲಾಗುತ್ತದೆ. ತನ್ನ ಸಹಚರರ ಬೆಂಬಲವಿರದಿದ್ದರೆ ನಾಯಕ (ಮುಖ್ಯಸ್ಥ) ಕೂಡ ಅಸಹಾಯಕನಾಗುತ್ತಾನೆ. ತಾಂಡದೊಳಗಿನ ಆಂತರಿಕ ಒತ್ತಡಗಳು, ಪರಿಣಾಮಗಳು ಇತರ ಸಾಮಾಜಿಕ ಸಂದರ್ಭಗಳಲ್ಲಿಯೂ ಕಾಣಿಸಿಕೊಳ್ಳುತ್ತವೆ. ವ್ಯಾಜ್ಯಗಳ ವಿಷಯಗಳಲ್ಲಿ ತೀರ್ಮಾನ ಕೊಡುವಾಗ, ತಪ್ಪಿತಸ್ಥರನ್ನು ಬಹಿಷ್ಕರಿಸುವಾಗ, ಇಲ್ಲವೆ ದಾರಿತಪ್ಪಿ ನಡೆಯುವವರಿಗೆ ದಂಡವಿಧಿಸುವಾಗ ವಿರೋಧಗಳು ಎದುರಾಗುತ್ತವೆ.

ತಾಂಡದ ಹೊರಗಿನ ಜನರಿಗೆ ಇದು ಒಂದು ಸರ್ವಸಮವಾದ ಗುಂಪು ಎಂಬಂತೆ ಕಾಣುತ್ತದೆ. ಅಲ್ಲಿ ಅಲೆದಾಡುವ ಪೊಲೀಸ್ ಸಿಬ್ಬಂದಿಯಾಗಲೀ ಅಥವಾ ಇತರ ಸರಕಾರಿ ಇಲಾಖೆಯ ಸಿಬ್ಬಂದಿಯಾಗಲೀ 'ಏನಾದರೂ ಸಮಸ್ಯೆಗಳಿವೆಯೇ' ಎಂದು ಪ್ರಶ್ನಿಸಿದಾಗ (ತಾಂಡದೊಳಗೆ ಘರ್ಷಣೆಗಳು, ಭಿನ್ನಾಭಿಪ್ರಾಯಗಳು, ಆಕ್ಷೇಪಣೆಗಳೇನೇ ಇದ್ದರೂ) ಸಾಮಾನ್ಯವಾಗಿ ಎಲ್ಲರೂ ಇಲ್ಲವೆಂದೇ ಹೇಳುತ್ತಾರೆ. ಲಂಬಾಣಿಗಳು ತಮ್ಮ ಸಹಜೀವಿಗಳನ್ನು ತಮ್ಮ ಬಂಧುತ್ವ ಸಂಬಂಧಿಗಳಂತೆಯೇ ನಡೆಸಿಕೊಳ್ಳುತ್ತಾರೆ. ಲಂಬಾಣಿ ಹಾಗೂ ಲಂಬಾಣೇತರರ ನಡುವಿನ ವ್ಯಾಜ್ಯಗಳಲ್ಲಿ ಹಾಗೂ ಇತರ ತಾಂಡಗಳಿಂದ ಆಗಮಿಸಿದ ಲಂಬಾಣಿಗಳ ನಡುವಿನ ವ್ಯಾಜ್ಯಗಳಲ್ಲಿ ಅವರ ನಿಲುವುಗಳು ಪ್ರದೇಶ, ಓಣಿ, ಬಂಧುತ್ವದ ಗುಂಪುಗಳು ಮೊದಲಾದ ಅಂಶಗಳನ್ನು ಮೀರಿದ್ದಾಗಿರುತ್ತವೆ. ಈ ಮೂಲಕ ತಮ್ಮ ತಾಂಡಕ್ಕೆ ಹತ್ತಿರ ವಿರುವ ಸಮುದಾಯಕ್ಕೆ ತಮ್ಮಲ್ಲಿರುವ ಪ್ರಾದೇಶಿಕ ನಿಷ್ಠೆಯನ್ನು ತೋರ್ಪಡಿಸುತ್ತಾರೆ.

ಯುಗಾದಿ, ಸಿತ್ಲಭವಾನಿ ಉತ್ಸವ, ದಸರಾ, ದೀಪಾವಳಿ, ಹೋಳಿ ಹಾಗೂ ಗೌರಿ ಮೊದಲಾದ ಹಬ್ಬಗಳಲ್ಲಿ ಇಡೀ ತಾಂಡವು ಒಂದೇ ಎಂಬಂತೆ ಸಂಭ್ರಮ, ಸಡಗರದ ಮೂಲಕ ಏಕತೆಯು ಪ್ರಕಟಗೊಳ್ಳುತ್ತದೆ. ಸಾಂಕ್ರಾಮಿಕ ರೋಗಗಳ ಅಧಿದೇವತೆಗಳ ಆರಾಧನೆಗಾಗಿ ಮುಡಿಪಾಗಿಟ್ಟ ದಿನಗಳಲ್ಲಿ, ವಿಶೇಷವಾಗಿ ಮಳೆರಾಯನನ್ನು ಬರಮಾಡಿಕೊಳ್ಳಲು ಎಲ್ಲರೂ ಕೆಲಸ ಮಾಡದೇ ಇರುವುದು ಮೊದಲಾದ ಆಚರಣೆಗಳನ್ನು ಆಚರಿಸುತ್ತಾರೆ. ಈ ಆಚರಣೆಯ ಮೂಲಕ ಮಾನವರ ಜೀವಕ್ಕೆ ಅಥವಾ ಪ್ರಾಣಿಗಳ ಜೀವಕ್ಕೆ ಎದುರಾಗಬಹುದಾದ ಸಾಂಕ್ರಾಮಿಕ ರೋಗ ಹರಡುವ ದೇವತೆಗಳನ್ನು ಸಂತೃಪ್ತಿಗೊಳಿಸುತ್ತಾರೆ. ಇಂತಹ ಸಾಂಪ್ರದಾಯಿಕ ಧಾರ್ಮಿಕ ರೀತಿ ರಿವಾಜುಗಳನ್ನು ಪಾಲಿಸುವಾಗಲೂ ತಾಂಡವು ಬಾಹ್ಯ ಜಗತ್ತಿಗೆ ತನ್ನ ಏಕತೆಯನ್ನು ಪ್ರದರ್ಶಿಸುತ್ತದೆ.

ಗೌರಿ ಹಬ್ಬವು ಎಲ್ಲಾ ಧಾರ್ಮಿಕ ಉತ್ಸವ ಆಚರಣೆಗಳಿಗಿಂತ ಅತ್ಯಂತ ಮಹತ್ವದ್ದಾಗಿದೆ. ಈ ಉತ್ಸವದ ಕಾಲಕ್ಕೆ ಇತರ ತಾಂಡಗಳಿಂದ ಆಗಮಿಸುವ ಅತಿಥಿಗಳಿಗೆ ತಾಂಡವು ಅತಿಥೇಯವಾಗಿರುತ್ತದೆ. ಈ ಹಬ್ಬವು ಹೆಚ್ಚಿನ ಪ್ರಾಮುಖ್ಯತೆಯನ್ನು ಇಂದೂ ಸಹ ಪಡೆದಿದೆ. ತಮ್ಮ ತಾಂಡಕ್ಕೆ ಆಗಮಿಸುವ ಸಂಬಂಧಿಕರ ಕುಟುಂಬಗಳನ್ನು ತಾಂಡದ ಜನರು ಬರಮಾಡಿಕೊಳ್ಳುತ್ತಾರೆ. ಕನ್ಯಾರ್ಥಿಗಳಾಗಿ ಆಗಮಿಸುವ ಸಮೀಪದ ತಾಂಡಗಳ ಯುವಕರನ್ನು ಈ ಸಂದರ್ಭಗಳಲ್ಲಿ ಸ್ವಾಗತಿಸಲಾಗುತ್ತದೆ. ಹಬ್ಬದ ಆಚರಣೆಗಳ ಮೊದಲಿಗೆ ಹಾಗೂ ನಂತರದಲ್ಲಿ ಜರುಗುವ ಕಾರ್ಯಕ್ರಮಗಳನ್ನು ಎಲ್ಲರೂ ಉತ್ಸುಕತೆಯಿಂದ ಎದುರು ನೋಡುತ್ತಾರೆ. ಹಿರಿಯರು ತಮ್ಮ ಸಂಬಂಧಿಕರನ್ನು ಭೇಟಿಮಾಡುವ ಹಾಗೂ ಅವರೊಡನೆ ಅಕ್ಕರೆಯಿಂದ ಕಾಲಕಳೆಯುವುದರಲ್ಲಿ ಉತ್ಸುಕರಾಗಿರುತ್ತಾರೆ. ಯುವಕರು ಅತ್ತಿತ್ತ ಅಲೆದಾಡುವುದರಲ್ಲಿ, ಯುವತಿಯರು ಮತ್ತು ಮಹಿಳೆಯರು ತಮ್ಮ ಆಶ್ರಯದಾತ ಸಂಬಂಧಿಕರನ್ನು, ಸಂಸ್ಕೃತಿಯ ನಾಯಕರನ್ನು ಪ್ರಶಂಸಿಸುವ ಹಾಡು ಹಾಗೂ ನೃತ್ಯಗಳಲ್ಲಿ ತೊಡಗುವ ಮೂಲಕ ಸಂಭ್ರಮ ಪಡುತ್ತಾರೆ. ಇವುಗಳು ಹಬ್ಬ ಮತ್ತು ಉತ್ಸವದ ಅತ್ಯಂತ ಮಹತ್ವದ ಚಟುವಟಿಕೆಗಳಾಗಿರುತ್ತವೆ.

ಉತ್ಸವದುದ್ದಕ್ಕೂ ತಾಂಡದಲ್ಲಿ ಸಾರ್ವತ್ರಿಕ ಊಟದ ವ್ಯವಸ್ಥೆಯಿದ್ದ ದಿನಗಳನ್ನು ಬಿಟ್ಟು ಪ್ರತಿಯೊಂದು ಮನೆಯಲ್ಲೂ ಬೇರೆ ಬೇರೆ ತಾಂಡಗಳಿಂದ ಆಗಮಿಸಿದ ಅತಿಥಿಗಳು, ತಾಂಡದೊಳಗಿನ ಸಂಬಂಧಿಕರು ಹಾಗೂ ಸ್ನೇಹಿತರು ಊಟಮಾಡುತ್ತಾರೆ. ಬಡತನದಲ್ಲಿರುವ ಅನೇಕ ಲಂಬಾಣಿಗಳಿಗೆ ಅತಿಥಿ ಸತ್ಕಾರ ಮಾಡುವುದು ಸಾಧ್ಯವಿಲ್ಲವಾದರೂ ಸಂಪ್ರದಾಯವನ್ನು ಪಾಲಿಸಲು ಹಾಗೂ ತಾಂಡದ ಸಾಮಾಜಿಕ ಹೊಣೆಗಾರಿಕೆಯನ್ನು ನಿಭಾಯಿಸಲು ಧಾರ್ಮಿಕ ಕಾರ್ಯಗಳನ್ನು ನೆರವೇರಿಸಲೇಬೇಕಾಗುತ್ತದೆ. ಗೌರಿ ಉತ್ಸವವನ್ನು ಆಚರಿಸುವ ಪ್ರಸ್ತಾಪ ಬಂದಾಗಲೆಲ್ಲ ಅದು ವೆಚ್ಚದಾಯಕವಾದ್ದರಿಂದ ಬಡತನದಲ್ಲಿರುವ ಲಂಬಾಣಿಗಳು ಬೇಡವೆಂದು ಪ್ರತಿಪಾದಿಸುತ್ತಾರೆ. ತಾಂಡದ ಗೌರವ ಪ್ರತಿಷ್ಠೆಯನ್ನು ಕಾಪಾಡಲು, ಇತರ ತಾಂಡಗಳಲ್ಲಿ ತಮ್ಮ ತಾಂಡದ ಬಗೆಗೆ ಸದಭಿಪ್ರಾಯ ಮೂಡಿಸುವ ಉದ್ದೇಶದಿಂದ ಅಂತಹ ಪ್ರತಿಪಾದನೆಗಳನ್ನು ಉಪೇಕ್ಷಿಸಲಾಗುತ್ತದೆ.

ನಿಗದಿತ ಋತುಮಾನಗಳಲ್ಲಿ ದುಡಿಮೆಗೋಸ್ಕರ ಪರಸ್ಥಳಗಳಿಗೆ ವಲಸೆ ಹೋಗುವ ಲಂಬಾಣಿಗಳು ಕೂಡ ಗೌರಿ ಉತ್ಸವಕ್ಕೆ ಯಾವುದೇ ಪರಿಸ್ಥಿತಿಯಲ್ಲಿ ತಮ್ಮ ತಾಂಡಕ್ಕೆ ಆಗಮಿಸುತ್ತಾರೆ. ಇದನ್ನು ನೋಡಿದರೆ ತಮ್ಮ ತಾಂಡಗಳೊಂದಿಗೆ ಅವರು ಹೊಂದಿರುವ

ಭಾವನಾತ್ಮಕ ಸಂಬಂಧವು ಎಷ್ಟು ತೀವ್ರತರವಾಗಿದೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.[೩] ಇಂತಹ ಉತ್ಸವದ ಸನ್ನಿವೇಶಗಳಲ್ಲಿ ತಾಂಡದ ನಿವಾಸಿಗಳೆಲ್ಲರೂ ತಮ್ಮ ತಾಂಡದ ಏಕತೆಯನ್ನು ಹಾಗೂ ಸಾಮಾಜಿಕ ಐಕಮತ್ಯವನ್ನು ಬಾಹ್ಯಜಗತ್ತಿಗೆ ತೋರಿಸಿಕೊಡುವುದು ಅಗತ್ಯವೆಂದು ಭಾವಿಸಿ ತಾವು ಒಂದು ಸಮುದಾಯವೆಂಬುದನ್ನು ಸಾರ್ವಜನಿಕವಾಗಿ ಸಾಬೀತುಪಡಿಸುತ್ತಾರೆ. ೪-೫ ವರ್ಷಗಳ ನಂತರ ಧಾರ್ಮಿಕ ಉತ್ಸವವನ್ನು ಆಚರಿಸುವ ತಾಂಡದ ಲಂಬಾಣಿಗಳನ್ನು ಇತರ ತಾಂಡದ ಲಂಬಾಣಿಗಳು ಕೀಳಾಗಿ ಕಾಣುತ್ತಾರೆ. ಅಂತಹ ತಪ್ಪನ್ನು ಮಾಡುವ ತಾಂಡದ ನಿವಾಸಿಗಳನ್ನು ಸಾರ್ವತ್ರಿಕವಾಗಿ ಅಪಹಾಸ್ಯ ಮಾಡುವ ಮೂಲಕ ಅವಮಾನಿಸುತ್ತಾರೆ.

ಲಂಬಾಣೇತರರು ಗ್ರಾಮದೇವತೆಯ ಆರಾಧನೆಗಾಗಿ ವರ್ಷಕ್ಕೊಮ್ಮೆ ಜಾತ್ರೆಗಳನ್ನು ನಡೆಸುವ ರೀತಿಯಲ್ಲಿಯೇ ಲಂಬಾಣಿಗಳು ಗೌರಿ ಉತ್ಸವವನ್ನು ಆಚರಿಸುತ್ತಾರೆ. ಅಧ್ಯಯನವನ್ನು ಕೈಗೊಂಡ ಎರಡೂ ತಾಂಡಗಳಲ್ಲಿಯೂ ಸಂಯುಕ್ತ ಗ್ರಾಮದ ಅವಿಭಾಜ್ಯ ಅಂಗವಾಗಿದ್ದರಿಂದ ಹಾಗೂ ಇತರ ಜಾತಿ ಜನರ ಹಬ್ಬಹರಿದಿನಗಳನ್ನು ಕೂಡ ಲಂಬಾಣಿಗಳು ಆಚರಿಸುತ್ತಾರೆ. ಇದು ಒಂದು ಸಾಮಾನ್ಯ ಉತ್ಸವವನ್ನು ಆಚರಿಸುವ ಸಹಜ ಪ್ರವೃತ್ತಿಯಾಗಿದೆಯಷ್ಟೆ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಈ ಗ್ರಾಮಗಳಲ್ಲಿ ಲಂಬಾಣಿಗಳು ಮತ್ತು ಲಂಬಾಣೇತರರ ನಡುವಿನ ವರ್ಗೀಕರಣವು ಗೋತ್ರ ಸಂಬಂಧೀ ಹಾಗೂ ಸಾಮುದಾಯಿಕ ಅಂಶಗಳೆರಡನ್ನೂ ಆಧರಿಸಿದೆ. ಸಾರ್ವತ್ರಿಕ ಉತ್ಸವಗಳ ವಿಷಯಗಳಲ್ಲಿ ಭಿನ್ನತೆ ಗ್ರಾಮಗಳಲ್ಲಿ ಇದೆ. ಲಂಬಾಣಿ ಉತ್ಸವಗಳು ತಾಂಡಗಳಲ್ಲಿ ನಡೆದರೆ ಇತರ ಹಿಂದೂಗಳು ತಮ್ಮ ಓಣಿಗಳಲ್ಲಿ ಉತ್ಸವಗಳನ್ನು ಆಚರಿಸುತ್ತಾರೆ. ಲಂಬಾಣಿ ಹಾಗೂ ಲಂಬಾಣೇತರರು ಪರಸ್ಪರರ ಉತ್ಸವಗಳಲ್ಲಿ ಪಾಲುಗೊಳ್ಳುವುದು ಕೆಲವು ಇತಿಮಿತಿಗಳೊಂದಿಗೆ. ಅದು ಕೇವಲ ನೋಡುವ ಸ್ವರೂಪದ್ದಾಗಿಯೇ ಹೊರತೂ ಸಕ್ರಿಯವಾಗಿ ಪಾಲುಗೊಳ್ಳುವಂತಹದ್ದು ಆಗಿರುವುದಿಲ್ಲ. ಆದರೂ ಲಂಬಾಣಿ ಮತ್ತು ಲಂಬಾಣೇತರರ ಗ್ರಾಮದೊಳಗಿನ ವಿಭಜನೆಯು ಸರ್ವವ್ಯಾಪಕವಾಗಿದೆ. ಅನೇಕ ವಿಷಯಗಳಲ್ಲಿ ಎರಡೂ ಗುಂಪುಗಳು ಕೆಲವು ಸಾಮಾನ್ಯ ಸಮಸ್ಯೆಗಳನ್ನು ಎದುರಿಸುತ್ತವೆ. ಅನೇಕ ಸಂಘ ಸಂಸ್ಥೆಗಳಲ್ಲಿ ಹಾಗೂ ಬಾಹ್ಯವಾಗಿ ಲಭಿಸುವ ಅನೇಕ ಸೌಲಭ್ಯಗಳನ್ನು ಅವರು ಒಟ್ಟಾಗಿ ಹಂಚಿಕೊಳ್ಳುತ್ತಾರೆ. ಆಡಳಿತಕ್ಕೆ ಸಂಬಂಧಿಸಿದಂತೆ ತಾವೆಲ್ಲರೂ ಒಂದೇ ಎಂಬ ಕಲ್ಪನೆಯು ಮೂಡುವಂತೆ ವ್ಯವಹರಿಸುತ್ತಾರೆ.

ತಾಂಡವನ್ನು ಒಂದು ಸಮುದಾಯವನ್ನಾಗಿ ಬಂಧಿಸುವ ಅಂಶಗಳಿದ್ದರೂ, ಒಂದೆಡೆ ನಿಕಟ ಸಂಪರ್ಕದಲ್ಲಿ ಜನರು ಒಟ್ಟಾಗಿ ಜೀವಿಸುವಾಗ ಸಾಮಾನ್ಯವಾಗಿ ಕೆಲವು ಸಮಸ್ಯೆಗಳು ತಲೆದೋರುತ್ತವೆ. ಅವುಗಳೆಂದರೆ ತಪ್ಪು ಗ್ರಹಿಕೆಗಳು, ಪರಸ್ಪರ ಸಂಶಯಭಾವನೆ, ಭಿನ್ನಾಭಿಪ್ರಾಯಗಳು, ಗಾಳಿ ಮಾತುಗಳು, ಛಿದ್ರೀಕರಣದ ಪ್ರವೃತ್ತಿ ಮೊದಲಾದವು ಅಲ್ಲಿಯೂ ಇವೆ. ತತ್ಪರಿಣಾಮವಾಗಿ ನೆರೆಹೊರೆಯ ಗುಂಪುಗಾರಿಕೆ ಮೂಲಕ ಕಾಣಿಸಿಕೊಳ್ಳುವ ಪ್ರತ್ಯೇಕತೆಗಳು ನಿರಂತರವಾಗಿ ಬದಲಾಗುತ್ತಲೇ ಇರುತ್ತವೆ.[೪] ಇಂತಹ ಭಿನ್ನಮತಗಳಿದ್ದರೂ, ಸ್ಥಳೀಯ ಸಮುದಾಯದ ಮೇಲೆ ಅವು ಬೀರಬಹುದಾದ ನಕಾರಾತ್ಮಕ ಪರಿಣಾಮದ ಭೀತಿಯಿಂದಾಗಿ ಅವುಗಳನ್ನು ಕೆಲವುಮಟ್ಟಿಗೆ ಗೌಪ್ಯವಾಗಿಯೇ ಉಳಿದುಕೊಳ್ಳುವಂತೆ ನೋಡಿಕೊಳ್ಳಲಾಗುತ್ತದೆ.

---

೩. ಗಮನಿಸಿ - ಇವಾನ್ಸ್ ಪ್ರಿಚ್ಚಾರ್ಡ್ ತಾನು ಜನಿಸಿದ ತನ್ನೂರಿಗೆ ಮರಳುವ ಇಂತಹುದೇ ಪ್ರವೃತ್ತಿಯನ್ನು ಮತ್ತು ನ್ಯೂಲರ್ ಹಳ್ಳಿಗಳ ಸಾಂಸ್ಕೃತಿಕ ವ್ಯಕ್ತಿತ್ವ ಹಾಗೂ ಏಕತೆಯ ಭಾವನೆಯನ್ನು ವಿವರಿಸಿದ್ದಾನೆ (ಎವಾನ್ಸ್ ಪ್ರಿಚ್ಚಾರ್ಡ್, ೧೯೪೦ : ೩೬೧).

೪. ,, ಇವಾನ್ಸ್ ಪ್ರಿಚ್ಚಾರ್ಡ್ ೧೯೪೦ : ೩೬೧. (ಹೆಚ್ಚಿನ ವಿವರಣೆಗಳಿಗಾಗಿ ಬಷ್ಪತ್ ಗ್ರಾಮೀಣ ಸಮುದಾಯದೊಳಗಿನ ಸಮುದಾಯಗಳು)

ಮೇಲಿನ ಎಲ್ಲ ವಿವರಣೆಗಳಿಂದ ಕಂಡುಬರುವ ಅಂಶವೆಂದರೆ ಪ್ರಾಚೀನ ಕಾಲದಲ್ಲಿ ಲಂಬಾಣಿಗಳು ತಮ್ಮ ಅಲೆಮಾರಿ ವಾಸಸ್ಥಾನಗಳನ್ನು ಸ್ಥಳಾಂತರಿಸಲು ಅನುಕೂಲವಾಗುವಂತೆ ಸಾಮಾಜಿಕ ಗುಂಪುಗಳ ಗಾತ್ರವು ಇದ್ದವು. ಹೀಗಾಗಿ ನೆರೆಹೊರೆಯ ಗುಂಪುಗಳಿಗಿಂತ ಇವರ ಗುಂಪು ಹೆಚ್ಚು ದೊಡ್ಡದಾಗಿರಲು ಸಾಧ್ಯವಿರಲಿಲ್ಲ. ಅಂತಹ ಗುಂಪುಗಳು ಕುಲಸಂಬಂಧಿ ನಿಕಟ ಬಾಂಧವ್ಯವನ್ನು ಆಧರಿಸಿದ್ದವೇ ಹೊರತು ಪ್ರಾದೇಶಿಕ ಬಾಂಧವ್ಯವನ್ನಲ್ಲ. ಸಾಂಪ್ರದಾಯಿಕ ಕಸುಬುಗಳನ್ನು ಹಾಗೂ ಅಲೆಮಾರಿ ಜೀವನವನ್ನು ಕೈಬಿಟ್ಟು ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲಗೊಂಡ ನಂತರ, ಆ ಪ್ರದೇಶದ ಮೇಲೆ ವಿಶಿಷ್ಟವಾದ ಭಾವನೆಯಿಂದ ಸಣ್ಣ ಗಾತ್ರದ ಅಲೆಮಾರಿ ಗುಂಪುಗಳು ಒಟ್ಟುಗೂಡಿ ದೊಡ್ಡ ಸಮುದಾಯಗಳಾಗಿ ಬೆಳೆದು ಒಂದೆಡೆ ನೆಲೆಸಿವೆ. ಅಲೆಮಾರಿ ನಂತರದ ಹಂತವಾದ ಅರೆ-ಅಲೆಮಾರಿ ಜೀವನದಲ್ಲಿಯು ಕೂಡ ಭೌಗೋಳಿಕ ನಂಟನ್ನು ಅಷ್ಟೊಂದಾಗಿ ಹೊಂದಿರಲಿಲ್ಲ. ಅರೆ-ಅಲೆಮಾರಿ ನೆಲೆಗಳಲ್ಲಿಯ ಪರಸ್ಪರ ಪ್ರಕ್ರಿಯೆಗಳು ಇಂದಿನಷ್ಟು ವ್ಯಾಪಕವಾಗಿರಲಿಲ್ಲ. ಅಂದು ಸಂಪರ್ಕಗಳು ತೀರ ಕಡಿಮೆಯಿದ್ದುದರಿಂದ ಭೌಗೋಳಿಕ ನೆಲೆಯ ಬಗೆಗೆ ಗಟ್ಟಿಯಾದ ಭಾವನೆ ಉಂಟಾಗಲು ಸಾಧ್ಯವಿರಲಿಲ್ಲ.

ಕುಟುಂಬ, ಸಮೀಪದ ನೆರೆಹೊರೆಯ ಭಾವನೆಗಳು, ಮನೆಗಳ ಗುಂಪುಗಳು (ಅಥವಾ ಓಣಿಗಳು) ಹಾಗೂ ತಾಂಡದ ವಾಸಸ್ಥಾನದ ಗುಂಪುಗಳ ನಡುವೆ ದಿನನಿತ್ಯದ ಸಾಮಾಜಿಕ ಸನ್ನಿವೇಶದಲ್ಲಿ ಹೆಚ್ಚಿನ ಪರಸ್ಪರ ಸಂಪರ್ಕಗಳು ಸಂಭವಿಸುತ್ತಿವೆ. ಸಾಮಾಜಿಕ ಸಂಬಂಧಗಳಲ್ಲಿ ರಕ್ತಸಂಬಂಧವು ಸಮಾನಾಂತರ ವ್ಯವಸ್ಥೆಯನ್ನು ಒದಗಿಸಿರುತ್ತದೆ. ರಕ್ತ ಸಂಬಂಧದ ಸಾಲುಗಳಲ್ಲಿಯೂ ಕೂಡ ಇಂತಹದೇ ಪರಸ್ಪರ ಪ್ರಕ್ರಿಯೆಯು ನಡೆಯುತ್ತದೆ. ಉದಾಹರಣೆಗೆ, ತಾಂಡದೊಳಗಿನ ಓರ್ವ ವ್ಯಕ್ತಿಯು ತನ್ನ ನೆರೆ-ಹೊರೆಯವರನ್ನೂ ಹಾಗೂ ಮತ್ತೊಂದು ತಾಂಡದ ತನ್ನ ಸಂಬಂಧಿಕರನ್ನು ಸೇರಿಸಿಕೊಂಡು ಒಂದು ಸಹಕಾರಿ ಕಾರ್ಯದಲ್ಲಿ ಪಾಲುಗೊಳ್ಳಲು ಆಮಂತ್ರಿಸುತ್ತಾನೆ. ಒಂದು ಪ್ರದೇಶದಲ್ಲಿ ಹರಡಿಕೊಂಡ ಲಂಬಾಣಿ ರಕ್ತ ಸಂಬಂಧಿಕರು ತಾವು ಬೆಳೆದ ದವಸ ಧಾನ್ಯಗಳನ್ನು, ಅವುಗಳನ್ನು ಬೆಳೆಯದಿದ್ದವರೊಂದಿಗೆ ಹಂಚಿಕೊಳ್ಳುತ್ತಾರೆ. ವಾಸಸ್ಥಾನ ಹಾಗೂ ರಕ್ತಸಂಬಂಧವನ್ನು ಆಧರಿಸಿದ ಸಂಘಟನೆಯ ತತ್ವಗಳಲ್ಲಿ ಇರುವ ಮೂಲಭೂತ ವ್ಯತ್ಯಾಸ ಎಂದರೆ ಎರಡನೆಯದು. ತಾಂಡದೊಳಗಿನ ಸಾಲುಮನೆಯನ್ನು ಬಲಪಡಿಸುವುದು ಮಾತ್ರವಲ್ಲದೆ ಮನೆತನಗಳಿಗೆ ಪ್ರಭಾವಿ ಬಾಹ್ಯ ಸಂಪರ್ಕಗಳನ್ನು ಒದಗಿಸಿಕೊಡುತ್ತದೆ.

## ಆರ್ಥಿಕ ಬದಲಾವಣೆಯಿಂದ ಕುಟುಂಬದ ಮೇಲಾದ ಪರಿಣಾಮಗಳು

ಮುಂಬರುವ ಪುಟಗಳಲ್ಲಿ ಲಂಬಾಣಿಗಳ ಕುಟುಂಬದ (ಅಣು ಹಾಗೂ ಅವಿಭಕ್ತ) ಮನೆತನಗಳ ಮತ್ತು [illegible] ಗೋತ್ರಗಳ ಬಗೆಗೆ ಚರ್ಚಿಸಲಾಗಿದೆ. ಬಂಧುತ್ವದ ಮೂಲಭೂತ ಘಟಕವೇ ಕುಟುಂಬವಾಗಿದೆ. ಸಣ್ಣ ಕುಟುಂಬವು ಅವಿಭಕ್ತ ಕುಟುಂಬದ ಘಟಕ ವಾಗಿರುವಾಗಲೂ ಅದು ಸ್ವಲ್ಪಮಟ್ಟಿಗಾದರೂ ಸಮಗ್ರತೆಯನ್ನು ಒಳಗೊಂಡಿರುತ್ತದೆ. ಅದರ ಸಮಗ್ರತೆಯನ್ನು ಪ್ರಮುಖವಾಗಿ ನೆಂಟಸ್ತಿಕೆ, ಪ್ರೀತಿ ಹಾಗೂ ವಂಶಪರಂಪರೆಯನ್ನಾಧರಿಸಿದ ಭಾವನೆಗಳಿಂದ ವ್ಯಾಖ್ಯಾನಿಸಲಾಗುತ್ತದೆ. ಒಬ್ಬ ಲಂಬಾಣಿಯು ತನ್ನ ಸೋದರನ ಮಕ್ಕಳಿಗಿಂತ ತನ್ನ ಮಕ್ಕಳೊಡನೆ ಹೆಚ್ಚು ನಿಕಟತೆಯನ್ನು ಸಹಜವಾಗಿ ಅನುಭವಿಸುತ್ತಾನೆ. ಆತನ ಸೋದರನ ಮಕ್ಕಳು ಅವಿಭಕ್ತ ಕುಟುಂಬದೊಳಗೆ ಸಮಾನ ಅಂತಸ್ತನ್ನು ಹೊಂದಿದ್ದರೂ, ಅವರೆಲ್ಲರನ್ನು ಸಮಾನವಾಗಿಯೇ ನೋಡಿಕೊಳ್ಳಬೇಕಾದ ಹೊಣೆಗಾರಿಕೆಯಿದ್ದರೂ, ಆತನು ಸಹಜವಾಗಿ ತನ್ನ ಮಕ್ಕಳೊಡನೆಯೇ ಹೆಚ್ಚು ಪ್ರೀತಿಯನ್ನು ಅನುಭವಿಸುತ್ತಾನೆ. ಪತಿ-ಪತ್ನಿ ಹಾಗೂ ಅವರ ಮಕ್ಕಳ ಊಟೋಪಚಾರ ಇತ್ಯಾದಿ ವಿಷಯಗಳಲ್ಲಿ ಸುಲಭವಾಗಿ ಗುರುತಿಸಲ್ಪಡುವ ಒಂದು ಗುಂಪು ಸಣ್ಣ ಕುಟುಂಬ. ಇದು ಸಣ್ಣ ಕುಟುಂಬದ ಸಮಗ್ರತೆಯನ್ನು ಕೂಡ ನಿದರ್ಶಿಸುವ ಸಂಗತಿಯಾಗಿದೆ. ಕುಟುಂಬದ ಸಣ್ಣ ಘಟಕಗಳು ಅವಿಭಕ್ತ ಕುಟುಂಬದಲ್ಲಿ ಇರುವವರೆಗೆ ವೈಯಕ್ತಿಕ ಆಸ್ತಿ ಎಂಬ ಪರಿಕಲ್ಪನೆ ಇರಲಾರದು.

ಅವಿಭಕ್ತ ಕುಟುಂಬದ ಸಂಘಟನೆಯು ತನ್ನ ಘಟಕಗಳನ್ನು ಆಧೀನಗೊಳಿಸುವ ಒಲವನ್ನು ಹೊಂದಿರುತ್ತದೆ. ಅವಿಭಕ್ತ ಕುಟುಂಬದಲ್ಲಿಯ ಓರ್ವ ಮಹಿಳೆಯು ತನ್ನ ತವರುಮನೆಗೆ, ಸಂಬಂಧಿಕರ ಮನೆಗೆ ಅಥವಾ ನೆರೆ ಗ್ರಾಮದ ಜಾತ್ರೆ ಅಥವಾ ಉತ್ಸವಕ್ಕೆ ಹೋಗಬೇಕೆಂದು ಬಯಸಿದರೆ ಆಕೆ ತನ್ನ ಪತಿಯ ಅಪ್ಪಣೆಯನ್ನು ಮಾತ್ರ ಪಡೆದರೆ ಸಾಲದು. ಕುಟುಂಬದ ಮುಖ್ಯಸ್ಥನ ಅಪ್ಪಣೆಯನ್ನು ಪಡೆಯಬೇಕಾಗುತ್ತದೆ. ಒಂದು ಅಣುಕುಟುಂಬದಲ್ಲಿಯ ಮಕ್ಕಳಿಗೆ ಆ ಕುಟುಂಬದ ಯಾವುದೇ ಹಿರಿಯರು ಬೋಧಿಸಬಹುದು, ಶಿಸ್ತನ್ನು ಕಲಿಸಿಕೊಡಬಹುದು. ಆದರೆ ಅವಿಭಕ್ತ ಕುಟುಂಬದಲ್ಲಿ ಮನೆಯ ವ್ಯವಹಾರಗಳಲ್ಲಿ ಮನೆಯ ಮುಖ್ಯಸ್ಥನದೇ ಅಂತಿಮ ತೀರ್ಮಾನವಾಗಿರುತ್ತದೆ. ಆತನು ಮಕ್ಕಳನ್ನು ಶಿಕ್ಷಿಸಲು ತಾಯಿಗೂ ಕೂಡ ನಿಷೇಧಿಸಬಹುದಾಗಿದೆ. ಮನೆತನದಲ್ಲಿ ಜನಿಸಿದ ಮಕ್ಕಳು ಆ ಮನೆತನದ ಅಂಗವೇ ಆಗಿರುತ್ತಾರೆ. ತಾಯಿ ವಿವಾಹ ವಿಚ್ಛೇದನ ಪಡೆದಾಗ, ಇಲ್ಲವೆ ವಿಧವೆಯಾದಾಗ ಬೇರೆ ಸಂಬಂಧ ಬೆಳೆಸಿದರೂ ಕೂಡ ಆ ಮಕ್ಕಳು ತಾವು ಜನಿಸಿದ ಮನೆಯ ಅವಿಭಾಜ್ಯ ಅಂಗಗಳಾಗಿಯೇ ಉಳಿಯುತ್ತಾರೆ. ಅವಿಭಕ್ತ ಕುಟುಂಬದಲ್ಲಿ ವಯಸ್ಸು ಮತ್ತು ಲಿಂಗವನ್ನಾಧರಿಸಿದ ಶ್ರಮವಿಭಜನೆಯಿಂದ ಒಂದೇ ಲಿಂಗದ ಅಥವಾ ಸಮವಯಸ್ಕರ ಮಧ್ಯೆ ಹೆಚ್ಚು ನಿಕಟವಾದ ಪರಸ್ಪರ ಪ್ರಕ್ರಿಯೆ ಇರುತ್ತದೆ. ದೊಡ್ಡ ಕುಟುಂಬಗಳಲ್ಲಿ ಕನಿಷ್ಠಪಕ್ಷ ಎರಡು ಪ್ರತ್ಯೇಕ ಹಾಗೂ ಒಂದರ ನಂತರದಲ್ಲೊಂದರಂತೆ ಊಟದ ಎರಡು ಪಂಕ್ತಿಗಳಾಗುತ್ತವೆ. ಮೊದಲು ಪುರುಷರು, ನಂತರ ಮಹಿಳೆಯರು ಊಟಮಾಡುತ್ತಾರೆ. ಮಕ್ಕಳಿಗೆ ಪ್ರತ್ಯೇಕ ಪಂಕ್ತಿ ಎಂಬುದು ಇರುವುದಿಲ್ಲ. ಲಂಬಾಣಿಗಳ ಮನೆಗಳು ಸಾಕಷ್ಟು ವಿಶಾಲವಾಗಿರುವುದಿಲ್ಲವಾದ್ದರಿಂದ ಖಾಸಗಿ ಬದುಕಿಗೆ ಅವಕಾಶವಿರುವುದಿಲ್ಲ. ಯುವಜನರಿಗೆ ಪ್ರತ್ಯೇಕ ಮಲಗುವ ಕೋಣೆಗಳಿರುವುದಿಲ್ಲ. ವಿಭಕ್ತ ಕುಟುಂಬವು ತನ್ನ ಮೂಲ ಕುಟುಂಬಕ್ಕೆ ಆಧೀನವಾಗಿರುತ್ತದೆ ಎಂಬುದು ಇತ್ತೀಚಿನ ದಿನಗಳಲ್ಲಿ ಸ್ಪಷ್ಟವಾಗಿ ಕಂಡುಬರುವ ಸಂಗತಿಯಾಗಿದ್ದರೂ, ಹಿಂದಿನ ವರ್ಷಗಳಲ್ಲಿ ಕೂಡ ಇದೇ ರೀತಿಯಾಗಿತ್ತು. ಲಂಬಾಣಿಗಳಲ್ಲಿ ತಂದೆ-ಮಗನ ಸಂಬಂಧ "ಪ್ರಬಲವಾದ ಬಂಧುತ್ವ ಸಂಬಂಧವಾಗಿದೆ" (ಫ್ರಾನ್ಸಿಸ್, ೧೯೯೫ : ೬೪೦). ಬಂಧುತ್ವದ ಎಲ್ಲ ಸಂಬಂಧಗಳಲ್ಲಿ ಈ ಸಂಬಂಧ ಮಾತ್ರವೇ ಮಹತ್ವದ್ದಾಗಿರದೆ ಪತಿ - ಪತ್ನಿ, ಸೋದರ - ಸೋದರಿ ಮೊದಲಾದ ಸಂಬಂಧಗಳಲ್ಲಿಯೂ ಅದು ಅತ್ಯಂತ ಪ್ರಬಲ ಸ್ವರೂಪದ್ದಾಗಿದೆ. ತಂದೆಯ ಪ್ರಾಬಲ್ಯವನ್ನು ಎಲ್ಲ ಸಂದರ್ಭಗಳಲ್ಲಿಯೂ ಕರಾರುವಕ್ಕಾಗಿ ಒಪ್ಪಿಕೊಳ್ಳಲಾಗುತ್ತದೆ ಎಂಬುದು ಇದರ ಅರ್ಥವಲ್ಲ. ದಿನನಿತ್ಯದ ಜೀವನ ಸಂಗತಿಗಳಲ್ಲಿ ಬಿಕ್ಕಟ್ಟಿನಿಂದ ಕೂಡಿದ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಇಂದಿನ ಗಂಡುಮಕ್ಕಳು ಮಾತ್ರವಲ್ಲ - ಹಿಂದೆಯೂ ಗಂಡು ಮಕ್ಕಳು ತಂದೆಯರೊಂದಿಗೆ ಜಗಳವಾಡಿ ಮನೆಬಿಟ್ಟು ಹೊರಹೋದದ್ದಿದೆ. ಈ ಮಾತನ್ನು ಲಂಬಾಣಿ ದಂತಕತೆಗಳು ಕೂಡ ಹೇಳುತ್ತವೆ (ಹೋಲಿಸಿರಿ : ಗ್ಯಾರಿಯರ್ಸನ್, ೧೯೬೮ : ೨೬೭ - ೨೬೩). ಸೋದರರ ಐಕ್ಯತೆಯು ಯಾವಾಗಲೂ ಗಟ್ಟಿಯಾಗಿರುವುದಿಲ್ಲ. ಸೋದರರು ಜಗಳವಾಡಿ ಅವಿಭಕ್ತ ಕುಟುಂಬದ ಆಸ್ತಿಯನ್ನು ಪಾಲುಮಾಡಿಕೊಳ್ಳುತ್ತಾರೆ (ಇದೇ ಪುಸ್ತಕದ ಪುಟ ೨೯೨ ನೋಡಿರಿ).

ಈ ಅಧ್ಯಯನದ ಅವಧಿಯಲ್ಲಿ ಕುಟುಂಬಗಳ ಸಂಖ್ಯೆಯಲ್ಲಿ ಕಂಡುಬಂದ ಹೆಚ್ಚಳವು ತಾಂಡಗಳಿಗೆ ಇತರ ತಾಂಡಗಳಿಂದ ವಲಸೆ ಬಂದಿರುವುದೇ ಪ್ರಮುಖ ಕಾರಣವಲ್ಲ. ಅವಿಭಕ್ತ ಕುಟುಂಬಗಳ ವಿಭಜನೆಯೇ ಕುಟುಂಬಗಳ ಸಂಖ್ಯೆಯ ಹೆಚ್ಚಳಕ್ಕೆ ಬಹುಪಾಲು ಕಾರಣವಾಗಿದೆ. ೧೯೯೭-೯೯ರ ಮಧ್ಯೆ ಮರಿಯಮ್ಮನಹಳ್ಳಿ ತಾಂಡದಲ್ಲಿ ಅದುವರೆಗೆ ಇದ್ದ ಕುಟುಂಬಗಳ ಸಂಖ್ಯೆಗಿಂತ ೬೪ ಕುಟುಂಬಗಳು ಹೆಚ್ಚಾಗಿದ್ದವು. ಅವುಗಳಲ್ಲಿ ಹತ್ತು ಕುಟುಂಬಗಳು ಮರಿಯಮ್ಮನಹಳ್ಳಿ ತಾಂಡದ ಕನ್ಯೆಯರನ್ನು ಮದುವೆಯಾಗಿ ನೆಲೆನಿಲ್ಲಲು ಬಂದ ವಲಸೆ ಕುಟುಂಬಗಳಾಗಿದ್ದವು. ಉಳಿದ ೫೪ ಕುಟುಂಬಗಳು ಅವಿಭಕ್ತ ಕುಟುಂಬಗಳ ವಿಭಜನೆಯಿಂದ ಹುಟ್ಟಿಕೊಂಡವುಗಳಾಗಿದ್ದವು.

ನಾಗಲಾಪುರ ತಾಂಡದಲ್ಲಿ ೧೯೬೭-೯೯ರ ಮಧ್ಯೆ ಹೆಚ್ಚುವರಿಯಾಗಿದ್ದ ಕುಟುಂಬಗಳ ಸಂಖ್ಯೆ ೨೦. ಇವುಗಳಲ್ಲಿ ನಾಲ್ಕು ಕುಟುಂಬಗಳು ವಲಸೆಯಿಂದ ರೂಪುಗೊಂಡಿದ್ದರೆ ಉಳಿದ ೧೬ ಕುಟುಂಬಗಳು ಅವಿಭಕ್ತ ಕುಟುಂಬಗಳ ವಿಭಜನೆಯಿಂದ ಅಸ್ತಿತ್ವಕ್ಕೆ ಬಂದವಾಗಿದ್ದವು.

ಕೃಷಿ ಭೂಮಿ ಮತ್ತು ಅವಿಭಕ್ತ ಕುಟುಂಬಗಳಿಗೂ ಒಂದು ರೀತಿಯ ನಿಕಟ ಸಂಬಂಧವಿರುವಂತೆ ಕಾಣುತ್ತದೆ. ಆದರೆ ಕೃಷಿ ಕೂಲಿ ದುಡಿಮೆಗಾರರಲ್ಲಿ ಅವಿಭಕ್ತ ಕುಟುಂಬಗಳಿರುವುದು ಈ ಅಧ್ಯಯನಕಾಲಗಲ್ಲಿ ಗಮನಕ್ಕೆ ಬಂದಿಲ್ಲ.

## ಆರ್ಥಿಕ ಬದಲಾವಣೆಯಿಂದ ಮನೆತನ ಮತ್ತು ಗೋತ್ರ ಸಂಘಟನೆಯಲ್ಲಿ ಉಂಟಾಗಿರುವ ಮಾರ್ಪಾಡುಗಳು

ಉತ್ತರ ಕರ್ನಾಟಕ ಹಾಗೂ ಹೈದ್ರಾಬಾದ್ ಪ್ರದೇಶಗಳ ಲಂಬಾಣಿಗಳು 'ಕರ' ಎಂಬ ನಾಲ್ಕು ಪಿತೃಪ್ರಧಾನ ಗೋತ್ರಗಳಲ್ಲಿ ವಿಭಜಿತರಾಗಿದ್ದಾರೆ: ರಾಠೋಡ, ಪವಾರ್, ಚೌವ್ಹಾಣ್ ಮತ್ತು ವಾಡತ್ಯಾ - ಇವುಗಳಲ್ಲಿ, ಪ್ರತಿಯೊಂದರಲ್ಲಿಯೂ ವಿವಿಧ ಸಂಖ್ಯೆಗಳ ಪ್ರತ್ಯೇಕ ಮನೆತನಗಳಿವೆ. ಗೋತ್ರಗಳು ಮೂಲಪುರುಷರ ಹೆಸರಿನಲ್ಲಿ ಪಂಥಿ ಅಥವಾ ಗೋಟ ಎಂಬ ಹೆಸರುಗಳನ್ನು ಹೊಂದಿವೆ. ಒಂದು ಜನಪದ ಗೀತೆಯು ಒಂದು ಗೋತ್ರದಲ್ಲಿ ಹಲವು ಮನೆತನಗಳು ಇರುವುದನ್ನು ಉಲ್ಲೇಖಿಸಿದೆ. "ಸತ್ತಾವೀಸ್ ಗೋಟ ರಾಠೋಡ್, ಬಾರಾ ಗೋಟ ಪವಾರ್, ಛೋ ಗೋಟ ಚೌವ್ಹಾಣ್ ಮತ್ತು ಬಾವನಪಾದ ವಾಡತ್ಯಾ (ರಾಠೋಡ್‌ರಲ್ಲಿ ೨೭; ಪವಾರ್‌ರಲ್ಲಿ ೧೨ ; ಚೌವ್ಹಾಣ್‌ರಲ್ಲಿ ೬ ಮತ್ತು ವಾಡತ್ಯಾರಲ್ಲಿ ೫೨ ಮನೆತನಗಳಿವೆ).

ರಾಠೋಡ್ ಗೋತ್ರವು ಎರಡು ಭಾಗವಾಗಿ ವಿಭಜಿತವಾಗಿದೆ. ಚಿನ್ನಾ ರಾಠೋಡ (ಜಾಟ) ಮತ್ತು ಪೆದ್ದರಾಠೋಡ (ಭುಖ್ಯಾ ಎಂಬ ಹೆಸರೂ ಇದೆ) ಚಿನ್ನಾ, ಪವಾರ್ ಮತ್ತು ಚೌವ್ಹಾಣ್‌ರನ್ನು ಒಟ್ಟಾಗಿ 'ಜಾಟ್ ಭಾಯಿಗಳು' (ಜಾಟ ಸೋದರರು) ಅಥವಾ ಸಂಬಂಧೀ ಗೋತ್ರಗಳು ಎಂದು ಕರೆಯಲಾಗಿದೆ. ಇವು ಪೂರ್ವಿಕ ಗೋತ್ರಗಳಾಗಿವೆ ಎಂದು ಭಾವಿಸಲಾಗಿದೆ. ನಾಲ್ಕನೆಯ ಗೋತ್ರ ಇತ್ತೀಚಿನ ಮೂಲದ್ದಾಗಿದ್ದು ಮೊದಲಿನ ಮೂರು ಗೋತ್ರಗಳಿಗಿಂತ ಅದರ ಸಾಮಾಜಿಕ ಸ್ಥಾನವು ಕೆಳಮಟ್ಟದ್ದಾಗಿದೆ. ಗೋತ್ರಗಳು ಮನೆತನಗಳಾಗಿ ವಿಭಜನೆಗೊಳ್ಳುವ ಪ್ರಕ್ರಿಯೆಗಳು ಹಾಗೂ ಗೋತ್ರಗಳು ಬಂಧುತ್ವದ ಏಕತೆಯನ್ನು ಸಾರಲು 'ಜಾಟಭಾಯಿ' ಎಂಬ ಒಕ್ಕೂಟ ಮಾಡಿಕೊಂಡಿದ್ದಾರೆ. ಗೋತ್ರಗಳನ್ನು ಒಂದೇ ಮನೆತನದವು ಎಂದು ಪರಿಗಣಿಸಬಹುದಾಗಿದ್ದರೂ ಗೋತ್ರಗಳ ವಿಶಿಷ್ಟ ಅಂಶಗಳಾಗಿರುವ "ಸಂಘಟನೆಯ ಲಕ್ಷಣಗಳು, ಸಾಂಸ್ಥಿಕ ಚಟುವಟಿಕೆಗಳು ಅಥವಾ ಗುಂಪು ಕಾರ್ಯಭಾರಗಳ" ಅಭಾವವು ಅವುಗಳಲ್ಲಿದೆ (ಮುರ್ಡಾಕ್, ೧೯೬೫ : ೬೯). ಸರಕು ಸಾಗಣೆಯ ಕೆಲಸ ಹಾಗೂ ಅಲೆಮಾರಿತ್ವದ ಸಂದರ್ಭದಲ್ಲಿ ಸಂಪೂರ್ಣವಾಗಿ ಸಾಂಸ್ಥಿಕ ಸ್ವರೂಪದ ಬಂಧುತ್ವ ಗುಂಪುಗಳಿಗಿಂತ ಭಿನ್ನವಾದ ಬದಲಾವಣೆಯನ್ನು ಅವರ ಇಂದಿನ ಗೋತ್ರ ಸಂಘಟನೆಯಲ್ಲಿ ಕಾಣಬಹುದಾಗಿದೆ (ನೋಡಿ : ಬ್ರಿಗ್ಸ್, ೧೮೮೯ : ೧೭೨). ಒಂದೆಡೆ ನೆಲೆನಿಂತು ವಾಸಿಸತೊಡಗಿದ ನಂತರ ಸಂಪೂರ್ಣವಾಗಿ ಪ್ರತ್ಯೇಕ ಸ್ವರೂಪ ಹೊಂದಿದ್ದ ಗೋತ್ರಗಳು ವಿಭಜನೆಗೊಂಡು ಪ್ರಾದೇಶಿಕ ನೆಲೆಯಲ್ಲಿ ಇತರ ಸ್ಥಳೀಯ ಸಮುದಾಯದೊಡನೆ ಜೀವಿಸತೊಡಗಿದಾಗ ಚೆದುರಿ ಹೋದವು. ಈ ಪ್ರಕ್ರಿಯೆಯಲ್ಲಿ ಅನೇಕ ಗೋತ್ರ ಹಾಗೂ ಅನೇಕ ಮನೆತನದ ನೆಲೆಗಳು ಸ್ಥಾಪನೆಗೊಳ್ಳಲಾರಂಭಿಸಿದವು.

ಮನೆತನ ಹಾಗೂ ಗೋತ್ರಗಳ ಹುಟ್ಟಿಗೆ ಕಾರಣವಾದ ಕೆಲವು ಗುಂಪುಗಳ ಬಡತನ, ಅಲೆಮಾರಿ ಜೀವನ, ಇತರ ಸಮುದಾಯಗಳೊಡನೆಯ ಸಂಪರ್ಕ, ಜಾತಿಸಂಕರ, ವಂಶಾನುಕ್ರಮದ ಬಗೆಗೆ ಹೊಂದಾಣಿಕೆ, ಮೊದಲಾದವುಗಳನ್ನು ಜಾನಪದ ಕತೆಗಳ ರೂಪದಲ್ಲಿ ಉಳಿದುಳಿದ ದಂತಕತೆಗಳು ಸೂಚ್ಯವಾಗಿ ತಿಳಿಸುತ್ತವೆ (ಹೋಲಿಸಿ : ರಾವ್, ೧೯೫೦ : ೧೭ - ೨೨).

ಬಂಧುತ್ವ ಸಂಬಂಧವನ್ನಾಧರಿಸಿದ ಸಾಮಾಜಿಕ ಸಂಘಟನೆಯಲ್ಲಿ ಮನೆತನಗಳು, ಗೋತ್ರಗಳು ಅವಿಭಕ್ತ ಕುಟುಂಬಕ್ಕಿಂತ ದೊಡ್ಡ ಗುಂಪುಗಳಾಗಿವೆ. ಅಧ್ಯಯನ ಕೈಗೊಂಡ ಎರಡು ತಾಂಡಗಳಲ್ಲಿ ಮನೆತನಗಳ ಸಂಖ್ಯೆಯ ರೂಪದಲ್ಲಿ ಗೋತ್ರಗಳ ವ್ಯಾಪ್ತಿಯು ಒಂದು ಮನೆಯಿಂದ ಐವತ್ಮೂರು ಮನೆತನಗಳವರೆಗೂ ಪಸರಿಸಿದ್ದು ಕಂಡುಬಂದಿದೆ (ನೋಡಿ ಕೋಷ್ಟಕ ೩.೨). ಅಧ್ಯಯನ ನಡೆಸಿದ ಎರಡೂ ತಾಂಡಗಳಲ್ಲಿ ನಾಲ್ಕು ಗೋತ್ರಗಳ ಜನರು ಇದ್ದಾರೆ. ಆದರೆ ಎಲ್ಲ ಗೋತ್ರಗಳಲ್ಲಿ ಎಲ್ಲ ಮನೆತನಗಳು ಇಲ್ಲ. ಅಲ್ಲಿರುವ ಎಲ್ಲ ಗೋತ್ರಗಳು ಮತ್ತು ಮನೆತನಗಳು ಸಮಾನ ಸಂಖ್ಯಾಬಲವನ್ನು ಹೊಂದಿರದೇ ಇರುವುದು ಮುಂತಾದ ಅಂಶಗಳನ್ನು ಕೋಷ್ಟಕ-೩.೨ ತೋರಿಸುತ್ತದೆ. ಒಂದು ನಿರ್ದಿಷ್ಟ ಗೋತ್ರಕ್ಕೆ ಸಂಬಂಧಿಸಿದ ಬಂಧುತ್ವ ಬಗೆಗಿನ ಪ್ರಜ್ಞೆಯನ್ನು ಕುರಿತಂತೆ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಹೋಲಿಕೆ ಮಾಡುವುದಾದರೆ, ನಾಗಲಾಪುರ ತಾಂಡದಲ್ಲಿ ಈ ಪ್ರಜ್ಞೆಗೆ ಹೆಚ್ಚು ಮಹತ್ವವನ್ನು (ಅಲ್ಲಿ ಬಹಳಷ್ಟು ಜನರಿಗೆ ತಮ್ಮ ಮನೆತನದ ಮೂಲಪುರುಷನನ್ನು ಜ್ಞಾಪಿಸಿಕೊಳ್ಳಲಾಗದ ಸ್ಥಿತಿ ಇದೆ) ಕಲ್ಪಿಸದಿರುವುದು ಕಂಡುಬರುತ್ತದೆ. ತಮ್ಮ ವಂಶದ ಮೂಲಪುರುಷರ ಹೆಸರುಗಳನ್ನು ಬಲ್ಲ ತಮ್ಮ ಹಿರಿಯರನ್ನು ಬಿಟ್ಟು ಈ ತಾಂಡಗಳಿಗೆ ಇತ್ತೀಚೆಗೆ ವಲಸೆ ಬಂದಿರುವುದು ಇದಕ್ಕೆ ಕಾರಣವಾಗಿರಬಹುದಾಗಿದೆ.

ಹೊರಬಾಂಧವ್ಯ ವಿವಾಹ, ಮನೆತನದ ಮೂಲ ಪುರುಷರ ಪೂಜೆ-ಪುರಸ್ಕಾರ ಮೊದಲಾದವುಗಳ ಮೂಲಕ ಮನೆತನ ಮತ್ತು ಗೋತ್ರದ ಏಕತೆ ಪ್ರಕಟವಾಗುತ್ತದೆ. ಬಂಧುತ್ವ ಸಂಘಟನೆಗಳಿಂದ ಪ್ರತ್ಯೇಕವಾದ ದಿನನಿತ್ಯದ ಚಟುವಟಿಕೆಗಳಲ್ಲಿ ರಕ್ತಸಂಬಂಧಿ ಗುಂಪುಗಳಿಗೆ ಹೆಚ್ಚಿನ ಮಹತ್ವವಿಲ್ಲ. ಆಯಾ ಗುಂಪುಗಳ ಎಲ್ಲ ಸದಸ್ಯರು ತಮ್ಮ ಪೂರ್ವಿಕರ ವೈಯಕ್ತಿಕ ಹೆಸರು ಇಲ್ಲವೆ, ರೂಢಿನಾಮದಿಂದ ಆಯ್ದು ಒಂದು ಸಾಮಾನ್ಯ ಹೆಸರನ್ನು ಇವರು ಹೊಂದಿದ್ದಾರೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ೧೫ ಗೋತ್ರಗಳು ಹಾಗೂ ನಾಗಲಾಪುರ ತಾಂಡದಲ್ಲಿ ೧೩ ಗೋತ್ರಗಳ ಹೆಸರುಗಳು ಇವೆ. ಅತಿ ಹೆಚ್ಚೆಂದರೆ ನಾಲ್ಕು ತಲೆಮಾರುಗಳ ಪೂರ್ವಿಕರನ್ನು ಮಾತ್ರವೇ ಈ ತಾಂಡಗಳ ಲಂಬಾಣಿಗಳು ಜ್ಞಾಪಿಸಿಕೊಳ್ಳುತ್ತಾರೆ. ಅದಕ್ಕಿಂತ ಹಿಂದಿನ ತಮ್ಮ ವಂಶಜರ ಬಗೆಗೆ ಅವರಿಗೇನೂ ತಿಳಿಯದು. ಮನೆತನದ ಸಂಸ್ಥಾಪಕರ ತಲೆಮಾರುಗಳನ್ನೂ ಕರಾರುವಕ್ಕಾಗಿ ಗುರುತಿಸುವ ಪ್ರಶ್ನೆ ಮುಖ್ಯವಾಗಿಲ್ಲ. ಹಾಡುಗಳ ರೂಪದಲ್ಲಿ ಮೌಖಿಕ ಪರಂಪರೆಯ ಮೂಲಕ ಆ ಹೆಸರುಗಳನ್ನು ಜ್ಞಾಪಿಸಿಕೊಳ್ಳಲಾಗುತ್ತದೆ. ಹಿಂದೆ ಅಲೆಮಾರಿ ಜೀವನ ವ್ಯವಸ್ಥೆಯಲ್ಲಿ ಪ್ರಾದೇಶಿಕ ಸ್ಥಳೀಯ ನಂಟಿಗಿಂತ ಬಂಧುತ್ವದ ಸಂಬಂಧವೇ ಅವರ ಸಾಮಾಜಿಕ ಜೀವನದ ಅಡಿಪಾಯವಾಗಿತ್ತು. ಲಂಬಾಣಿಗಳು ಆರೋಹಣ ಕ್ರಮದಲ್ಲಿ ನಾಲ್ಕು ತಲೆಮಾರುಗಳವರೆಗಿನ ತಮ್ಮ ಪೂರ್ವಿಕರನ್ನು ನೆನಪಿಸಿಕೊಳ್ಳುತ್ತಿದ್ದರು. ಆದರೆ ಇಂದು ಒಂದೆಡೆ ನೆಲೆನಿಂತಿರುವುದರಿಂದ ಬಹುತೇಕವಾಗಿ ಹೆಚ್ಚಿನ ಲಂಬಾಣಿಗಳು ಎರಡು ತಲೆಮಾರುಗಳವರೆಗಿನ ಪೂರ್ವಿಕರನ್ನು ನೆನಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ತಿಳಿಸುತ್ತಾರೆ. ಪೂರ್ವಿಕರ ತಿಥಿ ಕರ್ಮಗಳನ್ನು ಮಾಡಿಸುವವರು, ವಿವಾಹ ಸಂಬಂಧಗಳನ್ನು ಕುದುರಿಸುವವರು, ಮೊದಲಾದ ಕೆಲವು ಹಿರಿಯರು ನಾಲ್ಕು ತಲೆಮಾರುಗಳ ತಮ್ಮ ಪೂರ್ವಿಕರ ಹೆಸರುಗಳನ್ನು ಬಲ್ಲವರಾಗಿದ್ದಾರೆ. ಬಹುತೇಕ ಲಂಬಾಣಿ ಯುವಜನರಿಗೆ ತಮ್ಮ ಮುತ್ತಜ್ಜರ ಹೆಸರುಗಳು ಗೊತ್ತಿಲ್ಲ. ಗತಿಸಿ ಹೋದ ಹಿರಿಯರನ್ನು ಸ್ಮರಿಸಿಕೊಳ್ಳುವ ಸನ್ನಿವೇಶಗಳು ಕೂಡ ಈ ದಿನಗಳಲ್ಲಿ ಅಪರೂಪವಾಗಿವೆ ಎಂಬುದನ್ನು ಈ ಪರಿಸ್ಥಿತಿ ಸೂಚ್ಯವಾಗಿ ತಿಳಿಸುತ್ತದೆ. ಪೂರ್ವಿಕರ ವಾರ್ಷಿಕ ಪೂಜೆಯು ದಿನ ತಂದೆ-ತಾಯಿ ಹಾಗೂ ಅಜ್ಜ-ಅಜ್ಜಿಯರನ್ನು ಮಾತ್ರವೇ ಸ್ಮರಿಸಿಕೊಳ್ಳಲಾಗುತ್ತದೆಯಾದರೂ, ಅಂದು ಎಲ್ಲರೂ ತಮ್ಮ ಅನಾಮಧೇಯ ಪೂರ್ವಿಕರನ್ನು ಸ್ಮರಿಸಿಕೊಳ್ಳುತ್ತಾರೆ. ಒಂದು ನಿರ್ದಿಷ್ಟ ಗೋತ್ರದೊಡನೆಯ ವಂಶಪಾರಂಪರ್ಯ ಕೊಂಡಿಯೇ ವಿಭಿನ್ನ ಗೋತ್ರಗಳಿಗೆ ಸಂಬಂಧಿಸಿದ ಮನೆತನಗಳಲ್ಲಿ ನಿಕಟ ಬಾಂಧವ್ಯಕ್ಕೆ ಆಧಾರವಾಗಿದೆ. ಹೀಗಾಗಿ, ರಾಠೋಡ್, ಪವಾರ್ ಮೊದಲಾದ ಹೆಸರುಗಳನ್ನು ಸಾಕ್ಷರರಾಗಿರುವವರು ಹಾಗೂ ಸ್ವಲ್ಪ ಮುಂದುವರಿದ ಲಂಬಾಣಿಗಳು, ಕುಟುಂಬದ ಅಡ್ಡ ಹೆಸರುಗಳನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಇದರ ಉದ್ದೇಶವು ತಮ್ಮ ಪೂರ್ವಿಕರ ಬಗೆಗಿನ ತಿಳಿವಳಿಕೆಯನ್ನು ರಚಿಸಿಕೊಳ್ಳುವುದಾಗಿದೆ. ಅಲ್ಲದೇ ಗೌಣ ಸಾಮಾಜಿಕ ಅಂತಸ್ತಿನಲ್ಲಿ ತಮ್ಮ ಲಂಬಾಣಿ ಗುರುತನ್ನು ಹಿಡಿದಿಟ್ಟುಕೊಳ್ಳುವ ಪ್ರಯತ್ನವೂ ಆಗಿದೆ. ಸಾಮಾನ್ಯವಾಗಿ ಲಂಬಾಣಿಗಳು ತಮ್ಮ ಸಮುದಾಯದ ಸಾರ್ವತ್ರಿಕ ಹಣೆಪಟ್ಟಿಯಾದ 'ಲಂಬಾಣಿ' ಎಂಬುದರಲ್ಲಿಯೇ ತೃಪ್ತಿ ಪಡುತ್ತಾರೆ.

## ಕೋಷ್ಟಕ ೩.೨

**ಗೋತ್ರಗಳಿಗೆ ಅನುಗುಣವಾದಂತೆ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡದಲ್ಲಿಯ ಮನೆತನಗಳು**

| ರಾಠೋಡ್ | | | ಪವಾರ್ | | | ಚೌವ್ಹಾಣ್ | | | ವಾಡಾತ್ಯ | | | ಒಟ್ಟು | |
|---|---|---|---|---|---|---|---|---|---|---|---|---|---|
| ಮನೆತನ ಗಳು | ಮ.ಮ. ಹಳ್ಳಿ | ನಾಗಲಾ ಪುರ | ಮನೆತನ ಗಳು | ಮ.ಮ. ಹಳ್ಳಿ | ನಾಗಲಾ ಪುರ | ಮನೆತನ ಗಳು | ಮ.ಮ. ಹಳ್ಳಿ | ನಾಗಲಾ ಪುರ | ಮನೆತನ ಗಳು | ಮ.ಮ. ಹಳ್ಳಿ | ನಾಗಲಾ ಪುರ | ಮ | ನಾ |
| ರಮಾವತ್ | ೫೩ | ೧೨ | ಅಮಾಗೊತ್ | ೧೫ | - | ಮೋಧ್ | ೩ | - | ಮಾಲೋತ್ | ೫ | - | | |
| ಮೇಘಾವತ್ | ೧ | - | ಜರ್ಬಿಯಾ | ೬ | ೧೦ | ಸಭಾವತ್ | ೩ | ೨ | ಚೌಗಲೋತ್ | ೨ | - | | |
| ಬಾಣಸೊತ್ | ೪ | ೩ | ವಿಶಾಲವತ್ | ೨ | ೯ | ಪಾಲತ್ಯಾ | ೨ | - | ಧಾರಾವತ್ | ೧ | - | | |
| ಬೇತಾವತ್ | ೧ | - | ವಾಖದೊತ್ | - | ೧ | ಲಾವದ್ಯಾ | ೨ | ೨ | ಮಾಲಾವತ್ | ೧ | - | | |
| ಸುಧಾವತ್ | - | ೧೪ | ಏನೂ ತಿಳಿಯದವು | - | ೧ | ಖೋರಾ | - | ೧ | ಮಾಲಾವತ್ | ೧ | - | | |
| ದಲವಾನ್ | - | ೧೧ | | | | ಏನೂ ತಿಳಿಯದವು | - | ೬ | ಏನೂ ತಿಳಿದವುಗಳು | ೧ | ೧೦ | | |
| ರಮಣ್ಯಾ | - | ೪ | | | | | | | | | | | |
| ಖತ್ರೊಟ್ | - | ೧ | | | | | | | | | | | |
| ಉದಾವತ್ | - | ೫ | | | | | | | | | | | |
| ಏನೂ ತಿಳಿಯದವು ಗಳು | - | ೭ | | | | | | | | | | | |
| ಒಟ್ಟು | ೫೯ | ೫೭ | | ೨೩ | ೨೧ | | ೧೦ | ೧೧ | | ೧೦ | ೧೦ | ೧೦೨ | ೯೯ |

ಮರಿಯಮ್ಮನಹಳ್ಳಿ = ಮರಿಯಮ್ಮನಹಳ್ಳಿ ತಾಂಡದಲ್ಲಿ ತಿಳಿದು ಬಂದ ಮನೆತನಗಳು ೧೫ ಇಲ್ಲಿವೆ.

ನಾಗಲಾಪುರ = ನಾಗಲಾಪುರ ತಾಂಡದಲ್ಲಿ ತಿಳಿದು ಬಂದ ಮನೆತನಗಳು ೧೩ ಇವೆ.

ವ್ಯಕ್ತಿಗಳ ಗೋತ್ರ ಮತ್ತು ಮನೆತನಗಳನ್ನು ಗುರುತಿಸಿ ನಿರ್ಧರಿಸುವ ಸನ್ನಿವೇಶವು ವಿಶೇಷವಾಗಿ ವಿವಾಹ ನಿಶ್ಚಯದ ಸಂದರ್ಭದಲ್ಲಿ ಮಾತ್ರ ಬರುತ್ತದೆ. ಮನೆತನಗಳು ಹಾಗೂ ಅವುಗಳ ಸಂಬಂಧೀ ಗೋತ್ರಗಳು ಒಳಬಾಂಧವ್ಯ ವಿವಾಹ ಪದ್ಧತಿಯನ್ನು ಅನುಸರಿಸುತ್ತವೆ. ಗೋತ್ರದ ಬಗೆಗಿನ ವಿವರಗಳು ತಿಳಿಯದಿದ್ದರೂ ತನ್ನ ಗೋತ್ರದ ಬೃಹತ್ ವರ್ಗದ ಹೆಸರನ್ನಾದರೂ ಸೂಚಿಸಬೇಕಾಗುತ್ತದೆ. ಬಂಧುತ್ವ ಸಂಬಂಧಗಳು ನಿಕಟವಾದಷ್ಟೂ ಸಹಕಾರ ಮತ್ತು ಭಾವನಾತ್ಮಕ ಸಂಬಂಧಗಳ ಋಣಭಾರ ಅಧಿಕವಾಗುತ್ತವೆ. ನಿಕಟ ಭಾವನಾತ್ಮಕ ಸಂಬಂಧಗಳಿಂದ ಇಂದಿನ ದಿನಗಳಲ್ಲಿ ಒಟ್ಟಾಗಿ ಕೃಷಿ ಭೂಮಿಯ ಒಡೆತನ ಹೊಂದುವ ಅವಕಾಶಗಳು ಲಭಿಸುತ್ತವೆ. ಹಿಂದಿನ ಕಾಲದಲ್ಲಿ ಇದೇ ತೆರನಾದ ಬಾಂಧವ್ಯವು ದನಕರುಗಳ ಹಿಂಡಿನ ಒಡೆತನ ಹೊಂದಲು ಅವಕಾಶ ಕಲ್ಪಿಸಿಕೊಡುತ್ತಿದ್ದವು. ಬಂಧುತ್ವ ಸಂಬಂಧದ ನಿಕಟತೆಯು ಅಂತಹ ಜನರನ್ನು ನೆರೆಹೊರೆಯವರನ್ನಾಗಿಸುತ್ತದೆಯಷ್ಟೇ. ಅಲ್ಲದೆ ದೂರಸಂಬಂಧೀ ಕುಟುಂಬಗಳಿಗಿಂತ ಹೆಚ್ಚು ನಿಕಟ ಸಂಪರ್ಕಗಳನ್ನು ಹೊಂದಲು ಅವಕಾಶ ಮಾಡಿಕೊಡುತ್ತದೆ. ದೂರದ ಸಂಬಂಧಿಕರು ಹಾಗೂ ದೂರ ವಾಸಿಸುವ ಸಂಬಂಧಿಕರಿಗಿಂತ ನೆರೆಹೊರೆಯತ್ವಕ್ಕೆ ಲಂಬಾಣಿಗಳು ಹೆಚ್ಚು ಮಹತ್ವ ನೀಡುತ್ತಾರೆ. ಏಕೆಂದರೆ ನೆರೆಹೊರೆಯವರು ದಿನನಿತ್ಯದ ಜೀವನದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನೆರವಾಗುತ್ತಾರೆ. ಇದ್ದಲ್ಲದೆ ನೆರೆಹೊರೆಯವರು ಸಮೀಪದ ಸಂಬಂಧಿಗಳಾಗಿರಲೇಬೇಕೆಂದಿಲ್ಲ.

**ಪಿತ್ರಾರ್ಜಿತ ಹಕ್ಕುದಾರಿಕೆ**

ಲಂಬಾಣಿಗಳು ಪಿತೃವಂಶೀಯ ಪೂರ್ವಾಪರತೆಯನ್ನು ಪಿತ್ರಾರ್ಜಿತ ಉತ್ತರಾಧಿಕಾರಗಳು ಎಲ್ಲ ಗಂಡುಮಕ್ಕಳಿಗೆ ಸಮಾನ ಮಹತ್ವ ನೀಡುವ ರೀತಿಯಲ್ಲಿ ಗಂಡು ಸಂತತಿಯ ಮೂಲಕವೇ ನಡೆಸುತ್ತಾರೆ. ಪಿತ್ರಾರ್ಜಿತ ಆಸ್ತಿಯು ಸ್ತ್ರೀ ಸಂತತಿಗೆ ಹೋಗುವುದಕ್ಕೆ ಅವಕಾಶ ವಿರಲಿಲ್ಲ.[೫] ಆದರೆ ಸ್ತ್ರೀಯರಿಗೆ ಆಸ್ತಿಯಲ್ಲಿ ಪಾಲನ್ನು ನೀಡುವುದು ಸಾರ್ವತ್ರಿಕವಾಗಿ ರೂಢಿಯಲ್ಲಿಲ್ಲದಿದ್ದರೂ ವಿವಾಹ ಕಾಲಕ್ಕೆ ಕಾಣಿಕೆಗಳ (ಉಡುಗೊರೆ) ರೂಪದಲ್ಲಿ ಕೊಡುವ ಪದ್ಧತಿಯಿದೆ.

ಗಂಡು ಸಂತಾನವಾಗದಿದ್ದ ದಂಪತಿಗಳು ಒಂದು ಗಂಡು ಮಗುವನ್ನು, ಸಾಮಾನ್ಯವಾಗಿ ಸೋದರನ ಮಗ ಅಥವಾ ಚಿಕ್ಕಪ್ಪನ ಮಗ ಅಥವಾ ತಮ್ಮ ಗೋತ್ರದ ಓರ್ವ ಬಾಲಕ, ಇಲ್ಲವೆ ತಮ್ಮ ಮನೆತನದ ಇತರ ಗೋತ್ರದ ಬಾಲಕ - ಹೀಗೆ ಇದೇ ಆಯ್ಕೆಯ ಕ್ರಮದಲ್ಲಿ ಆರಿಸಿಕೊಳ್ಳಬಹುದು. ಇದೇ ರೀತಿಯಾಗಿ, ಒಬ್ಬ ವಿಧವೆ ಅಥವಾ ವಿಧುರ ಕೂಡ ದತ್ತುಪುತ್ರನನ್ನು ಪಡೆಯಲು ಅವಕಾಶ ವಿದೆ. ಕೆಲವು ಅಪರೂಪದ ಸನ್ನಿವೇಶಗಳಲ್ಲಿ ಗಂಡುಸಂತಾನವಿಲ್ಲದವರು, ತಾವೇ ಪೋಷಿಸಿದ ಯಾವುದೇ ಲಂಬಾಣಿ ಹುಡುಗನನ್ನು ಆತನು ಪ್ರೌಢವಯಸ್ಕನಾದಾಗ ದತ್ತು ತೆಗೆದುಕೊಳ್ಳಬಹುದಾಗಿದೆ. ದತ್ತು ತೆಗೆದುಕೊಳ್ಳುವ ವಿಧಿವಿಧಾನಗಳು ಸರಳವಾಗಿವೆ. ನೆರೆಹೊರೆಯ ತಾಂಡದ ಲಂಬಾಣಿ ನಾಯಕರುಗಳನ್ನು ಹಿರಿಯರನ್ನು (ವಿಶೇಷವಾಗಿ ತಾಂಡದ ಮುಖ್ಯಸ್ಥರು) ಔತಣಕ್ಕೆ ಆಮಂತ್ರಿಸಿ ದತ್ತು ತೆಗೆದುಕೊಳ್ಳಲಿರುವ ಬಾಲಕನ ಪೂರ್ವಾಪರಗಳನ್ನು ಹಾಗೂ ದತ್ತು ತೆಗೆದುಕೊಳ್ಳುವವರ ಹೆಸರುಗಳನ್ನು ಘೋಷಿಸಲಾಗುತ್ತದೆ. ಬಂಧುತ್ವಸಂಬಂಧೀ ನಿಯಮಗಳ ಉಲ್ಲಂಘನೆಯಾಗಿಲ್ಲವೆಂಬುದನ್ನು ಸಭೆಯ ಗಮನಕ್ಕೆ ತರುವುದು ಈ ಘೋಷಣೆಯ ಉದ್ದೇಶವಾಗಿದೆ. ಯಾರ ಆಕ್ಷೇಪಣೆ ಇಲ್ಲದಿದ್ದರೆ ಸಭೆಯು ಮನ್ನಣೆ ನೀಡುತ್ತದೆ. ಸಾಮಾಜಿಕ ಪಿತೃವಂಶದ ಬದಲಾವಣೆಯನ್ನು ಸಂಕೇತಿಸಲು ಬಾಲಕನ ನಡುಪಟ್ಟಿಯನ್ನು (ಉಡುದಾರ) ತೆಗೆದುಹಾಕಿ ಹೊಸ ನಡುಪಟ್ಟಿಯನ್ನು ತೊಡಿಸಲಾಗುತ್ತದೆ. ಪುತ್ರನನ್ನು ದತ್ತು ತೆಗೆದುಕೊಳ್ಳುವಲ್ಲಿ ಅಡಕವಾಗಿರುವ ಪ್ರಧಾನ ಸಾಂಪ್ರದಾಯಿಕ  ಮೌಲ್ಯಗಳು, ಸಮಸ್ಯೆಗಳು ಹಾಗೂ ಪ್ರಕ್ರಿಯೆಗಳನ್ನು ತಿಳಿಸುವ, ದತ್ತು ತೆಗೆದುಕೊಂಡ ಎರಡು ಪ್ರಕರಣ ಅಧ್ಯಯನಗಳು ಈ ಕೆಳಗಿನಂತಿವೆ:

**ಅಧ್ಯಯನ ೧.** 'ಎಮ್' ಎಂಬವರು ೧೯೯೮ರಲ್ಲಿ ೬೫ ವರ್ಷ ಪ್ರಾಯದವರಾಗಿದ್ದು ೧೫ ವರ್ಷಗಳ ಹಿಂದೆ ಸಾಂಪ್ರದಾಯಿಕ ವಿಧಿವಿಧಾನಗಳನ್ವಯ ತಮ್ಮ ಚಿಕ್ಕಪ್ಪನ ಮಗ 'ಕೆ'  ಎಂಬಾತನ ಮಗನನ್ನು ದತ್ತು ತೆಗೆದುಕೊಂಡಿದ್ದರು. ಈ ಘಟನೆಗೆ ಸಾಕ್ಷಿಯಾಗಿ ಯಾವುದೇ ಲಿಖಿತ ಒಕ್ಕಣೆಯಿರಲಿಲ್ಲ. ಆ ಬಾಲಕನು 'ಎಮ್'ನ ಮನೆಯಲ್ಲಿದ್ದುಕೊಂಡು ಕೃಷಿ ಸಾಗುವಳಿಯಲ್ಲಿ ನೆರವಾಗುತ್ತ ಹೊಸ ಕುಟುಂಬಕ್ಕೆ ಹೊಂದಿಕೊಂಡಿದ್ದನು. ಯಾವುದೋ ಕಾರಣಕ್ಕಾಗಿ 'ಕೆ' 'ಎಮ್'ನ ಮೇಲೆ ಸಂದೇಹಪಟ್ಟುಕೊಂಡನು. 'ಎಮ್' ತನ್ನ ಆಸ್ತಿಯನ್ನು ತನ್ನ ಮಗಳ ಅಥವಾ ಆಕೆಯ ಪುತ್ರನ ಹೆಸರಿಗೆ ಮಾಡಬಹುದೆಂದು ಶಂಕಿಸಿದನು. ದತ್ತು ಕಾನೂನುಬದ್ಧ ವಿಧಿಗಳನ್ನು ಬಲ್ಲ ನಾಗಲಾಪುರದ ತಾಂಡದಲ್ಲಿಯ 'ಕೆ'ನ ಸಂಬಂಧಿಯೊಬ್ಬನ್ನು ಇಂತಹ ಸಂಭವ ಸಾಧ್ಯತೆಯ ಬಗೆಗೆ 'ಕೆ'ನ ಮನಸ್ಸಿನಲ್ಲಿ ಸಂದೇಹವನ್ನು ಹುಟ್ಟಿಸಿದ್ದನು. 'ಎಮ್'  ತನ್ನ ಆಸ್ತಿಯ ಹಕ್ಕುಗಳನ್ನು ಸರಕಾರಿ ಭೂದಾಖಲೆಗಳಲ್ಲಿ ದತ್ತುಪುತ್ರನ ಹೆಸರಿಗೆ ವರ್ಗಾಯಿಸದೇ ಇದ್ದದ್ದು

೫ *೧೯೫೬ರ ಉತ್ತರಾಧಿಕಾರತ್ವ ಶಾಸನವನ್ನು ಕಾನೂನುಬದ್ಧವಾಗಿ ಮಾರ್ಪಡಿಸಲಾಗಿದ್ದು, ಸ್ತ್ರೀಯರಿಗೂ ಪುರುಷರಷ್ಟೇ ಸಮಾನಹಕ್ಕುಗಳನ್ನು ನೀಡಲಾಗಿದೆ ಎಂಬುದನ್ನು ಗಮನಿಸಬೇಕು.*

ಈ ತೆರನಾದ ಸಂದೇಹಕ್ಕೆ ಭಾಗಶಃ ಕಾರಣವಾಗಿತ್ತು. ತಾನು ದತ್ತು ತೆಗೆದುಕೊಂಡಿರುವುದರಿಂದ ತನ್ನ ಸಾವಿನನಂತರ ಹೇಗೂ ತನ್ನ ಆಸ್ತಿಯು ದತ್ತುಪುತ್ರನ ಹೆಸರಿಗೆ ವರ್ಗಾವಣೆಯಾಗುತ್ತದೆಯೆಂದು ಹಾಗೊಂದು ವೇಳೆ ತೊಂದರೆಗಳು ಉದ್ಭವಿಸುವುದಾದರೆ ದತ್ತು ತೆಗೆದುಕೊಂಡ ಬಗೆಗೆ ಪಂಚಾಯಿತಿಯು ಪ್ರಮಾಣೀಕರಿಸುತ್ತದೆ ಎಂಬುದಾಗಿ 'ಎಮ್' ವಾದ ಮಾಡಿದ್ದನು. ಒಂದುವೇಳೆ ದತ್ತುಪುತ್ರನ ಹೆಸರಿಗೆ ಆಸ್ತಿಯನ್ನು ವರ್ಗಾಯಿಸುವುದಾದರೆ ವೃದ್ಧಾಪ್ಯದಲ್ಲಿ ದತ್ತುಪುತ್ರನಿಂದ ತನ್ನ ಉಪಜೀವನದ ಬಗೆಗೆ ಖಚಿತ ಆಶ್ವಾಸನೆಯನ್ನು ಪಂಚಾಯಿತಿಯು ನೀಡಬೇಕೆಂದು ಆತನು ಕೇಳಿಕೊಂಡನು. 'ಎಮ್'ನ ಪ್ರಸ್ತಾಪವನ್ನು ಪಂಚಾಯಿತಿಯು ಬೆಂಬಲಿಸಿತು. ಪಂಚಾಯಿತಿಯ ತೀರ್ಮಾನದಲ್ಲಿ ಅವಿಶ್ವಾಸವನ್ನು ತಳೆದ 'ಕೆ'ನನ್ನು ಬಹಿಷ್ಕರಿಸಿತು. ಕೆಲವು ಸಮಯದ ನಂತರ ಸಮಸ್ಯೆಯನ್ನು ಇತ್ಯರ್ಥಗೊಳಿಸುವಂತೆ 'ಕೆ' ಪುನಃ ಪಂಚಾಯಿತಿಗೆ ಮನವಿ ಮಾಡಿಕೊಂಡನು. ಆಗ ಪಂಚಾಯಿತಿಯು ಎರಡು ತೀರ್ಮಾನಗಳನ್ನು ಸೂಚಿಸಿತು : (೧) ಯಥಾವತ್ತಾಗಿ ದತ್ತು ಸಂಬಂಧವನ್ನು ಮುಂದುವರಿಸುವುದು ಅಥವಾ (೨) ದತ್ತು ತೆಗೆದುಕೊಂಡವರನ್ನು ವಿಸರ್ಜಿಸಿ 'ಕೆ' ತನ್ನ ಮಗನನ್ನು ವಾಪಸ್ಸು-ಪಡೆಯುವುದು. 'ಕೆ' ಎರಡನೆಯ ತೀರ್ಮಾನವನ್ನು ಆಯ್ಕೆಮಾಡಿಕೊಂಡನು. ೧೯೫೮ ರಲ್ಲಿ 'ಎಮ್' ತೊಡಿಸಿದ್ದ ನಡುಪಟ್ಟಿಯನ್ನು ಮಗನ ಸೊಂಟದಿಂದ ಕಿತ್ತುಹಾಕಿದನು. 'ಕೆ'ನ ಪುತ್ರ ಹಾಗೂ ತನ್ನ ಮಗಳ ಮಗ - ಈತನನ್ನು 'ಎಮ್' ಪೋಷಿಸುತ್ತಿದ್ದನು. ಆದರೆ ತಾನು 'ಕೆ'ನ ಮೊಮ್ಮಗನನ್ನೆ ದತ್ತು ತೆಗೆದುಕೊಳ್ಳುವ ತೀರ್ಮಾನ ಮಾಡಿರುವುದಾಗಿ 'ಎಮ್' ಸಂಶೋಧಕನಿಗೆ ವಿವರಿಸಿದ್ದನು.

ಅಧ್ಯಯನ ೨. ೫೨ ವರ್ಷ ಪ್ರಾಯದ ಕಾಲೋಲಿಗೆ ಸಂತಾನವಿರಲಿಲ್ಲ. ಗಂಡುಸಂತಾನಕ್ಕೊಸ್ಕರ ಆತನು ೧೯೫೬ರಲ್ಲಿ ೪೦ ವರ್ಷ ಪ್ರಾಯದ ವಿಧವೆಯನ್ನು ವಿವಾಹವಾದನು. ಆಕೆಗೆ ಮೊದಲ ಪತಿಯಿಂದ ಇಬ್ಬರು ಪ್ರೌಢ ಮಕ್ಕಳಿದ್ದರು. ಎರಡನೆಯ ವಿವಾಹದಿಂದ ಕಾಲೋಲಿಗೆ ಮಕ್ಕಳಾಗಲಿಲ್ಲ. ಆದರೆ ಆತನ ಮಲಮಕ್ಕಳು ಆತನನ್ನು ಪೋಷಿಸಿದರು. ತನ್ನ ಆಸ್ತಿಯನ್ನು ಔಪಚಾರಿಕವಾಗಿ ಯಾರಿಗೂ ವರ್ಗಾಯಿಸದೇ ಆತನು ೧೯೫೮ರಲ್ಲಿ ಆರೋಗ್ಯದ ಸಮಸ್ಯೆಯಿಂದ ತೀರಿಹೋದನು. ಆತನ ಎರಡನೆಯ ಹೆಂಡತಿ ಹಾಗೂ ಆಕೆಯ ಮಕ್ಕಳು ಆತನಿಗೆ ಮಾಡಿದ ಸೇವೆಯನ್ನು ಗಮನಿಸಿ ಓರ್ವ ಮಲಮಗ 'ಎಲ್' ಎಂಬಾತನನ್ನು ಆತನ ಆಸ್ತಿಗೆ ಉತ್ತರಾಧಿಕಾರಿಯನ್ನಾಗಿ ಮಾಡಲು ಪಂಚಾಯಿತಿಯು ಮನ್ನಣೆ ನೀಡಿತು. ಕಾಲೋಲಿಯ ಆಸ್ತಿಯ ಹಕ್ಕುಗಳನ್ನು 'ಎಲ್'ನಿಗೆ ವರ್ಗಾಯಿಸಲಾಯಿತು. ಕಾಲೋಲಿಯ ಸ್ವಜಾತಿ ಸಂಬಂಧಿಕರು ಈ ಸಂದರ್ಭದಲ್ಲಿ ಹಾಜರಿದ್ದು, ಆ ನಿಮಿತ್ಯ ಏರ್ಪಡಿಸಲಾಗಿದ್ದ ಭೋಜನಕೂಟದಲ್ಲಿ ಪಾಲುಗೊಂಡಿದ್ದರು.

ಆದರೆ ಆ ನಂತರದಲ್ಲಿ ಕಾಲೋಲಿ ಸ್ವಜಾತಿ ಸಂಬಂಧಿಕರು 'ಎಲ್' ಕೃಷಿ ಭೂಮಿಯನ್ನು ಉಪಯೋಗಿಸುವುದನ್ನು ಆಕ್ಷೇಪಿಸಿದರು. ಆತನು ತಮ್ಮ ವಂಶಜನಲ್ಲವಾದ್ದರಿಂದ ತಾವು ಆತನ ಉತ್ತರಾಧಿಕಾರತ್ವವನ್ನು ಮನ್ನಿಸುವುದಿಲ್ಲವೆಂದು ಹೇಳಿದರು. ಪಂಚಾಯಿತಿಯು ತನ್ನ ತೀರ್ಮಾನಕ್ಕೆ ಬದ್ಧವಾಗಿ 'ಎಲ್'ನನ್ನು ಬೆಂಬಲಿಸಿತು. ದತ್ತು ಮನ್ನಿಸುವಾಗ ಪಂಚಾಯಿತಿಯು ವಂಶಪರಂಪರೆಯನ್ನು ಅಲಕ್ಷಿಸಿದೆ ಎಂದು ಅವರು ತಕರಾರು ಮಾಡಿದರು. ಮಾನವೀಯ ಪರಿಗಣನೆಯಿಂದ ಅದನ್ನು ಒಂದು ಅಪವಾದ ಎಂದು ಮನ್ನಿಸಬಾರದು ಎಂದು ಪಂಚಾಯಿತಿ ಹೇಳಿತು. 'ಎಲ್' ಬೇರೆ ಗೋತ್ರಕ್ಕೆ ಸಂಬಂಧಿಸಿದ್ದರೂ ಕಾಲೋಲಿಯ ಎರಡನೆಯ ಹೆಂಡತಿ ಹಾಗೂ ಆಕೆಯ ಮಕ್ಕಳು ಕಾಲೋಲಿಗೆ ಸಲ್ಲಿಸಿದ ಸೇವೆಯನ್ನು ಗಮನಿಸಿ ಪಂಚಾಯಿತಿ ಆ ತೀರ್ಮಾನವನ್ನು ನೀಡಿತ್ತು.

ಕಾಲೋಲಿಯ ಸ್ವಜಾತಿ ಸಂಬಂಧಿಕರು ಕಾಲೋಲಿ ಆಸ್ತಿಯಲ್ಲಿ ಆಸಕ್ತರಾಗಿದ್ದ ಪಕ್ಷದಲ್ಲಿ ಕಾಲೋಲಿ ಮಲಮಕ್ಕಳಿಗೆ ಪರಿಹಾರ ಧನ ನೀಡುವುದಾದರೆ ಮಾತ್ರ ಆ ದತ್ತು ಹಕ್ಕನ್ನು ವಿಸರ್ಜಿಸಲಾಗುತ್ತದೆ ಎಂದು ಪಂಚಾಯಿತಿ ಸೂಚಿಸಿತ್ತು. ಇಂತಹ ಒಂದು ಸಭೆಯ ನಂತರ ಪಂಚಾಯಿತಿಯ ಓರ್ವ ಪ್ರಮುಖ ಸದಸ್ಯರು ನನಗೆ ವಿವರಿಸಿದ್ದೇನೆಂದರೆ, ಆಕ್ಷೇಪಣೆ ಮಾಡಿದ ಕುಟುಂಬವು ನ್ಯಾಯಾಲಯಕ್ಕೆ ಹೋಗುವುದಾದರೆ ಆ ಕುಟುಂಬವನ್ನು ಪಂಚಾಯಿತಿ ಬಹಿಷ್ಕರಿಸುತ್ತದೆ. ಆ ಕುಟುಂಬವು ಕೂಡ ದತ್ತು ವಿಧಿಯಲ್ಲಿ ಪಾಲುಗೊಂಡಿದ್ದರಿಂದ ಪಂಚಾಯಿತಿಯ ತೀರ್ಮಾನವನ್ನು ಆಹ್ವಾನಿಸಲು ಇಷ್ಟಪಟ್ಟಿರಲಿಲ್ಲ. ಆದರೆ ದತ್ತು ತೆಗೆದುಕೊಳ್ಳುವ ಬಗೆಗಿನ ನಿಯಮಗಳನ್ನು ಅರಿತಿದ್ದ ಹಾಗೂ ನ್ಯಾಯಾಲಯಗಳ ಬಗೆಗೆ ತಿಳುವಳಿಕೆಯಿದ್ದ ನಾಗಲಾಪುರ ತಾಂಡದಲ್ಲಿಯ ಆತನ ಸಂಬಂಧಿಕನೋರ್ವನು ಹಾಗೆ ಮಾಡಲು ಆತನನ್ನು ಪುಸಲಾಯಿಸಿದ್ದನು.

ಆಧುನಿಕ ನ್ಯಾಯ ವ್ಯವಸ್ಥೆ ಮತ್ತು ನ್ಯಾಯಾಲಯಗಳು ಇದ್ದರೂ ಪಿತ್ರಾರ್ಜಿತ ಉತ್ತರಾಧಿಕಾರದ ಬಗೆಗಿನ ಸಮುದಾಯದ ಸಾಂಪ್ರದಾಯಿಕ ರೀತಿ ನೀತಿಗಳನ್ನು ಆಹ್ವಾನಿಸುತ್ತಿರುವುದನ್ನು ಈ ಎರಡೂ ಘಟನೆಗಳು ನಿದರ್ಶಿಸುತ್ತವೆ. ಆಧುನಿಕತೆಯಿಂದ ಇನ್ನೂ ದೂರವಾಗಿಯೇ ಉಳಿದುಕೊಂಡಿರುವ ನಾಗಲಾಪುರ ತಾಂಡವು ಸಾಂಪ್ರದಾಯಿಕ ರೀತಿ ನೀತಿಗಳನ್ನು ಮನ್ನಿಸುತ್ತಿದ್ದರೆ, ಮರಿಯಮ್ಮನಹಳ್ಳಿ ತಾಂಡದ ಅನೇಕ ಲಂಬಾಣಿಗಳು ಆಧುನಿಕ ಕಾನೂನುಗಳನ್ನು ಹಾಗೂ ನ್ಯಾಯವ್ಯವಸ್ಥೆಯನ್ನು ಬಲ್ಲವರಾಗಿದ್ದಾರೆ.

## ಒಳಬಾಂಧವ್ಯ ಬಂಧುತ್ವ ಪ್ರವೃತ್ತಿಗಳು

ಒಂದು ನಿರ್ದಿಷ್ಟ ತಾಂಡದಲ್ಲಿ ಮನೆತನಗಳು ಮತ್ತು ಗೋತ್ರಗಳ ಸಂಖ್ಯೆ ಅಲೆಮಾರಿ ಸಂದರ್ಭಕ್ಕಿಂತ ಇಂದು ಗಣನೀಯವಾಗಿ ಹೆಚ್ಚಾಗಿವೆ. ಒಂದು ಗೋತ್ರಕ್ಕೆ ಸಂಬಂಧಿಸಿದ ಮನೆತನಗಳ ಸಂಖ್ಯೆ ಅಂದು ಕಡಿಮೆಯಿದ್ದಿತು. ವಿಭಿನ್ನ ಗೋತ್ರಗಳಿಗೆ ಹಾಗೂ ಮನೆತನಗಳಿಗೆ ಸಂಬಂಧಿಸಿದ ಅಲೆಮಾರಿ ತಂಡಗಳು ಒಂದೆಡೆ ನೆಲೆನಿಂತವು. ಅಲ್ಲದೆ ಒಳ್ಳೆಯ ಜೀವನದ ಅವಕಾಶಗಳನ್ನು ಹುಡುಕುತ್ತ, ಒಂದು ತಾಂಡದಿಂದ ಇನ್ನೊಂದು ತಾಂಡಕ್ಕೆ ಕುಟುಂಬಗಳ ವಲಸೆ ಸಂಚರಣೆ ಅಧಿಕವಾದಂತೆ ಅನೇಕ ಗೋತ್ರಗಳು ಹಾಗೂ ಅನೇಕ ಮನೆತನಗಳು ತಾಂಡಗಳಲ್ಲಿ ನಿರ್ಮಾಣಗೊಳ್ಳುವ ಸಾಧ್ಯತೆಗಳು ಹೆಚ್ಚಾದವು. ಅನೇಕ ಲಂಬಾಣಿಗಳು ಇಂದು ತಾವು ಜನಿಸಿದ ತಾಂಡಗಳನ್ನು ಬಿಟ್ಟು ಬೇರೆ ತಾಂಡಗಳಲ್ಲಿ ಜೀವಿಸುತ್ತಿದ್ದಾರೆ. ಹೀಗಾಗಿ, ವಿಭಿನ್ನ ಮೂಲದ ಮನೆತನಗಳು, ಸಣ್ಣ-ಸಣ್ಣ ಗುಂಪುಗಳು ಬಹಳಷ್ಟು ಜನಸಂಖ್ಯೆಯನ್ನು ನಾವು ಮರಿಯಮ್ಮನಹಳ್ಳಿಯಂತಹ ಪ್ರಾತಿನಿಧಿಕ ತಾಂಡದಲ್ಲಿ ಇಂದು ಕಾಣಬಹುದಾಗಿದೆ. ಕೆಲವು ದಶಕಗಳ ಹಿಂದೆ ಇಲ್ಲಿನ ಪ್ರತಿಯೊಂದು ಗೋತ್ರವು ನಾಲ್ಕು ಅಥವಾ ಆರು ಮನೆತನಗಳನ್ನು ಮಾತ್ರವೇ ಒಳಗೊಂಡಿತ್ತು ಎಂದು ಕೆಲವು ಹಿರಿಯರು ಹೇಳುತ್ತಾರೆ. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಈಗ ಕ್ರಮವಾಗಿ ೧೫ ಮತ್ತು ೧೩ ಮನೆತನಗಳು ಕಂಡುಬರುತ್ತಿವೆ. ಅವುಗಳಲ್ಲಿ ೨ ಅಥವಾ ೩, ಮನೆತನಗಳು ಮಾತ್ರವೇ ೨೦ನೆಯ ಶತಮಾನದ ಆರಂಭದಲ್ಲಿ ಈ ತಾಂಡಗಳಲ್ಲಿ ಸ್ಥಾಪನೆಯಾಗಿದ್ದವು ಎಂದು ಕೆಲವು ಹಿರಿಯರು ತಿಳಿಸುತ್ತಾರೆ. ಕಳೆದ ೧೦೦ ವರ್ಷಗಳ ಅವಧಿಯಲ್ಲಿ ಮರಿಯಮ್ಮನಹಳ್ಳಿ ತಾಂಡದಲ್ಲಿ ೨೦, ನಾಗಲಾಪುರ ತಾಂಡದಲ್ಲಿ ೧೬ ಮನೆತನಗಳು ವಲಸೆ ಬಂದು ನೆಲೆಸಿದವುಗಳಾಗಿವೆ. ಈ ತೆರನಾದ ವಲಸೆಗೆ ಅನೇಕ ಕಾರಣಗಳಿವೆ. ಪತಿ ಅಥವಾ ತಂದೆಯ ಸಾವು, ವಸತಿ ಇಲ್ಲದಂತಾದ ಅಥವಾ ಮನೆ ದುರಸ್ತಿ ಮಾಡಲಾರದ ಸ್ಥಿತಿ, ವಿವಾಹ, ಉದ್ಯೋಗಗಳನ್ನು ಅರಸುವಿಕೆ ಹಾಗೂ ಸರಕಾರಿ ಸೇವೆ (ಉದಾಹರಣೆ ಪ್ರಾಥಮಿಕ ಶಾಲೆಯಲ್ಲಿ ನೇಮಕನಾದ ಲಂಬಾಣಿ ಶಿಕ್ಷಕನು ಮರಿಯಮ್ಮನಹಳ್ಳಿ ತಾಂಡದಲ್ಲಿ ಖಾಯಂ ಆಗಿ ನೆಲೆ ನಿಂತದ್ದು) ಇತ್ಯಾದಿ.

ಕಾಲೋಲಿಯ ಸ್ವಜಾತಿ ಸಂಬಂಧಿಕರು ಕಾಲೋಲಿ ಆಸ್ತಿಯಲ್ಲಿ ಆಸಕ್ತರಾಗಿದ್ದ ಪಕ್ಷದಲ್ಲಿ ಕಾಲೋಲಿ ಮಲಮಕ್ಕಳಿಗೆ ಪರಿಹಾರ ಧನ ನೀಡುವುದಾದರೆ ಮಾತ್ರ ಆ ದತ್ತು ಹಕ್ಕನ್ನು ವಿಸರ್ಜಿಸಲಾಗುತ್ತದೆ ಎಂದು ಪಂಚಾಯಿತಿ ಸೂಚಿಸಿತ್ತು. ಇಂತಹ ಒಂದು ಸಭೆಯ ನಂತರ ಪಂಚಾಯಿತಿಯ ಓರ್ವ ಪ್ರಮುಖ ಸದಸ್ಯರು ನನಗೆ ವಿವರಿಸಿದ್ದೇನೆಂದರೆ, ಆಕ್ಷೇಪಣೆ ಮಾಡಿದ ಕುಟುಂಬವು ನ್ಯಾಯಾಲಯಕ್ಕೆ ಹೋಗುವುದಾದರೆ ಆ ಕುಟುಂಬವನ್ನು ಪಂಚಾಯಿತಿ ಬಹಿಷ್ಕರಿಸುತ್ತದೆ. ಆ ಕುಟುಂಬವು ಕೂಡ ದತ್ತು ವಿಧಿಯಲ್ಲಿ ಪಾಲುಗೊಂಡಿದ್ದರಿಂದ ಪಂಚಾಯಿತಿಯ ತೀರ್ಮಾನವನ್ನು ಆಹ್ವಾನಿಸಲು ಇಷ್ಟಪಟ್ಟಿರಲಿಲ್ಲ. ಆದರೆ ದತ್ತು ತೆಗೆದುಕೊಳ್ಳುವ ಬಗೆಗಿನ ನಿಯಮಗಳನ್ನು ಅರಿತಿದ್ದ ಹಾಗೂ ನ್ಯಾಯಾಲಯಗಳ ಬಗೆಗೆ ತಿಳುವಳಿಕೆಯಿದ್ದ ನಾಗಲಾಪುರ ತಾಂಡದಲ್ಲಿಯ ಆತನ ಸಂಬಂಧಿಕನೋರ್ವನು ಹಾಗೆ ಮಾಡಲು ಆತನನ್ನು ಪುಸಲಾಯಿಸಿದ್ದನು.

ಆಧುನಿಕ ನ್ಯಾಯ ವ್ಯವಸ್ಥೆ ಮತ್ತು ನ್ಯಾಯಾಲಯಗಳು ಇದ್ದರೂ ಪಿತ್ರಾರ್ಜಿತ ಉತ್ತರಾಧಿಕಾರದ ಬಗೆಗಿನ ಸಮುದಾಯದ ಸಾಂಪ್ರದಾಯಿಕ ರೀತಿ ನೀತಿಗಳನ್ನು ಆಹ್ವಾನಿಸುತ್ತಿರುವುದನ್ನು ಈ ಎರಡೂ ಘಟನೆಗಳು ನಿದರ್ಶಿಸುತ್ತವೆ. ಆಧುನಿಕತೆಯಿಂದ ಇನ್ನೂ ದೂರವಾಗಿಯೇ ಉಳಿದುಕೊಂಡಿರುವ ನಾಗಲಾಪುರ ತಾಂಡವು ಸಾಂಪ್ರದಾಯಿಕ ರೀತಿ ನೀತಿಗಳನ್ನು ಮನ್ನಿಸುತ್ತಿದ್ದರೆ, ಮರಿಯಮ್ಮನಹಳ್ಳಿ ತಾಂಡದ ಅನೇಕ ಲಂಬಾಣಿಗಳು ಆಧುನಿಕ ಕಾನೂನುಗಳನ್ನು ಹಾಗೂ ನ್ಯಾಯವ್ಯವಸ್ಥೆಯನ್ನು ಬಲ್ಲವರಾಗಿದ್ದಾರೆ.

## ಒಳಬಾಂಧವ್ಯ ಬಂಧುತ್ವ ಪ್ರವೃತ್ತಿಗಳು

ಒಂದು ನಿರ್ದಿಷ್ಟ ತಾಂಡದಲ್ಲಿ ಮನೆತನಗಳು ಮತ್ತು ಗೋತ್ರಗಳ ಸಂಖ್ಯೆ ಅಲೆಮಾರಿ ಸಂದರ್ಭಕ್ಕಿಂತ ಇಂದು ಗಣನೀಯವಾಗಿ ಹೆಚ್ಚಾಗಿವೆ. ಒಂದು ಗೋತ್ರಕ್ಕೆ ಸಂಬಂಧಿಸಿದ ಮನೆತನಗಳ ಸಂಖ್ಯೆ ಅಂದು ಕಡಿಮೆಯಿದ್ದಿತು. ವಿಭಿನ್ನ ಗೋತ್ರಗಳಿಗೆ ಹಾಗೂ ಮನೆತನಗಳಿಗೆ ಸಂಬಂಧಿಸಿದ ಅಲೆಮಾರಿ ತಂಡಗಳು ಒಂದೆಡೆ ನೆಲೆನಿಂತವು. ಅಲ್ಲದೆ ಒಳ್ಳೆಯ ಜೀವನದ ಅವಕಾಶಗಳನ್ನು ಹುಡುಕುತ್ತ, ಒಂದು ತಾಂಡದಿಂದ ಇನ್ನೊಂದು ತಾಂಡಕ್ಕೆ ಕುಟುಂಬಗಳ ವಲಸೆ ಸಂಚರಣೆ ಅಧಿಕವಾದಂತೆ ಅನೇಕ ಗೋತ್ರಗಳು ಹಾಗೂ ಅನೇಕ ಮನೆತನಗಳು ತಾಂಡಗಳಲ್ಲಿ ನಿರ್ಮಾಣಗೊಳ್ಳುವ ಸಾಧ್ಯತೆಗಳು ಹೆಚ್ಚಾದವು. ಅನೇಕ ಲಂಬಾಣಿಗಳು ಇಂದು ತಾವು ಜನಿಸಿದ ತಾಂಡಗಳನ್ನು ಬಿಟ್ಟು ಬೇರೆ ತಾಂಡಗಳಲ್ಲಿ ಜೀವಿಸುತ್ತಿದ್ದಾರೆ. ಹೀಗಾಗಿ, ವಿಭಿನ್ನ ಮೂಲದ ಮನೆತನಗಳು, ಸಣ್ಣ-ಸಣ್ಣ ಗುಂಪುಗಳು ಬಹಳಷ್ಟು ಜನಸಂಖ್ಯೆಯನ್ನು ನಾವು ಮರಿಯಮ್ಮನಹಳ್ಳಿಯಂತಹ ಪ್ರಾತಿನಿಧಿಕ ತಾಂಡದಲ್ಲಿ ಇಂದು ಕಾಣಬಹುದಾಗಿದೆ. ಕೆಲವು ದಶಕಗಳ ಹಿಂದೆ ಇಲ್ಲಿನ ಪ್ರತಿಯೊಂದು ಗೋತ್ರವು ನಾಲ್ಕು ಅಥವಾ ಆರು ಮನೆತನಗಳನ್ನು ಮಾತ್ರವೇ ಒಳಗೊಂಡಿತ್ತು ಎಂದು ಕೆಲವು ಹಿರಿಯರು ಹೇಳುತ್ತಾರೆ. ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಈಗ ಕ್ರಮವಾಗಿ ೧೫ ಮತ್ತು ೧೩ ಮನೆತನಗಳು ಕಂಡುಬರುತ್ತಿವೆ. ಅವುಗಳಲ್ಲಿ ೨ ಅಥವಾ ೩, ಮನೆತನಗಳು ಮಾತ್ರವೇ ೨೦ನೆಯ ಶತಮಾನದ ಆರಂಭದಲ್ಲಿ ಈ ತಾಂಡಗಳಲ್ಲಿ ಸ್ಥಾಪನೆಯಾಗಿದ್ದವು ಎಂದು ಕೆಲವು ಹಿರಿಯರು ತಿಳಿಸುತ್ತಾರೆ. ಕಳೆದ ೧೦೦ ವರ್ಷಗಳ ಅವಧಿಯಲ್ಲಿ ಮರಿಯಮ್ಮನಹಳ್ಳಿ ತಾಂಡದಲ್ಲಿ ೨೦, ನಾಗಲಾಪುರ ತಾಂಡದಲ್ಲಿ ೧೬ ಮನೆತನಗಳು ವಲಸೆ ಬಂದು ನೆಲೆಸಿದವುಗಳಾಗಿವೆ. ಈ ತೆರನಾದ ವಲಸೆಗೆ ಅನೇಕ ಕಾರಣಗಳಿವೆ. ಪತಿ ಅಥವಾ ತಂದೆಯ ಸಾವು, ವಸತಿ ಇಲ್ಲದಂತಾದ ಅಥವಾ ಮನೆ ದುರಸ್ತಿ ಮಾಡಲಾರದ ಸ್ಥಿತಿ, ವಿವಾಹ, ಉದ್ಯೋಗಗಳನ್ನು ಅರಸುವಿಕೆ ಹಾಗೂ ಸರಕಾರಿ ಸೇವೆ (ಉದಾಹರಣೆ ಪ್ರಾಥಮಿಕ ಶಾಲೆಯಲ್ಲಿ ನೇಮಕನಾದ ಲಂಬಾಣಿ ಶಿಕ್ಷಕನು ಮರಿಯಮ್ಮನಹಳ್ಳಿ ತಾಂಡದಲ್ಲಿ ಖಾಯಂ ಆಗಿ ನೆಲೆ ನಿಂತದ್ದು) ಇತ್ಯಾದಿ.

## ವಿವಾಹ ಪದ್ಧತಿಯಲ್ಲಿ ಬದಲಾವಣೆಗಳು ಹಾಗೂ ವಿವಾಹದಿಂದ ಆಗುವ ಆರ್ಥಿಕ ತೊಡರುಗಳು

ಲಂಬಾಣಿಗಳ ಗೋತ್ರಗಳಲ್ಲಿ ಹೊರಬಾಂಧವ್ಯ ವಿವಾಹವಾಗುವ ಕೆಲವು ನಿದರ್ಶನಗಳು ಇರಬಹುದಾಗಿದ್ದರೂ ಸರ್ವೇ ಸಾಮಾನ್ಯವಾಗಿ ಲಂಬಾಣಿಗಳು ಒಳಬಾಂಧವ್ಯ ವಿವಾಹದ ಸಮುದಾಯವಾಗಿದ್ದಾರೆ. ಮನೆತನ ಮತ್ತು ಗೋತ್ರಗಳೆರಡರ ಹೊರಬಾಂಧವ್ಯ ಪದ್ಧತಿಯನ್ನು ಅವರು ಅನುಸರಿಸುತ್ತಾರೆ. ಹಿಂದೆ ಇವರು ಸಂಬಂಧೀ ಗೋತ್ರಗಳ ಹೊರಬಾಂಧವ್ಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಜಾತ್-ಭಾಯಿ ಸಂಬಂಧೀ ಮನೆತನಗಳಲ್ಲಿಯ ಹೊರಬಾಂಧವ್ಯವು ಕಡಿಮೆಯಾಗುತ್ತಿದ್ದು, ಜಾತ್-ಭಾಯಿ ಸಂಬಂಧಿ ಮನೆತನಗಳಲ್ಲಿಯ ವಿವಾಹಗಳನ್ನು ಮನ್ನಿಸಲಾಗುತ್ತಿದೆ. ಏಕೆಂದರೆ ವಡಾತ್ಯ ಗೋತ್ರ ಮಾತ್ರವೇ ಅವರಿಗೆ ಕನ್ಯೆಯನ್ನು ಕೊಡಬಹುದಾದ ಏಕೈಕ ಮೂಲವಾಗಿದ್ದರಿಂದ ಕನ್ಯೆಯರ ಕೊರತೆ ಇದ್ದಿತು. ಪ್ರೇಮಪ್ರಕರಣಗಳಿಂದ ಕೆಲವು ಅಂತರಗೋತ್ರ ವಿವಾಹಗಳಾಗಿದ್ದೂ ಇದೆ. ಇವುಗಳ ಸಂಖ್ಯೆ ತೀರ ಕಡಿಮೆ. ಇಂತಹ ವಿವಾಹಗಳು ಆನಂತರದಲ್ಲಿ ಸಾಮಾಜಿಕ ಮನ್ನಣೆ ಪಡೆದಿವೆ.

ಬಳ್ಳಾರಿ ಜಿಲ್ಲೆಯ ದಕ್ಷಿಣ ಭಾಗದ ಕೆಲವು ಸುಶಿಕ್ಷಿತ ಹಾಗೂ ಆಧುನಿಕ ಮನೋಭಾವದ ಲಂಬಾಣಿಗಳು ಗೋತ್ರಗಳಲ್ಲಿ ಹೊರಬಾಂಧವ್ಯ ಪದ್ಧತಿಯ ತತ್ವಾಧಾರಗಳ ಯಥಾರ್ಥತೆಯನ್ನು ಪ್ರಶ್ನಿಸುತ್ತಾರೆ. ಮನೆತನ ಅಥವಾ ಗೋತ್ರದ ಪೂರ್ವಿಕ ಸಂಬಂಧಿಯ ನಿರ್ದಿಷ್ಟ ಸಂಬಂಧವನ್ನು ಗುರುತಿಸಲು ತಮಗೆ ಸಾಧ್ಯವಿಲ್ಲದಿರುವಾಗ ಅಂತಹ ವ್ಯಕ್ತಿಗಳೊಡನೆ ವಿವಾಹ ಸಂಬಂಧ ಮಾಡುವುದರಲ್ಲಿ ತಪ್ಪೇನಿಲ್ಲ ಎಂದು ಅವರು ಪ್ರತಿಪಾದಿಸುತ್ತಾರೆ. ಅತ್ಯಂತ ಸಮೀಪದ ಬಂಧುತ್ವ ಸಂಬಂಧಗಳಲ್ಲಿ ವಿವಾಹ ಸಂಬಂಧಗಳನ್ನು ಬೆಳೆಸಕೂಡದು ಎಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ. ಇಂತಹ ಮನೋಭಾವದ ಲಂಬಾಣಿಗಳಿಗೆ ಸರ್ಕಾರವು ಜಾರಿಗೊಳಿಸಿದ ಇತ್ತೀಚಿನ ಸಾಮಾಜಿಕ ಸುಧಾರಣ ಕ್ರಮವು ಅನುಕೂಲಕರವಾಗಿದೆ.[೬] ವಿಭಿನ್ನ ಗೋತ್ರ ಹಾಗೂ ವಿಭಿನ್ನ ಮನೆತನಗಳ ನಡುವೆ ವಿವಾಹಗಳು ನಡೆಯುವಂತೆ ಮಾಡಿದ ಸಾಧನೆ ಇತ್ತೀಚೆಗಷ್ಟೇ ನಿವೃತ್ತಿ ಪಡೆದಿರುವ ಓರ್ವ (ಅಧ್ಯಯನ ಕೈಗೊಂಡ ಮರಿಯಮ್ಮನಹಳ್ಳಿ ತಾಂಡದಲ್ಲಿ) ಲಂಬಾಣಿ ಪ್ರಥಮ ದರ್ಜೆಯ ಅಧಿಕಾರಿಯದು.

ಲಂಬಾಣಿಗಳು ಮೂಲತಃ ಉತ್ತರ ಭಾರತದವರಾದ್ದರಿಂದ ದಕ್ಷಿಣ ಭಾರತದಲ್ಲಿ ನೆಲೆನಿಂತ ಮೇಲೂ ಹಲವು ವರ್ಷಗಳವರೆಗೆ ಉತ್ತರ ಭಾರತದಲ್ಲಿ ಪ್ರಚಲಿತವಿರುವ ವಿವಾಹ ರೂಢಿಗಳನ್ವಯ (ಆಡ್ಡತಳಿ) ಸೋದರ - ಸೋದರಿಯರಲ್ಲಿ ಹಾಗೂ ಚಿಕ್ಕಪ್ಪನ ಮಗಳ ನಡುವಿನ ವಿವಾಹ ಸಂಬಂಧಗಳನ್ನು ಮನ್ನಿಸುತ್ತಿರಲಿಲ್ಲ (ಎಂಥೋವನ್, ೧೯೨೨ : ೩೩೮). ಕಾಲಕಳೆದಂತೆಲ್ಲಾ ಸಂಬಂಧಿಗಳ ನಡುವಿನ ವಿವಾಹದ ನಿಯಮಗಳು ತಮ್ಮ ಬಿಗುವನ್ನು ಕಳೆದುಕೊಂಡಿವೆ. ಒಂದೆಡೆ ನೆಲೆ ನಿಂತ ಮೇಲೆ ಲಂಬಾಣೇತರ ಜಾತಿಗಳ ಸಂಪರ್ಕಗಳಿಂದ ಸಾಮಾನ್ಯವಾಗಿರುವ ವಿವಾಹಗಳು ಪ್ರಚಲಿತಗೊಂಡಿವೆ. ಲಂಬಾಣಿಗಳು ಈಗ ಪಿತೃವಂಶೀಯ ಹಾಗೂ ಮಾತೃವಂಶೀಯ ಅಡ್ಡ ಬಂಧುತ್ವ ಸಂಬಂಧಿಗಳಲ್ಲಿ ಸೋದರ - ಸೋದರಿಯರ ಮಗನ ಅಥವಾ ಮಗಳ, ಮಧ್ಯೆ ವಿವಾಹಗಳನ್ನೂ ಮನ್ನಿಸುತ್ತಿದ್ದಾರೆ.

ಮರಿಯಮ್ಮನಹಳ್ಳಿ ತಾಂಡದ ೧೧೫ ವಿವಾಹಗಳಲ್ಲಿ ೯೯ ವಿವಾಹಗಳು ಸಂಬಂಧಿಕರಲ್ಲದವರ ಮದುವೆಗಳಾಗಿವೆ. ಸಮೀಪ ಸಂಬಂಧಿಗಳ ನಡುವಿನ ವಿವಾಹಗಳಿಗೆ ಅನುಮತಿಯಿದೆ. ಆದರೆ ಅವುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ ಎಂಬುದನ್ನು ಅಂಕಿ ಸಂಖ್ಯೆಗಳು ಸೂಚ್ಯವಾಗಿ ತಿಳಿಸುತ್ತವೆ. ಸಂಬಂಧಿಕರ ನಡುವಿನ ೧೬ ವಿವಾಹಗಳಲ್ಲಿ ೮-ಮಾತೃವಂಶೀಯ ಅಡ್ಡ ಬಂಧುತ್ವ ಸೋದರ-

---

*೬. ೧೯೪೬ರ ಹಿಂದೂ ವಿವಾಹಗಳ ಅಸಮರ್ಥತೆಯನ್ನು ನಿವಾರಿಸುವ ಶಾಸನವು ಒಂದೇ ಗೋತ್ರ(ಕುಲದ)ಗಳಲ್ಲಿ ವಿವಾಹಗಳನ್ನು ಸಿಂಧುಗೊಳಿಸಿದೆ.*

ಸೋದರಿಯರ ನಡುವಿನ ವಿವಾಹಗಳಾಗಿವೆ. ೪ - ಪಿತೃವಂಶೀಯ ಅಡ್ಡ ಬಂಧುತ್ವ ಸೋದರ-ಸೋದರಿಯರ ನಡುವಿನ ವಿವಾಹಗಳಾಗಿವೆ. ೧-ವಿವಾಹವು ಸ್ವತಃ ಅಕ್ಕನ ಮಗಳ ಜೊತೆಗಿನ ವಿವಾಹವಾಗಿದೆ. ೧-ಸೋದರಿ ವಿನಿಮಯದ ವಿವಾಹ (ಸೋದರಿಯನ್ನೂ ಕೊಟ್ಟು ಆಕೆಯ ಗಂಡನ ಸೋದರಿಯನ್ನೂ ವಿವಾಹವಾಗುವುದು) ಮತ್ತು ೨-ಹತ್ತಿರದ ರಕ್ತಸಂಬಂಧಿಗಳ (ಸತ್ತವನ ಹೆಂಡತಿಯನ್ನು ಆತನ ತಮ್ಮ ಅಥವಾ ಹತ್ತಿರದ ಬಂಧುತ್ವಸಂಬಂಧಿ ವಿವಾಹ ಮಾಡಿಕೊಳ್ಳುವುದು) ವಿವಾಹಗಳಾಗಿವೆ.

ಸಂಬಂಧಿಗಳ ಪರಿಭಾಷೆಯ ಪ್ರಕಾರ ಹೇಳುವುದಾದರೆ ಲಂಬಾಣಿ ಪರಿಭಾಷೆಯು 'ಸುದೇನೀಸ್' ಮಾದರಿಯನ್ನು ಹೋಲುತ್ತದೆ (ಮುರ್ಡಾಕ್, ೧೯೬೫ : ೨೮೩). ಪಿತೃವಂಶೀಯ ಹಾಗೂ ಮಾತೃವಂಶೀಯ, ಸಮಾನಾಂತರ ಮತ್ತು ಅಡ್ಡ ಬಂಧುತ್ವದ ಸೋದರ - ಸೋದರಿಯರು, ಸೋದರ ಪುತ್ರರು, ಸೋದರ ಪುತ್ರಿಯರು, ಯುವ ತಲೆಮಾರಿನ ಒಂದೇ ಮನೆತನ ಅಥವಾ ಗೋತ್ರದ ಸಂಬಂಧಿಗಳು ಮೊದಲಾದ ಸೋದರಸಂಬಂಧಿ ಪದಗಳು ಸಾರ್ವತ್ರಿಕವಾಗಿ ಅಲ್ಲದಿದ್ದರೂ ಸಾಮಾನ್ಯವಾಗಿ ವಿವರವಾದ ಪದ ಪ್ರಯೋಗಗಳೊಂದಿಗೆ ಸಂಬಂಧಿಸಿರುತ್ತವೆ. ಆದರೆ ಈ ಪ್ರದೇಶಗಳಲ್ಲಿಯ ಹಿಂದೂಗಳಲ್ಲಿ ಸೋದರ - ಸೋದರಿ, ಚಿಕ್ಕಪ್ಪ, ಸೋದರರ ಪುತ್ರರು, ಸೋದರರ ಪುತ್ರಿಯರು ಮೊದಲಾದ ಎಲ್ಲ ವ್ಯಾಪ್ತಿಯ, ಸಂಬಂಧಗಳನ್ನು ಕೆಲವು ವರ್ಗೀಕೃತ ಪದಗಳು ಒಳಗೊಳ್ಳುತ್ತವೆ. ಉದಾಹರಣೆಗೆ ಈ ಪ್ರದೇಶಗಳಲ್ಲಿಯ ಹಿಂದೂ ಜಾತಿಗಳಲ್ಲಿ 'ಮಾಮಾ' ಎಂಬ ಪದವು ೯ ವಿಭಿನ್ನ ಪ್ರಕಾರಗಳ ಸಂಬಂಧಗಳನ್ನು ಒಳಗೊಳ್ಳುತ್ತದೆ. ಆದರೆ ಲಂಬಾಣಿಗಳು 'ಮಾಮಾ' ಎಂಬ ಸಂಬಂಧವನ್ನು ತಿಳಿಸಲು ೯ ಸ್ಪಷ್ಟವಾದ, ವಿವರಣಾತ್ಮಕ ಪದಗಳನ್ನೇ ಬಳಸುತ್ತಾರೆ. ಇತರ ಹಿಂದೂಗಳೊಡನೆ ಸಂಪರ್ಕಗಳನ್ನು ಹೊಂದಿದಾಗಲೂ ಲಂಬಾಣಿಗಳ ಸಂಬಂಧದ ಪರಿಭಾಷೆಯ ಪದಗಳಲ್ಲಿ ಬದಲಾವಣೆಯಾಗಿಲ್ಲ. ಒಂದು ವೇಳೆ ಲಂಬಾಣಿಗಳು ತಮ್ಮ ಭಾಷೆಯ ಮಡಿಯನ್ನು ತೊರೆದು ಪ್ರಾದೇಶಿಕ ಭಾಷೆಗೆ ಹೊಂದಿಕೊಂಡಿದ್ದರೆ, ಸಂಬಂಧಗಳ ಪರಿಭಾಷೆ ಕೂಡ ಬದಲಾಗುತ್ತಿತ್ತು. ಪ್ರಭಾವೀ ಪ್ರಾದೇಶಿಕ ಭಾಷೆಯೊಂದಿಗಿನ ಸಂಪರ್ಕ ಬಂದಾಗಲೂ ತಮ್ಮ ಭಾಷೆಯನ್ನು ರಕ್ಷಿಸಿಕೊಳ್ಳುವ ಮೂಲಕ ತಮ್ಮ ಸಾಮಾಜಿಕ ಅನನ್ಯತೆಯನ್ನು ಕಾಪಾಡಿಕೊಳ್ಳಬೇಕೆಂದೇ ಪ್ರಜ್ಞಾಪೂರ್ವಕ ಪ್ರಯತ್ನಗಳನ್ನು ಸಮುದಾಯವು ಮಾಡುತ್ತ ಬಂದಿರುವುದು ಅನೇಕ ಸಂಬಂಧಗಳ ಪದ ಪ್ರಯೋಗಗಳ ರಕ್ಷಣೆಗೂ ನೆರವಾಗಿದೆ. ಇತರ ಹಿಂದೂಗಳಲ್ಲಿ ಪ್ರಚಲಿತವಿರುವ ಸೋದರ - ಸೋದರಿಯರ ನಡುವಿನ ವಿವಾಹಗಳನ್ನು ಲಂಬಾಣಿಗಳಲ್ಲಿ ಅಪರಾಧ ಎಂದು ಪರಿಗಣಿಸಲಾಗುವುದರಿಂದ ನಿಷಿದ್ಧವಾಗಿದೆ.

ಪತ್ನಿಯ ಸೋದರಿಯ ಜೊತೆಗಿನ ವಿವಾಹವು ಲಂಬಾಣಿಗಳಲ್ಲಿ ಮನ್ನಣೆಯನ್ನು ಪಡೆದಿದೆ. ಸೋದರರು - ಸೋದರಿ ಕನ್ಯೆಯರನ್ನು ವಿವಾಹವಾಗಬಹುದಾಗಿದೆ. ಅದೇ ರೀತಿಯಾಗಿ ಸೋದರ-ಸೋದರಿಯರು (ಎದುರು ಬದರು ವರ ಕನ್ಯೆಯರ ವಿನಿಮಯ) ವಿಭಿನ್ನ ಮನೆತನಗಳ ಸೋದರಿ-ಸೋದರರನ್ನು ವಿನಿಮಯ ರೂಪದಲ್ಲಿ ವಿವಾಹವಾಗಬಹುದಾಗಿದೆ. ಇಂತಹ ವಿವಾಹಗಳಲ್ಲಿ ಕನ್ಯಾಶುಲ್ಕದ ಹೊರೆ ತಪ್ಪುವುದರಿಂದ ಈ ಬಗೆಯ ವಿವಾಹಕ್ಕೆ ಪ್ರಾತಿನಿಧ್ಯ ನೀಡಲಾಗುತ್ತದೆ. ಹಿಂದಿನ ಕಾಲದಲ್ಲಿ ಬಹುಪತ್ನಿತ್ವಕ್ಕೆ ಮನ್ನಣೆಯಿತ್ತು ಹಾಗೂ ಅದು ರೂಢಿಯಲ್ಲಿತ್ತು. ಬಹುಪತ್ನಿತ್ವದ ದೊಡ್ಡ ಕುಟುಂಬವನ್ನು ಸಲುಹಲು ತೊಂದರೆಯಾಗುವುದರಿಂದ, ಪತ್ನಿಯರ ಮಧ್ಯೆ ಆಗುವ ಕಲಹಗಳ ಭೀತಿಯಿಂದ ಹಾಗೂ ಇನ್ನೂ ಅನೇಕ ಕಾರಣಗಳಿಂದ ಇಂದು ಅದಕ್ಕೆ ಮನ್ನಣೆಯಿಲ್ಲವಾಗಿದೆ. ೧೯೯೦ರಲ್ಲಿ ಸೇರಿದ್ದ ಲಂಬಾಣಿಗಳ ಸಮಾವೇಶದಲ್ಲಿ ಸೂಚಿಸಲಾದ ಸುಧಾರಣ ಕ್ರಮಗಳಲ್ಲಿ ಬಹುಪತ್ನಿತ್ವ ವಿವಾಹವನ್ನು ತಿರಸ್ಕರಿಸುವುದೂ ಒಂದಾಗಿತ್ತು. ಆದರೂ ಮರಿಯಮ್ಮನಹಳ್ಳಿಯಲ್ಲಿ ೫ ಬಹುಪತ್ನಿತ್ವ ವಿವಾಹಗಳು (ಪ್ರತಿಯೊಂದರಲ್ಲಿ ಇಬ್ಬರು ಪತ್ನಿಯರು) ಗಮನಕ್ಕೆ ಬಂದವು. ನಾಗಲಾಪುರ ತಾಂಡದಲ್ಲಿ ಮಾತ್ರ ಇಂತಹ ವಿವಾಹಗಳು ಕಂಡು ಬರಲಿಲ್ಲ (ನೋಡಿರಿ : ಕೋಷ್ಟಕ ೩.೩).

ಪತ್ನಿಯ ದುರ್ವರ್ತನೆಯ ಆಧಾರದ ಮೇಲೆ ವಿವಾಹ ವಿಚ್ಛೇದನವನ್ನು ಪಡೆಯಬಹುದಾಗಿದೆ. ವಿವಾಹಪೂರ್ವದ ಲೈಂಗಿಕ ಸಂಬಂಧಗಳನ್ನು ಕೆಲವು ಪ್ರಕರಣಗಳ ವಿಷಯಗಳಲ್ಲಿ ಉಪೇಕ್ಷಿಸಲಾದರೂ ಎಲ್ಲರಿಗೂ ತಿಳಿಯುವ ಹಾಗೆ ನಡೆಯುವ ಕೆಲವು ಪ್ರಕರಣಗಳಲ್ಲಿ ಪಂಚಾಯಿತಿಯು ಸಂಬಂಧಿಸಿದ ವ್ಯಕ್ತಿಗಳಿಗೆ ದಂಡ ವಿಧಿಸಿ, ಅವರು ವಿವಾಹವಾಗುವಂತೆ ಕ್ರಮ ಕೈಗೊಳ್ಳುತ್ತದೆ.

ವಿಧವೆಯು ಮಕ್ಕಳನ್ನು ಹೆರುವ ಪ್ರಾಯದಲ್ಲಿದ್ದರೆ ಹಾಗೂ ಆಕೆ ಮರುಮದುವೆಯಾಗಬೇಕೆಂದು ಬಯಸಿದರೆ ವಿಧವಾ ವಿವಾಹವನ್ನು ಅನುಮತಿಸಲಾಗುತ್ತದೆ. ಈ ವಿವಾಹವನ್ನು ತೀರ ಸರಳವಾಗಿ ನೆರವೇರಿಸಲಾಗುತ್ತದೆ. ಇಂತಹ ವಿವಾಹವನ್ನು ಎರಡನೆಯ ವಿವಾಹ (ನಾನಕ್ಯಾವಿಯಾ) ಎಂದು ಕರೆಯಲಾಗುತ್ತದೆ. ವಿಧವೆಯು ಮರು ಮದುವೆಯಾದಾಗ ವಿವಾಹಿತ ಮಹಿಳೆಯರಿಗೆ ಸಾಮಾನ್ಯವಾಗಿ ನೀಡಲಾಗುವ ಅಂತಸ್ತನ್ನು ಪಡೆಯಲಾರಳು. ಎರಡನೆಯ ವಿವಾಹದಿಂದ ಮಕ್ಕಳಿಗೆ ಅಪಚಾರವೇನೂ ಆಗುವುದಿಲ್ಲ. ಏಕೆಂದರೆ, ಇಂತಹ ವಿವಾಹದಿಂದ ಜನಿಸುವ ಮಕ್ಕಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಕಾನೂನುಬದ್ಧ ಉತ್ತರಾಧಿಕಾರತ್ವವು ಲಭಿಸುತ್ತದೆಯಲ್ಲದೆ ಮೊದಲಿನ ವಿವಾಹದಿಂದಾದ ಮಕ್ಕಳೊಡನೆ ಸ್ಥಾನಮಾನಗಳೂ ಲಭಿಸುತ್ತವೆ.

ಸೋದರನ ವಿಧವೆ ಪತ್ನಿಯನ್ನು ವಿವಾಹವಾಗುವ ಪದ್ಧತಿಗೆ ಹಿಂದಿನ ಕಾಲದಲ್ಲಿ ಮನ್ನಣೆಯಿದ್ದಿತು. ಎರಡನೆಯ ಅಥವಾ ಮೂರನೆಯ ಸಂಬಂಧಿ ಸೋದರರು ಕೂಡ ಆಕೆಯನ್ನು ವಿವಾಹವಾಗುವುದು ಆಗ ಸಮ್ಮತವಾಗಿತ್ತು. ಆದರೆ ಈ ಸಂಪ್ರದಾಯದ ಬಗೆಗೆ ಲಂಬಾಣಿ ದೃಷ್ಟಿಕೋನದಲ್ಲಿ ಬದಲಾವಣೆಯಾಗಿದ್ದರಿಂದ ಇಂದಿನ ದಿನಗಳಲ್ಲಿ ಈ ತೆರನಾದ ವಿವಾಹಗಳನ್ನು ತಿರಸ್ಕರಿಸಲಾಗಿದೆ. ೧೯೬೦ರಲ್ಲಿ ಗದಗಿನಲ್ಲಿ ಸಮಾವೇಶಗೊಂಡಿದ್ದ ಲಂಬಾಣಿಗಳ ಸಮಾವೇಶದಲ್ಲಿ ಸ್ವೀಕರಿಸಲಾದ ಸುಧಾರಣಾಕ್ರಮಗಳ ಗೊತ್ತುವಳಿಗಳಲ್ಲಿ ಇಂತಹ ವಿವಾಹವನ್ನು ಅಯೋಗ್ಯವೆಂದೂ ಸಾಮಾಜಿಕವಾಗಿ ಅನಪೇಕ್ಷಣೀಯವೆಂದೂ ಸಾರಲಾಯಿತು. ಹಿಂದೂ ಮೇಲ್ಜಾತಿಗಳ ಸಾಮಾಜಿಕ ಸಂಪ್ರದಾಯಗಳನ್ನು ಅಂತರ್ಗತಿಸಿಕೊಳ್ಳುವ ಹಾಗೂ ಜಾತಿ ಏಣಿ ಶ್ರೇಣಿಯಲ್ಲಿ ತಮ್ಮ ಸ್ಥಾನಮಾನಗಳನ್ನು ಉನ್ನತಗೊಳಿಸುವ ಹವಣಿಕೆಯ ನಿದರ್ಶನವಿದಾಗಿದೆ. ಮರಿಯಮ್ಮನಹಳ್ಳಿಯಲ್ಲಿ ತಾಂಡದಲ್ಲಿ ಈ ರೀತಿಯ ವಿವಾಹಗಳು ಕೇವಲ ಎರಡು ಮಾತ್ರ. ನಾಗಲಾಪುರ ತಾಂಡದಲ್ಲಿ ಇಲ್ಲವೇ ಇಲ್ಲ ಎಂದು ಹೇಳಬಹುದು.

ವಿಧವೆಯರ ವಿವಾಹಕ್ಕೆ ಹಿಂದಿನ ಸಂಪ್ರದಾಯವು ಮನ್ನಿಸಲ್ಪಟ್ಟಿದ್ದಕ್ಕೆ ಕಾರಣಗಳಿದ್ದವು. ವಿಧವೆಯರ ರಕ್ಷಣೆ ಹಾಗೂ ಕುಟುಂಬ ಗೌರವ, ಕುಟುಂಬದ ಸಂಪನ್ಮೂಲಗಳು (ದನಕರುಗಳು ಹಾಗೂ ಜಮೀನು) ಹಂಚಿಕೆಯಾಗುವುದನ್ನು ತಡೆಗಟ್ಟುವುದು, ಮಕ್ಕಳ ರಕ್ಷಣೆ ಮತ್ತು ಪೋಷಣೆ ಪಿತೃವಂಶೀಯ ಅನುವಂಶಿಕತೆ ಹಾಗೂ ಉತ್ತರಾಧಿಕಾರತ್ವ, ಗೋತ್ರದ ಹಿತಾಸಕ್ತಿಗಳನ್ನು ಕಾಪಾಡಲು ಮಕ್ಕಳು ಮತ್ತು ಮಹಿಳೆಯರನ್ನು ಮನೆಯಲ್ಲಿಯೇ ಉಳಿಸಿಕೊಳ್ಳುವುದು ಮುಂತಾದ ಕಾರಣಗಳಾಗಿದ್ದವು. ಮನೆತನದ ಹೊರಗಿನ ವ್ಯಕ್ತಿ ವಿಧವೆ ಮರುಮದುವೆ ಮಾಡಿಕೊಳ್ಳಲು ತೀರ್ಮಾನಿಸಿದ್ದಾಗಲೆ ಕೊನೆಯ ಅಂಶವು ಮಹತ್ವವನ್ನು ಪಡೆಯಿತು. ಅದಿಲ್ಲವಾದರೂ ತೀರಿ ಹೋದ ಪತಿಯ ಕುಟುಂಬದಲ್ಲಿ ಆಕೆಗೆ ಜೀವನ ನಿರ್ವಹಣೆಯ ಹಕ್ಕು ಇದ್ದಿತು. ಈ ರೀತಿ ವಿವಾಹದ ಪ್ರಮುಖ ಅನುಕೂಲಕರ ಅಂಶವು ಕನ್ಯಾಶುಲ್ಕದ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕಾಗಿತ್ತು. ವರನ ಕುಟುಂಬವು ವಿಧವೆಯನ್ನು ಪಡೆಯಬಯಸುವ ಸೋದರ ಅಥವಾ ಸಮಾನಾಂತರ ಸೋದರನಿಗೆ ಕನ್ಯಾಶುಲ್ಕದ (ರೂಪಾಯಿಗಳು ೬೧ ರಿಂದ ೮೧ರವರೆಗೆ ಸಾಂಪ್ರದಾಯಿಕವಾಗಿ ನೀಡಲಾಗುತ್ತಿತ್ತು) ರೂಪದಲ್ಲಿ ಹಣವನ್ನು ನೀಡುತ್ತಿತ್ತು. ಈ ಮೂಲಕ ಮನೆತನಗಳು ಮಹಿಳೆಯ ಸಂತಾನೋತ್ಪತ್ತಿಯ ಮೇಲಿನ ಹಕ್ಕನ್ನು ಚಲಾಯಿಸುತ್ತಿತ್ತು. ಬೇರೆ ಮನೆತನದ ವ್ಯಕ್ತಿಗಳೊಡನೆ ವಿಧವೆ ಮರುಮದುವೆಯಾಗದಂತೆ ತಡೆಯಲೆಂದೇ ವಿಧವಾ

# ಕೋಷ್ಟಕ ೩.೩

ಮರಿಯಮ್ಮನಹಳ್ಳಿ (೧೯೯೯) ಮತ್ತು ನಾಗಲಾಪುರ (೧೯೯೯) ತಾಂಡದ ಜನಸಂಖ್ಯೆ (ವಯೋಗುಂಪು ಮತ್ತು ವೈವಾಹಿಕ ಅಂತಸ್ತಿಗನುಗುಣವಾದಂತೆ)

| ವಯೋ ಗುಂಪು-ಗಳು | ಅವಿವಾಹಿತರು | | | | ವಿವಾಹಿತರು | | | | ವಿಧವೆಯಾದವರು | | | | ವಿಚ್ಛೇದಿತರು | | | | ತ್ಯಜಿಸಲ್ಪಟ್ಟವರು | | | | ಒಟ್ಟು | | | | ಒಟ್ಟಾರೆ ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | | ನಾಗಲಾ ಪುರ | | ಮ.ಮ ಹಳ್ಳಿ | ನಾಗಲಾ ಪುರ |
| | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | ಗಂ. | ಹೆ. | | |
| ೦-೪ | ೬೩ | ೬೪ | ೩೮ | ೩೯ | - | - | - | - | - | - | - | - | - | - | - | - | - | - | - | - | ೬೩ | ೬೮ | ೩೮ | ೩೯ | ೧೨೯ | ೭೭ |
| ೫-೧೪ | ೯೯ | ೭೬ | ೮೮ | ೯೬ | - | - | - | - | - | - | - | - | - | - | - | - | - | - | - | - | ೯೯ | ೭೬ | ೮೮ | ೯೬ | ೧೭೫ | ೧೮೪ |
| ೧೮-೨೪ | ೩೯ | ೪ | ೩೪ | ೮ | ೮ | ೩೧ | ೬ | ೩೦ | - | - | - | - | - | - | - | ೧ | - | - | - | ೩ | ೪೭ | ೩೫ | ೪೦ | ೪೨ | ೮೨ | ೮೨ |
| ೨೫-೩೪ | ೪ | - | ೨ | - | ೩೧ | ೪೬ | ೨೯ | ೩೧ | - | - | - | ೧ | ೧ | - | ೧ | ೧ | - | - | ೨ | ೨ | ೩೬ | ೪೬ | ೩೪ | ೩೫ | ೮೨ | ೬೯ |
| ೩೫-೪೪ | - | - | - | - | ೩೨ | ೨೩ | ೩೦ | ೨೭ | - | ೧ | ೨ | ೪ | ೨ | ೧ | - | - | - | - | - | - | ೩೪ | ೨೮ | ೩೨ | ೩೧ | ೬೨ | ೬೩ |
| ೪೫-೫೪ | - | - | ೧ | - | ೨೫ | ೯ | ೨೫ | ೧೨ | ೧ | ೯ | ೧ | ೪ | ೧ | - | - | ೧ | - | - | ೧ | - | ೨೭ | ೧೮ | ೨೮ | ೧೭ | ೪೫ | ೪೫ |
| ೫೫-೫೯ | - | - | - | - | ೫ | ೪ | ೫ | ೪ | - | ೬ | - | ೭ | - | - | - | - | - | - | - | - | ೫ | ೧೦ | ೫ | ೧೧ | ೧೫ | ೧೬ |
| ೬೦ + ಮೇಲ್ಪಟ್ಟು | - | - | - | - | ೧೦ | - | ೧೦ | ೧ | ೨ | ೧೧ | ೧ | ೧೭ | - | - | - | - | - | - | - | - | ೧೨ | ೧೧ | ೧೧ | ೧೮ | ೨೩ | ೨೯ |
| ಒಟ್ಟು | ೧೦೫ | ೧೪೪ | ೧೬೩ | ೧೪೩ | ೧೧೧ | ೧೧೬ | ೧೦೫ | ೧೦೫ | ೩ | ೨೭ | ೪ | ೩೩ | ೪ | ೧ | ೧ | ೩ | - | - | ೩ | ೫ | ೩೨೩ | ೨೮೮ | ೨೭೬ | ೨೮೯ | ೯೧೧ | ೫೬೫ |
| ಒಟ್ಟಾರೆ ಮೊತ್ತ | ೩೪೯ | | ೩೦೬ | | ೨೨೭ | | ೨೧೦ | | ೩೦ | | ೩೭ | | ೫ | | ೪ | | - | | ೮ | | ೬೧೧ | | ೫೬೫ | | | |

ಗಂ = ಗಂಡು ಮಕ್ಕಳು (ಪುರುಷರು)

ಹೆ = ಹೆಣ್ಣು ಮಕ್ಕಳು (ಮಹಿಳೆಯರು)

ಪುನರ್‌ವಿವಾಹಕ್ಕೆ ಸಾಮಾನ್ಯ ಕನ್ಯಾಶುಲ್ಕಕ್ಕಿಂತ ಹೆಚ್ಚಿನ ಶುಲ್ಕವನ್ನು ವಿಧಿಸಲಾಗಿತ್ತು. ವಿಧವೆಯನ್ನು ಮದುವೆಯಾಗುವ ವ್ಯಕ್ತಿಯು ತೀರಿ ಹೋದ ಆಕೆಯ ಗಂಡನ ಸಂಬಂಧಿಕರಿಗೆ (ಕುಟುಂಬಕ್ಕೆ) ೧೫೦ರೂ.ಗಳ ಪರಿಹಾರವನ್ನು ಮತ್ತು ಪಂಚಾಯಿತಿಗೆ ಸಾಂಪ್ರದಾಯಿಕ ದಂಡದ ಹಣವಾಗಿ ೨೫೦ ರೂಪಾಯಿಗಳನ್ನು ಕೊಡಬೇಕಾಗುತ್ತಿತ್ತು.

ಇಂತಹ ವಿವಾಹ ಪದ್ಧತಿಯನ್ನು ತಿರಸ್ಕರಿಸಲು ಈಗ ನಡೆದ ಪ್ರಯತ್ನಗಳ ಬಗೆಗೆ ಮಾಹಿತಿದಾರರು ತಿಳಿಸಿದ ಸಂಗತಿಯೆಂದರೆ, ಇತ್ತೀಚೆಗೆ ವಿವಾಹಗಳಾಗುವ ಐದು ಸಂಭವನೀಯ ಸನ್ನಿವೇಶಗಳಲ್ಲಿ ಆಸ್ತಿ ಹಾಗೂ ನೈತಿಕತೆ ಕುರಿತಾಗಿ ಬದಲಾಗುತ್ತಿರುವ ಮೌಲ್ಯಗಳಿಂದಾಗಿ ಅಂತಹ ವಿವಾಹಗಳು ಆಗುವುದು ತಪ್ಪಿತು. ಬದಲಾಗುತ್ತಿರುವ ಸಾಮಾಜಿಕ ಮೌಲ್ಯಗಳು ಆರ್ಥಿಕ ಸಂಪನ್ಮೂಲಗಳ ವಿತರಣೆಯನ್ನು ಹೇಗೆ ಬಾಧಿಸುತ್ತವೆ ಎಂಬುದನ್ನು ಪರಿವರ್ತನೆಗೊಳ್ಳುತ್ತಿರುವ ಈ ಮೌಲ್ಯಗಳು ಎತ್ತಿ ತೋರಿಸುವ ಮಹತ್ವದ ನಿದರ್ಶನಗಳಾಗಿವೆ. ಹಿಂದಿನ ಕಾಲದಲ್ಲಿ ಕನ್ಯಾಶುಲ್ಕ ನೀಡಿಕೆ ಇಂತಹ ವಿವಾಹಗಳಿಗೆ ಪ್ರೇರಣೆ ನೀಡುತ್ತಿತ್ತು. ಸಂಚಾರಿ ಜೀವನಕ್ಕೆ ತಿಲಾಂಜಲಿ ಹೇಳಿ ಒಂದೆಡೆ ನೆಲೆನಿಂತು ಕೃಷಿ ಸಾಗುವಳಿಯನ್ನು ಅವಲಂಬಿಸಿ ಕೃಷಿಕ ಜೀವನವನ್ನು ಒಪ್ಪಿಕೊಂಡ ನಂತರ ಕನ್ಯಾಶುಲ್ಕವು ಅಪಮೌಲ್ಯಗೊಂಡಿದೆ (ಸಾಂಪ್ರದಾಯಿಕವಾಗಿ ಹಿಂದೆ ರೂ. ೬೧ ರಿಂದ ರೂ. ೮೧ ಇದ್ದದ್ದು ಈಗ ರೂ. ೪೧ ರಿಂದ ರೂ. ೬೧ ರಷ್ಟಾಗಿದೆ). ಈಗ ಕನ್ಯಾಶುಲ್ಕವು ಸಾಂಕೇತಿಕ ಎಂಬಂತೆ ತೀರ ಅಲ್ಪ ಮೊತ್ತದ್ದಾಗಿದೆ. ಸಂಪ್ರದಾಯದ ಬಳಕೆಯಿಲ್ಲದ ಸ್ಥಿತಿಯು ಆರ್ಥಿಕತೆಯ ವಿಸ್ತಾರದ ಪರಿಣಾಮವಾಗಿದೆ ಎಂದು ತೋರುತ್ತದೆ. ಅದೇ ರೀತಿಯಾಗಿ ನೈತಿಕತೆಯ ಬಗೆಗಿನ ಬದಲಾದ ವಿಚಾರಗಳು ಹಾಗೂ ಇತರರಿಂದ ಎರವಲು ಪಡೆದ ಆಚಾರ ವಿಚಾರಗಳು ಕೂಡ ಬದಲಾವಣೆಗಳ ಹೊಸ ಆಯಾಮದ ನಿದರ್ಶನಗಳಾಗಿವೆ.

ಇತರ ಹಿಂದೂ ಜಾತಿಗಳಿಂದ ಸುಳಿವನ್ನು ಪಡೆದ ಕೆಲವು ಮುಂದುವರಿದ ಸ್ಥಿತಿವಂತ ಲಂಬಾಣಿಗಳು ಸಾಂಕೇತಿಕವಾದ ಕನ್ಯಾಶುಲ್ಕವನ್ನು ಕೂಡ ತ್ಯಜಿಸುತ್ತಿದ್ದಾರೆ. ಆದರೆ ವರನು ಸರಕಾರಿ ಸೇವೆಯಲ್ಲಿದ್ದರೆ ಅಥವಾ ಆಧುನಿಕ ವೃತ್ತಿಯನ್ನು ಕೈಗೊಂಡಿದ್ದರೆ ೨೦,೦೦೦ ರೂ.ಗಳಿಂದ ೧ ಲಕ್ಷ ರೂಪಾಯಿಗಳವರೆಗೂ, ಕೆಲವು ಸಂದರ್ಭದಲ್ಲಿ ಇನ್ನೂ ಹೆಚ್ಚಿನ ಮೊತ್ತದ ವರದಕ್ಷಿಣೆ ಕೊಡಲಾರಂಭಿಸಿದ್ದಾರೆ. ವರದಕ್ಷಿಣೆ ನೀಡಿಕೆಯು ಆರ್ಥಿಕವಾಗಿ ಹಿಂದುಳಿದ ಲಂಬಾಣಿಗಳಿಗೆ ಹೊರೆಯಾಗಿದೆ. ಈ ಪದ್ಧತಿ ಕೂಡ ಲಂಬಾಣೇತರ ಜನರ ಅನುಕರಣೆಯಾಗಿದೆ. ಸಾಮಾಜಿಕ ಪ್ರತಿಷ್ಠೆಗೋಸ್ಕರ ಕೆಲವು ಸಂದರ್ಭಗಳಲ್ಲಿ ಹಣಕಾಸಿನ ಪರಿಗಣನೆಯನ್ನು ಬಲಿಕೊಡಲಾಗುತ್ತದೆ ಎಂಬುದು ಈ ಎಲ್ಲ ಸನ್ನಿವೇಶಗಳಲ್ಲಿ ನಿದರ್ಶಿತವಾಗುವ ಮಹತ್ವದ ಸಂಗತಿಯಾಗಿದೆ.

ವಿವಾಹದ ಪ್ರಸ್ತಾಪ ಮಾಡಲು ವರನ ತಂದೆಯು ತಾಂಡದ ಸಾಂಪ್ರದಾಯಿಕ ನಾಯಕ ಮತ್ತು ಕೆಲವು ಹಿರಿಯರೊಡನೆ ವಧುವಿನ ಮನೆಗೆ ಭೇಟಿ ನೀಡುತ್ತಾರೆ. ಕನ್ಯಾಶುಲ್ಕದ ಮೊತ್ತ ಕೂಡ ಆಯಾ ಮನೆತನಗಳಲ್ಲಿ ವಿಭಿನ್ನವಾಗಿರುತ್ತದೆ. ಜಾಟ್ - ಭಾಯಿಗಳು ವಡಾತ್ಯರಿಗೆ ೪೧ ರೂಗಳನ್ನು ಸಾಂಪ್ರದಾಯಿಕವಾಗಿ ಕೊಡುತ್ತಾರೆ. ವಡಾತ್ಯರು ಜಾಟ್ - ಭಾಯಿಗಳಿಗೆ ೬೧ ರೂಗಳನ್ನು ಕೊಡುತ್ತಾರೆ. ಹಿಂದಿನ ಕಾಲದಲ್ಲಿ ವಿವಾಹವು ಮೂರುದಿನಗಳವರೆಗೆ ನಡೆಯುತ್ತಿತ್ತು. ಇಂದು ಹೆಚ್ಚುತ್ತಿರುವ ಬೆಲೆಗಳಿಂದಾಗಿ ಎಲ್ಲ ಸಾಂಪ್ರದಾಯಿಕ ವಿಧಿ ವಿಧಾನಗಳನ್ನು ಒಂದೇ ದಿನದಲ್ಲಿ ಮಾಡಿ ಮುಗಿಸಲಾಗುತ್ತದೆ. ವಿವಾಹ ಸಮಾರಂಭದಲ್ಲಿ ಅಡಕವಾದ ಮಹತ್ವದ ವಿಧಿ ವಿಧಾನಗಳೆಂದರೆ ವಿವಾಹ ನಿಶ್ಚಯ (ಸರಾಸರಿ ೧೦೦೦/- ರೂ. ವೆಚ್ಚದ್ದು), ಹಳದಿ (ಹರಿಷಿಣ ಹಚ್ಚುವ ಕಾರ್ಯಕ್ರಮ), ಧಾರೆ (ಕನ್ಯೆಯನ್ನು ಮನೆತುಂಬಿಸಿ ಕೊಡುವುದು) ಇತ್ಯಾದಿ. ಕೊನೆಯ ಎರಡು ಸಮಾರಂಭಗಳಿಗಾಗಿ ಸುಮಾರು ೨೫,೦೦೦ರೂಪಾಯಿಗಳಿಂದ ೫೦,೦೦೦ರೂ. ವೆಚ್ಚವಾಗುತ್ತವೆ. ಈ ಮೂರು ಕಾರ್ಯಕ್ರಮಗಳು ವಧುವಿನ ಮನೆಯಲ್ಲಿ ನಡೆಯುತ್ತವೆ. ಧಾರೆ ಸಮಾರಂಭದಲ್ಲಿ ವಧು ಮತ್ತು ವರರು ಎರಡು ಕಂಭಗಳ

ಸುತ್ತ ಮೂರುಬಾರಿ ಸುತ್ತುತ್ತಾರೆ. ಸತಿ ಪತಿಗಳನ್ನು ಒಂದುಗೂಡಿಸುವ ಈ ವಿಧಿಯು ವಿವಾಹ ಸಮಾರಂಭದ ಪ್ರಮುಖ ಭಾಗವಾಗಿದೆ. ವಿವಾಹಿತ ಮಹಿಳೆಯ ಗುರುತಿನ ಮಹತ್ವದ ಸಾಂಕೇತಿಕ ಚಿನ್ಹೆಗಳೆಂದರೆ, ಇತರ ಆಭರಣಗಳೊಂದಿಗೆ ಕೊರಳ ಸರ (ಘೂಗ್ರಿ) ಮತ್ತು ಹಸ್ತಿದಂತ ಬಳೆಗಳು (ಈಗ ಪ್ಲಾಸ್ಟಿಕ್). ವಧು ಹಾಗೂ ವರನ ಬಟ್ಟೆಗಳು, ಆಭರಣಗಳು ಸುಮಾರು ೫೦೦೦ರೂ.ಗಳ ವೆಚ್ಚದ್ದಾಗಿರುತ್ತವೆ. ಒಟ್ಟಾರೆ ಒಂದು ಸರಳ ವಿವಾಹವು ವಧುವಿನ ಮನೆಯವರಿಗೆ ೨೫,೦೦೦ರೂ.ಗಳಿಂದ ೫೦,೦೦೦ರೂ.ಗಳಷ್ಟಾದರೆ, ವರನ ಕಡೆಯವರಿಗೆ ೨೦,೦೦೦ ರೂ.ಗಳಷ್ಟಾಗಬಹುದು. ಮುಂದುವರಿದ ಸ್ಥಿತಿವಂತ ಲಂಬಾಣಿಗಳ ವಿವಾಹವು ೫೦,೦೦೦ರೂ.ಗಳಿಂದ ೩ ಲಕ್ಷ ರೂ.ಗಳವರೆಗೂ ವೆಚ್ಚದಾಯಕವಾಗಿರುತ್ತದೆ.

ಈ ಪ್ರದೇಶದಲ್ಲಿ ಬಹುವರ್ಷಗಳಿಂದ ನೆಲೆನಿಂತ ನಂತರ ಮತ್ತು ದಕ್ಷಿಣ ಭಾರತದ ಸಂಪ್ರದಾಯಗಳೊಂದಿಗಿನ ನಿಕಟ ಸಂಪರ್ಕಗಳಿಂದಾಗಿ ಲಂಬಾಣಿಗಳು ತಾಳಿಕಟ್ಟುವ ವಿಧಿಯನ್ನು ಅನುಸರಿಸತೊಡಗಿದ್ದಾರೆ. ಉತ್ತರ ಭಾರತದಲ್ಲಿರುವಾಗ ತಾಳಿ ಕಟ್ಟುವುದು ಅವರ ವಿವಾಹ ಸಮಾರಂಭದಲ್ಲಿ ಒಂದು ಅಂಗವಾಗಿರಲಿಲ್ಲ. ತೀರ ಇತ್ತೀಚಿನವರೆಗೆ ವಧುವಿನ ವಿವಾಹ ವೇಷಭೂಷಣಗಳು ರಾಜಸ್ಥಾನೀ ವಧುವಿನ ತರವೇ ಕುಬುಸ, ಲಂಗ, ಓಡನಿಗಳಾಗಿದ್ದವು. ಆದರೆ ಇಂದು ದಕ್ಷಿಣ ಭಾರತದ ವಧುವಿನ ವೇಷಭೂಷಣಗಳಾದ ರೇಷ್ಮೆ ಸೀರೆ, ಬ್ಲೌಸ್ ಹಾಗೂ ದಾವಣಿಗಳನ್ನು ಲಂಬಾಣಿ ವಧುಗಳು ತೊಡುತ್ತಾರೆ. ವಧುವಿನ ಈ ಬಟ್ಟೆಬರೆಗಳು ಕೂಡ ವಿವಾಹದ ವೆಚ್ಚವನ್ನು ಅಧಿಕಗೊಳಿಸಿವೆ. ರೇಷ್ಮೆ ಸೀರೆಯು ಲಂಬಾಣಿಗಳ ಸಾಂಪ್ರದಾಯಿಕ ವಧುವಿನ ಉಡಿಗೆಗಳಿಗಿಂತ ಹೆಚ್ಚು ವೆಚ್ಚದಾಕಯವಾಗಿದೆ.

ಲಂಬಾಣಿಗಳು ಅಲೆಮಾರಿ ಜೀವನಮಾರ್ಗಕ್ಕೆ ಹೊಂದಿಕೊಂಡಿದ್ದರಿಂದಲೇ ಗ್ರಾಮ ಮತ್ತು ಪಟ್ಟಣಗಳಿಂದ ದೂರದಲ್ಲಿ ವಾಸಿಸುತ್ತಿದ್ದರು. ಹಾಗಾಗಿ ವಿವಾಹ ವಿಧಿಗಳನ್ನು ನೆರವೇರಿಸಲು ಬ್ರಾಹ್ಮಣ ಪುರೋಹಿತರ ಸೇವೆಯನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಆದ ಕಾರಣ ವಿವಾಹ ವಿಧಿಗಳನ್ನು ಜರುಗಿಸುವಲ್ಲಿ ನಿಷ್ಪಕ್ಷಪಾತವಾಗಿ ವಡಾತ್ಯ ಗೋತ್ರದ ಹಿರಿಯ ವ್ಯಕ್ತಿಯೇ ಪೌರೋಹಿತ್ಯ ಕಾರ್ಯಗಳನ್ನು ನೆರವೇರಿಸುತ್ತಿದ್ದನು. ಆದರೆ ಹಿಂದೂ ಕೃಷಿ ಸಾಗುವಳಿದಾರರ ನಿಕಟ ಸಂಪರ್ಕಕ್ಕೆ ಬಂದಾಗ ಲಂಬಾಣಿಗಳು ಒಂದೆಡೆ ನೆಲೆನಿಂತುಕೊಂಡಿದ್ದರಿಂದ ಅವಕಾಶವಾದಾಗಲೆಲ್ಲ ಬ್ರಾಹ್ಮಣ ಪುರೋಹಿತರ ಸೇವೆಯನ್ನು ಧಾರ್ಮಿಕ ಆಚರಣೆಗಳಿಗೆ ಬಳಸಿಕೊಳ್ಳಲಾರಂಭಿಸಿದರು. ಹಲವು ಶತಮಾನಗಳ ಹಿಂದೆಯೇ ಲಂಬಾಣಿಗಳು ದಕ್ಷಿಣ ಭಾರತಕ್ಕೆ ಬಂದಿದ್ದರೂ ತಮ್ಮ ಆರ್ಥಿಕ ಸ್ಥಿತಿಗತಿಗಳು ಸುಧಾರಿಸಿದ ನಂತರ ಹಾಗೂ ಇತರ ಜಾತಿಗಳೊಡನೆ ಸಂಪರ್ಕ ಏರ್ಪಟ್ಟ ನಂತರ, ಅಂದರೆ ೨೦ನೆಯ ಶತಮಾನದ ಆರಂಭದಿಂದ ಮಾತ್ರವೇ ಹಿಂದೂ ಜಾತಿಗಳ ವಿವಾಹದ ರೀತಿ ನೀತಿಗಳನ್ನು ಅನುಸರಿಸಲಾರಂಭಿಸಿದರು (ಹೋಲಿಸಿ : ಥರ್ಸ್ಟನ್, ೧೯೦೭ : ೪೭).

ಲಂಬಾಣಿಗಳು ಬಂಜಾರ ಭಾಷೆಯಲ್ಲಿ ಸಂಭಾಷಿಸುವಾಗ ಗಟ್ಟಿಧ್ವನಿಯ ಮೂಲಕ ತಮ್ಮ ಭಾವನೆಗಳನ್ನು ಯಾವುದೇ ಮುಜುಗರವಿಲ್ಲದಂತೆ ಪ್ರತಿಪಾದಿಸುತ್ತಾರೆ. ಇದು ಅವರ ಅಲೆಮಾರಿ ಜೀವನದ ಪರಿಭಾಷೆಯಾಗಿರಬಹುದೇನೋ. ಲಂಬಾಣಿ ಮಹಿಳೆಯರು ಕೆಲವು ಸನ್ನಿವೇಶಗಳಲ್ಲಿ ಆಕ್ರಂದನ ಮಾಡುತ್ತ ಗಟ್ಟಿಯಾಗಿ ಅಳುತ್ತಾರೆ. ಸಂಬಂಧಿಕರು ತೀರಿ ಹೋದಾಗ, ವರನು ವಿವಾಹಕ್ಕೆಂದು ಕನ್ಯೆಯ ಮನೆಗೆ ಹೋಗುವಾಗ, ಕನ್ಯೆಯನ್ನು ಗಂಡನ ಮನೆಗೆ ಬೀಳ್ಕೊಡುವಾಗ, ತಾಯಂದಿರು ಹಾಗೂ ವಿವಾಹಿತ ಪುತ್ರಿಯರು ಅಥವಾ ವಿವಾಹಿತ ಸೋದರಿಯರು ಆಕಸ್ಮಿಕವಾಗಿ ಭೇಟಿಯಾದರೆ ಅವರು ಗಟ್ಟಿಯಾಗಿ ಅಳುತ್ತಾರೆ. ಆಕ್ರಂದನ ಮಾಡುತ್ತ ಪ್ರಲಾಪಿಸುತ್ತಾರೆ. ಗಟ್ಟಿಯಾಗಿ ಗೋಳೋ ಎಂದು ಅಳುವ ಲಂಬಾಣಿಗಳ ರೂಢಿಯನ್ನು ಹಳೆಯ ಜೀವನದ ರೀತಿ ನೀತಿಗಳ ಅವಶೇಷಗಳೆಂದು ಭಾವಿಸಬಹುದಾಗಿದೆ. ಆಗ ಸಾರಿಗೆ ಸಂಪರ್ಕ ಮಾಧ್ಯಮಗಳು ತೀರ ಕಡಿಮೆಯಿದ್ದವು. ಲಂಬಾಣಿಗಳು ಜಾನುವಾರುಗಳ ಮೇಲೆ ಸರಕುಗಳನ್ನು

ಕಟ್ಟಿ ಸಂಚಾರ ಮಾಡುತ್ತಿರುವಾಗ ವಿವಾಹವಾದ ವ್ಯಕ್ತಿಯನ್ನು ಪುನಃ ಭೇಟಿಮಾಡುವ ಖಚಿತತೆ ಇಲ್ಲವಾಗಿತ್ತಾದ್ದರಿಂದ ಜೋರಾಗಿ ಅಳುತ್ತಿದ್ದರು. ಆದರೆ ಈಗ ಲಂಬಾಣಿಗಳು ಒಂದೆಡೆ ನೆಲೆನಿಂತ ಜೀವನವನ್ನು ಸಾಗಿಸುತ್ತಿರುವುದರಿಂದ ಅವರಿಗೆ ಖಾಯಂ ವಿಳಾಸಗಳಿವೆ. ಇಂದು ಸಾರಿಗೆ - ಸಂಪರ್ಕ ಸಾಧನಗಳು ಹೇರಳವಾದ್ದರಿಂದ ಯಾವುದೇ ವ್ಯಕ್ತಿ ಇನ್ನಾವುದೇ ವ್ಯಕ್ತಿಯನ್ನು ಸುಲಭವಾಗಿ ಸಂಪರ್ಕಿಸಲು, ಭೇಟಿ ಮಾಡಲು ಸಾಕಷ್ಟು ಅವಕಾಶಗಳಿವೆ. ಆದರೂ ಲಂಬಾಣಿಗಳ ಪ್ರಲಾಪನದ ಸಂಪ್ರದಾಯ ಮಾತ್ರ ಇಂದಿಗೂ ಸ್ವಲ್ಪ ಮಟ್ಟಿಗೆ ರೂಢಿಯಲ್ಲಿದೆ.

ಹಿಂದಿನ ಕಾಲದಲ್ಲಿ ವಿವಾಹ ಮಾಡಿಕೊಳ್ಳಲು ವರನು ವಧುವಿನ ಮನೆಗೆ ಹೋಗುತ್ತಿರುವಾಗ ಆತನನ್ನು ತಬ್ಬಿಕೊಂಡು, ಆತನ ಭುಜದ ಮೇಲೆ ಎರಗಿ ಅಳುತ್ತಿದ್ದರೆಂದು ಲಂಬಾಣಿ ಹಿರಿಯರು ಹೇಳುತ್ತಾರೆ. ಹಿಂದೆ ವಧುವನ್ನು ವಶಪಡಿಸಿಕೊಳ್ಳಲು ಹೋಗುವಾಗ ಆತನು ಸಾಯಬಹುದಾದ ಸಂಭವವಿರುತ್ತಿದ್ದುದರಿಂದ ಆತನು ಪುನಃ ಮನೆಗೆ ಬರದಿರಬಹುದು ಎಂಬುದೂ ಅವರ ಆಕ್ರಂದನಕ್ಕೆ ಕಾರಣವಾಗಿರುತ್ತಿತ್ತು. ಇಂದಿನ ದಿನಗಳಲ್ಲಿ ವಧುವನ್ನು ಕೈವಶಪಡಿಸಿಕೊಳ್ಳುವ ಸಂಪ್ರದಾಯವು ಆಚರಣೆಯಲ್ಲಿ ಇಲ್ಲವಾಗಿದ್ದರೂ ಅವರು ಅಳುವ ವಾಡಿಕೆಯು ಮಾತ್ರ ಹಾಗೆಯೇ ಉಳಿದುಕೊಂಡಿದೆ. ವರನು ವಿವಾಹಕ್ಕೆಂದು ಹೊರಟಾಗ ವಿವಾಹದ ವೆಚ್ಚದ ತೊಂದರೆಗಳು ಆಗದಿರಲೆಂದು, ನೆರವು ನೀಡಲು ತಾಂಡದ ಪ್ರತಿಯೊಂದು ಮನೆಯೂ ಹತ್ತು ರೂಪಾಯಿಯಿಂದ ೧೫ ರೂಪಾಯಿಗಳವರೆಗೆ ಉಡುಗೊರೆ ನೀಡುತ್ತವೆ. ವಿವಾಹ ಕಾಲಕ್ಕೆ ಸಮೀಪದ ಸಂಬಂಧೀ ಮಹಿಳೆಯರು ಗಟ್ಟಿಯಾಗಿ ಅಳುವುದು ವಧುವನ್ನು ಆಕ್ರಮಣದಿಂದ ಸ್ವಾಧೀನಪಡಿಸಿಕೊಳ್ಳುವ ಅಂದಿನ ವಿವಾಹ ಪದ್ಧತಿಯಲ್ಲಿಯ ಸಾಂಪ್ರದಾಯಿಕ ಅವಶೇಷವಾಗಿದೆ (ಥರ್ಸ್ಟನ್, ೧೯೦೭ : ೪೯). ವಧುವಿನ ಸಮೀಪ ಸಂಬಂಧಿಗಳು ಅಳುವ ಸಂಪ್ರದಾಯವು ಲಂಬಾಣೇತರರಲ್ಲಿಯೂ ಪ್ರಚಲಿತ ಪದ್ಧತಿಯಾದರೂ ಅದು ಲಂಬಾಣಿಗಳಲ್ಲಿ ಇರುವಷ್ಟು ಗಾಢವಾಗಿ ಇರುವುದಿಲ್ಲ. ಇದಕ್ಕಿಂತ ಹೆಚ್ಚಾಗಿ ವಧುವನ್ನು ಆಕೆಯ ಹುಟ್ಟಿನ ಮನೆಯಿಂದ ಪ್ರತ್ಯೇಕಿಸಲಾಗುತ್ತದೆ ಎಂಬುದಕ್ಕೆ ಪ್ರತಿಕ್ರಿಯೆಯಾಗಿ ದುಃಖವು ವ್ಯಕ್ತವಾಗುತ್ತದೆ.

ವಧುವನ್ನು ಗಂಡನ ಮನೆಗೆ ಕಳುಹಿಸಿಕೊಡುವಾಗ ಬೀಳ್ಕೊಡುವ ಸನ್ನಿವೇಶದಲ್ಲಿ ಪುನಃ ದುಃಖ ವ್ಯಕ್ತವಾಗುತ್ತದೆ. ಮಹಿಳೆಯರು ಜೋರಾಗಿ ಅಳತೊಡಗುತ್ತಾರೆ. ವಧುವಿಗೆ ಶುಭಮಸ್ತು ಹೇಳುವ ಮುನ್ನ ಪ್ರತಿಯೊಂದು ಕುಟುಂಬವು ವಧುವಿಗೆ ೧೦ ರೂಪಾಯಿಯಿಂದ ೨೫ರೂ.ಗಳವರೆಗೆ ಉಡುಗೊರೆ ನೀಡುತ್ತವೆ. ವಧುವಿನ ತಂದೆ ತಾಯಿಗಳು ಮತ್ತು ಇತರೆ ಸಮೀಪ ಸಂಬಂಧಿಗಳು ಕೂಡ ಆಕೆಗೆ ಉಡುಗೊರೆ ನೀಡುತ್ತಾರೆ.

ವಿವಾಹದ ನಂತರದಲ್ಲಿ ಆಗುವ ಪ್ರತ್ಯೇಕತೆ ತೀವ್ರತರ ಸಂವೇದನಾತ್ಮಕ ಸನ್ನಿವೇಶಗಳಾಗಿದ್ದು ಸಂತೋಷ ಹಾಗೂ ದುಃಖದ ಭಾವನೆಗಳನ್ನು ಗಾಢಗೊಳಿಸುತ್ತವೆ. ವಧುವಿಗೆ ಉಡುಗೊರೆ ನೀಡುವ ಕಾರ್ಯಕ್ರಮವು ಜೀವನದ ಮನೋವೈಜ್ಞಾನಿಕ ಅಭಿವ್ಯಕ್ತಿಯಾಗಿರುತ್ತದೆ. ವಧುವಿನ ಕುಟುಂಬದ ವಿವಾಹ ಮತ್ತು ಮಿತ್ರತ್ವದ ಸಹಸಂಬಂಧಿಗಳು ಯಾರೆಂಬುದನ್ನು ಉಡುಗೊರೆ ಕೊಡುವ ಕಾರ್ಯಕ್ರಮವು ತಿಳಿಸಿಕೊಡುತ್ತದೆ. ಉಡುಗೊರೆ ನೀಡಿಕೆಯು ಕೇವಲ ಹಣಕಾಸಿನ ಪರಿಗಣನೆ ಮಾತ್ರವಲ್ಲದೆ, ಸಾಮಾಜಿಕ ಸಂಬಂಧದ ಸೂಚ್ಯಾರ್ಥಗಳನ್ನು ಒಳಗೊಂಡಿದೆ.

ವಿವಾಹಿತ ಮಹಿಳೆಯನ್ನು ಆಕೆಯ ಗಂಡನ ಮನೆಯಿರುವ ಊರಿಗೆ ಕಳುಹಿಸಿಕೊಡುವಾಗ ವ್ಯಕ್ತಪಡಿಸಲಾಗುವ ತೀವ್ರತರ ದುಃಖದ ಭಾವನೆಯು ಭಾರತದ ಸಾಮಾಜಿಕ ರಚನೆಯಲ್ಲಿ ಕಂಡುಬರುವ ಸಾಮಾನ್ಯ ಸಂಗತಿಯಾಗಿದೆ. ಆದರೆ ಲಂಬಾಣಿಗಳು ಯಾವುದೇ ಮುಚ್ಚುಮರೆಯಿಲ್ಲದೆ ಗಟ್ಟಿಯಾಗಿ ಗೋಳೋ ಎಂದು ಅಳುತ್ತ ಆಕ್ರಂದನ ಮಾಡುತ್ತಾರೆ. ಈ ಸಾಂಪ್ರದಾಯಿಕ ವಾಡಿಕೆಗೆ ಅವರ ಅಂದಿನ ಅಲೆಮಾರಿ ಜೀವನ ಮಾರ್ಗವೂ ಕಾರಣವಾಗಿತ್ತು ಎನ್ನಬಹುದು. ಅಲೆಮಾರಿ ಜೀವನದ ವ್ಯವಸ್ಥೆಯಲ್ಲಿ ವಿವಾಹ ಮಾಡಿಕೊಟ್ಟ ಮಗಳನ್ನು ಪುನಃ ಭೇಟಿಯಾಗಲಾರದ ಸನ್ನಿವೇಶಗಳೇ ಅಧಿಕವಾಗಿರುತ್ತಿದ್ದವು. ಇತರ ಜಾತಿಗಳಲ್ಲಿ ಇರುವ ರೂಢಿಯಂತೆ ಲಂಬಾಣಿ ವಧು, ತನ್ನ ತಂದೆ - ತಾಯಿ ಮನೆಗೆ ಮಹತ್ವದ ಧಾರ್ಮಿಕ ಆಚರಣೆಗಳಲ್ಲಿ ಪಾಲುಗೊಳ್ಳಲು ಆಗಾಗ್ಗೆ ಬಂದು ಹೋಗುವ ರೂಢಿ ಇರಲಿಲ್ಲ. ಅವರು ಅಲೆಮಾರಿಗಳಾಗಿದ್ದರಿಂದ ಇದು ಸಂಭವನೀಯವೂ ಆಗಿರಲಿಲ್ಲ. ಹೀಗಾಗಿ ವಿವಾಹಿತ ಮಹಿಳೆಯರು ತಮ್ಮ ತವರು ಮನೆಗೆ ಪುನಃ ಭೇಟಿಕೊಡುವ ಸಾಧ್ಯತೆಗಳು ಅಲೆಮಾರಿ ಜೀವನದಲ್ಲಿ ಇಲ್ಲವಾಗಿದ್ದರಿಂದ ಆಗ ಹುಟ್ಟಿಕೊಂಡಿದ್ದ ಸಂಪ್ರದಾಯವು ಬದಲಾದ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿಯೂ ಸ್ವಲ್ಪಮಟ್ಟಿಗೆ ಮುಂದುವರೆದಿದೆ.

ಲಂಬಾಣಿಗಳು ತಮ್ಮ ಸೊಸೆಯಂದಿರನ್ನು ಅವರ ತವರು ಮನೆಗಳಿಗೆ ಕಳುಹಿಸುವುದು ತೀರ ಅಪರೂಪವಾಗಿದೆ. ಲಂಬಾಣೇತರ ಜಾತಿಗಳ ಜನರಲ್ಲಿ ಸಂಪ್ರದಾಯದ ಪ್ರಕಾರ ಮೊದಲ ಮಗುವಿನ ಹೆರಿಗೆಯು ತಾಯಿಯ ಮನೆಯಲ್ಲಿ ಆಗುತ್ತದೆ. ಆದರೆ ಲಂಬಾಣಿಗಳಲ್ಲಿ ಹಾಗಿಲ್ಲ. ಮೊದಲ ಮಗುವಿನ ಹೆರಿಗೆಯು ಗಂಡನ ಮನೆಯಲ್ಲಿಯೇ ಆಗುತ್ತದೆ. ಹೆರಿಗೆಯ ನಂತರ ಮಗುವನ್ನು ತೋರಿಸಲು ಲಂಬಾಣಿ ಮಹಿಳೆ ತನ್ನ ತವರು ಮನೆಗೆ ಹೋಗುತ್ತಾಳೆ. ಆಗ ತಾಯಿ ಮತ್ತು ಮಗುವಿಗೆ ಹೊಸ ಬಟ್ಟೆಗಳನ್ನು ಮತ್ತು ಆಭರಣಗಳನ್ನು ಉಡುಗೊರೆಯಾಗಿ ನೀಡಲಾಗುತ್ತದೆ.

ಬಹು ದೀರ್ಘ ಸಮಯದ ನಂತರ ಮಹಿಳೆಯರು ಆಕಸ್ಮಿಕವಾಗಿ ಭೇಟಿಯಾದರೆ ಲಂಬಾಣಿಗಳು ದೊಡ್ಡ ಧ್ವನಿಯಿಂದ ಅಳಲು ತೊಡಗುತ್ತಾರೆ. ದಾರಿಯಲ್ಲಿ ಭೇಟಿಯಾದರೂ ಅಷ್ಟೇ, ಮಾರುಕಟ್ಟೆಯಲ್ಲಿ ಭೇಟಿಯಾದರೂ ಅಷ್ಟೇ. ಆಕಸ್ಮಿಕ ಭೇಟಿಯ ಇಂತಹ ಸಂದರ್ಭಗಳಲ್ಲಿ ಲಂಬಾಣಿಗಳು ಸಾಂಪ್ರದಾಯಿಕ ಅಳುವಿಕೆಯನ್ನು 'ಪುನರ್ಮಿಲನದ ವಿಧಿ' ಎಂದು ಕರೆಯಬಹುದು.

ವಿವಾಹಪೂರ್ವದಲ್ಲಿ ಕೆಲವು ವಾರಗಳವರೆಗೆ ಹಾಗೂ ನಂತರದಲ್ಲಿ ಒಂದು ವರ್ಷದವರೆಗೆ ವಿಧಿಬದ್ಧ ಭೇಟಿಗಳ ಅನ್ಯೋನ್ಯ, ಉಡುಗೊರೆಯ ವಿನಿಮಯಗಳು ಮತ್ತು ಸಮಾರಂಭಗಳು ವಾತ್ಸಲ್ಯದ ಬಂಧನವನ್ನು ಗಟ್ಟಿಗೊಳಿಸುತ್ತವೆ. ಹೀಗೆ ರೂಪುಗೊಂಡ ಬಾಂಧವ್ಯಗಳನ್ನು ಮನೆತನಗಳ ನಡುವಿನ ಇತರ ಬಾಂಧವ್ಯಗಳಿಗಿಂತ (ಅತ್ಯಂತ ಸಮೀಪದ ಒಳಬಾಂಧವ್ಯಗಳನ್ನು ಹೊರತುಪಡಿಸಿ) ಮಹತ್ವದ್ದೆಂದು ಪರಿಗಣಿಸಲಾಗುತ್ತದೆ. ಆಹಾರ ಹಾಗೂ ತಿಂಡಿತಿನಿಸುಗಳ ರೂಪದ ಕಾಣಿಕೆಗಳನ್ನು ವಿವಾಹ ಸಂಬಂಧ ಮಾಡಿದ ಮನೆತನಗಳ ಸದಸ್ಯರು ಮಾತ್ರವಲ್ಲದೇ, ಸಮೀಪದ ಸಂಬಂಧಿಗಳು ಹಾಗೂ ನೆರೆಹೊರೆಯವರೊಡನೆ ಕೂಡ ಹಂಚಿಕೊಳ್ಳಲಾಗುತ್ತದೆ. ಕೆಲವು ಸಲ ಒಂದು ಬಾರಿ ನಿಗದಿಪಡಿಸಲಾದ ನಂಟಸ್ತಿಕೆಯನ್ನು ಇನ್ನಷ್ಟು ಗಟ್ಟಿಗೊಳಿಸುತ್ತದೆ. ಒಂದು ವಿವಾಹವು ಯಶಸ್ವಿಯಾದರೆ ಇನ್ನೊಂದು ಜೋಡಿಯನ್ನು ಹೊಂದಿಸಲಾಗುತ್ತದೆ. ಆ ಎರಡು ಮನೆತನಗಳಲ್ಲಿ ಕನ್ಯೆಯರನ್ನು ಎದುರುಬದುರಾಗಿ ವಿನಿಮಯಮಾಡಿಕೊಳ್ಳಲಾಗುತ್ತದೆ. ಒಂದೇ ಗೋತ್ರ ಸಂಬಂಧಿಕರು ಮಾತ್ರವೇ ಅಲ್ಲದೆ ಒಳಬಾಂಧವ್ಯ ಬಂಧುತ್ವ ಮನೆತನಗಳಲ್ಲಿ ಕನ್ಯೆಯರನ್ನು ಆಯ್ಕೆ ಮಾಡುವುದಕ್ಕೆ ಈ ಸನ್ನಿವೇಶಗಳು ಚಾಲನೆ ನೀಡುತ್ತವೆ. ಲಂಬಾಣಿಗಳ ಬಾಂಧವ್ಯ ವ್ಯವಸ್ಥೆಯಲ್ಲಿ ಬಂಧುತ್ವ ಸಂಬಂಧಗಳ ಎರಡಾವರ್ತಿ ಹಾಗೂ ಮರು ಎರಡಾವರ್ತಿ ಸಂಬಂಧಗಳನ್ನು ಬೆಸೆಯುತ್ತವೆ. ಈ ವ್ಯವಸ್ಥೆಯೂ ನಂಟಸ್ತಿಕೆಯನ್ನು ಗಾಢವಾಗಿಸುವ ಸಾಧನವಾಗಿದ್ದು ಒಳಬಾಂಧವ್ಯ

ಬಂಧುತ್ವ ಸಂಬಂಧದ ನೆಂಟಸ್ತಿಕೆಗಳಷ್ಟೇ ಸಮಾನ ಮಹತ್ವವನ್ನು ಪಡೆದಿದೆ. ಹಿಂದೆ ಒಳಬಾಂಧವ್ಯ ನಂಟಸ್ತಿಕೆಗೆ ಹೆಚ್ಚು ಒತ್ತು ಕೊಡಲಾಗುತ್ತಿತ್ತು. ಇಂದು ಒಳಬಾಂಧವ್ಯ ಹಾಗೂ ಹೊರಬಾಂಧವ್ಯ ಸಂಬಂಧಗಳು ಸಮಾನ ಮಹತ್ವ ಪಡೆದುಕೊಂಡಿವೆ. ಇದು ಒಳಬಾಂಧವ್ಯದ ಸಂಬಂಧದ ಬಲೆಯನ್ನು ವಿಸ್ತರಿಸಲು ಅನುವು ಮಾಡಿಕೊಟ್ಟಿದೆ. ಲಂಬಾಣಿಗಳು ಪರಸ್ಥಳಗಳಿಗೆ ಹೋದಾಗ ವಂಶಪಾರಂಪರಿಕ ಬಾಂಧವ್ಯಗಳು ನಂಟಸ್ತಿಕೆಯ ಆತಿಥ್ಯದ ರೂಪದಲ್ಲಿ ಉಚಿತ ಊಟ, ವಸತಿಯ ಸೌಕರ್ಯಗಳನ್ನು ಒದಗಿಸುತ್ತವೆ.

ಕೋಷ್ಟಕ ೩.೩ ಮರಿಯಮ್ಮನಹಳ್ಳಿ ಹಾಗೂ ನಾಗಲಾಪುರ ತಾಂಡದ ಲಂಬಾಣಿಗಳ ವೈವಾಹಿಕ ಅಂತಸ್ತಿನ ವಿವರಗಳನ್ನು ಸಾದರಪಡಿಸುತ್ತದೆ. ಅಲೆಮಾರಿ ಜೀವನದ ಹಂತದಲ್ಲಿಯೂ ಲಂಬಾಣಿಗಳು ಬಾಲ್ಯವಿವಾಹವನ್ನು ಪ್ರೋತ್ಸಾಹಿಸಿರಲಿಲ್ಲ ಎಂಬುದು ಇಲ್ಲಿ ತಿಳಿದುಬರುತ್ತದೆ. ಈಗಲೂ ಕೂಡ ಲಂಬಾಣಿಗಳು ಬಾಲ್ಯವಿವಾಹವನ್ನು ಪ್ರೋತ್ಸಾಹಿಸುವುದಿಲ್ಲ. ಉದಾಹರಣೆಗೆ, ಎರಡೂ ತಾಂಡಗಳಲ್ಲಿ ೧೪ಕ್ಕಿಂತ ಕಡಿಮೆ ಪ್ರಾಯದ ಹುಡುಗಿ ಹಾಗೂ ೧೮ಕ್ಕಿಂತ ಕಡಿಮೆ ಪ್ರಾಯದ ಹುಡುಗ ವಿವಾಹವಾದ ನಿದರ್ಶನಗಳಿಲ್ಲ. ಬಾಲ್ಯವಿವಾಹವನ್ನು ಕಾನೂನು ನಿಷೇಧಿಸಿದ್ದರೂ ಈ ಪ್ರದೇಶದಲ್ಲಿಯ ಇತರ ಹಿಂದೂ ಕೃಷಿಕರಲ್ಲಿ ಬಾಲ್ಯವಿವಾಹ ರೂಢಿಯಲ್ಲಿರುವ ಹಿನ್ನೆಲೆಯಲ್ಲಿ ಲಂಬಾಣಿಗಳಲ್ಲಿ ಬಾಲ್ಯ ವಿವಾಹದ ರೂಢಿ ಇಲ್ಲದಿರುವುದು ಗಮನಾರ್ಹ ಸಂಗತಿ.[೭]

ವಿವಾಹದ ಸೂಕ್ತ ವಯಸ್ಸನ್ನು ತಲುಪಿದ ನಂತರವೇ ಬಹುಪಾಲು ಹುಡುಗಿಯರು ಮದುವೆಯಾಗಿದ್ದಾರೆ ಎಂಬುದನ್ನು ಕೋಷ್ಟಕ ೩.೩ ತೋರಿಸುತ್ತದೆ. ಸೂಕ್ತವಯಸ್ಸಿನ ನಂತರದಲ್ಲಿಯೂ ವಿವಾಹವಾಗದೇ ಉಳಿದ (ನಾಲ್ವರು ಮರಿಯಮ್ಮನಹಳ್ಳಿ ತಾಂಡದಲ್ಲಿ ಮತ್ತು ಎಂಟು ಹುಡುಗಿಯರು ನಾಗಲಾಪುರ ತಾಂಡದಲ್ಲಿದ್ದಾರೆ) ಹುಡುಗಿಯರ ಸಂಖ್ಯೆ ಕೇವಲ ೧೨. ಅವರಿಗಿಂತ ಹೆಚ್ಚಿನ ವಯೋಗುಂಪಿನ ಕನ್ಯೆಯರು ವಿವಾಹವಾಗಿದ್ದರಿಂದ ಅವರೆಲ್ಲರೂ ವಿವಾಹವಾಗುವುದು ನಿಶ್ಚಿತ ಎಂಬುದು ಸ್ವಾಭಾವಿಕ ಸಂಗತಿ. ಬಹುತೇಕ ಯುವಕರು ೨೦-೩೪ ವರ್ಷ ಪ್ರಾಯದೊಳಗೆ ವಿವಾಹವಾಗುತ್ತಾರೆ. ೨೫ - ೩೪ರ ವಯೋಗುಂಪಿನಲ್ಲಿ ವಿವಾಹವಾಗದೇ ಇರುವ ಯುವಕರ ಸಂಖ್ಯೆ ಕೇವಲ ೬ ಇದೆ (ಮರಿಯಮ್ಮನಹಳ್ಳಿ ತಾಂಡದಲ್ಲಿ ೪ ಯುವಕರು ಹಾಗೂ ನಾಗಲಾಪುರ ತಾಂಡದಲ್ಲಿ ೨ ಯುವಕರು). ಅವರು ಮದುವೆ ಮಾಡಿಕೊಳ್ಳಲು ಉತ್ಸುಕರಾಗಿದ್ದಾರೆ. ಆದರೆ ವಿವಾಹ ವೆಚ್ಚಕ್ಕಾಗಿ ಹಣಕಾಸಿನ ತೊಂದರೆಯಿಂದ ವಿವಾಹ ಮಾಡಿಕೊಳ್ಳದೇ ಇದ್ದರೆ ವಿನಹ ಕನ್ಯೆಯರ ಕೊರತೆಯಿಂದಾಗಿ ಅಲ್ಲ ಅಥವಾ ಕೀಳು ಸಾಮಾಜಿಕ ಅಂತಸ್ತಿನ ಕಾರಣಕ್ಕಾಗಿಯೂ ಅಲ್ಲ. ಪುರುಷನು ವಿವಾಹವಾಗಬೇಕು ಹಾಗೂ ಸಂತಾನವನ್ನು ಪಡೆಯಬೇಕು ಅಂದಾಗಲೇ ಆ ವ್ಯಕ್ತಿ ಸ್ವಸ್ಥ ವ್ಯಕ್ತಿ ಎಂದು ಲಂಬಾಣಿಗಳು ಸಾಂಪ್ರದಾಯಿಕವಾಗಿ ಪರಿಗಣಿಸುತ್ತಾರೆ. ಅದಕ್ಕಿರುವ ಒಂದೇ ಅಪವಾದವೆಂದರೆ ನಾಗಲಾಪುರ ತಾಂಡದಲ್ಲಿ ವಿವಾಹವಾಗದೇ ಉಳಿದಿರುವ ಓರ್ವ ಕುಂಟ ಹಾಗೂ ಬಡವ್ಯಕ್ತಿ.

ವಿಚ್ಛೇದನಗಳು ಮತ್ತು ತ್ಯಜಿಸುವಿಕೆ ವಿವಾಹ ವಿಸರ್ಜನೆಯಲ್ಲಿಯ ಸಂಬಂಧಿತ ಹಂತಗಳಾಗಿವೆ.[೮] ತ್ಯಜಿಸುವಿಕೆಯ ಎಲ್ಲ ಪ್ರಕರಣಗಳೂ ವಿಚ್ಛೇದನದಲ್ಲಿ ಕೊನೆಗೊಳ್ಳುತ್ತವೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಪ್ರತ್ಯೇಕಗೊಂಡ ಪತಿ-ಪತ್ನಿಯರು ಪುನಃ ಒಂದುಗೂಡ ಬಹುದಾಗಿದೆ. ನಾಗಲಾಪುರ ತಾಂಡಕ್ಕೆ ಹೋಲಿಸಿದರೆ ಮರಿಯಮ್ಮನಹಳ್ಳಿ ತಾಂಡದಲ್ಲಿ ತ್ಯಜಿಸುವಿಕೆ ಅಥವಾ ವಿಚ್ಛೇದನಗಳು ಹೆಚ್ಚು

---

*೭. ೧೯೨೯ರ ಬಾಲ್ಯ ವಿವಾಹ ನಿಷೇಧ ಶಾಸನದನ್ವಯ (೧೯೩೮ ರಲ್ಲಿ ಮಾಡಲಾದ ತಿದ್ದುಪಡಿಯನ್ನೊಳಗೊಂಡಂತೆ) ೧೮ ವರ್ಷ ಪ್ರಾಯದೊಳಗಿನ ಗಂಡುಮಕ್ಕಳು ಹಾಗೂ ೧೮ ವರ್ಷ ಪ್ರಾಯದೊಳಗಿನ ಹೆಣ್ಣುಮಕ್ಕಳು "ಮೈನರ್" ಎಂದು ಪರಿಗಣಿಸಲಾದ್ದರಿಂದ ವಿವಾಹವಾಗಕೂಡದು.*

*೮. ತಾಂಡದಲ್ಲಿಯ ಓರ್ವ ವಧು (೧೯೭೧ರಲ್ಲಿ ೨೨ ವರ್ಷ ಪ್ರಾಯದವಳು) ಅದೇ ತಾಂಡದ ಎರಡನೆಯ ದೊಡ್ಡ ಶ್ರೀಮಂತ ಸೋದರನನ್ನು ಮದುವೆಯಾದಳು. ೧೯೮೧ರಲ್ಲಿಯೇ ಆಕೆಯ ಪತಿಯು ಆಕೆಯನ್ನು ತ್ಯಜಿಸಿದ್ದನು. ಆಕೆಯ ಜೀವನೋಪಾಯಕ್ಕಾಗಿ ಆಕೆಯ ಪತಿ ವರ್ಷಕ್ಕೆ ೪೩೬೦ರೂ. ಕೊಡಬೇಕೆಂದು ನ್ಯಾಯಾಲಯವು ಆದೇಶಿಸಿತ್ತು. ೧೯೯೯ ರವರೆಗೂ ಆಕೆಯ ಪತಿ ನ್ಯಾಯಾಲಯದ ಆದೇಶವನ್ನು ಪಾಲಿಸಿರಲಿಲ್ಲ. ೧೯೯೯ರವರೆಗೂ ವಿವಾಹ ಸಂಬಂಧವು ಮುರಿದುಬಿದ್ದಿಲ್ಲವೆಂಬುದು ಇದರ ಸೂಚ್ಯಾರ್ಥವಾಗುತ್ತದೆ.*

(ನಾಗಲಾಪುರ ತಾಂಡದಲ್ಲಿ ಇಂತಹ ೫ ಪ್ರಕರಣಗಳಿದ್ದರೆ ಮರಿಯಮ್ಮನಹಳ್ಳಿ ತಾಂಡದಲ್ಲಿ ೧೨ ಪ್ರಕರಣಗಳಿವೆ). ಮರಿಯಮ್ಮನಹಳ್ಳಿ ತಾಂಡವು ಸಮೀಪದ ಪಟ್ಟಣ ಸಂಪರ್ಕವನ್ನು ಹೊಂದಿದ್ದರಿಂದ ವೇಶ್ಯಾವೃತ್ತಿ ಬೆಳೆಯುತ್ತಿರುವುದು ಹಾಗೂ ಸಾಮಾಜಿಕ ನಿಯಂತ್ರಣ ಮೇಲಿನ ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿಯ ಹಿಡಿತ ದುರ್ಬಲವಾಗಿರುವುದು ಇದಕ್ಕೆ ಕಾರಣವಾಗಿದೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಪತಿ-ಪತ್ನಿಯರು ಪರಸ್ಪರರನ್ನು ತ್ಯಜಿಸುವಿಕೆಯ ಪ್ರಕರಣಗಳ ಸಂಖ್ಯೆ ೧೨ ಇದ್ದು ಅವುಗಳಲ್ಲಿ ೭ ಪುರುಷರು ಪತ್ನಿಯರನ್ನು ತ್ಯಜಿಸಿದ್ದರೆ, ೫ ಪತ್ನಿಯರು ತಮ್ಮ ಗಂಡಂದಿರನ್ನು ತ್ಯಜಿಸಿದವರಾಗಿದ್ದಾರೆ. ನಾಗಲಾಪುರ ತಾಂಡದಲ್ಲಿ ಕ್ರಮವಾಗಿ ೩ ಮತ್ತು ೨ ಪ್ರಕರಣಗಳಿವೆ. ತ್ಯಜಿಸಿದ ಕುಟುಂಬದಿಂದ ಜೀವನೋಪಾಯವನ್ನು ಪಡೆದುಕೊಳ್ಳುವ ಅಸಮರ್ಥತೆ [೯], ಹೆಂಡತಿಗೆ ವಿಶ್ವಾಸ ದ್ರೋಹ ಮಾಡುವುದು, ಮನೆಯಿಂದ ಬಹುಕಾಲ ದೂರವಿರುವುದು, ಹೆಂಡತಿಯನ್ನು ಹೊಡೆಯುವುದು, ಮನೆಯಲ್ಲಿ ಕಿರುಕುಳ ಕೊಡುವುದು, ವಿಶೇಷವಾಗಿ ಅತ್ತೆ ಸೊಸೆಯನ್ನು ಪೀಡಿಸುವುದು, ಪತಿ-ಪತ್ನಿಯರಲ್ಲಿ ಪರಸ್ಪರ ಅವಿಶ್ವಾಸ, ಅಪನಂಬಿಕೆ, ಬೇರೊಬ್ಬನೊಡನೆ ಹೆಂಡತಿ ಓಡಿ ಹೋಗುವುದು ಮತ್ತು ಅತೃಪ್ತ ಲೈಂಗಿಕ ಜೀವನ ಮೊದಲಾದ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳು ತ್ಯಜಿಸುವಿಕೆಗೆ ಅವಕಾಶಮಾಡಿಕೊಡುವ ಅಂಶಗಳಾಗಿವೆ ಎಂಬುದಾಗಿ ಅಲ್ಲಿನ ನಮ್ಮ ಮಾಹಿತಿದಾರರು ತಿಳಿಸುತ್ತಾರೆ.

ತ್ಯಜಿಸುವಿಕೆಯ ಪ್ರಕರಣಗಳಲ್ಲಿ ಹೆಚ್ಚಿನವು ವಿವಾಹ ವಿಚ್ಛೇದನಕ್ಕೆ ಪೂರಕವಾಗಿವೆ. ಸಾಂಪ್ರದಾಯಿಕ ಪಂಚಾಯಿತಿಯ ಔಪಚಾರಿಕ ಮನ್ನಣೆ ಅಥವಾ ಚರ್ಚೆಗೆ ಅವಕಾಶವಿಲ್ಲದೆ (ಪ್ರತಿಯಾಗಿ ವಾದಮಾಡಿದ್ದರೂ ಸಾರ್ಥಕವಿಲ್ಲದ್ದು) ತ್ಯಜಿಸುವಿಕೆಯ ಪ್ರಕರಣಗಳು ವಿಚ್ಛೇದನದಲ್ಲಿ ಪರ್ಯಾವಸಾನಗೊಳ್ಳುತ್ತವೆ. ಅವುಗಳಲ್ಲಿ ಕೆಲವು ಎರಡನೆ ವಿವಾಹಗಳಿಗೂ ಎಡೆಮಾಡಿಕೊಡುತ್ತವೆ. ಸಾಮಾನ್ಯವಾಗಿ ವಿಚ್ಛೇದನವು ತ್ಯಜಿಸುವಿಕೆಯ ನಂತರದ ಹಂತವಾಗಿದ್ದು, ತ್ಯಜಿಸುವಿಕೆಯ ಕಾರಣಗಳೇ ವಿಚ್ಛೇದನೆಗೆ ಕೊಡುವ ಸಮರ್ಥನೀಯ ಕಾರಣಗಳಾಗಿರುತ್ತವೆ. ಕೆಲವು ಪ್ರಕರಣಗಳಲ್ಲಿ ತ್ಯಜಿಸುವಿಕೆಯ ಘಟನೆ ನಡೆಯದೆ ನೇರವಾಗಿ ವಿಚ್ಛೇದನವೇ ಸಂಭವಿಸಬಹುದಾಗಿದೆ. ಅಧ್ಯಯನ ಕಾಲಕ್ಕೆ ವಿಚ್ಛೇದನೆಯ ೯ ಪ್ರಕರಣಗಳು ಸಂಶೋಧಕನ ಗಮನಕ್ಕೆ ಬಂದವು (ಮರಿಯಮ್ಮನಹಳ್ಳಿ ತಾಂಡದಲ್ಲಿ ೫ ಹಾಗೂ ನಾಗಲಾಪುರ ತಾಂಡದಲ್ಲಿ ೪), ತ್ಯಜಿಸುವಿಕೆ ಹಾಗೂ ವಿಚ್ಛೇದನ ಪ್ರಕರಣಗಳು ಲಂಬಾಣಿಗಳಲ್ಲಿ ಹೆಚ್ಚಾಗಿಯೇ ಇವೆ. ಏಕೆಂದರೆ, ವಿವಾಹಿತರೆಂದು ಲೆಕ್ಕಕ್ಕೆ ತೆಗೆದುಕೊಂಡ ಕೆಲವು ವ್ಯಕ್ತಿಗಳು ಎರಡನೆಯ ಅಥವಾ ಮೂರನೆಯ ಬಾರಿ ವಿವಾಹವಾದವರಾಗಿದ್ದರು. ಮೊದಲ ಹೆಂಡತಿಯ ಸಾವಿನ ನಂತರ, ಇಲ್ಲವೆ ತ್ಯಜಿಸುವಿಕೆ ಅಥವಾ ವಿಚ್ಛೇದನದ ನಂತರ ಅವರು ಮರುಮದುವೆಯಾಗಿದ್ದರು.

ವಿವಾಹಗಳು ಮುರಿದುಬೀಳಲು ಸಾಮಾಜಿಕ, ಆರ್ಥಿಕ ಹಾಗೂ ಮನೋ ವೈಜ್ಞಾನಿಕ ಅಂಶಗಳ ಪರಸ್ಪರ ಪ್ರಭಾವವಿದೆ. ವಾಸ್ತವವಾಗಿ ವ್ಯಕ್ತಿತ್ವದಲ್ಲಿ ರೂಢಿಸಿಕೊಳ್ಳಲಾಗದಿದ್ದರೂ ಪತಿ - ಪತ್ನಿಯರ ಸ್ಥಿರ ಸಮಾಗಮನವು ಲಂಬಾಣಿಗಳ ಜೀವನದಲ್ಲಿ ಒಂದು ಆದರ್ಶಮಾತ್ರವಾಗಿ ಉಳಿದುಕೊಂಡಿದೆ. ಈ ಆದರ್ಶವನ್ನು ಎತ್ತಿಹಿಡಿಯಲೆಂದೇ ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿಯು ಸಾಂಕೇತಿಕ ಕನ್ಯಾಶುಲ್ಕಕ್ಕಿಂತ ಪುನರ್‌ವಿವಾಹ ಹಾಗೂ ವಿಭಿನ್ನ ಬಗೆಗಳ ಒಟ್ಟಾಗಿರುವಿಕೆಯ ಮೇಲೆ ಹೆಚ್ಚಿನ ಮೊತ್ತವನ್ನು ವಿಧಿಸಿದೆ. ಅವಿವಾಹಿತ ಹುಡುಗಿಯೊಡನೆ ಓಡಿ ಹೋಗಿ ಅನಂತರದಲ್ಲಿ ಆಕೆಯನ್ನೇ ವಿವಾಹವಾದವನಿಗೆ ಸಾಮಾನ್ಯ, ಸಾಂಪ್ರದಾಯಿಕ ಕನ್ಯಾಶುಲ್ಕದೊಂದಿಗೆ ೧೫೦ರೂ.ಗಳ ದಂಡವನ್ನು ಪಂಚಾಯಿತಿ ವಿಧಿಸುತ್ತದೆ (ಕೆಲವು ಸಂದರ್ಭಗಳಲ್ಲಿ ಅತನೊಡನೆ ಓಡಿ ಹೋದ ಹುಡುಗಿಯಿಂದಲೂ ೬೦ರೂ. ದಂಡ

---

೯. *ಮರಿಯಮ್ಮನಹಳ್ಳಿಯ ಒಬ್ಬ ಲಂಬಾಣಿ ಪುರುಷನು ಮೂವರು ಪತ್ನಿಯರು (ಒಬ್ಬರ ನಂತರದಲ್ಲೊಬ್ಬರಂತೆ) ವಿವಾಹವಾಗಿದ್ದರು ಮತ್ತು ತ್ಯಜಿಸಿದ್ದರು. ಅವರನ್ನು ಪೋಷಿಸಲು ಆತನು ಅಸಮರ್ಥನಾದುದೇ ತ್ಯಜಿಸುವಿಕೆಗೆ ಕಾರಣವಾಗಿತ್ತು.*

ವಸೂಲು ಮಾಡಲಾಗುತ್ತದೆ). ಪತ್ನಿಯನ್ನು ತ್ಯಜಿಸಿದ ವ್ಯಕ್ತಿ ಅಥವಾ ಪತ್ನಿಯಿಂದ ವಿಚ್ಛೇದನೆ ಪಡೆದ ವ್ಯಕ್ತಿ ಪುನರ್‌ವಿವಾಹವಾಗುವುದಾದರೆ ಆತನು ಆಕೆಯ ಕುಟುಂಬಕ್ಕೆ ರೂ. ೩೦೦ ಪರಿಹಾರ ಧನ ಕೊಡಬೇಕಾಗುತ್ತದೆ. ಅದಲ್ಲದೇ ಪಂಚಾಯಿತಿಗೆ ದಂಡವನ್ನು ತೆರಬೇಕಾಗುತ್ತದೆ (ನಾಗಲಾಪುರ ತಾಂಡದಲ್ಲಿ ಸಾಂಪ್ರದಾಯಿಕವಾಗಿ ಈ ದಂಡದ ಮೊತ್ತ ೨೦ರೂ.ಗಳಿದ್ದರೆ, ಮರಿಯಮ್ಮನಹಳ್ಳಿ ತಾಂಡದಲ್ಲಿ ೬೦ರೂ.ಗಳಷ್ಟು ಇದೆ). ವಿಧುರ ಅಥವಾ ವಿಚ್ಛೇದಿತನು ಲಂಬಾಣಿ ಸಮಾಜದಲ್ಲಿ ಕೆಳಸ್ತರದ ಸಾಮಾಜಿಕ ಅಂತಸ್ತನ್ನು ಹೊಂದಿದ್ದನೆಂಬುದನ್ನು ಸೂಚಿಸಲು, ಅಂತಹ ವ್ಯಕ್ತಿಯು ಅವಿವಾಹಿತ ಹುಡುಗಿಯನ್ನು ವಿವಾಹವಾಗುವುದಾದರೆ ಅತಿ ಹೆಚ್ಚಿನ ಮೊತ್ತದ ಕನ್ಯಾಶುಲ್ಕ (ಅಂದರೆ ರೂ. ೨೫೦ಗಳ) ವನ್ನು ವಿಧಿಸಲಾಗುತ್ತದೆ.

ಸಮಾಜವು ಹೆಚ್ಚಿನ ಆರ್ಥಿಕ ಹೊರೆಯನ್ನು ವಿಧಿಸುವ ಮೂಲಕ ಇಂತಹ ವಿವಾಹಗಳನ್ನು ಗೌಣವಾಗಿ ಕಂಡರೂ ಸಮಾಜದಲ್ಲಿಯ ತುರ್ತು ಅಗತ್ಯಗಳನ್ನು ಪೂರೈಸಲು ಇಂತಹ ಪುನರ್‌ವಿವಾಹಗಳು ಅನಿವಾರ್ಯವಾಗುತ್ತವೆ. ಪುನರ್‌ವಿವಾಹಗಳ ಸಾಮಾಜಿಕ ಪರಿಣಾಮಗಳನ್ನು ಹೀಗೆ ವಿವರಿಸಬಹುದು : ಎರಡನೆ ವಿವಾಹವಾದ ಮಹಿಳೆಯರ ಸಾಮಾಜಿಕ ಸ್ಥಾನವು ಇತರ ವಿವಾಹಿತ ಮಹಿಳೆಯರಿಗಿಂತ ಕೊಂಚ ಗೌಣವಾಗಿರುತ್ತದೆ. ಶುಭ ಸಮಾರಂಭಗಳಲ್ಲಿ ಇತರ ವಿವಾಹಿತ ಮಹಿಳೆಯರಿಗೆ ನೀಡಲಾಗುವ ಗೌರವವು ಎರಡನೆ ವಿವಾಹವಾದ ಮಹಿಳೆಯರಿಗೆ ಸಿಕ್ಕುವುದಿಲ್ಲ. ಆದರೂ ಎರಡನೆ ವಿವಾಹ ಸಂಬಂಧದಿಂದ ಜನಿಸುವ ಮಕ್ಕಳಿಗೆ ಸಮಾಜದ ಸಂಪೂರ್ಣ ಮನ್ನಣೆ ಲಭಿಸುತ್ತದೆ. ತ್ಯಜಿಸಲ್ಪಟ್ಟವರು, ವಿಚ್ಛೇದಿತರು ಅಥವಾ ವಿಧವೆಯರ ವಿಚಾರದಲ್ಲಿ ವಿವಾಹಪೂರ್ವ ಹಾಗೂ ಅಕ್ರಮ ಲೈಂಗಿಕ ಸಂಬಂಧಗಳಿಂದ ಜನಿಸಿದ ಮಕ್ಕಳನ್ನು 'ಹಾದರಸಂತಾನ' ಎಂದು ಲಂಬಾಣಿಗಳು ಪರಿಗಣಿಸುತ್ತಾರೆ. ಅಂತಹ ಮಕ್ಕಳಿಗೆ ಸಮಾಜದಲ್ಲಿ ಯಾವುದೇ ಸ್ಥಾನವಿರುವುದಿಲ್ಲ. ವಿವಾಹ ಸಂಬಂಧಗಳ ಮುರಿದು ಬೀಳುವಿಕೆ ಹಾಗೂ ಹೊಸ ಸಂಬಂಧಗಳು ರೂಪುಗೊಳ್ಳುವಲ್ಲಿ ಕಾರಣವಾದ ಅಂಶಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುವುದಕ್ಕೋಸ್ಕರ ನಾಗಲಾಪುರ ತಾಂಡದಲ್ಲಿಯ ಒಂದು ಕೇಸ್ ಸ್ಟಡಿ ಅಧ್ಯಯನವನ್ನು ಈ ಕೆಳಗೆ ಸಾದರಪಡಿಸಲಾಗಿದೆ.

'ಸಿ' ಎಂಬಾಕೆ (೧೯೯೮ರಲ್ಲಿ ೨೮ ವರ್ಷ ಪ್ರಾಯದವಳಾಗಿದ್ದಳು) ೧೯೯೫ರಲ್ಲಿ ಸ್ಥಳೀಯ ಲಂಬಾಣಿಯನ್ನು ವಿವಾಹವಾಗಿದ್ದಳು. ಆಕೆ ಆತನನ್ನು ತ್ಯಜಿಸಿ ಹೊಸಪೇಟೆಯಲ್ಲಿಯ ಲಂಬಾಣೇತರ ವ್ಯಕ್ತಿಯೋರ್ವನ ಜೊತೆ ಅನೈತಿಕ ಲೈಂಗಿಕ ಸಂಬಂಧವನ್ನು ಹೊಂದಿದಳು. ಆದಕಾರಣ, ಆಕೆಯ ಪತಿ ಆಕೆಯಿಂದ ವಿಚ್ಛೇದನ ಪಡೆದನು. ಪಟ್ಟಣದವರ ಸಂಪರ್ಕದಿಂದ ಆಕೆ ಗರ್ಭವತಿಯಾದಾಗ ತನ್ನ ಗರ್ಭವನ್ನು ಸಮ್ಮತಗೊಳಿಸಲು ತನ್ನನ್ನು ವಿವಾಹವಾಗಲು ಲಂಬಾಣಿ ಪುರುಷನನ್ನು ಒಪ್ಪಿಸಿದಳು. ಲಂಬಾಣೇತರರಿಗೆ ಜನಿಸಿದ ಮಗುವನ್ನು ಲಂಬಾಣಿಗಳು ತಮ್ಮ ಸಮುದಾಯದಲ್ಲಿ ಸೇರಿಸಿಕೊಳ್ಳುವುದಿಲ್ಲ. 'ಸಿ' ಯ ಹಿರಿಯ ಸಹೋದರಿಯ ಗಂಡ 'ಲ' ಎಂಬ ಮರಿಯಮ್ಮನಹಳ್ಳಿ ಲಂಬಾಣಿ ನಾಗಲಾಪುರ ತಾಂಡದಲ್ಲಿ ಹೆಂಡತಿಯ ಮನೆಯಲ್ಲಿ ವಾಸಿಸುತ್ತಿದ್ದನು. 'ಸಿ'ಯನ್ನು ಮದುವೆಯಾಗಿ ಎರಡನೆಯ ಹೆಂಡತಿಯನ್ನಾಗಿ ಸ್ವೀಕರಿಸಬೇಕೆಂದು ಆತನನ್ನು ಪುಸಲಾಯಿಸಲಾಯಿತು. ಹಾಗೆ ಮಾಡುವುದರಿಂದ 'ಸಿ'ಯ ಸಂತಾನವು ಲಂಬಾಣಿ ಪಿತೃತ್ವದ ಅಂತಸ್ತನ್ನು ಪಡೆಯಲು ಸಾಧ್ಯವಿದ್ದಿತು. ಸಾಮಾನ್ಯವಾಗಿ ವಿಧಿಸಲಾದ ದಂಡವನ್ನು ನೀಡಿ ಎರಡನೆಯ ವಿವಾಹವನ್ನು ನೆರವೇರಿಸಲಾಯಿತು. ಆ ಬಳಿಕವೂ 'ಸಿ' ಪಟ್ಟಣದ ವ್ಯಕ್ತಿಯೊಂದಿಗೆ ತನ್ನ ಲೈಂಗಿಕ ಸಂಬಂಧಗಳನ್ನು ಮುಂದುವರೆಸಿದಳು. ಅಷ್ಟೇ ಅಲ್ಲ, ಆತನನ್ನು ತಾಂಡಕ್ಕೆ ಕರೆದುಕೊಂಡು ಬರಲಾರಂಭಿಸಿದಳು. 'ಲ' ನಿಗೆ ಇದರಿಂದ ನಾಚಿಕೆಯೆನಿಸತೊಡಗಿತು. ಆತನು ತನ್ನ ಇಬ್ಬರು ಪತ್ನಿಯರನ್ನು ತ್ಯಜಿಸಿ ಮರಿಯಮ್ಮನಹಳ್ಳಿ ತಾಂಡಕ್ಕೆ ಮರಳಿದನು. 'ಸಿ'ಯು ಇಬ್ಬರು ಪುತ್ರರಿಗೆ (೫ ಮತ್ತು ೨ ವರ್ಷಗಳು) ಜನ್ಮವಿತ್ತಿದ್ದಾಳೆ. ಲಂಬಾಣಿ ಸಮುದಾಯವು

ಆ ಮಕ್ಕಳನ್ನು ಹಾದರದ ಸಂತಾನ ಎಂದು ಪರಿಗಣಿಸುತ್ತಿದೆ. ಈ ಮಕ್ಕಳು ಮಾತ್ರವೇ ದುರ್ದೈವಿಗಳಾಗಿಲ್ಲ ಇನ್ನೂ ಇಂತಹ ಕೆಲವು ಮಕ್ಕಳಿವೆ. ವಿವಾಹದ ನಿಯಮಾವಳಿಗಳನ್ನು ರಾಜಾರೋಷವಾಗಿ ಉಲ್ಲಂಘಿಸುವವರನ್ನು ಶಿಕ್ಷಿಸುವಲ್ಲಿ ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿಯು ಅಸಮರ್ಥವಾಗಿದೆ. ನೈತಿಕತೆ ಹಾಗೂ ಯುಕ್ತಾಯುಕ್ತತೆಯ ಪರಿಗಣನೆಗಳಿಗಿಂತ ಆರ್ಥಿಕ ಆಕರ್ಷಣೆಗಳು ಈ ಬಡ ಸಮುದಾಯದಲ್ಲಿ ಪ್ರಬಲವಾಗಿವೆ.

ವೈವಾಹಿಕ ಬಂಧನದ ಮುಕ್ತಾಯಕ್ಕೆ ವೈಧವ್ಯವು ನೈಸರ್ಗಿಕ ಹಾಗೂ ಸಹಜ ಕಾರಣವೆಂಬುದು ತಿಳಿಯುತ್ತದೆ. ಮರಿಯಮ್ಮನಹಳ್ಳಿ ನಾಗಲಾಪುರ ಎರಡೂ ತಾಂಡಗಳಲ್ಲಿ ವಿಧವೆಯರ ಸಂಖ್ಯೆಯು ವಿಧುರರ ಸಂಖ್ಯೆಗಿಂತ ತೀರ ಅಧಿಕವಾಗಿದೆ (ಕೋಷ್ಟಕ ೩.೩ ನೋಡಿರಿ). ಸ್ತ್ರೀ ಮತ್ತು ಪುರುಷರ ಸಾವಿನ ಪ್ರಮಾಣಗಳಲ್ಲಿಯ ವ್ಯತ್ಯಾಸವೂ ಇದಕ್ಕೆ ಕಾರಣವಾಗಿದೆ. ಮಹಿಳೆಗಿಂತ ಪುರುಷರು ಮೊದಲು ಸಾಯುವುದು ಹೆಚ್ಚಾಗಿರುವ ಸಂಗತಿಯಾಗಿದ್ದು, ವೃದ್ಧಾಪ್ಯ ಮತ್ತು ಸಾವನ್ನು ಕುರಿತ ಅನೇಕ ಅಧ್ಯಯನಗಳಲ್ಲಿ ಉಲ್ಲೇಖಿಸಿದಂತೆ, ಅದಕ್ಕೆ ಜೈವಿಕ ಹಾಗೂ ತಳಿಶಾಸ್ತ್ರದ ಅನೇಕ ಕಾರಣಗಳಿವೆ.

ವಿಧವೆಯು 'ಮಗು ಹೆರುವ' ವಯಸ್ಸಿನವಳಾಗಿದ್ದರೆ ಹಾಗೂ ಆಕೆಗೆ ಮೊದಲ ಪತಿಯಿಂದ ಸಂತಾನವಿಲ್ಲದಿದ್ದರೆ ಮರುಮದುವೆಗೆ ಅನುಮತಿ ನೀಡಲಾಗುತ್ತಿತ್ತು. ಆಕೆ ಋತುಸ್ರಾವವಾಗದ ಸ್ಥಿತಿಯನ್ನು ತಲುಪಿದ್ದರೆ ಆಕೆ ಸಾಮಾನ್ಯವಾಗಿ ವಿವಾಹವಾಗಬಯಸುವುದಿಲ್ಲ. ಆಕೆ ತೀರಿ ಹೋದ ಪತಿಯ ಕುಟುಂಬದಲ್ಲಿಯೇ ಉಳಿದುಕೊಳ್ಳುತ್ತಾಳೆ. ಕೆಲವು ಸಂದರ್ಭದಲ್ಲಿ ಆಕೆಯ ತವರು ಮನೆಯವರು ಬರಮಾಡಿಕೊಳ್ಳುತ್ತಾರೆ. ಲಂಬಾಣಿ ಸಂಪ್ರದಾಯದ ಪ್ರಕಾರ ಹಾಗೂ ಅವಿಭಕ್ತ ಕುಟುಂಬದ ನಿರ್ವಹಣೆಯ ನಿಯಮಗಳನ್ವಯ ಆಕೆಗೆ ತೀರಿ ಹೋದ ಪತಿಯ ಕುಟುಂಬದಲ್ಲಿ ಸಾವಿನವರೆಗೂ ಜೀವಿಸುವ ಹಕ್ಕು ಇದೆ.

ವಿವಾಹದ ಎಲ್ಲ ಬಗೆಗಳಲ್ಲಿಯೂ ಮಕ್ಕಳು ಪಿತೃವಂಶೀಯ ಕುಟುಂಬಕ್ಕೆ ಸೇರುವುದರಿಂದ ಪತಿಯ ಕುಟುಂಬಕ್ಕೆ ಸೇರುತ್ತಾರೆ. ವಿಶೇಷ ಸನ್ನಿವೇಶಗಳಲ್ಲಿ ಅಂದರೆ ಮಗುವು ಬಹು ಕಡಿಮೆ ವಯಸ್ಸಿನದ್ದಾಗಿದ್ದರೆ ತೀರ ಮೈನರ್ ಆಗಿದ್ದರೆ, ಅದನ್ನು ಪೋಷಿಸಲು ತಾಯಿಯು ಕರೆದುಕೊಂಡು ಹೋಗುತ್ತಾಳೆ. ಆದರೆ ಅನಂತರದಲ್ಲಿ ಅವನು ಅಥವಾ ಅವಳು ಸೂಕ್ತವಯಸ್ಸಿಗೆ ಬಂದನಂತರ ತಂದೆಯ ಮನೆಗೆ ಮರಳುತ್ತಾನೆ/ಳೆ.

ವಿಧವೆಯರು (ವಿಚ್ಛೇದನೆ ಪಡೆದ ಮಹಿಳೆಯರು ಹಾಗೂ ತ್ಯಜಿಸಲ್ಪಟ್ಟ ಪತ್ನಿಯರು ಕೂಡ) ತಮ್ಮ ದುಡಿಮೆಯಿಂದ ಕುಟುಂಬದ ಆದಾಯವನ್ನು ಹೆಚ್ಚಿಸಬಹುದಾಗಿದ್ದರೂ ಆ ಕುಟುಂಬದ ದುಡಿಮೆಗಾರನ ಅನುಪಸ್ಥಿತಿಯಿಂದಾಗಿ, ವೈಧವ್ಯ, ತ್ಯಜಿಸುವಿಕೆ ಮತ್ತು ವಿಚ್ಛೇದನಗಳನ್ನು ದುರ್ದೈವಿ ಘಟನೆಗಳೆಂದು ಬಾವಿಸಲಾಗುತ್ತದೆ. ವಿಧವೆ ಮತ್ತು ಆಕೆಯ ಮಕ್ಕಳನ್ನು ಯಾವುದೇ ಕುಟುಂಬವು ತೆಗೆದುಕೊಂಡರೂ ಆರ್ಥಿಕ ಹೊರೆಯಂತೂ ಬೀಳುತ್ತದೆ. ತ್ಯಜಿಸುವಿಕೆ ಅಥವಾ ವಿಚ್ಛೇದನ ಮಹಿಳೆಯ ತವರುಮನೆಯ ಅಂತಸ್ತನ್ನು ಕುಗ್ಗಿಸುತ್ತದೆ. ಅಂತಹ ಕುಟುಂಬಗಳಲ್ಲಿ ಮುಂದೆ ನಡೆಯುವ ವಿವಾಹ ಕಾರ್ಯಗಳಿಗೆ ತೊಂದರೆ - ಅಡೆ ತಡೆಗಳು ಆಗುತ್ತವೆ ಎಂಬ ಸಾಂಪ್ರದಾಯಿಕ ನಂಬಿಕೆ ಇವರಲ್ಲಿ ಇದೆ. ಹಾಗೆ ವಿವಾಹಗಳು ನಡೆದರೂ ಕೂಡ ಸುಖವಾಗಿರುವ ಪತಿ - ಪತ್ನಿಯರು ಅನ್ಯರ ಚುಚ್ಚು ಮಾತುಗಳನ್ನು ಎದುರಿಸಬೇಕಾಗುತ್ತದೆ ಎಂಬ ನಂಬಿಕೆಯೂ ಇದೆ. ಇತರ ಹಿಂದೂ ಜಾತಿಗಳಲ್ಲಿ ಇರುವಂತೆ ಲಂಬಾಣಿಗಳಲ್ಲಿ ವಿಚ್ಛೇದನ ಅಥವಾ ತ್ಯಜಿಸುವಿಕೆಗಳಿಂದ ಮಾತ್ರವೇ ಹುಡುಗರ ಮತ್ತು ಹುಡುಗಿಯರ ವಿವಾಹದ ವಿಷಯಗಳಲ್ಲಿ ಗಂಭೀರ ಸಮಸ್ಯೆಗಳು ತಲೆದೋರುವುದಿಲ್ಲ.

ಅಲೆಮಾರಿ ಜೀವನದ ಅವಧಿಯಲ್ಲಿ ದೂರದ ಪ್ರದೇಶಗಳ ಜನರ ಆಕಸ್ಮಿಕ ಭೇಟಿಯಾದಾಗ ವಿವಾಹ ಸಂಬಂಧಗಳನ್ನು ಬೆಳೆಸುತ್ತಿರಬಹುದು. ಆದರೆ ಈಗ ಅವರು ಒಂದೆಡೆ ನೆಲೆಸಿರುವುದರಿಂದ ಕನ್ಯೆಯರನ್ನು ಹುಡುಕಲು ದೂರದ ಸ್ಥಳಗಳಿಗೆ ಹೋಗುವುದಿಲ್ಲ. ಲಂಬಾಣಿ ಕನ್ಯೆಯರನ್ನು ತಮ್ಮ ಗುಡಿಸಲುಗಳ ಅಕ್ಕಪಕ್ಕದಲ್ಲಿಯೇ ಹುಡುಕುತ್ತಾರೆಂದು ಲಂಬಾಣೇತರ ಗ್ರಾಮಸ್ಥರು ತಮಾಷೆ ಮಾಡುವುದಿದೆ. ಹೆಚ್ಚಿನ ವಿವಾಹಗಳು ಆಯಾ ತಾಂಡಗಳ ಅಥವಾ ಸಮೀಪದ ತಾಂಡಗಳ ಕನ್ಯೆಯರೊಡನೆ ನೆರವೇರುತ್ತವೆ. ಇದರಿಂದ ವಿವಾಹ ವರ್ತುಲಗಳ ವ್ಯಾಪ್ತಿ ತೀರ ಕಿರಿದಾಗಿದೆ ಎಂದು ಹೇಳಬಹುದು. ಶೇಕಡಾ ೬೯.೧೨ರಷ್ಟು ವಿವಾಹಗಳು (ಚಾಲ್ತಿ ಹಾಗೂ ಆಗಿಹೋದವುಗಳೆರಡನ್ನೂ ಒಳಗೊಂಡಂತೆ) ಮರಿಯಮ್ಮನಹಳ್ಳಿ ತಾಂಡದಲ್ಲಿಯೇ ಹೊಂದಿಸಲಾದವುಗಳು. ನಾಗಲಾಪುರ ತಾಂಡದಲ್ಲಿ ಶೇಕಡಾ ೬೦.೧೯ರಷ್ಟು (ಕೋಷ್ಟಕ ೩.೪ ಮತ್ತು ೩.೫ ನೋಡಿರಿ) ವಿವಾಹಗಳು ಅಲ್ಲಿಯೆ ಹೊಂದಿಸಲಾದವುಗಳಾಗಿವೆ. ಲಂಬಾಣಿಗಳು ಉತ್ತರಭಾರತದಲ್ಲಿದ್ದಾಗ ವಿವಾಹಗಳನ್ನು ಹೊಂದಿಸುವಾಗ ಗ್ರಾಮ ಹೊರಬಾಂಧವ್ಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಒಂದೆಡೆ ನೆಲೆನಿಂತ ಮೇಲೆ ದಕ್ಷಿಣ ಭಾರತದ ಹಿಂದೂ ಸಂಪ್ರದಾಯಗಳ ಸಾಂಸ್ಕೃತಿಕ ಪ್ರಭಾವಕ್ಕೀಡಾಗಿ ಗ್ರಾಮಗಳಲ್ಲಿ ಒಳಬಾಂಧವ್ಯ ಪದ್ಧತಿಯನ್ನು ಅನುಸರಿಸಲಾರಂಭಿಸಿದ್ದಾರೆ. ಲಂಬಾಣಿಗಳ ಸಂಪ್ರದಾಯದಲ್ಲಿ ಇದೊಂದು ಮಹತ್ತರ ಬದಲಾವಣೆ ಎಂದು ಹೇಳಬಹುದು. ಅದೇ ರೀತಿ ಉಳಿದ ವಿವಾಹ ಸಂಬಂಧಗಳಿಗಾಗಿ ಸಂಪರ್ಕಿಸಲಾದ ತಾಂಡಗಳು ತಾಲೂಕಿನ ಪರಿಧಿಯಲ್ಲಿಯೇ ಅಧಿಕವಾಗಿವೆ (೫ ರಿಂದ ೧೫ ಕಿ.ಮಿ. ಅಂತರದಲ್ಲಿ). ಮರಿಯಮ್ಮನಹಳ್ಳಿ ತಾಂಡದ ಶೇಕಡಾ ೨೨.೮೨ ; ನಾಗಲಾಪುರ ತಾಂಡದ ಶೇಕಡಾ ೨೬.೯೬ ತಾಲೂಕಿನ ಹೊರಗಡೆಯಲ್ಲಿ ಮಾಡಲಾದ ವಿವಾಹ ಸಂಬಂಧಗಳ ಸಂಖ್ಯೆ ತೀರ ಕಡಿಮೆ. ಮರಿಯಮ್ಮನಹಳ್ಳಿ ತಾಂಡದ ಶೇಕಡಾ ೮.೦೬; ನಾಗಲಾಪುರ ತಾಂಡದ ಶೇಕಡಾ ೧೧.೮೪. ಕನ್ಯೆಯರ ವಿವಾಹದ ಮಾದರಿಯೂ ಹೆಚ್ಚುಕಡಿಮೆ ಒಂದೇ ತೆರನಾಗಿದೆ.

## ಕೋಷ್ಟಕ ೩.೪

### ೧೯೯೯ ರವರೆಗೆ ಮರಿಯಮ್ಮನಹಳ್ಳಿ ತಾಂಡದ' ವಿವಾಹಿತ ಸ್ತ್ರೀಯರ ಮೂಲಸ್ಥಳಗಳ ವಿವರಗಳು

| ಮೂಲಸ್ಥಳಗಳು | ಪತಿಯ ಜೊತೆ ವಾಸ ಇರುವವರು | | ವಿಚ್ಛೇದಿತರು | | ತ್ಯಜಿಸಲ್ಪಟ್ಟವರು | | ವೈಧವ್ಯ ಸಂಪ್ರದಾಯವರು | | ಒಟ್ಟು | |
|---|---|---|---|---|---|---|---|---|---|---|
| | ಪುತ್ರಿ -ಯರು | ಸೊಸೆ -ಯಂದಿರು | ಪುತ್ರಿ -ಯಗ | ಸೊಸೆ -ಯಂದಿರು | ಪುತ್ರಿ -ಯರು | ಸೊಸೆ -ಯಂದಿರು | ಪುತ್ರಿ -ಯರು | ಸೊಸೆ -ಯಂದಿರು | ಪುತ್ರಿ -ಯರು | ಸೊಸೆ -ಯಂದಿರು |
| ೧. ಮ.ಮ.ಹಳ್ಳಿ | ೮೫ | ೮೫ | ೧ | ೧ | - | - | ೧೭ | ೧೭ | ೧೦೩ | ೧೦೩ |
| ೨. ತಾಲೂಕಿನೊಳಗಿನ ಇತರ ತಾಂಡಗಳು | ೩೧ | ೧೫ | - | - | - | ೪ | - | ೫ | ೩೧ | ೩೪ |
| ೩. ಜಿಲ್ಲೆಯೊಳಗಿನ ತಾಂಡಗಳು (ಮೊದಲಿನ ಎರಡು ಸ್ಥಳಗಳನ್ನು ಒಟ್ಟು) | ೧ | ೫ | - | - | - | ೧ | - | ೩ | ೧ | ೯ |
| ೪. ಜಿಲ್ಲೆಯ ಹೊರಗೆ ಅ. ಕೊಪ್ಪಳ | - | ೧ | - | - | - | - | - | ೨ | - | ೩ |
| ಆ. ದಾವಣಗೆರೆ ಜಿಲ್ಲೆ | ೧ | - | - | - | - | - | - | - | ೧ | - |
| ಒಟ್ಟು | ೧೧೮ | ೧೧೬ | ೧ | ೧ | - | ೫ | ೧೭ | ೧೭ | ೧೩೬ | ೧೪೯ |

ಗಮನಿಸಿರಿ : ಪುತ್ರಿಯರು - ಮ.ಮ.ಹಳ್ಳಿ ಪುತ್ರಿಯರು ಹೊರಗಡೆಯಲ್ಲಿ ಹಾಗೂ ತಾಂಡದಲ್ಲಿರುವ ವಿವಾಹಿತರು
ಸೊಸೆಯಂದಿರು - ವಿವಾಹ ಮಾಡಿಕೊಂಡು ಮರಿಯಮ್ಮನಹಳ್ಳಿಗೆ ಬಂದವರು.

## ಕೋಷ್ಟಕ ೩.೫

**೧೯೯೯ ರವರೆಗೆ ನಾಗಲಾಪುರ ತಾಂಡದ ವಿವಾಹಿತ ಸ್ತ್ರೀಯರ ಮೂಲಸ್ಥಳಗಳ ವಿವರಗಳು**

| ಮೂಲಸ್ಥಳಗಳು | ಪತಿಯ ಜೊತೆ ವಾಸ ಇರುವವರು | | ವಿಚ್ಛೇದಿತರು | | ತ್ಯಜಿಸಲ್ಪಟ್ಟವರು | | ವೈಧವ್ಯ ಸಂಪ್ರದಾಯವರು | | ಒಟ್ಟು | |
|---|---|---|---|---|---|---|---|---|---|---|
| | ಪುತ್ರಿ-ಯರು | ಸೊಸೆ-ಯಂದಿರು | ಪುತ್ರಿ-ಯರು | ಸೊಸೆ-ಯಂದಿರು | ಪುತ್ರಿ-ಯರು | ಸೊಸೆ-ಯಂದಿರು | ಪುತ್ರಿ-ಯರು | ಸೊಸೆ-ಯಂದಿರು | ಪುತ್ರಿ-ಯರು | ಸೊಸೆ-ಯಂದಿರು |
| ೧. ನಾಗಲಾಪುರ | ೬೨ | ೬೨ | ೨ | ೨ | ೪ | ೪ | ೧೮ | ೧೮ | ೮೬ | ೮೬ |
| ೨. ತಾಲೂಕಿನೊಳಗಿನ ಇತರ ತಾಂಡಗಳು | ೧೪ | ೨೨ | - | - | - | ೧ | - | ೭ | ೧೪ | ೩೦ |
| ೩. ಜಿಲ್ಲೆಯೊಳಗಿನ ತಾಂಡಗಳು (ಮೊದಲಿನ ಒಂದು ಮತ್ತು ೨ನೆಯ ಕಲಮಿನಲ್ಲಿಯ ಸ್ಥಳಗಳನ್ನು ಒಟ್ಟು) | ೫ | ೧೫ | - | ೧ | ೧ | ೧ | - | ೪ | ೬ | ೨೧ |
| ೪. ಜಿಲ್ಲೆಯ ಹೊರಗೆ ಅ. ಕೊಪ್ಪಳ | - | ೧ | - | - | - | - | - | - | - | ೧ |
| ಆ. ದಾವಣಗೆರೆ ಜಿಲ್ಲೆ | ೧ | - | - | - | - | - | - | - | ೬ | ೫ |
| ಇ. ಬೆಂಗಳೂರು ಮಹಾನಗರ | ೧ | - | - | - | - | - | - | - | ೧ | - |
| ಒಟ್ಟು | ೮೮ | ೧೦೫ | ೨ | ೩ | ೫ | ೬ | ೧೮ | ೨೯ | ೧೧೩ | ೧೪೩ |

ಗಮನಿಸಿರಿ : ಪುತ್ರಿಯರು - ನಾಗಲಾಪುರ ತಾಂಡದ ಪುತ್ರಿಯರು - ಹೊರಗಡೆಯಲ್ಲಿ ಹಾಗೂ ತಾಂಡದಲ್ಲಿರುವ ವಿವಾಹಿತರು
ಸೊಸೆಯಂದಿರು - ವಿವಾಹ ಮಾಡಿಕೊಂಡು ನಾಗಲಾಪುರಕ್ಕೆ ಬಂದವರು.

ಒಂದೆಡೆ ನೆಲೆ ನಿಂತ ಮೇಲೂ ವಿವಾಹ ಮಾಡಿಕೊಟ್ಟ ಪುತ್ರಿಯರೊಡನೆ ಸಂಪರ್ಕಗಳನ್ನು ಸ್ವತಃ ಭೇಟಿಯಾಗುವ ಮೂಲಕ ಮುಂದುವರೆಸಲಾಗುತ್ತಿತ್ತು. ಲಂಬಾಣಿಗಳಲ್ಲಿ ಅನಕ್ಷರತೆ ಅತಿ ಹೆಚ್ಚು ಇದ್ದುದರಿಂದ ಬರಹದ ಮೂಲಕ ಸಂಪರ್ಕಗಳಿರಲಿಲ್ಲ. ಆದರೆ ಇಂದು ಕೆಲವಾರು ಜನ ಲಂಬಾಣಿಗಳು ಓದಲು, ಬರೆಯಲು ಕಲಿತದ್ದರಿಂದ ಸ್ವತಃ ಭೇಟಿ ಮಾಡುವುದರೊಂದಿಗೆ ಪತ್ರ ವ್ಯವಹಾರದ

ಮೂಲಕವೂ ಸಂಪರ್ಕಗಳನ್ನು ಇರಿಸಿಕೊಂಡಿದ್ದಾರೆ. ಇನ್ನೂ ಕೆಲವು ಸ್ಥಿತಿವಂತರು ದೂರವಾಣಿಗಳ ಮೂಲಕ ಸಂಪರ್ಕ ಇಟ್ಟುಕೊಂಡಿದ್ದಾರೆ. ದೂರದ ತಾಂಡಗಳೊಂದಿಗೆ ವಿವಾಹಗಳನ್ನು ಇವರು ಸಾಂಪ್ರದಾಯಿಕವಾಗಿ ಇಷ್ಟಪಡುವುದಿಲ್ಲ. ವಿವಾಹ ಸಂಬಂಧದ ನಂತರ ಮಾಡಬೇಕಾದ ನೆಂಟಸ್ತಿಕೆಯ ಕಾರ್ಯಗಳನ್ನು ನೆರವೇರಿಸಬೇಕಾದರೆ ದೂರದ ಪ್ರಯಾಣ ವೆಚ್ಚದ ಭಾರವನ್ನು ಅಧಿಕಗೊಳಿಸುತ್ತದೆ. ಮಗುವಿನ ಜನನವಾದಾಗ, ಹೆಸರಿಡುವ ಸಮಾರಂಭ, ಚೌಲ ಸಮಾರಂಭ, ವಿವಾಹಗಳು, ಗೌರಿ ಹಬ್ಬ, ದೀಪಾವಳಿ ಮತ್ತು ಸಾವು ನೋವು ಮೊದಲಾದ ಎಲ್ಲ ಸಂದರ್ಭಗಳಲ್ಲಿ ನೆಂಟರ ಮನೆಗೆ ಹೋಗಲೇಬೇಕಾಗುತ್ತದೆ. ನೆಂಟರು ದೂರದಲ್ಲಿದ್ದರೂ ಅಷ್ಟೇ, ಸಮೀಪದಲ್ಲಿದ್ದರೂ ಅಷ್ಟೇ. ಉಡುಗೊರೆಯ ಮೊತ್ತವು ಏಕಪ್ರಕಾರವಾಗಿರುತ್ತದೆ. ಖರ್ಚು ಮತ್ತು ವೆಚ್ಚದ ದೃಷ್ಟಿಯಿಂದ ದೂರದ ತಾಂಡಗಳೊಡನೆಯ ಸಂಬಂಧವು ಪ್ರಯಾಣದ ವೆಚ್ಚವನ್ನು ಮಾತ್ರವೇ ತಗ್ಗಿಸಬಹುದಾಗಿದೆ. ಪ್ರಯಾಣದ ವೆಚ್ಚವು ಅಧಿಕವಾದರೆ ಸಮಾರಂಭಗಳಿಗೆ ಹಾಗೂ ಅಗತ್ಯ ಸನ್ನಿವೇಶಗಳಿಗೆ ನೆಂಟರ ಮನೆಗೆ ಹೋಗುವುದು ತಪ್ಪಿಹೋಗುವ ಸಾಧ್ಯತೆಯಿರುತ್ತದೆ. ಹಾಗಾದಾಗ ಸಂಬಂಧಗಳು ಸರಿಯಾಗಿ ಉಳಿಯಲಾರವು ಎಂಬುದು ಇವರ ಭಾವನೆ. ಆದಕಾರಣ, ಸ್ಥಿತಿವಂತ ಲಂಬಾಣಿಗಳು ಮಾತ್ರವೇ ದೂರದ ತಾಂಡಗಳಿಗೆ ತಮ್ಮ ಪುತ್ರಿಯರನ್ನು ವಿವಾಹ ಮಾಡಿಕೊಡುವ ಧೈರ್ಯ ಮಾಡಬಲ್ಲರು. ಕೋಷ್ಟಕ ೨.೧೧ ; ಕಲಮು ೪. ಪ್ರತಿ ಕುಟುಂಬದ ಸರಾಸರಿ ಪ್ರಯಾಣ ವೆಚ್ಚವು ತೀರ ಅಲ್ಪವಾಗಿರುವುದನ್ನು ತೋರಿಸುತ್ತದೆ (ವಾರ್ಷಿಕ ಪ್ರಯಾಣ ವೆಚ್ಚ ಪ್ರತಿ ಕುಟುಂಬಕ್ಕೆ ಸರಾಸರಿ ಮರಿಯಮ್ಮನಹಳ್ಳಿ ತಾಂಡದಲ್ಲಿ ರೂ. ೨೩.೨ ಹಾಗೂ ನಾಗಲಾಪುರ ತಾಂಡದಲ್ಲಿ ರೂ. ೨೬೬).

ವಿವಾಹ ಸಂಬಂಧಗಳನ್ನು ೫ ರಿಂದ ೧೫ ಕಿಲೋಮೀಟರಗಳಷ್ಟು ಅಂತರದ ಸ್ಥಳಗಳಲ್ಲಿ ಆಯ್ಕೆ ಮಾಡುವ ಲಂಬಾಣಿಗಳ ಪ್ರವೃತ್ತಿಗೆ ಪ್ರಯಾಣದ ವೆಚ್ಚವಲ್ಲದೆ ಇತರ ಪರಿಗಣನೆಗಳೂ ಕಾರಣವಾಗಿವೆ (ಕೋಷ್ಟಕ ೩.೪ ಮತ್ತು ೩.೫ ನೆಂಟಸ್ತಿಕೆ ಬಾಂಧವ್ಯಗಳ ಸಾಮಿಪ್ಯ ಕಲಮುಗಳು ೧ ಮತ್ತು ೨). ಸಮೀಪದ ನೆಂಟರಿಂದ ಅನೇಕ ವಿಧಗಳಲ್ಲಿ ಪ್ರಯೋಜನಕಾರಿಯಾಗಿರುತ್ತದೆ. ಸಮೀಪದ ಸಂಬಂಧಿಗಳಿಂದ ಸಾಲದ ರೂಪದಲ್ಲಿ ಆರ್ಥಿಕ ನೆರವನ್ನು ಪಡೆಯಬಹುದಾಗಿದೆ. ಕೃಷಿ ಸಾಗುವಳಿಯಲ್ಲಿ ಸಹಕಾರ, ಒಟ್ಟುಗೂಡಿ ಕೆಲಸಮಾಡುವ ಅನುಕೂಲತೆಗಳು ಇರುತ್ತವೆ. ಕೂಲಿಯ ಆಧಾರದ ಮೇಲೆ ಗುಂಪುಕೂಡಿಸಲು ಸಂಬಂಧಿಕರು ಪ್ರಯೋಜನಕಾರಿಯಾಗುತ್ತಾರೆ. ಸಮೀಪದ ತಾಂಡಗಳ ಸಂಬಂಧಿಕರು ಒಟ್ಟಾಗಿ ಸಹಕಾರದಿಂದ ಏನನ್ನಾದರೂ ಮಾಡಬಹುದಾಗಿದೆ. ಮಹತ್ವದ ಸಾಮಾಜಿಕ ಮತ್ತು ಧಾರ್ಮಿಕ ಸಮಾರಂಭಗಳಲ್ಲಿ ಸಮೀಪದ ಸಂಬಂಧಿಗಳ ಮಧ್ಯೆ ವಿನಿಮಯವಾಗುವ ಉಡುಗೊರೆಗಳ ಬಗೆಗೆ ಎರಡನೆ ಅಧ್ಯಾಯದಲ್ಲಿ 'ಹಂಚಿಕೆ ಮತ್ತು ವಿನಿಮಯ' ಎಂಬ ಶಿರ್ಷಿಕೆಯಡಿಯಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಸಂಬಂಧಗಳನ್ನು ಮುಂದುವರಿಸಲು ಇವು ಅಗತ್ಯವಾಗಿವೆ. ಕೋಷ್ಟಕ ೨.೧೧ (ಕಲಮುಗಳು ೧೨ ಮತ್ತು ೧೪) ಪ್ರತಿ ವರ್ಷಕ್ಕೆ, ಪ್ರತಿ ಕುಟುಂಬಕ್ಕೆ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಿಗೆ ತಗಲುವ ಸರಾಸರಿ ವೆಚ್ಚದ ವಿವರಗಳನ್ನು ಸಾದರಪಡಿಸುತ್ತದೆ. (ಮರಿಯಮ್ಮನಹಳ್ಳಿ ತಾಂಡ ರೂ. ೨೪೪ ಮತ್ತು ರೂ. ೨೦೩; ನಾಗಲಾಪುರ ತಾಂಡ ರೂ. ೨೩೩). ಆಯಾ ತಾಂಡಗಳ ಒಟ್ಟು ವಾರ್ಷಿಕ ಆದಾಯದ ಶೇಕಡಾ (ಅನುಕ್ರಮವಾಗಿ) ೫.೯೪ ಹಾಗೂ ಶೇಕಡಾ ೨.೨೬ ರಷ್ಟು ಮೊತ್ತಗಳು ಈ ಕಾರ್ಯಗಳಿಗಾಗಿ ವೆಚ್ಚವಾಗುತ್ತದೆ.

ಸಮೀಪದ ಸಂಬಂಧಗಳ ಬಾಂಧವ್ಯಗಳಲ್ಲಿ ಇರುಸು-ಮುರುಸುಗಳು, ಬಿಕ್ಕಟ್ಟುಗಳು ಕಾಣಿಸಿಕೊಳ್ಳುವ ಸಂದರ್ಭಗಳೂ ತಲೆದೋರುತ್ತವೆ. ಇವು ಜಗಳ ವ್ಯಾಜ್ಯಗಳಿಗೆ ಕಾರಣವಾಗುತ್ತದೆ. ಪತಿ-ಪತ್ನಿಯರ ತ್ಯಜಿಸುವಿಕೆ ಅಥವಾ ವಿಚ್ಛೇದನದ ಬಗೆಗಿನ ಚುಚ್ಚುಮಾತು ವ್ಯಂಗ್ಯಗಳಿಂದ ಸಂಬಂಧಗಳಲ್ಲಿ ತಲೆದೋರಿದ ವಿರಸ ಪ್ರತಿಕ್ರಿಯೆಗಳು ಕೆಟ್ಟ ಪರಿಣಾಮಗಳನ್ನುಂಟುಮಾಡಿದ ಬಗೆಗೆ ಈಗಾಗಲೇ ಉಲ್ಲೇಖಿಸಿಲಾಗಿದೆ. ಸಮೀಪದ ಸಂಬಂಧಿಕರಲ್ಲಿಯ ವಿರಸಕ್ಕೆ ಅನೇಕ ಕಾರಣಗಳಿವೆ. ವಿವಾಹಿತ ಪುತ್ರಿಯನ್ನು ಹೀನಾಯವಾಗಿ

ನಡೆಸಿಕೊಳ್ಳುವುದು, ಉಡುಗೊರೆ ಕೊಡುವಲ್ಲಿ ಆಗುವ ತಪ್ಪುಗಳು ಹಾಗೂ ಅಸಮರ್ಪಕತೆಗಳು, ನೆಂಟರಿಗೆ ಸರಿಯಾದ ರೀತಿಯಲ್ಲಿ ಆತಿಥ್ಯ ನೀಡದಿರುವುದು, ಇತ್ಯಾದಿ ಸಂಗತಿಗಳು ಮನಸ್ತಾಪಕ್ಕೆ ಅಥವಾ ವಿರಸಕ್ಕೆ ಕಾರಣವಾಗುತ್ತವೆ. ಕುಟುಂಬದ ಮಟ್ಟದಲ್ಲಿ ನೆಂಟಸ್ತಿಕೆಯ ಸಂಬಂಧಗಳನ್ನು ಸಮರ್ಪಕವಾಗಿ ನಿರ್ವಹಿಸುವಲ್ಲಿಯ ನ್ಯೂನತೆಗಳನ್ನು ಕುರಿತು ಈಗಾಗಲೇ ಚರ್ಚಿಸಲಾಗಿದೆ. ಮಹಿಳೆಯರನ್ನು ಸರಿಯಾಗಿ ನೋಡಿಕೊಳ್ಳದೇ ಇರುವುದು, ವಿವಾಹ ಸಂಬಂಧದಾಚೆಗಿನ ಅಕ್ರಮ ಲೈಂಗಿಕ ಸಂಬಂಧಗಳು, ಓಡಿ ಹೋಗುವುದು, ತ್ಯಜಿಸುವುದು ಹಾಗೂ ವಿಚ್ಛೇದನ ಪಡೆಯದೇ ಮರುವಿವಾಹವಾಗುವುದು ಮೊದಲಾದವುಗಳನ್ನು ಗಂಭೀರ ಅಕ್ರಮಗಳೆಂದು ಪರಿಗಣಿಸಲಾಗುತ್ತದೆ. ಇವು ಸಾಂಪ್ರದಾಯಿಕ ಪಂಚಾಯಿತಿಯ ತೀರ್ಪಿಗೆ ಒಳಪಡುತ್ತವೆ. ಲಂಬಾಣಿ ಪಂಚಾಯಿತಿಯನ್ನು ಸಭೆ ಸೇರಿಸಲು ವಾದಿಗಳು ಕನಿಷ್ಠ ೫೦ ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ವಿವಿಧ ಬಗೆಯ ಅಪರಾಧಗಳಿಗೆ ವಿವಿಧ ಮೊತ್ತದ ದಂಡಗಳನ್ನು ವಿಧಿಸಲಾಗುತ್ತದೆ (ವಿವರಗಳಿಗೆ ಅಧ್ಯಾಯ ೨ ನೋಡಿರಿ).

## ಲಂಬಾಣಿಗಳಲ್ಲಿ ಸಾಮಾಜಿಕ ನಿಯಂತ್ರಣ : ಸಂಘಟನೆ ಮತ್ತು ಬದಲಾವಣೆಗಳು

ಲಂಬಾಣಿಗಳ ಸಾಂಪ್ರದಾಯಿಕ ಸಂಘಟನೆ ವಿಶಿಷ್ಟವಾಗಿದ್ದು, ಸಾಮಾಜಿಕ ವ್ಯವಸ್ಥೆಯನ್ನು ನಿಯಂತ್ರಿಸುವ ಸಾಧನಗಳು ತಮ್ಮದೇ ಆದಂಥ ವಿಶೇಷ ಲಕ್ಷಣಗಳನ್ನು ಹೊಂದಿವೆ. ಅವರ ಸಮಾಜದಲ್ಲಿ ಕಂಡುಬರುವ ವ್ಯಾಜ್ಯಗಳನ್ನು ಪರಿಹರಿಸುವ ವಿಧಿವಿಧಾನಗಳು ಇತರ ಸಾಮಾಜಿಕ ವ್ಯವಸ್ಥೆಗಿಂತ ಭಿನ್ನ. ಹಾಗಾಗಿ ಇಂತಹ ವ್ಯವಸ್ಥೆಯಲ್ಲಿ ಅವರು ತೆಗೆದುಕೊಳ್ಳುವ ನಿರ್ಧಾರಗಳಲ್ಲಿ ಲಂಬಾಣಿ ಸಾಂಪ್ರದಾಯಿಕ ನಾಯಕರ ಪಾತ್ರವೂ ಇದೆ. ಅಲ್ಲದೆ ಲಂಬಾಣಿಗಳ ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ ರೂಪಿಸಲಾದ ಪಂಚಾಯಿತಿ ವ್ಯವಸ್ಥೆ ಕೂಡ ಭಿನ್ನ. ಹಾಗೆಯೇ ಲಂಬಾಣಿ ಮತ್ತು ಲಂಬಾಣೇತರ ನಡುವಿನ ರಾಜಕೀಯ ಸಂಬಂಧಗಳ, ರೀತಿನೀತಿಗಳನ್ನು ಸಹ ಈ ಭಾಗದಲ್ಲಿ ವಿವರಿಸಿದ್ದೇನೆ.

ಲಂಬಾಣಿಗಳಲ್ಲಿ ಬದಲಾಗುತ್ತಿರುವ ಆರ್ಥಿಕತೆಯು ಅವರ ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣದ ಸಂಘಟನೆಯನ್ನು ಪ್ರಭಾವಿಸಿದೆ. ಇದನ್ನು ನಿರ್ಧರಿಸುವ ರಾಜಕೀಯ ಸಂಸ್ಥೆಗಳನ್ನು ಸಾಮಾಜಿಕ-ಆರ್ಥಿಕ ಕಾರ್ಯವಿಧಾನಗಳು ಎಷ್ಟರಮಟ್ಟಿಗೆ ಬಾಧಿಸಿವೆ ಎಂಬುದನ್ನು ಅಂದಾಜಿಸಲು ಚಾರಿತ್ರಿಕ ದೃಷ್ಟಿಕೋನವನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಭಾರತದಲ್ಲಿ ರಾಜಕೀಯ ವ್ಯವಸ್ಥೆಯನ್ನು ಔಪಚಾರಿಕವಾಗಿ ವಿಭಿನ್ನ ವಿಭಾಗಗಳಲ್ಲಿ, ಅನೇಕ ಏಣಿ-ಶ್ರೇಣಿಯ ಆಡಳಿತಾತ್ಮಕ ಘಟಕಗಳಲ್ಲಿ ವಿಭಜಿಸಲಾಗಿದೆ. ರಾಜ್ಯ, ಜಿಲ್ಲೆ, ಉಪವಿಭಾಗ, ತಾಲೂಕು, ಗ್ರಾಮ ಎಂಬುದಾಗಿ ವಿವಿಧ ಆಡಳಿತಾತ್ಮಕ ಘಟಕಗಳಲ್ಲಿ ರಾಷ್ಟ್ರವನ್ನು ವಿಂಗಡಿಸಲಾಗಿದೆ. ಈ ವ್ಯವಸ್ಥೆ ಭಾರತದ ಗಡಿಯೊಳಗಿನ ಎಲ್ಲ ಸಮುದಾಯಗಳನ್ನು ಒಳಗೊಂಡಿದೆ. ಈ ವ್ಯವಸ್ಥೆಯೊಂದಿಗೆ ಲಂಬಾಣಿ ಸಮುದಾಯದಲ್ಲಿ ಸಾಮಾಜಿಕ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಅವರದ್ದೇ ಆದ ಅನೌಪಚಾರಿಕ ಸಾಂಪ್ರದಾಯಿಕ ಸಂಘಟನೆಯಿದೆ. ಸಾಂಸ್ಕೃತಿಕವಾಗಿ ಭಿನ್ನ ಭಿನ್ನ ಅಂಶಗಳಿಂದ ಕೂಡಿರುವ ಆಡಳಿತಾತ್ಮಕ ವಿಭಾಗಗಳನ್ನು ಲಂಬಾಣಿ ತಾಂಡಗಳಲ್ಲಿ ಕಾಣಬಹುದಾಗಿದೆ. ಬಹುಜಾತಿಗಳ ಜನರು ವಾಸಿಸುವ ಗ್ರಾಮಗಳಲ್ಲಿ ಕಂಡುಬರುವ ಭಿನ್ನಪ್ರಕಾರದ ರಾಜಕೀಯ ಗುಂಪುಗಳಿಗಿಂತ ಭಿನ್ನವಾದ, ಕೆಲವು ಸಂದರ್ಭದಲ್ಲಿ ಏಕಪ್ರಕಾರವಾದ ರಾಜಕೀಯ ಗುಂಪುಗಳಂತೆ ತೋರುತ್ತವೆ. ಪ್ರತಿಯೊಂದು ತಾಂಡದಲ್ಲಿ ಸೀಮಿತ ರಾಜಕೀಯ ಅಧಿಕಾರವನ್ನುಳ್ಳ ಸಾಂಪ್ರದಾಯಿಕ ಮುಖ್ಯಸ್ಥನಿರುತ್ತಾನೆ. ನ್ಯಾಯ ತೀರ್ಮಾನದ ಪ್ರಕ್ರಿಯೆಯಲ್ಲಿ ಪಾರಂಪರಿಕ ಜಾತಿ ಪಂಚಾಯಿತಿಯು ನಾಯಕನಿಗೆ

ನೆರವಾಗುತ್ತದೆ. ಲಂಬಾಣಿ ಪಂಚಾಯಿತಿಯು ನಷ್ಟದ ಪರಿಹಾರ ಹಾಗೂ ಶಿಕ್ಷೆಯನ್ನು ನೀಡುವ ಎರಡೂ ವಿಧಾನಗಳನ್ನು ಅನುಸರಿಸುತ್ತದೆ. ಸಾಮಾಜಿಕ ಸಂಘಟನೆಯ ಈ ಗುಣ ಲಕ್ಷಣಗಳು ಪರಿಕಲ್ಪನಾತ್ಮಕವಾಗಿ ಚೊಕ್ಕಟವೆನಿಸಿದರೂ, ಈ ಸಂಘಟನೆಯ ಚಟುವಟಿಕೆಗಳು ಪರಸ್ಪರ ಸಂಬಂಧಗಳ ಗೋಜಲುಗಳಿಂದ ಸಂಕೀರ್ಣವಾಗಿವೆ.

**ಸಾಂಪ್ರದಾಯಿಕ ರಾಜಕೀಯ ಸಂಘಟನೆ**

ಲಂಬಾಣಿ ಗುಂಪಿನ ಸಾಂಪ್ರದಾಯಿಕ ಅಧಿಕಾರ ಸ್ವರೂಪದ ಸಾಮಾಜಿಕ ನಿಯಂತ್ರಣವನ್ನು ಕುರಿತ ಅತ್ಯಂತ ಪ್ರಾಚೀನ ಉಲ್ಲೇಖವನ್ನು ಕ್ರಾಫೋರ್ಡ್ ಅವರು ಮಾಡಿದ್ದಾರೆ. "ಲಂಬಾಣಿಗಳು ಟೆಂಟುಗಳಲ್ಲಿ ಜೀವಿಸುತ್ತಾರೆ, ಪ್ರತ್ಯೇಕ ತಂಡಗಳಲ್ಲಿ ಪ್ರಯಾಣಿಸುತ್ತಾರೆ. ಇಂತಹ ಪ್ರತಿಯೊಂದು ತಂಡವೂ ತನ್ನದೇ ಆದ ಸಾಂಪ್ರದಾಯಿಕ ನಿಯಮಾವಳಿಗಳಿಂದ ನಿಯಂತ್ರಿಸಲ್ಪಡುತ್ತದೆ" (೧೭೪೨ : ೮೯) ಎಂಬುದಾಗಿ ಅವರು ವಿವರಿಸಿದ್ದಾರೆ. ೧೪ನೆಯ ಶತಮಾನಗಲ್ಲಿ ಲಂಬಾಣಿಗಳು ಮೊಟ್ಟಮೊದಲಿಗೆ ಮುಸಲ್ಮಾನರ ಸೈನ್ಯ ಸೇರಿಕೊಂಡು ಉತ್ತರ ಭಾರತದಿಂದ ದಕ್ಷಿಣಾಭಿಮುಖವಾಗಿ ವಲಸೆ ಬಂದು, ದಕ್ಷಿಣದ ಪ್ರದೇಶಗಳ ಮೇಲಿನ ದಾಳಿಗಳಲ್ಲಿ ಪಾಲುಗೊಂಡರು. ಪರ್ಷಿಯನ್ ಹಾಗೂ ಬ್ರಿಟಿಷ್ ಪ್ರವಾಸಿಗರು, ಕ್ರಿಶ್ಚಿಯನ್ ಧರ್ಮ ಪ್ರಚಾರಕರು ಹಾಗೂ ಆಡಳಿತಗಾರರು ಲಂಬಾಣಿಗಳ ಬಗೆಗೆ ಉಲ್ಲೇಖಿಸಿದ ದಾಖಲೆಗಳಿವೆ. ೧೫ನೆಯ ಶತಮಾನದ ಕೊನೆಯ ಭಾಗದಿಂದ ೧೯ನೆಯ ಶತಮಾನದ ಮಧ್ಯಭಾಗದವರೆಗೆ ಭಾರತದ ರಾಜಕೀಯ ರಂಗವು ಪ್ರಕ್ಷುಬ್ಧವಾಗಿದ್ದು ಅನೇಕ ಏಳು-ಬೀಳುಗಳನ್ನು ಕಂಡಿತು. ವಿವಿಧ ಸಾಮ್ರಾಜ್ಯಗಳು ಮತ್ತು ಸಾಮಂತ ರಾಜ್ಯಗಳ ನಡುವೆ ನಿರಂತರ ಯುದ್ಧಗಳು ನಡೆದವು. ಅನಂತರದಲ್ಲಿ ಬ್ರಿಟಿಷ್ ಮತ್ತು ದೇಶೀಯ ಅರಸರ ನಡುವೆ ಯುದ್ಧಗಳು ನಡೆದವು. ೧೭ನೆಯ ಶತಮಾನದ ನಂತರ ಬ್ರಿಟಿಷರು, ಪೋರ್ಚುಗೀಸ್‌ರು ಹಾಗೂ ಫ್ರೆಂಚ್‌ರ ಮಧ್ಯೆ ನಡೆದ ಕದನಗಳಲ್ಲಿ, ಸೈನ್ಯಗಳಿಗೆ ಅಗತ್ಯವಾದ ಸರಕುಗಳನ್ನು ಪೂರೈಸುವಲ್ಲಿ ಹಾಗೂ ಸೈನ್ಯಗಳ ಸರಕುಗಳನ್ನು ಸಾಗಿಸುವ ಕೆಲಸವನ್ನು ಮಾಡುವಲ್ಲಿ ಲಂಬಾಣಿಗಳು ಮಹತ್ವದ ಪಾತ್ರವನ್ನು ವಹಿಸಿದರು. ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುತ್ತ ಅಲ್ಲಲ್ಲಿ ನೆಲೆಸುತ್ತಿದ್ದ ತಂಡಗಳಲ್ಲಿ ಪಿತೃವಂಶೀಯ ವ್ಯವಸ್ಥೆಯನ್ನಾಧರಿಸಿದ ಸಂಘಟನೆ ೧೯ನೆಯ ಶತಮಾನದ ಅಂತ್ಯದವರೆಗೂ ಪ್ರಬಲವಾಗಿತ್ತು. ಪಿತೃವಂಶೀಯ ರೀತಿನೀತಿಗಳು ಹಾಗೂ ತಂಡಗಳ ಮುಖ್ಯಸ್ಥರ ಪ್ರಭುತ್ವವು ಅವರು ಅನುಸರಿಸುತ್ತಿದ್ದ ವಿಶಿಷ್ಟ ಆರ್ಥಿಕತೆಯ ನೇರ ಪರಿಣಾಮಗಳೇ ಆಗಿದ್ದವು. ಆದ ಕಾರಣ, ಲಂಬಾಣಿಗಳು ಸಾಂಪ್ರದಾಯಿಕ ರಾಜಕೀಯ ಸಂಘಟನೆಯನ್ನು ಅರ್ಥಮಾಡಿಕೊಳ್ಳಲು ಅವರು ಅಲೆಮಾರಿ ಜೀವನದಲ್ಲಿ ಅನುಸರಿಸುತ್ತಿದ್ದ ಆರ್ಥಿಕ-ಸಾಮಾಜಿಕ ವ್ಯವಸ್ಥೆಯನ್ನು ತಿಳಿದುಕೊಳ್ಳಬೇಕಾದುದು ಅಗತ್ಯವಾಗುತ್ತದೆ.

ಲಂಬಾಣಿಗಳು ಸೈನ್ಯಗಳಿಗೆ ನೀಡಿದ ಸೇವೆಯಿಂದ ಪ್ರಾಮುಖ್ಯತೆಯನ್ನು ಪಡೆದುಕೊಂಡರು. ಮೊಘಲ್ ದೊರೆಗಳು ಶತ್ರು ರಾಜ್ಯಗಳಲ್ಲಿ ಕೊಳ್ಳೆಹೊಡೆಯುವ ಹಕ್ಕನ್ನು ಲಂಬಾಣಿಗಳಿಗೆ ನೀಡಿದ್ದು ಈ ಮಾತನ್ನು ಸಮರ್ಥಿಸುತ್ತದೆ. ತತ್ಪರಿಣಾಮವಾಗಿ ಲಂಬಾಣಿಗಳು ಕಳ್ಳತನ, ದರೋಡೆಗಳಲ್ಲಿ ತೊಡಗಲು ಕಾರಣವಾಯಿತು. ಲಂಬಾಣಿಗಳು ಶಾಂತಿ ಕಾಲದಲ್ಲಿ ಕೂಡ ಪ್ರಮುಖ ದಾರಿಗಳಲ್ಲಿ ಅತ್ಯಂತ ಕ್ರೂರ ದರೋಡೆಗಾರರಾದರು. ಅವರು ಮಾಡುತ್ತಿದ್ದ ಕಳ್ಳತನಗಳನ್ನು ಅಪರಾಧಗಳೆಂದು ಪರಿಗಣಿಸಲಾಗುತ್ತಿರಲಿಲ್ಲ (ಬ್ರಿಗ್ಸ್, ೧೮೮೯-೯೧).

ಹಿಂದಿನ ಪ್ರವಾಸಕಥನಗಳು ಮತ್ತು ಗೆಝಟಿಯರ್‌ಗಳಲ್ಲಿ ಎರಡು ಪ್ರಮುಖ ಗೋತ್ರಗಳ ಉಲ್ಲೇಖಗಳು ಅಲ್ಲಲ್ಲಿ ಸಿಕ್ಕುತ್ತವೆ (ರಾಠೋಡ್ ಮತ್ತು ವಡಾತ್ಯ), ಈ ಗೋತ್ರಗಳ ಜನರು ಸಾರಿಗೆ ಮತ್ತು ವ್ಯಾಪಾರದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು ಎಂಬ ಉಲ್ಲೇಖಗಳು ಸಾಕಷ್ಟು ಸಿಗುತ್ತವೆ.

೧೮ನೆಯ ಶತಮಾನದ ಮೊದಲ ಭಾಗದಲ್ಲಿ (ಸಾರಂಗ್ ಭಾಂಗಿ) ಎಂಬ ರಾಠೋಡ್ ಗೋತ್ರದ ಮುಖ್ಯಸ್ಥನು ಕೆಲವು ನಿಯಮಾವಳಿಗಳನ್ನು ರಚಿಸಿದನು. ಅದೇ ನಿಯಮಾವಳಿಗಳು ೧೮ನೆಯ ಶತಮಾನದ ಕೊನೆಯವರೆಗೂ ಕರಾರುವಕ್ಕಾಗಿ ಅನುಸರಿಸಲ್ಪಟ್ಟವು. ಇವು ಲಂಬಾಣಿ ಸಮುದಾಯದ ಸಾಂಪ್ರದಾಯಿಕ ನಿಯಂತ್ರಣದ ಅಡಿಪಾಯಗಳಾದವು. ಪಂಗಡದ ಮುಖ್ಯಸ್ಥನ ವ್ಯಕ್ತಿತ್ವ ಹಾಗೂ ಆತನ ಖಾಸಗಿ ಬದುಕಿನ ರೀತಿನೀತಿಗಳು ಮಾತ್ರವೇ ಅನುಯಾಯಿಗಳಿಂದ ಮಹತ್ವ ಪಡೆಯಬಲ್ಲವು ಎಂಬುದನ್ನು ನಾಯಕರು ಸ್ಪಷ್ಟವಾಗಿ ಅರಿತಿದ್ದರು. ಮುಖ್ಯಸ್ಥರು ಸಾರ್ವತ್ರಿಕ ದನಕರುಗಳ ಹಿಂಡುಗಳ ಒಡೆತನವನ್ನು ಹೊಂದಿದ್ದರು. ಹೀಗಾಗಿ ಯಾವುದೇ ಸದಸ್ಯನು ತನಗಿಷ್ಟವಾದಾಗ ತಂಡವನ್ನು ತ್ಯಜಿಸಿ ಹೋಗಬಹುದಾಗಿತ್ತು. ಮುಖ್ಯಸ್ಥನು ತಂಡದ ನಾಯಕತ್ವವನ್ನು ಸಮರ್ಥವಾಗಿ ನಿರ್ವಹಿಸದೇ ಇದ್ದಾಗ ತಂಡವು ಒಡೆದುಹೋಗುವ ಸಾಧ್ಯತೆಗಳಿರುತ್ತಿದ್ದವು. ಹಾಗಾದಾಗ ಮುಖ್ಯಸ್ಥನ ಅಧಿಕಾರವು ಸಹಜವಾಗಿಯೇ ಮೊಟಕುಗೊಳ್ಳುತ್ತಿತ್ತು. ಇಂತಹ ಒಡೆತನವನ್ನು ಹೊಂದಿದ ಜನರನ್ನು ಬಂಧಿಸಲು ಪ್ರಭಾವಿ ನಾಯಕನ ಅಗತ್ಯತೆ ಇದ್ದಿತು. ಆ ಜನರೇ ಆಯ್ಕೆ ಮಾಡುವ ನಾಯಕನು ಮಾತ್ರ ಜಾತಿಯ ಮುಖ್ಯಸ್ಥನಾಗಿ ಕಾರ್ಯನಿರ್ವಹಿಸಲು ಸಾಧ್ಯವಿದ್ದಿತು. ತಂಡದ ಎಲ್ಲಾ ಸದಸ್ಯರು ಹಾಗೂ ಎಲ್ಲಾ ಕಿರಿಯ ನಾಯಕರು ಆಯ್ಕೆ ಮಾಡುವ ನಾಯಕನು ತಂಡದ ಮುಖ್ಯಸ್ಥನಾಗುತ್ತಿದ್ದನು.

ಹೀಗೆ ಅಲೆದಾಡುವ ಪ್ರತಿಯೊಂದು ತಂಡಕ್ಕೂ ಓರ್ವ ಸಾಂಪ್ರದಾಯಿಕ ನಾಯಕನಿರುತ್ತಿದ್ದನು. ನಂತರದಲ್ಲಿ ಪಿತೃವಂಶೀಯ ಸ್ವರೂಪದ ರೀತಿನೀತಿಗಳನ್ನಾಧರಿಸಿ ಅನುವಂಶೀಯವಾಗಿ ನಾಯಕನಾಗಬೇಕೆಂಬುದನ್ನು ಮನ್ನಿಸಲಾಯಿತು. ತಂಡದ ಬಹುಮತ ಅಭಿಪ್ರಾಯದ ಮೇರೆಗೆ ಮಾತ್ರ ಮುಖ್ಯಸ್ಥನನ್ನು ಬದಲಿಸಬಹುದಾಗಿತ್ತು.

ನಾಯಕ ಅಥವಾ ಮುಖ್ಯಸ್ಥನು ತಂಡದ ಜಾನುವಾರುಗಳನ್ನು ಸರಕು ಸಾಗಾಣಿಕೆಗೆ ಬಳಸುವಾಗ ತನ್ನ ಅಗತ್ಯಗಳಿಗೆ ತಕ್ಕಷ್ಟು ಮೊತ್ತವನ್ನು ಮಾತ್ರವೇ ಬಳಸಿಕೊಳ್ಳುವ ಅಧಿಕಾರವನ್ನು ಹೊಂದಿರುತ್ತಿದ್ದನು. ಕೆಲವು ತಂಡಗಳ ನಾಯಕರು ಸಾಕಷ್ಟು ಸ್ಥಿತಿವಂತರಾಗಿದ್ದರು ಎಂದು ಹೇಳಬಹುದಾಗಿದೆ. ಪ್ರತಿಯೊಂದು ತಂಡವೂ ಒಂದು ಕುಲ/ಗೋತ್ರಕ್ಕೆ ಸೇರಿದ (ಓರ್ವ ಮೂಲಪುರುಷನ ಸಂತತಿಗೆ ಸೇರಿದ ಮನೆತನ) ಜನರಿಂದ ಕೂಡಿರುತ್ತಿತ್ತು. ಇಂದಿನಂತೆ ಅನೇಕ ಕುಲ ಅಥವಾ ಗೋತ್ರಗಳಿಂದ ಕೂಡಿದ ತಾಂಡಗಳು ಹಿಂದೆ ಇರಲಿಲ್ಲ. ಲಂಬಾಣಿಗಳು ಬಹಳಷ್ಟು ಹಿಂದೆ ತಮ್ಮ ಕುಲವನ್ನು ಬಿಟ್ಟು ಬೇರೆ ಕುಲಗಳಲ್ಲಿ ಪತ್ನಿಯರನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಒಂದೇ ಕುಲದಲ್ಲಿ ವಿವಾಹ ಸಂಬಂಧಗಳನ್ನು ತಡೆಗಟ್ಟುವುದು ಇದರ ಉದ್ದೇಶವಾಗಿತ್ತು. ಕುಲದ ಏಕತೆಯನ್ನು ಕಾಯ್ದುಕೊಳ್ಳಲು ಹೊರಬಾಂಧವ್ಯ ವಿವಾಹ ಪದ್ಧತಿಯನ್ನು ಸಂಪೂರ್ಣವಾಗಿ ಅನುಸರಿಸುವಂತೆ ಮಾಡಲಾಯಿತು. ಇಂತಹ ನಿಯಮಗಳನ್ನು ಉಲ್ಲಂಘಿಸುವುದು ಹೇಯವಾದ ಕೆಲಸ ಎಂದು ಪರಿಗಣಿಸಲಾಗುತ್ತಿದ್ದರಿಂದ ಗೋತ್ರ/ಕುಲದಿಂದ ಹೊರಹಾಕುವ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಈ ಸಂಪ್ರದಾಯವನ್ನು ಲಂಬಾಣಿಗಳ ಎಲ್ಲ ತಂಡಗಳೂ ಅನುಸರಿಸತೊಡಗಿದವು. ಸಾಂಪ್ರದಾಯಿಕ ಧಾರ್ಮಿಕ ಶಾಸನವು ಲಂಬಾಣಿ ಸ್ತ್ರೀಯರ ಶೀಲವನ್ನು ಕಾಪಾಡುವ ಮೂಲವೂ ಆಗಿತ್ತು.

ಮುಖ್ಯಸ್ಥ ಹಾಗೂ ನಾಯಕರ ವಿರುದ್ಧ ಅಸೂಯೆ ಪಡುವ ಸಾಧ್ಯತೆಗಳನ್ನು ತಡೆಯಲು ಅವರು ತಮ್ಮ ಅಧಿಕಾರವನ್ನು ಅನುಚಿತವಾಗಿ ಬಳಸಿಕೊಂಡಾಗ ತಲೆದೋರಬಹುದಾದ ಪರಿಣಾಮಗಳನ್ನು ತಡೆಗಟ್ಟಲು, ಮುಖ್ಯಸ್ಥ ಹಾಗೂ ನಾಯಕರು ಶಿಕ್ಷೆವಿಧಿಸುವ ಅಧಿಕಾರವನ್ನು ದಂಡ ವಿಧಿಸುವುದಕ್ಕೆ ಅಥವಾ ಬಹಿಷ್ಕಾರ ಹಾಕುವುದಕ್ಕೆ ಮಾತ್ರ ಸೀಮಿತಗೊಳಿಸಿದರು. ಸಮುದಾಯದ ನ್ಯಾಯಾಧೀಶನಿಂದ (ಮುಖ್ಯಸ್ಥ ಅಥವಾ ನಾಯಕ) ಯಾವುದೇ ಲಂಬಾಣಿಯು ಸಾವಿಗೀಡಾಗ ಕೂಡದೆಂಬುದೇ ಈ ನೀತಿಯ ಉದ್ದೇಶವಾಗಿತ್ತು. ಅಂತಹ ಅಧಿಕಾರವನ್ನು ಮುಖ್ಯಸ್ಥ ಅಥವಾ ನಾಯಕನಿಗೆ ನೀಡುವುದು ಎಂದರೆ ಪರಮಾಧಿಕಾರ ನೀಡಿದಂತಾಗುತ್ತದೆ. ಅವರು ತಂಡದ ತಂದೆಯಂತೆ ಕಾರ್ಯನಿರ್ವಹಿಸದೇ ಒಡೆಯನಂತೆ ಅಧಿಕಾರ ಚಲಾಯಿಸುತ್ತಾರೆ ಎಂಬುದೇ ಈ ನೀತಿಯ ಹಿಂದಿನ ಉದ್ದೇಶಿವಾಗಿತ್ತು. ಯಾವುದೇ ವ್ಯಕ್ತಿಯನ್ನು ಆರೋಪದಿಂದ ಶಿಕ್ಷೆಗೊಳಪಡಿಸುವ ಪೂರ್ವದಲ್ಲಿ ಐವರು ಪ್ರಮುಖರು ವಿಚಾರಣೆ ನಡೆಸಬೇಕೆಂದೂ ಸಾರಂಗ್ ಕಟ್ಟುಪಾಡು ವಿಧಿಸಿದನು (ಈ ವ್ಯವಸ್ಥೆಯೇ ನಂತರದಲ್ಲಿ ಜಾತಿ ಪಂಚಾಯತಿಯಾಗಿ ರೂಪುಗೊಂಡಿತು). ನ್ಯಾಯಾಧೀಶರು ಎಂದು ನಾಮಕರಣ ಮಾಡಲಾದ ಪ್ರಮುಖರಲ್ಲಿ ಯಾರೊಬ್ಬರ ಬಗ್ಗೆ, ಇಲ್ಲವೆ ಎಲ್ಲರ ಬಗೆಗೆ ಆಕ್ಷೇಪಣೆ ಮಾಡುವ ಹಕ್ಕನ್ನು ಆರೋಪಿಗೆ ನೀಡಲಾಗುತ್ತಿತ್ತು. ನ್ಯಾಯಮಂಡಳಿಯ ಅಧಿಕಾರವನ್ನು ತಿರಸ್ಕರಿಸುವಷ್ಟರ ಮಟ್ಟಿಗೆ ಆರೋಪಿಗೆ ಸ್ವಾತಂತ್ರ್ಯವನ್ನು ನೀಡಲಾಗಿತ್ತು. ಆದರೆ ಬಹಿಷ್ಕಾರದ ಭೀತಿಯಿಂದ ಅಂತಹ ಧೈರ್ಯವನ್ನು ಯಾರೂ ಮಾಡುತ್ತಿರಲಿಲ್ಲ. ಬಹಿಷ್ಕೃತ ವ್ಯಕ್ತಿ ಅನುಚಿತ ರೀತಿಯಿಂದ ಸಮುದಾಯದಲ್ಲಿ ಸೇರಿಕೊಳ್ಳುವುದನ್ನು ತಡೆಗಟ್ಟಲು ಲಂಬಾಣಿ ಅಥವಾ ಲಂಬಾಣಿಗಳ ತಂಡವು ಯಾವುದೇ ಹೊರಗಿನ ವ್ಯಕ್ತಿಯನ್ನು ತಮ್ಮಲ್ಲಿ ಸೇರಿಸಿಕೊಳ್ಳಬಾರದು ಎಂದು ಆದೇಶಿಸಲಾಯಿತು. ಒಂದು ಗುಂಪು ಅಥವಾ ತಂಡವನ್ನು ವಿಸರ್ಜಿಸಬಹುದಾದ ಸನ್ನಿವೇಶ ತಲೆದೋರಿದರೆ ಅಲ್ಲಿಯ ವ್ಯಕ್ತಿಗಳು ತಮ್ಮ ಪೂರ್ವಿಕರ ತಂಡವನ್ನು ಸೇರಬೇಕು ಇಲ್ಲವೆ, ಸ್ವತಂತ್ರವಾಗಿದ್ದುಕೊಂಡೇ ಹೊಸ ತಂಡವನ್ನು ರಚಿಸಿಕೊಳ್ಳಬೇಕೆಂದೂ ಆದೇಶಿಸಲಾಯಿತು.

ಲಂಬಾಣಿಗಳಲ್ಲಿ ಗಂಭೀರ ವ್ಯಾಜ್ಯ ತಲೆದೋರಿದಾಗ, ಆ ಜಗಳವು ಅವರ ಸಂಬಂಧಿಕರನ್ನೊಳಗೊಂಡಂತೆ ವಿಸ್ತರಿಸಿದರೆ ಹಿಂಸೆ-ಸಾವು-ನೋವಿಗೆ ಎಡೆಯಾಗಬಾರದೆಂದು, ಅಂತಹ ಸಮಸ್ಯೆಯನ್ನು ತಡೆಗಟ್ಟಲು ನೀತಿ ನಿಯಮಗಳನ್ನು ಮಾಡಲಾಗಿದೆ. ಪ್ರತಿಯೊಬ್ಬ ಲಂಬಾಣಿಯೂ ವ್ಯಾಜ್ಯದ ಪಕ್ಷಗಳನ್ನು ವಹಿಸದೇ ತಟಸ್ಥ ನಿಲುವನ್ನು ಅನುಸರಿಸಬೇಕೆಂದೇ ನೀತಿಯು ಆದೇಶಿಸುತ್ತದೆ. ನೀತಿ ನಿಯಮಗಳ ಮೂಲಕವೇ ವ್ಯಾಜ್ಯ ಪರಿಹರಿಸಲ್ಪಡಬೇಕೆಂಬುದೇ ಈ ನೀತಿಯ ಉದ್ದೇಶವಾಗಿದೆ. ಒಂದು ವೇಳೆ ಜಗಳವಾಡಿದ ಪಕ್ಷಗಳು ಹೊಡೆದಾಡಲು ಮುಂದಾದರೆ ಮಧ್ಯಸ್ಥಿಕೆ ವಹಿಸಿದವನು ಆ ಕೂಡಲೇ ತನ್ನ ತಲೆಯ ಮೇಲಿನ ಪೇಠಾವನ್ನು ತೆಗೆದು ಜಗಳವಾಡುವವರ ಮಧ್ಯೆ ಎಸೆಯಬೇಕು. ಹೀಗೆ ಮಾಡಿದಾಗಲೂ ಕೆಲವು ಸಂದರ್ಭಗಳಲ್ಲಿ ಜಗಳವಾಡುವವರ ಆಕ್ರೋಶ ತಣ್ಣಗಾಗುವುದಿಲ್ಲ. ಮಧ್ಯಸ್ಥಿಕೆಗಾರನು ತನ್ನ ಕಾರ್ಯವನ್ನು ಆರಂಭಿಸಿದ ನಂತರ ಜಗಳಾಡುವವರು ತಮಗೆ ತಿಳಿದಂತೆ ಕಾದಾಡುವುದು ಶಿಕ್ಷಾರ್ಹ ಅಪರಾಧವೆಂದು ಅವರ ಸಾಂಪ್ರದಾಯಿಕ ನ್ಯಾಯ ಹೇಳುವಂತೆ ದಂಡ ವಿಧಿಸಬೇಕು.

ತಾಂಡದಲ್ಲಿ ನೆಲೆಗೊಂಡ ಏಕಾಭಿಪ್ರಾಯ ಅಥವಾ ಸಾಮುದಾಯಿಕ ಪ್ರಜ್ಞೆ ಗಾಢವಾಗಿದ್ದರಿಂದ ಸಾಂಪ್ರದಾಯಿಕ ನಿಯಮಾವಳಿಗಳಿಗೆ ಬದ್ಧರಾಗಿದ್ದಾರೆ. ಸಂಪ್ರದಾಯಗಳನ್ನು ಅವರು ಪವಿತ್ರ ಎಂದು ಭಾವಿಸುತ್ತಾರೆ. ಈ ಕಾರಣದಿಂದಲೇ ಅವರು ತಮ್ಮ ಸಾಮುದಾಯಿಕ

ನೆಲೆಗಳಲ್ಲಿ ಕಳುವು ಮಾಡದಂತೆ ಈ ಸಂಪ್ರದಾಯಗಳು ತಡೆಗಟ್ಟಿವೆ. ಆದರೆ ತಪ್ಪಿನ ಅಥವಾ ಅಪರಾಧದ ಸ್ವರೂಪವೆಂತಹುದೇ ಇರಲಿ, ನ್ಯಾಯ ಪಂಚಾಯತಿಯಲ್ಲಿ ಅದಕ್ಕೆ ಶಿಕ್ಷೆಯಿದೆ. ಕ್ರಿ.ಶ. ೧೮೦೦ರ ಪೂರ್ವದಲ್ಲಿ ಅತಿ ಗರಿಷ್ಠ ದಂಡ ವಿಧಿಸಿದ ಮೊತ್ತವು ೩೦ ರೂಗಳಷ್ಟಿತ್ತು. ದಂಡದ ರೂಪದಲ್ಲಿ ಸಂಗ್ರಹಿಸಲಾಗುವ ಹಣವನ್ನು ಮದ್ಯ ಸೇವನೆಗಾಗಿ ವ್ಯಯಿಸಲಾಗುತ್ತಿತ್ತು. ಅದರಲ್ಲಿ ಒಂದು ರೂಪಾಯಿ ಮಾತ್ರ ದಂಡದ ಲೆಕ್ಕವನ್ನು ಬರೆಯುವ ಮುಖ್ಯಸ್ಥನಿಗೆ ನೀಡಲಾಗುತ್ತಿತ್ತು.

ನ್ಯಾಯ ವಿಚಾರಣೆಯ ಸನ್ನಿವೇಶದಲ್ಲಿ ವಾದಿ ಮತ್ತು ಪ್ರತಿವಾದಿಗಳು ಅಕ್ಕಪಕ್ಕದಲ್ಲಿ ಕುಳಿತುಕೊಳ್ಳಬೇಕೆಂದು ಕೇಳಿಕೊಳ್ಳಲಾಗುತ್ತಿತ್ತು. ಅವರೀರ್ವರ ಬಲಗೈಯಲ್ಲಿ ಹೊಗೆ ಸೊಪ್ಪಿನ ಪುಟಿಯನ್ನು ಇರಿಸಿ, ಅದನ್ನು ಊದಿ ಹಾರಿಸುವಂತೆ ಕೇಳಿಕೊಳ್ಳಲಾಗುತ್ತಿತ್ತು. (ಇತ್ತೀಚೆಗೆ ವೀಳ್ಯದ ಎಲೆ ಮತ್ತು ಅಡಿಕೆಯನ್ನು ಉಪಯೋಗಿಸುತ್ತಾರೆ). ಅವರ ಜಗಳವು ಕೂಡ ಆ ಪುಡಿಯಂತೆ ಹಾರಿ ಹೋಗಲಿ ಎಂಬುದೇ ಈ ಆಚರಣೆಯ ಸಂಕೇತವಾಗಿರುತ್ತಿತ್ತು. ತಾಂಡಗಳ ಜನರು ಸುತ್ತಲು ಕುಳಿತು ಮದ್ಯ ಸೇವನೆ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಅವರ ಪುರೋಹಿತರು ಅಥವಾ ಕವಿಗಳು ಪೂರ್ವಿಕರನ್ನು ಕುರಿತಾದ ಹಾಡುಗಳನ್ನು ಹಾಡುತ್ತಿದ್ದರು.

ತಮ್ಮ ಉತ್ತರಾಧಿಕಾರಿಗಳ ಕೈಯಲ್ಲಿ ಜೀವನ ಮತ್ತು ಮರಣದ ಅಧಿಕಾರವು ಇರಕೂಡದೆಂದು ಯೋಚಿಸಿದ ಸಾರಂಗನು ಕೊಲೆ ಪ್ರಕರಣದಲ್ಲಿ ಕೊಲೆಯಾದ ವ್ಯಕ್ತಿಯ ಸಂಬಂಧಿಕರು ಹಾಗೂ ಸ್ನೇಹಿತರು ಕೊಲೆಯಾದ ಮೂರು ದಿನಗಳೊಳಗಾಗಿ ಕೊಲೆಗಾರನನ್ನ ಸಾಯಿಸಬಹುದಾಗಿದೆ. ಆ ಅವಧಿಯ ನಂತರ ಯಾವುದೇ ಸೇಡನ್ನು ತೀರಿಸಿಕೊಳ್ಳಲು ಹವಣಿಸಿದರೆ ಅವರಿಗೂ ಅದೇ ನೀತಿಯ ಪ್ರಕಾರ ಶಿಕ್ಷೆಯಾಗುತ್ತದೆ. ಈ ಸಾಮಾನ್ಯ ನಿಯಮದಿಂದಾಗಿ ಯಾವುದೇ ಕೊಲೆಗಾರನು ಸಾವಿನಿಂದ ಪಾರಾಗುವುದು ಅಸಾಧ್ಯವಾಯಿತು. ಆದರೆ ಇಂತಹ ವಿಷಯಕ್ಕೆ ಸಂಬಂಧಿಸಿದ ಸಮಸ್ಯೆಗಳು ಮುಂದುವರೆದು ಆಗಾಗ್ಗೆ ಕೆಲವರು ಬಹಿಷ್ಕಾರದ ಶಿಕ್ಷೆಗೀಡಾಗುತ್ತಿದ್ದರು.

ಸಾರಂಗನ (ರಾಠೋಡ್) ಸಂಘಟನಾ ಬಲ, ಔರಂಗಜೇಬ ಅವನಿಗೆ ತೋರುತ್ತಿದ್ದ ಗೌರವಾಭಿಮಾನ, ಆತನ ವಿರೋಧಿ ಭಗವಾನ ಬರ್ತಿಹ (ವಡಾತ್ಯ) ತೀರ ಅಗೌರವವಾಗಿ ಹೋಗಿದ್ದು ಸಾರಂಗ್‌ನ ಅಧಿಕಾರ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿತ್ತು. ಹೀಗಾಗಿ ಭಗವಾನ ಬರ್ತಿಹನು ಸಾರಂಗ್‌ನ ಜನಪ್ರಿಯತೆ, ಅಧಿಕಾರವನ್ನು ಕಂಡು ಮತ್ಸರ ತಾಳಿದನು. ತತ್ಪರಿಣಾಮವಾಗಿ ಸಾರಂಗ್‌ನ ಕೊಲೆಯಾಯಿತು. ತದನಂತರದಲ್ಲಿ ರಾಠೋಡ್ ಮತ್ತು ವಡಾತ್ಯದ ಗೋತ್ರಗಳ ಮಧ್ಯೆ ಪರಸ್ಪರ ಯುದ್ಧಗಳು ಸಂಭವಿಸಿದವು ಎಂದು ಕೆಲವರು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ.

ನಂತರದ ಲಂಬಾಣಿ ಹಾಗೂ ಬ್ರಿಟಿಷರ ನಡುವಿನ ಸಂಬಂಧಗಳು ಮೂಲಭೂತವಾಗಿ ರಾಜಕೀಯ ಹಾಗೂ ಆರ್ಥಿಕ ಸ್ವರೂಪದ್ದಾಗಿದ್ದವು. ಈ ಸಂಬಂಧಗಳು ಬ್ರಿಟಿಷರ ಅನುಕೂಲದ ದೃಷ್ಟಿಯಿಂದಲೇ ಏರ್ಪಟ್ಟವುಗಳಾಗಿದ್ದವು. ಮೈಸೂರಿನ ಟಿಪ್ಪು ಸುಲ್ತಾನನ ವಿರುದ್ಧ (೧೭೯೧-೧೭೯೯) ಹಾಗೂ ಮರಾಠರ ವಿರುದ್ಧ (೧೮೦೩) ಬ್ರಿಟಿಷರು ಮಾಡಿದ ಯುದ್ಧಗಳಲ್ಲಿ ಲಂಬಾಣಿಗಳು ವಹಿಸಿದ ಪಾತ್ರವನ್ನು ಬಹುವಾಗಿ ಪ್ರಶಂಸಿಸಲಾಗಿದೆ (ಅದೇ ಪುಸ್ತಕದ ೧೮೩-೮೮ ಪುಟಗಳನ್ನು ನೋಡಿರಿ). ಆದರೆ ಬ್ರಿಟಿಷರು ವಿಶ್ವಾಸಕ್ಕೆ ಚ್ಯುತಿಯಾಗಿ ನಡೆದುಕೊಂಡಿದ್ದರಿಂದ ಹಾಗೂ ಲಂಬಾಣಿಗಳಲ್ಲಿಯ ಕ್ರೂರ ಆಚರಣೆಗಳಿಂದಾಗಿ ಅವರು ಬ್ರಿಟಿಷರ ದೌರ್ಜನ್ಯಕ್ಕೆ ತುತ್ತಾದರು. ಕೆಲವು ಲಂಬಾಣಿಗಳನ್ನು ಅವರು ನೇಣು ಹಾಕಿದರು (ಅದೇ ಪುಸ್ತಕದ ೧೮೬-೮೭ ಹಾಗೂ ೧೯೦-೯೧ ಪುಟಗಳನ್ನು ನೋಡಿರಿ). ಲಂಬಾಣಿಗಳ ತಂಡಗಳು ಮುಖ್ಯ ರಸ್ತೆಗಳಿಂದ ದೂರದ ಹಳ್ಳಿಗಾಡಿನ ಕಿರುದಾರಿಗಳಿಂದ ಸಂಚರಿಸುತ್ತಿದವು. ಹೀಗೆ ಒಳನಾಡಿನ ಪ್ರದೇಶಗಳಲ್ಲಿ

ಸಂಚರಿಸುವುದು ಅಂದಿನ ಕಾನೂನು ಮತ್ತು ಸುವ್ಯವಸ್ಥೆಗೆ ತೃಪ್ತಿಕರವಾಗಿತ್ತು. ಆದುದ್ದರಿಂದ ಸರಕು ಸಾಗಾಣಿಕೆಗಳಿಗೆ ಲಂಬಾಣಿಗಳನ್ನೇ ಆಯ್ಕೆಮಾಡಿದ್ದು ಅನುಕೂಲಕರವಾಗಿತ್ತು. ಯುದ್ಧದ ಸಮಯಗಳಲ್ಲಂತೂ ಅವರ ಸೇವೆಗಳು ಅಗತ್ಯವಾಗುತ್ತಿದ್ದವು. ಸರಕುಗಳ ಸಾಗಾಣಿಕೆಗೆ ಲಂಬಾಣಿಗಳನ್ನೇ ಆಯ್ದುಕೊಳ್ಳುವುದರಿಂದ ಬ್ರಿಟಿಷ್ ಸರಕಾರಕ್ಕೆ ಅನೇಕ ಪ್ರಯೋಜನಗಳಿದ್ದವು. ಅನೇಕ ಸೈನಿಕರನ್ನೊಳಗೊಂಡ ಪಡೆಗಳನ್ನು ನೇಮಿಸಿಕೊಳ್ಳುವುದು ತಪ್ಪುತ್ತಿತ್ತು. ಸರಕುಗಳ ಸಾಗಾಣಿಕೆಗೆ ಕಾಯಂ ಆದ ಸಾರ್ವಜನಿಕ ಸೇವಾ ಸಿಬ್ಬಂದಿಯನ್ನು ನೇಮಿಸಿಕೊಳ್ಳುವುದು ತಪ್ಪುತಿತ್ತು. ಆಹಾರ ಧಾನ್ಯಗಳ ಬೆಲೆಗಳಲ್ಲಿ ಆಗಬಹುದಾದ ಏರಿಳಿತಗಳನ್ನು ನಿರೀಕ್ಷಿಸುವ ಅಪಾಯವಿರಲಿಲ್ಲ. ಅಲ್ಲದೇ ಬೆಲೆಗಳಲ್ಲಿ ವ್ಯತ್ಯಯವಾಗುವ ತೊಂದರೆಯಿರಲಿಲ್ಲ. ಬ್ರಿಟಿಷ್ ಹಾಗೂ ನಿಜಾಮರ ಸೈನ್ಯಗಳನ್ನು ದಕ್ಷಿಣದ ಪ್ರಾಂತ್ಯಗಳಲ್ಲಿ ಮರಾಠರು ಕೊಳ್ಳೆ ಹೊಡೆಯುತ್ತಿದ್ದರು. ಇಂತಹ ಯಾವುದೇ ತೊಂದರೆಗಳನ್ನು ಎದುರಿಸದೇ ಆಹಾರಧಾನ್ಯಗಳು, ಸರಕುಗಳು ಲಂಬಾಣಿಗಳಿಂದ ಕಡಿಮೆ ಬೆಲೆಗೆ ಸರಬರಾಜಾಗುತ್ತಿದ್ದುದರಿಂದ ಲಂಬಾಣಿಗಳ ಸೇವೆ ಬ್ರಿಟಿಷ್ ಸರಕಾರಕ್ಕೆ ಅತ್ಯಂತ ಅನುಕೂಲಕರವಾಗಿತ್ತು. ವೆಚ್ಚ ಹಾಗೂ ಅಪಾಯದ ದೃಷ್ಟಿಯಿಂದ ಭಾರೀ ಪ್ರಯೋಜನಕಾರಿಯೂ ಆಗಿತ್ತು.

೧೮೫೮ರಲ್ಲಿ ಭಾರತದಲ್ಲಿ ಬ್ರಿಟಿಷ್ ಸರಕಾರವು ನೇರ ಆಳ್ವಿಕೆಯನ್ನು ಆರಂಭಿಸಿದ ನಂತರದಲ್ಲಿ ಸಾರಿಗೆ ವ್ಯವಸ್ಥೆಯಲ್ಲಿ ಗಣನೀಯ ಸುಧಾರಣೆಗಳನ್ನು ಜಾರಿಗೊಳಿಸಿತು. ಆ ಕಾರಣದಿಂದಾಗಿ ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಲಂಬಾಣಿಗಳು ಸರಕು ಸಾಗಾಣಿಕೆಯ ಉದ್ಯೋಗಗಳನ್ನು ಕಳೆದುಕೊಂಡರು. ಸೈನ್ಯಗಳಿಗೆ ಸರಕುಗಳನ್ನು ಸಾಗಾಣಿಕೆ ಮಾಡುವ ಉದ್ಯೋಗಗಳಿಂದಲೂ ವಂಚಿತರಾದರು. ಅದರ ಪರಿಣಾಮವಾಗಿ ಅವರು ಕೊಳ್ಳೆ ಹೊಡೆಯುವ ಹಾಗೂ ದರೋಡೆ ಮಾಡುವ ಜೀವನಕ್ರಮವನ್ನೇ ಅನುಸರಿಸತೊಡಗಿದರು. ಮೊಘಲ್ ಸೈನ್ಯಗಳಿಗೆ ತಮ್ಮ ಸೇವೆಸಲ್ಲಿಸುತ್ತಿದ್ದ ಅವಧಿಯಲ್ಲಿ ಅವರು ಕೊಳ್ಳೆ ಹೊಡೆಯುವ ಹಾಗೂ ದರೋಡೆ ಮಾಡುವುದನ್ನು ಕಲಿತುಕೊಂಡಿದ್ದರು. ಶಾಂತಿ ವ್ಯವಸ್ಥೆಯನ್ನು ಕಾಪಾಡುವ ಉದ್ದೇಶದಿಂದ ಬ್ರಿಟಿಷ್ ಆಡಳಿತಗಾರರು ಕಾನೂನು ವಿರೋಧಿ ಚಟುವಟಿಕೆಗಳನ್ನು ಮಾಡುವವರ ಮೇಲೆ ಕ್ರಮಕ್ಕೆಗೊಳ್ಳಬೇಕಾಯಿತು. ೧೮೭೧ರ ಅಪರಾಧಿ ಬುಡಕಟ್ಟುಗಳ ಶಾಸನದಡಿಯಲ್ಲಿ ಬ್ರಿಟಿಷ್ ಸರಕಾರವು ಲಂಬಾಣಿಗಳನ್ನು ಸೇರಿಸಿತ್ತು. ಅಲ್ಲದೇ ಅವರು ಒಂದೆಡೆ ನೆಲೆನಿಂತು ಶಾಂತಿಯುತವಾದ ಆರ್ಥಿಕ ಚಟುವಟಿಕೆಗಳನ್ನು ಅನುಸರಿಸುವಂತೆ ಒತ್ತಾಯಿಸಿತು. ಭಾರತದ ಸರಕಾರವು ಅನುಶಾಸನಗೊಳಿಸಿದ ಆಡಳಿತಾತ್ಮಕ ಕ್ರಮಗಳಿಂದಾಗಿ ಲಂಬಾಣಿ ಸಮಾಜವು ಉದ್ಯೋಗ ಹಾಗೂ ಆರ್ಥಿಕ ಬದಲಾವಣೆಗಳೊಂದಿಗೆ ಉಳಿದ ಕ್ಷೇತ್ರಗಳಲ್ಲಿಯೂ ಗಣನೀಯ ಪರಿವರ್ತನೆಯನ್ನು ಕಂಡಿದೆ.

### ನೆಲೆನಿಂತ ನಂತರದಲ್ಲಿ ಲಂಬಾಣಿಗಳಲ್ಲಿ ರಾಜಕೀಯ ಸಂಘಟನೆ

ಲಂಬಾಣಿಗಳು ಅಲೆಮಾರಿತ್ವವನ್ನು ತ್ಯಜಿಸಿ ಒಂದೆಡೆ ಕಾಯಂ ಆಗಿ ನೆಲೆನಿಂತ ನಂತರದಲ್ಲಿ ಮೊದಲಿನ ಮುಖ್ಯಸ್ಥನ ಪರಿಕಲ್ಪನೆ ತನ್ನ ಔಚಿತ್ಯವನ್ನು ಕಳೆದುಕೊಂಡಿತು. ಒಂದೆಡೆ ನೆಲೆ ನಿಂತನಂತರದಲ್ಲಿಯೂ ತಂಡ (ಪದವು ತಾಂಡವಾಗಿ) ಉಳಿದುಕೊಂಡಿತ್ತು. ಇದು ಅವರ ಐತಿಹಾಸಿಕ ಜೀವನದ ರೀತಿನೀತಿಗಳ ಮಹತ್ವದ ಕುರುಹು ಎಂಬಂತೆ ಇದೆ. ಅಲೆಮಾರಿ ಜೀವನದ ಇತಿಹಾಸದಲ್ಲಿ ಉಳಿದುಳಿದ ಹಿಂದಿನ ನಾಯಕರು ಹಾಗೂ ಸಂಸ್ಥೆಗಳು ಈ ಕೆಳಗಿನಂತಿವೆ.

ತಾಂಡದ ಮುಖ್ಯಸ್ಥನನ್ನು ನಾಯಕ ಎಂದು ಕರೆಯಲಾಗುತ್ತದೆ. ನಾಯಕಪಟ್ಟವು ಒಂದು ಮಹತ್ವದ ಸ್ಥಾನವಾಗಿತ್ತು. ಆ ಹುದ್ದೆಯು ಅನುವಂಶಿಕವಾಗಿತ್ತು ಎಂಬುದಾಗಿ ಕ್ಯಾಂಪ್‌ಬೆಲ್ ೧೮೮೪:೨೧೦, ಎಂಥೋವನ್ ೧೯೨೨:೩೩೪, ಮ್ಯಾಕ್ ಗ್ರೆಗೊರ್ ೧೯೧೨:೨೮೩

ಉಲ್ಲೇಖಿಸಿದ್ದಾರೆ. ನಾಯಕನ ಕುಟುಂಬದಲ್ಲಿ ಯಾವುದೇ ಪ್ರತಿನಿಧಿಯಿಲ್ಲವಾದರೆ, ಅದೇ ಕುಲದಲ್ಲಿಯ ಮತ್ತೋರ್ವ ವ್ಯಕ್ತಿಯನ್ನು ಆಯ್ಕೆಮಾಡುವ ಪರಿಪಾಟವಿತ್ತು. ಅದೇ ಕುಲದಲ್ಲಿಯ ವ್ಯಕ್ತಿಯನ್ನು ನಾಯಕ ಪಟ್ಟಕ್ಕೆ ಆಯ್ಕೆ ಮಾಡಲೇಬೇಕೆಂದಿಲ್ಲ. ತಾಂಡದೊಳಗಿನ ಇತರ ಕುಲಗಳ ವ್ಯಕ್ತಿಗಳನ್ನೂ ಈ ಹುದ್ದೆಯ ಆಯ್ಕೆಗೆ ಪರಿಗಣನೆ ಮಾಡಬಹುದಾಗಿದೆ. ಚುನಾವಣೆ ಅಥವಾ ಆಯ್ಕೆಯ ನಂತರ ಹೊಸ ನಾಯಕನಿಗೆ ಸಮೀಪದ ತಾಂಡಗಳ ನಾಯಕರ ಸಮಕ್ಷಮದಲ್ಲಿ ರುಮಾಲು (ಪೇಠಾ) ಬಟ್ಟೆಗಳನ್ನು ಕಾಣಿಕೆಯಾಗಿ ನೀಡಲಾಗುತ್ತದೆ. ಈ ಕಾರ್ಯಕ್ರಮವು ಹೊಸ ನಾಯಕನನ್ನು ಮನ್ನಿಸುವ ದ್ಯೋತಕವಾಗಿದೆ. ಅಧ್ಯಯನ ನಡೆಸಿದ ಜಿಲ್ಲೆಯಲ್ಲಿ ನಾಯಕನು ಈರ್ವರು ಸಹಾಯಕರನ್ನು ಸಾಮಾನ್ಯವಾಗಿ ಆಯ್ಕೆ ಮಾಡಿಕೊಳ್ಳುತ್ತಾನೆ. ಅವರಲ್ಲಿ ಓರ್ವನು (ಧಾವೊ) ಉಪನಾಯಕ ಹಾಗೂ ಇನ್ನೋರ್ವನು ಕಾರಭಾರಿ ನಿರ್ವಾಹಕ ಅಥವಾ ಸಲಹಾಗಾರನಾಗಿರುತ್ತಾನೆ. ತಾಂಡದೊಳಗಿನ ಸುವ್ಯವಸ್ಥೆಯನ್ನು ಕಾಪಾಡುವುದು ನಾಯಕನ ಹೊಣೆಗಾರಿಕೆಯಾಗಿದೆ. ತಾಂಡದ ಕ್ಷೇಮಾಭಿವೃದ್ಧಿಯ ಸಾಮಾನ್ಯ ಕರ್ತವ್ಯವು ಆತನದಾಗಿರುತ್ತದೆ. ತಾಂಡದಲ್ಲಿಯ ಎಲ್ಲ ಜನರ ನಿಕಟ ಪರಿಚಯವು ಆತನಿಗಿರುತ್ತದೆ. ಅಲ್ಲಿಯ ಎಲ್ಲ ಕುಟುಂಬಗಳ ಆಗುಹೋಗುಗಳ ಬಗೆಗೆ ಸಂಪೂರ್ಣ ಮಾಹಿತಿ ಇರುತ್ತದೆ. ತಾಂಡದಲ್ಲಿ ಯಾವುದೇ ವ್ಯಕ್ತಿ ಮಹತ್ವದ ಕೆಲಸವನ್ನು ಕೈಗೊಳ್ಳುವ ಮೊದಲು ನಾಯಕನೊಡನೆ ಸಮಾಲೋಚಿಸುತ್ತಾನೆ. ತಾಂಡದ ನಾಯಕನು ತಾಂಡದ ಹಾಗೂ ಸರಕಾರಿ ಅಧಿಕಾರಿಗಳ ಮಧ್ಯೆ, ತಾಂಡ ಹಾಗೂ ಲಂಬಾಣೇತರ ಜನರ ಗುಂಪುಗಳ ಮಧ್ಯೆ ಕೊಂಡಿಯಂತೆ ವ್ಯವಹರಿಸುತ್ತಾನೆ. ಆತನು ಸತ್ಯವಂತನಾಗಿರಬೇಕು, ಪ್ರಾಮಾಣಿಕನಾಗಿರಬೇಕು, ಜಾಣನಾಗಿರಬೇಕು ಹಾಗೂ ನಿಷ್ಪಕ್ಷಪಾತ ಮನೋಭಾವದ ತಿಳುವಳಿಕಸ್ಥನಾಗಿರಬೇಕು ಎಂದು ನೀರಿಕ್ಷಿಸಲಾಗುತ್ತದೆ. ಸಾಮಾನ್ಯವಾಗಿ ಆತನು ಸಾಮರ್ಥ್ಯವನ್ನುಳ್ಳ ವ್ಯಕ್ತಿಯಾಗಿದ್ದು, ತಾಂಡದೊಳಗೆ ನೈಸರ್ಗಿಕ ವಿಪತ್ತುಗಳಿಂದ, ಪ್ರಕೋಪಗಳಿಂದ ಹಾಗೂ ಬರಗಾಲ ಮೊದಲಾದವುಗಳಿಂದ ಆಗುವ ತೊಂದರೆಗಳನ್ನು ನಿವಾರಿಸಲು ಪರಿಹಾರ ಕ್ರಮಗಳನ್ನು ಸಂಘಟಿಸಬಲ್ಲವನಾಗಿರುತ್ತಾನೆ. [೧೦]

ವಿವಾಹ ಸಂಬಂಧೀ ಮಾತುಕತೆಗಳ ಸಂದರ್ಭದಲ್ಲಿ ಮುಖ್ಯಸ್ಥನು ತನ್ನ ತಾಂಡದ ಕುಟುಂಬದೊಂದಿಗೆ ಹೋಗಿ ಮಧ್ಯಸ್ಥಿಕೆ ವಹಿಸುತ್ತಾನೆ. ವಿವಾಹದ ಎರಡೂ ಕಡೆಗಳ (ಗಂಡು ಮತ್ತು ಹೆಣ್ಣು) ವೆಚ್ಚವನ್ನು ನಿರ್ಧರಿಸುವಲ್ಲಿ ಆತನು ಕೆಲವು ಸಂದರ್ಭಗಳಲ್ಲಿ ಖಚಿತವಾದ ತೀರ್ಮಾನ ಮಾಡಬಲ್ಲವನಾಗಿದ್ದಾನೆ. ಎರಡೂ ಕಡೆಗಳಿಂದ ತನ್ನ ಸುಂಕವನ್ನು (ಸಾಂಪ್ರದಾಯಿಕವಾಗಿ ನೀಡಲಾಗುವ ಹಣ) ಪಡೆಯುವ ಹಕ್ಕು ಆತನದಾಗಿರುತ್ತದೆ.

ಪಂಚಾಯಿತಿಯ ಪ್ರತಿಯೊಂದು ಸಭೆಯಲ್ಲಿ ಆತನು ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡು ಸಭೆಯನ್ನು ನಡೆಸುತ್ತಾನೆ. ತುರ್ತು ಸನ್ನಿವೇಶದಲ್ಲಿ ಅಥವಾ ನಾಯಕನ ಅನುಪಸ್ಥಿತಿಯಲ್ಲಿ ಆತನ ಸಹಾಯಕ ಧಾವೋ ಸಭೆಯನ್ನು ನಡೆಸುತ್ತಾನೆ. ಉಳಿದ ಸಂದರ್ಭಗಳಲ್ಲಿ ಈತನು ನಾಯಕನ ಸಹಾಯಕನಾಗಿ ಮಾತ್ರವೇ ಕಾರ್ಯನಿರ್ವಹಿಸುತ್ತಾನೆ. ಕ್ಲಿಷ್ಟ ಸ್ವರೂಪದ ವಿಷಯ ಅಥವಾ ವ್ಯಾಜ್ಯಗಳ ಪರಿಹಾರದಲ್ಲಿ ನಾಯಕನಿಗೆ ಕಾರಭಾರಿ ಸಲಹೆ ಮಾಡುವ ಹಾಗೂ ನೆರವಾಗುವ ಸಾಮರ್ಥ್ಯವನ್ನು ಹೊಂದಿರಬೇಕು. ನಾಯಕ ತೀರಿಹೋದಾಗ ದೂತನಂತೆ ಕಾರ್ಯನಿರ್ವಹಿಸುತ್ತಾನೆ. ಲಂಬಾಣಿ ಮತ್ತು ಲಂಬಾಣೇತರ ಕೃಷಿಕರನ್ನೊಳಗೊಂಡ ವ್ಯಾಜ್ಯಗಳನ್ನು ಕೊಲೆ ಅಥವಾ ಕಾರಭಾರಿಯು

---

೧೦. *ಉತ್ತರಭಾರತದ ಜಾಟರಲ್ಲಿಯ ಜಾತಿ ಪಂಚಾಯಿತಿಯ ಸರಪಂಚನ (ಮುಖ್ಯಸ್ಥನ) ಲಕ್ಷಣಗಳನ್ನು ಹಾಗೂ ಪಂಚರ ಸದಸ್ಯರ ಗುಣವಿಶೇಷಗಳನ್ನು ಪ್ರಧಾನರು ವಿವರವಾಗಿ ಸಾದರಪಡಿಸಿದ್ದಾರೆ (೧೯೬೬ : ೧೩೯, ೧೪೯, ೧೪೪, ೧೪೯, ೨೧೭-೧೮, ೨೨೦).*

ನಾಯಕನಿಗೆ ಆತನ ಕಾರ್ಯನಿರ್ವಹಣೆಯಲ್ಲಿ ನೆರವಾಗುತ್ತಾನೆ. ಪಂಚಾಯಿತಿಯ ಸಭೆಗಳನ್ನು ಕರೆಯುವಾಗ ಆತನು ಹೊರಗಿನ ಹಾಗೂ ಹೊಸ ನಾಯಕನ ಆಯ್ಕೆಯಾಗುವ ಮಧ್ಯಂತರವ ಅವಧಿಯಲ್ಲಿ ತಾಂಡದ ಎಲ್ಲ ಸಾಂಪ್ರದಾಯಿಕ ವ್ಯವಹಾರಗಳನ್ನು ಸಾಮಾನ್ಯವಾಗಿ ಧಾವೋ ನಿರ್ವಹಿಸುತ್ತಾನೆ. ಆಗ ಧಾವೋ ನಾಯಕನಾಗಿಯೂ, ಕಾರಭಾರಿಯೂ ಆಗಿ ಕೆಲಸಮಾಡುತ್ತಾನೆ. ನಾಯಕನ ಉತ್ತರಾಧಿಕಾರಿಯ ಆಯ್ಕೆಯಲ್ಲಿ ಅನುಸರಿಸಲಾಗುವ ಸಾಂಪ್ರದಾಯಿಕ ವಿಧಾನವನ್ನೇ ಕಾರಭಾರಿ ಸ್ಥಾನದ ಉತ್ತರಾಧಿಕಾರಿಯ ಆಯ್ಕೆಯಲ್ಲೂ ಅನುಸರಿಸಲಾಗುತ್ತದೆ.

ಈ ಮೂವರು ಸಾಂಪ್ರದಾಯಿಕ ಅಧಿಕಾರಿಗಳ ಅಧಿಕಾರದ, ಗೌರವಗಳು ಈ ತೆರನಾಗಿರುತ್ತವೆ. ವಿವಾಹಗಳು ನಿಶ್ಚಯದ ಕೊನೆಯಲ್ಲಿ ಸೇರಿದ ಜನರಿಗೆ ಎಲೆ, ಅಡಿಕೆ ಮತ್ತು ಬೆಲ್ಲವನ್ನು ನೀಡಲಾಗುತ್ತದೆ. ಈ ಮೂವರು ಪ್ರತಿಷ್ಠಿತರಿಗೆ ಮೊದಲಿಗೆ ಅವುಗಳನ್ನು ನೀಡಲಾಗುತ್ತದೆ. ಅವರ ಸಾಂಪ್ರದಾಯಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಅದೇ ನಿಯಮವನ್ನು ಅನುಸರಿಸಿ ವಿತರಿಸಲಾಗುತ್ತದೆ. ಮೊದಲಿಗೆ ಮುಖ್ಯಸ್ಥ, ಅನಂತರದಲ್ಲಿ ಧಾವೋ ಹಾಗೂ ನಂತರದಲ್ಲಿ ಕಾರಭಾರಿ ಹಾಗೂ ಇತರ ಸದಸ್ಯರುಗಳು ವೀಳ್ಯವನ್ನು ಪಡೆಯುತ್ತಾರೆ. ಮೇಕೆ ಅಥವಾ ಕುರಿಯ ಹಸಿ ಮಾಂಸವನ್ನು ಇಲ್ಲವೆ ಬೇಯಿಸಿದ ಮಾಂಸವನ್ನು ಹಂಚುವಾಗಲೂ ಆ ಪ್ರಾಣಿಯ ಹಿಂದಿನ ಕಾಲಿನ ಮೇಲು ಭಾಗದಲ್ಲಿ (ತೊಡೆಮಾಂಸ) ಒಂದನ್ನು ನಾಯಕನಿಗೆ ಹಾಗೂ ಇನ್ನೊಂದನ್ನು ಕಾರಭಾರಿಗೆ ಮತ್ತು ಮುಂದಿನ ಕಾಲುಗಳ ಮೇಲುಭಾಗದಲ್ಲಿ ಒಂದನ್ನು ಧಾವೋನಿಗೆ ಹಾಗೂ ಇನ್ನೊಂದನ್ನು ವಾಡತ್ಯ ಕುಲದ ಮುಖ್ಯಸ್ಥನಿಗೆ ನೀಡಲಾಗುತ್ತದೆ. ಹೀಗೆ ಪಡೆಯಲಾಗುವ ವಿಶೇಷ ಸೌಲಭ್ಯಗಳು ಲಂಬಾಣಿ ನಾಯಕತ್ವದ ಪ್ರತಿಷ್ಠೆ, ಗೌರವ ಹಾಗೂ ಅಂತಸ್ತಿನ ದ್ಯೋತಕವಾಗಿವೆ. ವಡಾತ್ಯ ಕುಲವು ಲಂಬಾಣಿಗರ ಮೂರು ಪ್ರಮುಖ ಕುಲಗಳಾಚೆಗೆ ಇರುವುದನ್ನೂ ಈ ಎಲ್ಲ ಅಂಶಗಳು ಸ್ಪಷ್ಟಪಡಿಸುತ್ತವೆ. ಈ ಎಲ್ಲ ಜನರೂ ಒಟ್ಟಾಗಿ ಚಾಟಭಾಯಿ ಎಂಬ ಘಟಕವಾಗಿದ್ದಾರೆ.

ಮೇಕೆ ಅಥವಾ ಕುರಿಗಳ ಮಾಂಸವನ್ನು ಹಂಚುವಿಕೆಯಲ್ಲಿ ರಕ್ತಬಾಂಧವ್ಯಕ್ಕಿಂತ ಮಿಗಿಲಾಗಿ ಸಾಂಪ್ರದಾಯಿಕ ರಾಜಕೀಯ ಅಂತಸ್ತಿಗೆ ಹೆಚ್ಚಿನ ಮಹತ್ವವನ್ನು ನೀಡುವುದನ್ನು ಈ ಆಚರಣೆಗಳು ಸೂಚ್ಯವಾಗಿ ಸಾರುತ್ತವೆ. ರಾಜಕೀಯ ಅರ್ಹತೆಗಳಿಗೆ ಅನುಗುಣವಾಗಿ ಹಂಚಿಕೆ ಮಾಡಿದ ನಂತರವೇ ರಕ್ತಸಂಬಂಧೀ ಸದಸ್ಯರಿಗೆ, ಅವರ ಅಂತಸ್ತಿಗೆ ಅನುಗುಣವಾಗಿ ವಿತರಿಸಲಾಗುತ್ತದೆ. ಸ್ವಜಾತೀಯರು, ಒಂದೇ ತಾಯಿಯ ಮಕ್ಕಳು, ವಿವಾಹ ಸಂಬಂಧಿಗಳು ಹೀಗೆ ಇತ್ಯಾದಿ ಕ್ರಮವನ್ನು ಅನುಸರಿಸಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಹೊರಗಿನಿಂದ ಆಗಮಿಸಿದ ಆತಿಥಿಗಳು ಕೂಡ ಗೌರವದ ಸಂಕೇತವಾಗಿ ಕೆಲವು ಮಾಂಸದ ತುಂಡುಗಳನ್ನು ಸ್ವೀಕರಿಸುತ್ತಾರೆ.

ತಾಂಡದ ಪಂಚಾಯಿತಿಯಲ್ಲಿ ನಾಯಕನು ಪ್ರಮುಖನಾಗಿರುತ್ತಾನೆ. ಅವನ ಇಬ್ಬರು ಸಹಾಯಕರು ಹಾಗೂ ೪-೫ ಜನ ಹಿರಿಯರು ಆದರ ಸದಸ್ಯರಾಗಿರುತ್ತಾರೆ. ತಾಂಡವನ್ನು ಬಾಧಿಸುವ ಎಲ್ಲ ವಿಷಯ ಅಥವಾ ಸಮಸ್ಯೆಗಳ ಬಗೆಗೆ ಅದು ತೀರ್ಮಾನಗಳನ್ನು ಕೈಗೊಳ್ಳುತ್ತದೆ. ತಾಂಡದಲ್ಲಿ ತಲೆದೋರುವ ವ್ಯಾಜ್ಯಗಳನ್ನು ಪರಿಹರಿಸುತ್ತದೆ. ವ್ಯಾಜ್ಯದ ಒಂದು ಪಕ್ಷವು ಲಂಬಾಣೇತರ ವ್ಯಕ್ತಿಯಾಗಿದ್ದರೆ, ಲಂಬಾಣೇತರ ಹಿರಿಯರ ಉಪಸ್ಥಿತಿ ಅಗತ್ಯವಾಗುತ್ತದೆ. ಲಂಬಾಣಿ ಹಾಗೂ ಲಂಬಾಣೇತರ ವ್ಯಾಜ್ಯಗಳಲ್ಲಿ ಸರ್ವೇ ಸಾಮಾನ್ಯವಾಗಿ ಲಂಬಾಣಿಯು ಲಂಬಾಣೇತರ ಗ್ರಾಮ ಪಂಚಾಯಿತಿಯಲ್ಲಿ ತನ್ನ ಅಹವಾಲನ್ನು ನೀಡುತ್ತಾನೆ. ಲಂಬಾಣಿ ತಾಂಡದೊಳಗಿನ ಪಂಚಾಯಿತಿಯು ವ್ಯಾಜ್ಯ ಪರಿಹರಿಸುವ ಸಂದರ್ಭದಲ್ಲಿ ಸಭೆಯಲ್ಲಿ ಉಪಸ್ಥಿತನಿರುವ ಪ್ರತಿಯೊಬ್ಬ ಲಂಬಾಣಿಯು ತಮಗೆ ಸರಿ ಎನಿಸುವ ಪಕ್ಷದ ಪರವಾಗಿ ವಾದಮಾಡಬಹುದಾಗಿದೆ. ಆದರೆ ಒಟ್ಟಾರೆ ಅಭಿಪ್ರಾಯದ ಮೇರೆಗೆ ನಾಯಕರು (ಲಂಬಾಣೇತರ ಮತ್ತು ಲಂಬಾಣಿ) ನೀಡುವ ತೀರ್ಪು ಅಂತಿಮವಾಗಿರುತ್ತದೆ. ವ್ಯಾಜ್ಯ ಪರಿಹಾರ ಮಾಡುವಾಗ ಎಲ್ಲ ಸದಸ್ಯರೂ ಅಗತ್ಯವಾಗಿ ಇರಲೇಬೇಕೆಂದಿಲ್ಲ ಆದರೆ ನಾಯಕರುಗಳ ಉಪಸ್ಥಿತಿ ಮಾತ್ರ ಅಗತ್ಯವಾಗಿರುತ್ತದೆ.

ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳಲ್ಲಿ ಲಂಬಾಣಿಗಳ ನಾಲ್ಕು ಪಂಗಡಗಳು ಇವೆಯಾದರೂ ಅಲ್ಲಿಯ ಪಂಚಾಯಿತಿಗಳಲ್ಲಿ ಆ ಎಲ್ಲ ಪಂಗಡಗಳ ಪ್ರತಿನಿಧಿಗಳು ಇಲ್ಲ (ಕೋಷ್ಟಕ ೩.೨ ನೋಡಿರಿ). ನಾಗಲಾಪುರದ ಪಂಚಾಯಿತಿಯಲ್ಲಿ ಏಳು ಸದಸ್ಯರಿದ್ದು, ಅವರಲ್ಲಿ ಐದು ಜನರು ರಾಥೋಡ ಕುಲದವರಾಗಿದ್ದಾರೆ. ಇಬ್ಬರು ಪವಾರ್ ಕುಲದವರಾಗಿದ್ದಾರೆ. ಓರ್ವನು ಚಾರಬ್ಲಾ ಹಾಗೂ ಇನ್ನೋರ್ವನು ಅವು ಸಂತತಿಯವನಾಗಿದ್ದಾನೆ. ಪಂಚಾಯಿತಿಯಲ್ಲಿ ಚವ್ಹಾಣ ಮತ್ತು ವಡಾತ್ಯ ಗೋತ್ರ ಪ್ರತಿನಿಧಿಗಳಲ್ಲಿ ಮರಿಯಮ್ಮನಹಳ್ಳಿ ತಾಂಡದಲ್ಲಿ ರಾಠೋಡ್ ಮತ್ತು ಪವಾರ್ ಗೋತ್ರಗಳು ಪ್ರಬಲವಾಗಿವೆ. ರಾಠೋಡ್‌ರ ೫೦ ಮನೆಗಳಿದ್ದರೆ, ಪವಾರ್‌ರ ೨೩ ಮನೆಗಳಿವೆ, ಹೀಗಾಗಿ ಅವರು ಸಂಖ್ಯೆಯ ದೃಷ್ಟಿಯಿಂದ ಪ್ರಬಲರಾಗಿದ್ದಾರೆ. ಹಾಗೆಯೇ ಆರ್ಥಿಕವಾಗಿಯೂ ಪ್ರಬಲರಾಗಿದ್ದಾರೆ. ನಾಗಲಾಪುರ ತಾಂಡದಲ್ಲಿ ಏಳು ಮನೆಗಳು ರಾಠೋಡ್ (ಭುಖ್ಯಾ) ಗೋತ್ರಕ್ಕೆ ಸೇರಿದ್ದರೆ, ಎರಡು ಮನೆತನಗಳು ಚವ್ಹಾಣ ಗೋತ್ರ ಹಾಗೂ ಒಂದು ವಡಾತ್ಯ ಗೋತ್ರ ಸಂಬಂಧಿಸಿದ್ದಾಗಿದೆ. ಪವಾರ್, ತಾತ್ಕಾಲಿಕ ವಲಸೆಯಿಂದಾಗಿ ಎರಡು ಸ್ಥಾನಗಳು ಖಾಲಿ ಉಳಿದುಕೊಂಡಿವೆ. ತಾಂಡದ ಮುಖ್ಯಸ್ಥನ ಸಾಮಾನ್ಯವಾಗಿ ರಾಠೋಡ್ ಗೋತ್ರದವನೇ ಆಗಿರುತ್ತಾನೆ. ನಾಗಲಾಪುರದಲ್ಲಿಯ ಲಂಬಾಣಿ ಪಂಚಾಯಿತಿಗಳ ಸದಸ್ಯತ್ವವನ್ನು ಗಮನಿಸಿದರೆ ರಾಠೋಡ್ ಮತ್ತು ಪವಾರ್ ಗೋತ್ರಗಳ ಸಂಖ್ಯಾಬಲ ಅಧಿಕವಾಗಿರುವುದು ಹಾಗೂ ಆರ್ಥಿಕವಾಗಿ ಅವರು ಪ್ರಬಲರಾಗಿರುವುದು ಕಂಡುಬರುತ್ತದೆ. ತಾಂಡದಲ್ಲಿಯ ಹಿರಿಯರು ಪಂಚಾಯಿತಿಯ ಸದಸ್ಯತ್ವವನ್ನು ನೀಡಿದ ನಂತರ ಆ ವ್ಯಕ್ತಿಯು ತನ್ನ ಜೀವಿತ ಕಾಲದವರೆಗೂ, ಇಲ್ಲವೇ ಅಸಮರ್ಥನಾಗುವವರೆಗೂ ಆ ಹುದ್ದೆಯಲ್ಲಿ ಮುಂದುವರೆಯುತ್ತಾನೆ. ಆತನ ವರ್ತನೆ ಸರಿಯಿಲ್ಲವೆಂದು ಸದಸ್ಯತ್ವವನ್ನು ರದ್ದುಪಡಿಸುವ ಅಧಿಕಾರ ಜನರಿಗೆ ಇರುತ್ತದೆ. ಈ ಅರ್ಥದಲ್ಲಿ ಪಂಚಾಯಿತಿ ಸದಸ್ಯರ ಅಧಿಕಾರಾವಧಿಯು ನಿರಂತರವಾಗಿದ್ದು, ನಿರ್ದಿಷ್ಟ ಅವಧಿಯವರೆಗೆ ಎಂಬುದಿಲ್ಲ. ಯಾವುದಾದರೂ ಹುದ್ದೆ ಖಾಲಿ ಉಳಿದರೆ ಯೋಗ್ಯ ವ್ಯಕ್ತಿಯನ್ನು ಆಯ್ಕೆ ಮಾಡಲಾಗುತ್ತದೆ. ಆಯ್ಕೆಯು ವಯಸ್ಸು ಮತ್ತು ಅನುಭವವನ್ನು ಆಧರಿಸಿರುತ್ತದೆಯೇ ಹೊರತು ಗೋತ್ರ ಪ್ರಾತಿನಿಧ್ಯದ ನಿಗದಿತ ಪ್ರಮಾಣ ಎಂಬುದು ಇಲ್ಲ.

**ತೀರ್ಪು ನೀಡುವ ವಿಧಿ ವಿಧಾನ**

ಒಂದು ವ್ಯಾಜ್ಯವನ್ನು ಕುರಿತು ಪಂಚಾಯಿತಿಯು ತೀರ್ಪು ನೀಡಬೇಕಾದರೆ ಮೊದಲಿಗೆ ಅನ್ಯಾಯವಾಗಿದೆ ಎಂದು ಹೇಳುವ ವ್ಯಕ್ತಿಯು ವಿವರವಾದ ವರದಿಯನ್ನು ಸಲ್ಲಿಸುತ್ತಾನೆ. ನಾಯಕನಿಗೆ ನೀಡುವ ದೂರಿನಲ್ಲಿ ತನಗಾದ ಅನ್ಯಾಯ ಅಥವಾ ನಷ್ಟವನ್ನು ಕುರಿತು ಮನವಿ ಮಾಡುತ್ತಾನೆ. ನಾಯಕನು ಪಂಚಾಯಿತಿ ಸಭೆಯನ್ನು ಸೇರಿಸಲು ಕಾರಭಾರಿಗೆ ಸೂಚಿಸುತ್ತಾನೆ. ನಿರ್ದಿಷ್ಟ ಸ್ಥಳ ಹಾಗೂ ವೇಳೆಯನ್ನು ನಿಗದಿಪಡಿಸಿ ಸಭೆಯನ್ನು ಕರೆಯಲಾಗುತ್ತದೆ. ಸಾಮಾನ್ಯವಾಗಿ ಸೇವಯಾಭಯ ದೇವಸ್ಥಾನವೇ ಪಂಚಾಯಿತಿ ಸಭೆಯು ನಡೆಯುವ ಸ್ಥಳವಾಗಿರುತ್ತದೆ. ವ್ಯಾಜ್ಯಗಳ ವಿಚಾರಣೆ ನಡೆಯುವಾಗ ಎಲ್ಲರಿಗೂ ಎಲ್ಲವೂ ಸರಿಯಾಗಿ ಕಾಣಲೆಂದು ಸುತ್ತಲೂ ಜನರು ಸೇರುತ್ತಾರೆ. ವಾದಿ, ಪ್ರತಿವಾದಿಗಳು ಮಾತನಾಡಿದ ನಂತರ ವಾದಿ ಮತ್ತು ಪ್ರತಿವಾದಿಗಳ ಪರವಾಗಿ ಸಮರ್ಥನೆ ಮಾಡುವವರು ಮಾತನಾಡಿ ಸಾಕ್ಷ್ಯಾಧಾರಗಳನ್ನು ಒದಗಿಸುತ್ತಾರೆ. ಅದಾದ ನಂತರ ಪಂಚರು ತಮ್ಮಲ್ಲಿ ಚರ್ಚೆಮಾಡುತ್ತಾರೆ. ತಮ್ಮ ಅಭಿಪ್ರಾಯಗಳನ್ನು ನಾಯಕನಿಗೆ ತಿಳಿಸುತ್ತಾರೆ. ಹೀಗೆ ನಾಯಕನ್ನು ಒಂದು ನಿರ್ದಿಷ್ಟ ತೀರ್ಮಾನ ಕೈಗೊಳ್ಳಲು ನೆರವಾಗುತ್ತಾರೆ.

ಹಿಂದೆ ಪ್ರಮಾಣಮಾಡಿದ ನಂತರ ಹೇಳಿಕೆಗಳನ್ನು ನೀಡುವ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಇಂದು ಜನರು ಪ್ರಮಾಣ ಮಾಡುವುದನ್ನು ತೀರ ಹಗುರವಾಗಿ ತೆಗೆದುಕೊಳ್ಳುತ್ತಿರುವುದರಿಂದ ಅದನ್ನು ಕೈಬಿಡಲಾಗಿದೆ. ಎರಡೂ ಕಡೆಯವರು ದೇವರ ಮೇಲೆ ಆಣೆಯಿಟ್ಟು ತಮ್ಮದೇ ಸರಿ ಎಂದು ಹೇಳುವಾಗ ಯಾರು ತಪ್ಪಿತಸ್ಥರು ಎಂಬುದನ್ನು ತೀರ್ಮಾನಿಸುವುದೇ ಕಷ್ಟಕರವಾಗುತ್ತದೆ. ಆದಕಾರಣ ನಾಗಲಾಪುರ ತಾಂಡದಲ್ಲಿ ಪ್ರಮಾಣಮಾಡುವುದನ್ನು, ಆಣೆ ಇಡುವುದನ್ನು ನಿಲ್ಲಿಸಿದ್ದಾರೆ. ಅತ್ಯಂತ ಗಂಭೀರ ಹಾಗೂ ಸಂಕೀರ್ಣವಾದ ವಿಷಯಗಳಿದ್ದಾಗ ಮಾತ್ರ ಸೇವಯಾಭಯನ ಹೆಸರಿನಲ್ಲಿ ಆಣೆ ಮಾಡುತ್ತಾರೆ. ಸುಳ್ಳುಹೇಳಿದವನಿಗೆ ದೇವರು ಒಂದು ತಿಂಗಳೊಳಗಾಗಿ ಶಿಕ್ಷಿಸುತ್ತಾನೆ ಎಂಬ ನಂಬಿಕೆ ಗಾಢವಾಗಿದೆ.

ಬಹುತೇಕ ವ್ಯಾಜ್ಯಗಳಲ್ಲಿ ಪಂಚರು ಸರ್ವಾನುಮತದಿಂದ ತೀರ್ಮಾನವನ್ನು ಕೈಗೊಳ್ಳುತ್ತಾರೆ. ಹಾಗಿಲ್ಲವಾದರೆ ಬಹುಮತದ ತೀರ್ಮಾನವೇ ಅಂತಿಮವಾಗುತ್ತದೆ. ಕೆಲವು ವಿಷಯಗಳಲ್ಲಿ ರಕ್ತಸಂಬಂಧ, ನಂಟಸ್ತಿಕೆ, ನೆರೆಹೊರೆಯವರು ಮತ್ತು ಸ್ನೇಹ ಮೊದಲಾದ ಅಂಶಗಳಿಂದಾಗಿ ಪಂಚಾಯಿತಿ ಸದಸ್ಯರಲ್ಲಿಯೇ ಭಿನ್ನಾಭಿಪ್ರಾಯ ಕಾಣಿಸಿಕೊಳ್ಳುತ್ತದೆ. ಒಂದುವೇಳೆ ವ್ಯಾಜ್ಯದ ಎರಡು ಕಡೆಯವರ ಪರವಾಗಿ ಬಲವಾದ ವಿಭಜನೆಯಾದರೆ ಮತ್ತು ಎರಡೂ ಕಡೆಗಳ ಸಮರ್ಥಕರು ತಮ್ಮ ನಿಲುವನ್ನು ಸಡಿಲಿಸಲು ನಿರಾಕರಿಸಿದರೆ ತೀರ್ಮಾನ ನೀಡುವುದನ್ನು ಕೆಲವು ಸಮಯದವರೆಗೆ ಮುಂದೂಡಲಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಬೇರೆ ತಾಂಡದ ನಾಯಕ ಅಥವಾ ಅನೌಪಚಾರಿಕ ನಾಯಕನನ್ನು ಆಮಂತ್ರಿಸಲಾಗುತ್ತದೆ. ಅಂತಹ ವ್ಯಕ್ತಿಯನ್ನು ವ್ಯಾಜ್ಯವನ್ನು ತೀರ್ಮಾನಿಸಲು ಕೇಳಿಕೊಳ್ಳಲಾಗುತ್ತದೆ. ಈ ಪ್ರದೇಶದ ಲಂಬಾಣಿಗಳಲ್ಲಿ ಪ್ರಾದೇಶಿಕ ಅಥವಾ ಅಂತಸ್ತಿನ ದೃಷ್ಟಿಯಿಂದ ವಿಶೇಷ ಅಥವಾ ಹೆಚ್ಚಿನ ಪಂಚಾಯಿತಿ ಎಂಬುದು ಇಲ್ಲ. ವ್ಯಾಜ್ಯದ ಒಂದು ಪಕ್ಷವು ಸ್ಥಾನಿಕ ಪಂಚಾಯಿತಿಯ ತೀರ್ಮಾನದಿಂದ ತೃಪ್ತನಾಗದಿದ್ದರೆ ಆತನು ಇನ್ನೊಂದು ತಾಂಡದ ಮುಖ್ಯಸ್ಥನ ಹೆಸರನ್ನು ಸೂಚಿಸಬಹುದಾಗಿದೆ. ಪಂಚಾಯಿತಿಗೆ ಆ ಹೆಸರು ಸ್ವೀಕಾರಾರ್ಹ ಎಂದಾದರೆ ಆತನನ್ನು ಬರಮಾಡಿಕೊಳ್ಳುವ ವೆಚ್ಚವನ್ನು ವಾದಿಯೇ ಭರಿಸಬೇಕಾಗುತ್ತದೆ. ಆ ಮೊತ್ತವು ೧೦೦-೧೫೦ರೂ.ಗಳಷ್ಟಾಗಬಹುದು. ಸಾಮಾನ್ಯವಾಗಿ ಲಂಬಾಣೇತರ ಜನರನ್ನು ಲಂಬಾಣಿ ಪಂಚಾಯಿತಿ ಸಭೆಗಳಿಗೆ ಆಹ್ವಾನಿಸಲಾಗುವುದಿಲ್ಲ. ಆದರೆ ಅಂತಹ ಯಾವುದೇ ವ್ಯಕ್ತಿ ಪಂಚಾಯಿತಿ ಸಭೆ ನಡೆದ ಸಂದರ್ಭದಲ್ಲಿ ಸಹಜವಾಗಿಯೇ ಬಂದಿದ್ದಾದರೆ, ಆತನ ಸಹಾಯ-ಸಲಹೆಯನ್ನು ಪಡೆದುಕೊಳ್ಳಲಾಗುತ್ತದೆ. ಆತನು ತಿಳಿವಳಿಕಸ್ಥನಾಗಿದ್ದರೆ, ಲಂಬಾಣಿ ನಾಯಕರು ಆತನ ಅನುಭವದಿಂದ ಪ್ರಯೋಜನ ಪಡೆಯಬಹುದಾಗಿದ್ದರೆ ವ್ಯಾಜ್ಯ ತೀರ್ಮಾನದಲ್ಲಿ ಆತನ ಸಲಹೆಯನ್ನು ಪಡೆಯಲಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಇಂತಹ ವ್ಯಕ್ತಿಯು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಪ್ರಭಾವಿಯಾಗಿದ್ದರೆ ವ್ಯಾಜ್ಯದ ಎರಡೂ ಕಡೆಯವರು ಆತನ ತೀರ್ಮಾನಕ್ಕೆ ಬದ್ಧರಾಗುತ್ತಾರೆ. ಲಂಬಾಣೇತರ ವ್ಯಕ್ತಿಗಳೊಡನೆ ಇರುವ ಸಂಬಂಧಗಳನ್ನಾಧರಿಸಿ ಇಂತಹ ವ್ಯಕ್ತಿಗಳ ಪ್ರಭಾವವು ಪರಿಣಾಮಕಾರಿಯಾಗಿರುತ್ತದೆ. ಲಂಬಾಣಿ ಹಾಗೂ ಲಂಬಾಣೇತರ ವ್ಯಕ್ತಿಗಳ ನಡುವಿನ ವ್ಯಾಜ್ಯಗಳನ್ನು ತೀರ್ಮಾನಿಸುವಾಗ ಲಂಬಾಣೇತರ ಹಿರಿಯರನ್ನು ಆಮಂತ್ರಿಸಲಾಗುತ್ತದೆ. ಆರ್ಥಿಕ ರಾಜಕೀಯ, ಸಾಮಾಜಿಕ ಸಂಪರ್ಕಗಳು ಅಧಿಕವಾಗುತ್ತಿರುವ ಇಂದಿನ ದಿನಗಳಲ್ಲಿ ಇಂತಹ ಸನ್ನಿವೇಶಗಳೂ ಅಧಿಕವಾಗಿವೆ.

ಲಂಬಾಣಿಗಳು ತಮ್ಮ ಸಮುದಾಯದ ಹಿರಿಯರನ್ನು ಮತ್ತು ಪಂಚಾಯಿತಿಯನ್ನು ತಮ್ಮ ಸಮಸ್ಯೆಗಳನ್ನು ಪರಿಹರಿಸುವಂತೆ ಈ ಕೆಳಗಿನ ವಿಷಯಗಳಲ್ಲಿ ಸಂಪರ್ಕಿಸುತ್ತಾರೆ : (೧) ಪಿತ್ರಾರ್ಜಿತ ಆಸ್ತಿಯ ಉತ್ತರಾಧಿಕಾರತ್ವ ಹಾಗೂ ವಿಭಜನೆಗಾಗಿ (೨) ವಿವಾಹ ನಿಶ್ಚಯ ಮತ್ತು ವಿವಾಹ ಸಮಾರಂಭಗಳಿಗಾಗಿ (೩)ವೈವಾಹಿಕ ವಿಷಯಗಳಿಗೆ ಸಂಬಂಧಿಸಿದ ಜಗಳಗಳನ್ನು ಬಗೆಹರಿಸುವುದಕ್ಕಾಗಿ (೪) ಪತಿ-ಪತ್ನಿಯರು ಪರಸ್ಪರ ತ್ಯಜಿಸುವುದು ಮತ್ತು ವಿವಾಹ ವಿಚ್ಛೇದನದ ತೀರ್ಮಾನಗಳಿಗಾಗಿ (೫) ಲಂಬಾಣಿಗಳ ಸಾಂಪ್ರದಾಯಿಕ

ಲೈಂಗಿಕ ನಿಯಮಗಳ ಉಲ್ಲಂಘನೆ ಕುರಿತಾದ ಸಮಸ್ಯೆಗಳ ಪರಿಹಾರಕ್ಕಾಗಿ (೬) ಸಾಂಪ್ರದಾಯಿಕ ಸಾಮಾಜಿಕ ಅಂತಸ್ತಿಗೆ ಧಕ್ಕೆಯನ್ನುಂಟು ಮಾಡುವ ವಿಷಯಗಳು ಅಂದರೆ ಸಮುದಾಯದ ಸಾಂಪ್ರದಾಯಿಕ ಪಂಚಾಯಿತಿಯ ನಿಯಮಗಳ ಉಲ್ಲಂಘನೆ, ಲಂಬಾಣೇತರ ವ್ಯಕ್ತಿಯೊಡನೆ ವಿವಾಹವಾಗುವುದು ಮೊದಲಾದವುಗಳಿಗೆ ಸಂಬಂಧಿಸಿದವುಗಳು (೭) ದುಡಿಮೆಗೆ ಸಂಬಂಧಿಸಿದಂತೆ ವಾರ್ಷಿಕ ಗುತ್ತಿಗೆ ಒಪ್ಪಂದಗಳಿಗೆ ವಿರೋಧವಾಗಿ ವರ್ತಿಸುವ, ಸಾಲದ ಮರುಪಾವತಿ ಮಾಡದಿರುವ ಹಾಗೂ ಭೂಮಿಯ ಮಾಲಿಕತ್ವಕ್ಕೆ ಸಂಬಂಧಿಸಿದ ವ್ಯಾಜ್ಯಗಳು ಮೊದಲಾದ ಆರ್ಥಿಕ ವ್ಯವಹಾರಗಳ ವ್ಯಾಜ್ಯಗಳು (೮) ದೈಹಿಕ ಆಕ್ರಮಣ, ಹಿಂಸೆ, ಮೊದಲಾದ ಅಪರಾಧಗಳು ಇತ್ಯಾದಿ ೫೦ ವರ್ಷಗಳ ಹಿಂದೆ ಇಂತಹ ಯಾವುದೇ ವ್ಯಾಜ್ಯಗಳನ್ನು ತಾಂಡಗಳಲ್ಲಿಯ ಜನರು ಸರಕಾರಿ ನ್ಯಾಯಾಲಯಗಳಿಗೆ ಕೊಂಡೊಯ್ಯುತ್ತಿರಲಿಲ್ಲ. ಆಗ ಸಾಂಪ್ರದಾಯಿಕ ನಾಯಕನು ತನ್ನ ತಾಂಡದಲ್ಲಿಯ ಎಲ್ಲ ಸಮಸ್ಯೆಗಳನ್ನು ಪರಿಹರಿಸುತ್ತ ಪಂಚಾಯಿತಿಯ ಮೂಲಕ ಸಾಮಾಜಿಕ ನಿಯಂತ್ರಣದ ಹೊಣೆಗಾರಿಕೆಯನ್ನು ನಿಭಾಯಿಸುತ್ತಿದ್ದನು. ಯಾವುದೇ ಲಂಬಾಣಿಗಳು ಸರಕಾರಿ ನ್ಯಾಯಾಲಯದಲ್ಲಿ ದಾವಾ ಮಾಡಿದರೆ ತಾಂಡದ ಮುಖ್ಯಸ್ಥನು ಆತನನ್ನು ವಿಚಾರಣೆಗೆ ಗುರಿಪಡಿಸಿ ದಂಡ ವಿಧಿಸುತ್ತಿದ್ದನು (ಮ್ಯಾಕ್ ಗ್ರೆಗೊರ್, ೧೯೧೨ : ೨೮೨). ಹಿಂದೆ ಪಂಚಾಯಿತಿಯ ಪ್ರಭುತ್ವವನ್ನು ಉದ್ಧಟಿಸಿದ ತಪ್ಪಿತಸ್ಥರಿಗೆ ಕಟುವಾದ ಹಾಗೂ ನಿಷ್ಕರುಣ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು. ಸುಲಭವಾಗಿ ಮಣಿಯದ ತಪ್ಪಿತಸ್ಥರು ದಂಡವನ್ನು ನೀಡದಿದ್ದಾಗ ತಾಂಡದಿಂದ ಬಹಿಷ್ಕರಿಸಲಾಗುತ್ತಿತ್ತು. ಹೀಗೆ ಬಹಿಷ್ಕಾರಕೊಳಗಾದವರು ಮೂಲದಂಡದ ಎರಡು ಪಟ್ಟು ಹಣಪಾವತಿ ಮಾಡಿದ ನಂತರವೇ ಪುನಃ ಅವರನ್ನು ತಾಂಡದ ಒಳಗೆ ಸೇರಿಸಿ ಕೊಳ್ಳಲಾಗುತ್ತಿತ್ತು. ಅಂತಹ ವ್ಯಕ್ತಿಯ ಸಂಬಂಧಿಕರಿಗೆ ಆತನನ್ನು ಬಹಿಷ್ಕರಿಸಿದ ವಿಷಯವನ್ನು ತಿಳಿಸಿ ಪಂಚಾಯಿತಿಯ ತೀರ್ಮಾನವನ್ನು ಪಾಲಿಸಬೇಕೆಂದೂ, ಉಲ್ಲಂಘನೆ ಮಾಡಿದರೆ ಅವನಂತೆಯೇ ಬಹಿಷ್ಕಾರದ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂದು ಎಚ್ಚರಿಕೆ ನೀಡಲಾಗುತ್ತಿತ್ತು.

ತಾಂಡದಲ್ಲಿ ಜನರು ಸರಿಯಾಗಿ ಸಾಂಪ್ರದಾಯಿಕ ರೀತಿನೀತಿಗಳನ್ನು ಅನುಸರಿಸುವಂತೆ ನೋಡಿಕೊಳ್ಳುವುದು ನಾಯಕ ಮತ್ತು ಪಂಚಾಯಿತಿಯ ಕರ್ತವ್ಯವಾಗಿದೆ. ತಾಂಡದ ಹಿತಾಸಕ್ತಿಗಳಿಗೆ ಮಾರಕವಾಗುವ ವರ್ತನೆಯನ್ನು ಗಂಭೀರವಾಗಿ ಪರಿಗಣಿಸಲಾಗುತ್ತಿದ್ದು, ಅಂತಹ ತಪ್ಪಿತಸ್ಥರನ್ನು ಬಲವಾಗಿ ಶಿಕ್ಷಿಸಲಾಗುತ್ತದೆ. ಸಣ್ಣ-ಸಣ್ಣ ತಪ್ಪುಗಳಿಗೆ ಅವುಗಳ ಸ್ವರೂಪಕ್ಕನುಗುಣವಾಗಿ ೨೫ ರಿಂದ ೫೦೦ ರೂಪಾಯಿಗಳವರೆಗೆ ದಂಡವನ್ನು ವಿಧಿಸಲಾಗುತ್ತದೆ (ಅಧ್ಯಾಯ ೨ ನೋಡಿರಿ). ಹೀಗೆ ವಿಧಿಸಲಾದ ದಂಡದ ಹಣವನ್ನು ತಪ್ಪಿತಸ್ಥ ಇಲ್ಲವೆ ಆತನ ಸಂಬಂಧಿಕರು ನೀಡಬೇಕಾಗುತ್ತದೆ.

## ಲಂಬಾಣಿ ಸಾಂಪ್ರದಾಯಿಕ ಪ್ರಭುತ್ವದ ಅವಸಾನಕ್ಕೆ ಆರ್ಥಿಕ ಕಾರಣಗಳು

ಸರಳ ಸಮಾಜಗಳಲ್ಲಿ ರಾಜಕೀಯ ಅಧಿಕಾರವು ಆರ್ಥಿಕ ಸಬಲತೆಯನ್ನು ಅವಲಂಬಿಸಿರುವುದಿಲ್ಲವಾದರೂ ನಾಯಕನಾದವನು ಪರಿಣಾಮಕಾರಿಯಾಗಿ ಅಧಿಕಾರವನ್ನು ನಡೆಸಲು ಆರ್ಥಿಕವಾಗಿ ತಕ್ಕಮಟ್ಟಿಗಾದರೂ ಪ್ರಬಲವಾಗಿರಬೇಕಾದುದು ಅಗತ್ಯವಾಗಿರುತ್ತದೆ. ಆರ್ಥಿಕವಾಗಿ ತೀರ ದುರ್ಬಲನಾದವನು ಸಾಮಾನ್ಯವಾಗಿ ಜನರಿಂದ ಗೌರವವನ್ನು ಪಡೆಯಲಾರನು. ಇಂದು ಮರಿಯಮನಹಳ್ಳಿ ತಾಂಡ ಹಾಗೂ ನಾಗಲಾಪುರ ತಾಂಡಗಳ ನಾಯಕರು ತೀರ ಬಡತನದಲ್ಲಿರುವುದರಿಂದ ರಾಜಕೀಯ ಅಧಿಕಾರ ಪಡೆಯುವಲ್ಲಿ ಸಫಲರಾಗಿಲ್ಲ. ಆದಾಗ್ಯೂ ಕೂಡ ಅವರು ತಮ್ಮ ಸಮುದಾಯದ ಜನರಿಂದ ಮನ್ನಣೆ ಪಡೆದಿದ್ದಾರೆ. ಮರಿಯಮ್ಮನಹಳ್ಳಿ ತಾಂಡದ ನಾಯಕನು ವೃದ್ಧಾಪ್ಯದಿಂದ ೧೯೯೭ರಲ್ಲಿ ತೀರಿಹೋದಾಗ ಆತನ ಬಳಿ ಸ್ವಂತದ ಕೃಷಿ ಜಮೀನು ಇರಲಿಲ್ಲ. ಆತನು, ಪತ್ನಿಯು ದುಡಿದು ತಂದ ಕೂಲಿಯ ಮೇಲೆ ಹಾಗೂ ವಾರ್ಷಿಕ ದುಡಿಮೆಯ ಒಪ್ಪಂದದನ್ವಯ ದುಡಿಯುತ್ತಿದ್ದ ಮೊಮ್ಮಗನ ಸಂಪಾದನೆಯ ಮೇಲೆ ಅವಲಂಬಿ

ಸಿದ್ದನು. ಸೇವಾಭಯ ದೇವಸ್ಥಾನದಲ್ಲಿ ಆತನು ಸಲ್ಲಿಸುತ್ತಿದ್ದ ಪೂಜಾರಿ ಸೇವೆಗೆ ಪ್ರತಿಯಾಗಿ ಸಾಂಪ್ರದಾಯಿಕವಾಗಿ ನೀಡುತ್ತಿದ ಕಾಳುಕಡ್ಡಿಗಳೆ ಆತನ ಆದಾಯವಾಗಿತ್ತು. ಅದೇ ರೀತಿಯಾಗಿ ನಾಗಲಾಪುರ ತಾಂಡದಲ್ಲಿ ೧೯ ವರ್ಷದಿಂದ (೧೯೯೯ರಲ್ಲಿ) ಸಾಂಪ್ರದಾಯಿಕ ನಾಯಕನಾಗಿರುವವನಿಗೆ ಸ್ವಂತ ಜಮೀನು ಇರಲಿಲ್ಲ. ಆತನು ದುರವಸ್ಥೆಯಿಂದ ಕೂಡಿದ್ದ ಗುಡಿಸಲಲ್ಲಿ ವಾಸವಾಗಿದ್ದನು. ಐವರು ಸದಸ್ಯರನ್ನುಳ್ಳ ಕುಟುಂಬವನ್ನು ತನ್ನ ಕೂಲಿದುಡಿಮೆಯಿಂದ ನಿಭಾಯಿಸುತ್ತಿದ್ದಾನೆ. ತನ್ನ ನಾಯಕ ಪದವಿಯು ಹೆಸರಿಗೆ ಮಾತ್ರವೆಂದು ಆತನು ತನ್ನ ಗೋಳನ್ನು ಹೇಳಿಕೊಂಡಿದ್ದಾನೆ. ತನ್ನನ್ನು ಯಾರೂ ನೋಡಿಕೊಳ್ಳುವುದಿಲ್ಲವೆಂಬುದು ಆತನ ದುಃಖ. ವಿವಾಹದ ಸಂದರ್ಭದಲ್ಲಿ ಸಾಂಪ್ರದಾಯಿಕವಾಗಿ ತನಗೆ ಸಿಕ್ಕುವ ೩ ರೂ.ಗಳ ಕಾಣಿಕೆಯನ್ನು ಕೂಡ ಪಂಚಾಯಿತಿ ಸದಸ್ಯರೇ ತೆಗೆದುಕೊಂಡು ಚಹಾ ಕುಡಿಯಲು ವೆಚ್ಚಮಾಡುತ್ತಾರೆ ಎಂಬುದು ಆತನ ಅಹವಾಲು. ಪಂಚಾಯತಿ ಸಭೆಗೆ ಜನರನ್ನು ಕರೆತರಲು ತನ್ನನ್ನು ದೂತನಂತೆ ಬಳಸಿಕೊಳ್ಳಲಾಗುತ್ತದೆ, ಆದರೆ ಇದು ಸಾಮಾನ್ಯವಾಗಿ ಕಾರಭಾರಿ ಮಾಡುವ ಕರ್ತವ್ಯವಾಗಿದೆ. ನಾಗಲಾಪುರ ತಾಂಡದಲ್ಲಿಯೂ ನಾಯಕನ ಆರ್ಥಿಕ ಸ್ಥಿತಿಗಳು ಇದೇ ರೀತಿಯಾಗಿ ಶೋಚನೀಯ ಸ್ವರೂಪದ್ದಾಗಿದೆ.

ಲಂಬಾಣಿಗಳಲ್ಲಿಯ ಇಂದಿನ ವೈಯಕ್ತಿಕ ಆರ್ಥಿಕತೆಯನ್ನಾಧರಿಸಿದ ಸಾಮಾಜಿಕ ಸ್ಥಾನಮಾನಗಳ ಸನ್ನಿವೇಶದಲ್ಲಿ ತಾಂಡದ ಮುಖ್ಯಸ್ಥನ ಸ್ಥಾನವು ನೆಲಕಚ್ಚಿದೆ. ಅಲೆಮಾರಿ ಜೀವನದ ಸನ್ನಿವೇಶಗಳಲ್ಲಿ ನಾಯಕರು ಪ್ರಬಲ ವ್ಯಕ್ತಿಗಳಾಗಿರುತ್ತಿದ್ದರು. ಅವರಲ್ಲಿ ಅಂತಹ ಸಾಮರ್ಥ್ಯವಿದ್ದಿತು. ಅಂತೆಯೇ ಅವರು ತಮ್ಮ ರಾಜಕೀಯ ಅಧಿಕಾರವನ್ನು ಬಿಗುವಿನಿಂದ ಚಲಾಯಿಸಬಲ್ಲವರಾಗಿದ್ದರು. ಅವರ ಮಾತು ಕಾನೂನು ಆಗಿರುತ್ತಿತ್ತು. ನಾಯಕರ ಸಂಕಲ್ಪ ಹಾಗೂ ತೀರ್ಮಾನಕ್ಕನುಗುಣವಾಗಿಯೇ ತಂಡಗಳು ತಮ್ಮ ಕಾರ್ಯನಿರ್ವಹಿಸುತ್ತಿದ್ದವು ಹಾಗೂ ಪಯಣಕ್ಕೆ ಅಣಿಯಾಗುತ್ತಿದ್ದವು. ಆರ್ಥಿಕ ಜೀವನದಲ್ಲಿ ಆದ ಪರಿವರ್ತನೆ, ನಾಯಕರಿಗೆ ಕೃಷಿ ಜಮೀನುಗಳನ್ನು ನೀಡುವ ಅರಸರ ಆಶ್ರಯವಿಲ್ಲದಿರುವ ಇಂದಿನ ಸನ್ನಿವೇಶದಲ್ಲಿ ತಾಂಡದ ನಾಯಕ ಅಥವಾ ಮುಖ್ಯಸ್ಥರ ಹುದ್ದೆಗಳನ್ನು ಅಧಿಕಾರರಹಿತಗೊಳಿಸಿವೆ. ಪಂಚರು ಅಥವಾ ಇತರ ಅನೌಪಚಾರಿಕ ನಾಯಕರು ಇಂದು ಸಾಂಪ್ರದಾಯಿಕ ನಾಯಕರಿಗಿಂತ ಪ್ರಬಲರಾಗಿದ್ದಾರೆ. ತಾಂಡಗಳಲ್ಲಿಯ ಸಾಮಾಜಿಕ ನಿಯಂತ್ರಣವನ್ನು ಕಾಪಾಡುವಲ್ಲಿ ಸಮರ್ಥರಾಗಿದ್ದಾರೆ. ಅವರು ಪ್ರಬಲ ನಾಯಕರಾಗಲು ಅವರ ಆರ್ಥಿಕ ಸ್ಥಿತಿಗತಿಗಳು ಉತ್ತಮವಾಗಿರುವುದೇ ಕಾರಣವಾಗಿದೆ. ಹೀಗಾಗಿ ಸಾಂಪ್ರದಾಯಿಕ ನಾಯಕರು ತೀರ ದುರ್ಬಲರಾಗಿದ್ದಾರೆ ಇಂದಿನ ಅನೌಪಚಾರಿಕ ನಾಯಕರಲ್ಲಿ ನಾಯಕತ್ವದ ಗುಣಲಕ್ಷಣಗಳಿರುವುದು ಅವರ ಪ್ರಾಬಲ್ಯಕ್ಕೆ ಕಾರಣವಾಗಿದೆ ಎಂಬುದು ಗಮನಾರ್ಹ ಅಂಶವಾಗಿದೆ. ಸ್ಥಿತಿವಂತ ವರ್ಗವು ತಮ್ಮ ಹೊಸ ಆರ್ಥಿಕ ಅಂತಸ್ತನ್ನು ಪ್ರಕಟಿಸಲು ರಾಜಕೀಯ ಅಭಿವೃದ್ಧಿಗಾಗಿ ಹವಣಿಸುತ್ತವೆ. ಬಡ ಸಾಂಪ್ರದಾಯಿಕ ನಾಯಕರು ಹಾಗೂ ಪಂಚಾಯಿತಿ ಸದಸ್ಯರು ಇದನ್ನು ವಿರೋಧಿಸಲು ಸಾಧ್ಯವಾಗಲಾರದು. ಅನುವಂಶೀಯವಾದ ನಾಯಕರ ರಾಜಕೀಯ ಅಂತಸ್ತನ್ನು ಈಗಲೂ ಸಮುದಾಯವು ಮನ್ನಿಸುವುದರಿಂದ ಆ ಅಂತಸ್ತನ್ನು ಕೇವಲ ಆರ್ಥಿಕ ಬಲವನ್ನಾಧರಿಸಿ ನೀಡಲಾಗುವುದಿಲ್ಲ. ಆದಾಗ್ಯೂ ಕೂಡ ಸಾಂಪ್ರದಾಯಿಕ ನಾಯಕರ ಮಹತ್ವದ ಕಾರ್ಯಗಳನ್ನು ಹೊಸದಾಗಿ ಸ್ಥಿತಿವಂತರಾದವರು ಕಸಿದುಕೊಂಡಿದ್ದಾರೆ. ತಾಂಡದಲ್ಲಿ ಆರ್ಥಿಕ ಅಂತಸ್ತನ್ನು ಹೆಚ್ಚಿಸಿಕೊಂಡ ಪ್ರಬಲ ಲಂಬಾಣಿಗಳು ತಾಂಡದ ಆಗುಹೋಗುಗಳನ್ನು ನಿಯಂತ್ರಿಸತೊಡಗಿದ್ದಾರೆ. ನಮಗೆ ಸುದ್ದಿಯನ್ನು ತರುವ ವ್ಯಕ್ತಿಗಳ ಬಗೆಗೆ ಹೇಳುವಾಗ ದೇವಸ್ಥಾನದಲ್ಲಿಯ ಮೂರ್ತಿಯ ಉಪಮೆಯನ್ನು ನೀಡಿದರು. ಮೂರ್ತಿಯಿಲ್ಲದೇ ದೇವಸ್ಥಾನವಾಗಲಾರದು. ಅಂತೆಯೇ ಅಧಿಕಾರ ಕಳೆದುಕೊಂಡ ದುರ್ಬಲರಾದ ನಾಯಕರು ಉತ್ಸವಮೂರ್ತಿಗಳಾಗಿದ್ದಾರೆ. ಅವರು ಸಮರ್ಥರಾಗಿದ್ದರೂ ಅವರು ಬೇಕೆ ಬೇಡವೇ ಎಂದು ಸೂಚ್ಯವಾಗಿ ವ್ಯಂಗ್ಯವಾಡಿದರು.

ಮರಿಯಮ್ಮನಹಳ್ಳಿ ತಾಂಡದಲ್ಲಿ ನಾಯಕನು ತೀರ ದುರ್ಬಲನಾಗಿರುವುದನ್ನು ಅಧ್ಯಯನ ಸಂದರ್ಭದಲ್ಲಿ ಸಂಶೋಧಕನ ಗಮನಕ್ಕೂ ಬಂದಂತಹ ವಿಷಯ. ಸಭೆಗಳು ನಡೆದಾಗ ಆತನು ಮೂಲೆಯಲ್ಲಿ, ಎಂದರೆ, ನಾಯಕನ ಹುದ್ದೆಗೆ ತೀರ ಅಗೌರವವೆನಿಸುವ ಸ್ಥಾನದಲ್ಲಿ ಆತನು ಕುಳಿತುಕೊಂಡಿರುತ್ತಿದ್ದನು. ಮಧ್ಯವರ್ತಿ ಸ್ಥಾನದಲ್ಲಿ ಪ್ರಬಲ ವ್ಯಕ್ತಿಯು ಸಭೆಯನ್ನು ನಡೆಸುತ್ತಿದ್ದನು. ಪಂಚಾಯಿತಿ ಸದಸ್ಯರಲ್ಲಿ ಯಾರಾದರೊಬ್ಬರು ಒಂದೊಂದು ಸಲ ಆ ಸ್ಥಾನವನ್ನು ಅಲಂಕರಿಸುತ್ತಾರೆ. ನಾಯಕ ಪರಿಣಾಮಕಾರಿಯಾಗಿ ಮಾತನಾಡುತ್ತಿರಲಿಲ್ಲ. ಆತನ ಮಾತನ್ನು ಯಾರೂ ಗಮನದಿಂದ ಆಲಿಸುತ್ತಿರಲಿಲ್ಲ. ಓರ್ವ ಸಾಮಾನ್ಯ ಸದಸ್ಯನಿಗಿಂತಲೂ ಕಡಿಮೆ ಪರಿಣಾಮಕಾರಿಯಾದ ರೀತಿಯಲ್ಲಿ ಆತನು ಮಾತನಾಡುತ್ತಿದ್ದನು. ಅವನ ಬಡತನ, ವಯಸ್ಸು ಹಾಗೂ ಬುದ್ಧಿವಂತಿಕೆಯ ಕೊರತೆ ಮೊದಲಾದವುಗಳೇ ಆತನ ಅಸಮರ್ಥತೆಗೆ ಕಾರಣವಾಗಿದ್ದವು. ಲಂಬಾಣಿಗಳು ಮಾತನಾಡುವ ಧ್ವನಿಯೇ ಎತ್ತರದ ಧ್ವನಿಯಾಗಿರುವಾಗ ಈ ನಾಯಕನು ತೀರ ಸಪ್ಪೆಯಾಗಿ (ಸಣ್ಣಧ್ವನಿ) ಮಾತನಾಡುತ್ತಿದ್ದನು. ಈತನ ತಂದೆ ಮತ್ತು ಅಜ್ಜ ಸ್ಥಿತಿವಂತರಾಗಿದ್ದರು ಹಾಗೂ ಪ್ರಬಲ ನಾಯಕರಾಗಿದ್ದರು ಎಂದು ಹೇಳಲಾಗುತ್ತದೆ.

ನಾಯಕನ ಪಾತ್ರವು ಇಂದಿನ ದಿನಗಳಲ್ಲಿ ತನ್ನ ಮೊದಲಿನ ಸಾಂಪ್ರದಾಯಿಕ ಅಂತಸ್ತು ಹಾಗೂ ಪ್ರಭಾವವನ್ನು ಕಳೆದುಕೊಂಡಿದೆ. ಅಧ್ಯಯನ ನಡೆಸಿದ ಪ್ರದೇಶದಲ್ಲಿ ಪ್ರಜಾಪ್ರಭುತ್ವದ ವ್ಯವಸ್ಥೆಯಡಿಯಲ್ಲಿ ಹುಟ್ಟಿಕೊಂಡ ಪಂಚಾಯಿತಿ ವ್ಯವಸ್ಥೆ ಸಾಂಪ್ರದಾಯಿಕ ನಾಯಕತ್ವದ ಪ್ರಭಾವ-ಪ್ರಾಬಲ್ಯವನ್ನು ಸಡಿಲಿಸಿದೆ. ಹಿಂದಿನ ಕಾಲದಲ್ಲಿ ಸಾಂಪ್ರದಾಯಿಕ ದರ್ಪದಿಂದ ಕೂಡಿದ ನಾಯಕ ಹುದ್ದೆಯು ತನ್ನ ಬಿಗುವನ್ನು, ಪ್ರಭಾವವನು ಇಂದು ಕಳೆದುಕೊಂಡಿದೆ. ಇಂದು ಪಂಚಾಯಿತಿಯಲ್ಲಿಯ ಪ್ರಬಲ ಗುಂಪುಗಳು ರಾಜಕೀಯ ಪ್ರಕ್ರಿಯೆಯನ್ನು ನಿಯಂತ್ರಿಸುತ್ತಿವೆ. ಅನುವಂಶಿಕ ನಾಯಕನು ಕೇವಲ ಉತ್ಸವಮೂರ್ತಿಯಾಗಿ ಪರಿಣಮಿಸಿದ್ದಾನೆ. ಬ್ರಿಟಿಷ್‌ರ ಆಳ್ವಿಕೆಯ ಅವಧಿಯಲ್ಲಿ ಲಂಬಾಣಿ ನಾಯಕನ ಅಧಿಕಾರ ತನ್ನ ಪ್ರಾಬಲ್ಯವನ್ನು ಕಳೆದುಕೊಂಡರೆ, ಇಂದಿನ ವ್ಯಕ್ತಿನಿಷ್ಠ ಆರ್ಥಿಕ ವ್ಯವಸ್ಥೆಯು ನಾಯಕ ಸ್ಥಾನ, ರಾಜಕೀಯ ಅಧಿಕಾರ ಹಾಗೂ ಕಾರ್ಯಗಳನ್ನು ಅಳಿಸಿಹಾಕಿದೆ.

ಸಾಮುದಾಯಿಕ ಹಣಕಾಸಿನ ದುರ್ಬಳಕೆ, ಭ್ರಷ್ಟಾಚಾರ, ಪಂಚಾಯಿತಿ ಸದಸ್ಯರ ಪಕ್ಷಪಾತ, ಪ್ರಮಾಣಿಕತೆಯ ಅಭಾವ, ಪಂಚಾಯತಿ ಸದಸ್ಯರು ತಮಗೆ ತೋಚಿದಂತೆ ವ್ಯವಹರಿಸುವ ಸಮಯಸಾಧಕತನ, ಇತರ ಅನೌಪಚಾರಿಕ ನಾಯಕರ ಸ್ವಾರ್ಥ, ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಲು ಸಾಮುದಾಯಿಕ ಹಿತವನ್ನು ಕಡೆಗಣಿಸುವ ಸ್ವಾರ್ಥಪರತೆ ಮೊದಲಾದವುಗಳಿಂದಾಗಿ ಇಂದು ಲಂಬಾಣಿ ಸಮುದಾಯವು ನಾಯಕತ್ವದ ಕೊರತೆಯನ್ನು ಅನುಭವಿಸುತ್ತಿದೆ ಎಂಬುದು ತಾಂಡಗಳಲ್ಲಿಯ ವಿದ್ಯಮಾನಗಳನ್ನು ಗಮನಿಸಿದಾಗ ತಿಳಿದುಬರುವ ಸಂಗತಿ. ಯಾವುದೇ ಲಂಬಾಣಿಯು ತನ್ನ ನಿಷ್ಠೆಗೆ ಪಾತ್ರನಾಗುವ ಯಾವುದೇ ಹೆಸರನ್ನು ಹೇಳಲಾರದ ಸ್ಥಿತಿ ಇಂದು ತಾಂಡಗಳಲ್ಲಿದೆ. ಇಷ್ಟಾದರೂ ಕೂಡ ದುರ್ಬಲ ಪ್ರಸಂಗಗಳಲ್ಲಿ ಈ ಸಮುದಾಯವು ತನ್ನ ಅವ್ಯವಸ್ಥಿತ ಸ್ಥಿತಿಗತಿಗಳೊಂದಿಗೆ ತನ್ನನ್ನು ರಕ್ಷಿಸಿಕೊಳ್ಳಬಲ್ಲ ಸಾಮರ್ಥ್ಯವನ್ನು ಹೊಂದಿದೆ. ಅಸಮರ್ಥವಾಗಿದ್ದರೂ ಸಾಂಪ್ರದಾಯಿಕ ಸ್ವರೂಪದ ಪಂಚಾಯಿತಿ ಸಮುದಾಯದ ಅಂತರ್ ಸತ್ವವನ್ನು ಕಾಪಾಡಿಕೊಳ್ಳಬಲ್ಲದಾಗಿದೆ. ಸಾಂಪ್ರದಾಯಿಕ ಪಂಚಾಯಿತಿಯ ಪರಿಷತ್ತಿನ ಅಧಿಕಾರಿಗಳನ್ನು ಸರಕಾರಿ ನ್ಯಾಯಾಲಯಗಳು ಕಸಿದುಕೊಂಡಿದ್ದರೂ, ಸಮುದಾಯವನ್ನೇ ಇಬ್ಭಾಗಿಸುವ ವ್ಯಾಜ್ಯಗಳ ವಿಷಯದಲ್ಲಿ, ಕಾನೂನು ಬಾಹಿರ ಮದ್ಯದ ಉತ್ಪಾದನೆಯಲ್ಲಿ ತೊಡಗಿದವರಿಗೆ ಪೋಲಿಸ್‌ರಿಂದ ಆಗುವ ಕಿರುಕುಳ ಮೊದಲಾದ ಪ್ರಸಂಗಗಳಲ್ಲಿ ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿ ಕಾರ್ಯಪ್ರವೃತ್ತವಾಗಿ ಸಮುದಾಯದ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವನ್ನು ತೋರುತ್ತದೆ. ಹೀಗಾಗಿ ಈ ಪಂಚಾಯಿತಿ ಇನ್ನೂ ಒಂದು ಪ್ರಬಲ ಸಂಸ್ಥೆಯಾಗಿ ಉಳಿದಿದೆ ಎಂದೆನಿಸುತ್ತದೆ. ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿ ಎದುರಿನಲ್ಲಿ ಪರಿಹಾರಕ್ಕಾಗಿ ಬರುವ ಸಂಕೀರ್ಣ ಸ್ವರೂಪದ ವಿಷಯ ಹಾಗೂ ವ್ಯಾಜ್ಯಗಳನ್ನು ಈ ಕೆಳಗಿನ ಎರಡು ಉದಾಹರಣೆಗಳ ಮೂಲಕ ಮುಂದೆ ಸಾದರಪಡಿಸಲಾಗಿದೆ.

೧. ಮರಿಯಮ್ಮನಹಳ್ಳಿ ತಾಂಡದಿಂದ ಒಂದು ನಿದರ್ಶನ

ಲಂಬಾಣಿಗಳು ನಿಷೇಧಿತ ಭಟ್ಟಿಸರಾಯಿ ಇಳಿಸುವಿಕೆ ಹಾಗೂ ಮಾರಾಟದಿಂದ ಪೋಲಿಸ್ ದೌರ್ಜನ್ಯಕ್ಕೆ ಒಳಗಾದಾಗ ಮರಿಯಮನಹಳ್ಳಿ ತಾಂಡದ ಸಾಂಪ್ರದಾಯಿಕ ಪಂಚಾಯಿತಿ ೧೯೯೦ರಲ್ಲಿ ಈ ಚಟುವಟಿಕೆಗಳನ್ನು ನಿಷೇಧಿಸಿತು. ಆದರೆ ಪಂಚಾಯಿತಿಯ ಎಚ್ಚರಿಕೆಯನ್ನು ಧಿಕ್ಕರಿಸಿದ ಮೂರು ಕುಟುಂಬಗಳು ವಿಧಿಸಿದ ನಿಷೇಧವನ್ನು ಪಾಲಿಸಲಿಲ್ಲ. ತಾಂಡದಿಂದ ಹೊರಹಾಕಲಾಗುವುದೆಂದು ಪಂಚಾಯಿತಿ ಅವರಿಗೆ ಎಚ್ಚರಿಕೆ ನೀಡಿತ್ತು. ಪಂಚಾಯಿತಿಯ ಆದೇಶವನ್ನು ಉಲ್ಲಂಘಿಸಿದ್ದಕ್ಕಾಗಿ ೧೯೯೨ರಲ್ಲಿ ಅವರನ್ನು ತಾಂಡದಿಂದ ಹೊರಹಾಕಲಾಯಿತು. ಆ ಜನರು ೪ ಮೈಲುಗಳಾಚೆಗೆ ವಾಸಿಸಬೇಕಾಯಿತು. ಹೀಗೆ ದೂರದಲ್ಲಿ ವಾಸಿಸತೊಡಗಿದ ಕುಟುಂಬಗಳಿಗೆ ತಮ್ಮ ಕಾನೂನುಬಾಹಿರ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಪಂಚಾಯಿತಿಯ ಶಿಕ್ಷೆ ಅನುಕೂಲಕರವೇ ಆಯಿತು ಎಂದು ಕೆಲವರು ಹೇಳುತ್ತಾರೆ.

ದಿನಗಳು ಕಳೆದಂತೆ ತಮ್ಮ ಸಮುದಾಯದ ಜನರಿಂದ ದೂರದಲ್ಲಿರುವುದು ಈ ಕುಟುಂಬಗಳಿಗೆ ಅಸಹನೀಯವಾಗತೊಡಗಿತು. ಗೌರಿ ಉತ್ಸವ ಮೊದಲಾದ ಸಾಂಪ್ರದಾಯಿಕ ಆಚರಣೆಗಳ ಸಂದರ್ಭಗಳಲ್ಲಿ ಈ ಕುಟುಂಬಗಳಿಗೆ ಮಾನಸಿಕ ವೇದನೆ ಪ್ರಾರಂಭವಾಗಿ, ೧೯೯೭ರ ಸುಮಾರಿಗೆ ಅವರು ಪುನಃ ತಾಂಡದಲ್ಲಿ ಪ್ರವೇಶ ಪಡೆಯಲು ಹವಣಿಸತೊಡಗಿದರು. ೧೯೯೭ರ ಗೌರಿ ಉತ್ಸವದ ಸಂದರ್ಭ ಅವರಿಗೆ ಒಂದು ಅವಕಾಶವನ್ನು ಸೃಷ್ಟಿಸಿಕೊಟ್ಟಿತು. ಬಹಿಷ್ಕೃತಗೊಂಡವರಲ್ಲಿ ಓರ್ವನಾದ 'ಕೆ' ಎಂಬಾತನು ಮರಿಯಮ್ಮನಹಳ್ಳಿ ತಾಂಡದ ಸಾಂಪ್ರದಾಯಿಕ ಸದಸ್ಯರನ್ನು ಸಂಪರ್ಕಿಸಿ ತಮ್ಮನ್ನು ತಾಂಡದಲ್ಲಿ ಪುನಃ ಸೇರಿಸಿಕೊಳ್ಳುವಂತೆ ಕೇಳಿಕೊಂಡನು. ಅದಕ್ಕಿಂತ ಮೊದಲೇ ಆತನ ಹೆಂಡತಿ ತಾಂಡಕ್ಕೆ ಭೇಟಿ ನೀಡಿ ಗೌರಿ ಉತ್ಸವದ ಕಾಣಿಕೆಯನ್ನು ನೀಡಿದ್ದಳು. ಗೌರಿ ಉತ್ಸವದಲ್ಲಾದರೂ ಪಾಲುಗೊಳ್ಳಲು ಆಕೆ ಉತ್ಸುಕಳಾಗಿದ್ದಳು. ತಮ್ಮ ಜನರಿಂದ ದೂರವಾಗಿರುವುದು ಸಮಾಜ ಜೀವಿಯಾದ ಮಾನವನಿಗೆ ತೀವ್ರತರವಾದ ಕಟು ಅನುಭವವಾಗುತ್ತದೆ.

'ಕೆ'ನ ಪ್ರಸ್ತಾವವನ್ನು ಕುರಿತು ಚರ್ಚೆಮಾಡಲು ಪಂಚಾಯಿತಿ ಸಭೆ ಸೇರಿತು. 'ಕೆ' ಅತ್ಯಂತ ವಿಧೇಯತೆಯಿಂದ ತನ್ನ ಅಸಹಾಯಕತೆಯನ್ನು ತಿಳಿಸಿದ್ದನು - (ಆಗ ಆತ ಮದ್ಯ ಸೇವಿಸಿದ್ದನು). ಪರಿಷತ್ತು ವಿಧಿಸುವ ಎಲ್ಲ ಷರತ್ತುಗಳನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳುವುದಾಗಿ ಘೋಷಿಸಿದನು. ತಮ್ಮನ್ನು ತಾಂಡದಲ್ಲಿ ಸೇರಿಸಿಕೊಳ್ಳಬೇಕಾಗಿ ಕೇಳಿಕೊಂಡನು. ತನ್ನ ಆದೇಶವನ್ನು ಉಲ್ಲಂಘಿಸಿ ಕಾನೂನುಬಾಹಿರ ಮದ್ಯದ ತಯಾರಿಕೆಯಲ್ಲಿ ತೊಡಗಿದ ಈ ವ್ಯಕ್ತಿಯನ್ನು ಹೇಗೆ ನಿಯಂತ್ರಿಸಬೇಕು ಎಂಬುದು ಪಂಚಾಯಿತಿಗೆ ಆತಂಕವಾಗಿತ್ತು. ಬಹಿಷ್ಕೃತ ವ್ಯಕ್ತಿಗಳಿಗೆ ಮರುಪ್ರವೇಶ ನೀಡಿದರೆ ಮತ್ತೆ ಆ ವ್ಯಕ್ತಿಗಳು ಅಂತಹದೇ ಚಟುವಟಿಕೆಗಳಲ್ಲಿ ತೊಡಗಿದರೆ ಹೇಗೆ ನಿಯಂತ್ರಿಸಬೇಕು ಎಂಬುದೂ ಪ್ರಶ್ನಾರ್ಥಕ ವಿಷಯವಾಗಿತ್ತು. ಸಾಕಷ್ಟು ಚರ್ಚೆಯ ನಂತರ ಪಂಚಾಯಿತಿ ಒಂದು ತೀರ್ಮಾನಕ್ಕೆ ಬಂದಿತು. ಬಹಿಷ್ಕಾರ ಹಾಕಿದ ವ್ಯಕ್ತಿಗಳಿಗೆ ಮರು ಪ್ರವೇಶ ನೀಡಲು ಪಂಚಾಯಿತಿ ಎರಡು ಷರತ್ತುಗಳನ್ನು ಹಾಕಿತು. (೧) ಹೊರಹಾಕಲಾದ ಕುಟುಂಬಗಳು ತಮ್ಮ ಮನೆಗಳನ್ನು ತಾಂಡಕ್ಕೆ ಸ್ಥಳಾಂತರಿಸಿ, ತಾಂಡದಲ್ಲಿಯೇ ಕಾಯಂ ಆಗಿ ವಾಸವಾಗಬೇಕು. ತಾಂಡದಲ್ಲಿ ಇದ್ದುಕೊಂಡೂ ಈಗ ವಾಸವಾಗಿರುವ ಮನೆಗಳಲ್ಲಿ ಭಟ್ಟಿಸರಾಯಿ ಮಾಡಬಾರದೆಂಬುದು ಪಂಚಾಯಿತಿಯ ಅಭಿಪ್ರಾಯವಾಗಿತ್ತು. ಅವರು ಕಳ್ಳಭಟ್ಟಿಯನ್ನು ತಯಾರಿಸಿ ತಾಂಡದಲ್ಲಿ ಮಾರಾಟಮಾಡಿದರೆ ಹೇಗೆ ಎಂಬ ಆತಂಕವೂ ಇದ್ದಿತು. (೨) ಪಂಚಾಯಿತಿಯ ಆದೇಶವನ್ನು ಉಲ್ಲಂಘಿಸಿದ್ದರಿಂದ ತಾಂಡದಲ್ಲಿ ಮರುಪ್ರವೇಶ ಪಡೆಯಲು ೧೦೦೦ ರೂ.ಗಳ ದಂಡವನ್ನು ನೀಡಬೇಕು. ಈ ಷರತ್ತುಗಳಿಗೆ ಅವರು ಒಪ್ಪುವುದಾದರೆ ತಾಂಡದಲ್ಲಿ ವಾಸಿಸಲು ಅವರಿಗೆ ಸಮುದಾಯವು ಅವಕಾಶ ನೀಡುವ ಆಶ್ವಾಸನೆಯನ್ನು ನೀಡಲಾಯಿತು.

ಈ ಷರತ್ತುಗಳನ್ನು ಒಪ್ಪುವ ಮೊದಲು 'ಕೆ' ಆಕ್ಷೇಪಣೆ ಮಾಡಿದನು. ಪಂಚಾಯಿತಿ ತಮ್ಮ (ಹೊರಹಾಕಲಾಗಿದ್ದ ಕುಟುಂಬಗಳು) ಕುಟುಂಬಗಳ ವಿಷಯದಲ್ಲಿ ಹಿಂದೆ ಸರಿಯಾಗಿ ಸಹಕರಿಸಿಲ್ಲ. ತಮ್ಮನ್ನು ಪೋಲಿಸರಿಗೆ ಒಪ್ಪಿಸಲಾಯಿತು. ಆದರೆ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿದ ಇನ್ನು ಕೆಲವರನ್ನು ಉಳಿಸಿಕೊಂಡು ಅವರಿಗೆ ಕೇವಲ ೨೦೦ ರೂ.ಗಳ ದಂಡವನ್ನು ವಿಧಿಸಿತ್ತು. ಪೋಲಿಸರಿಗೆ ತನ್ನನ್ನು ಒಪ್ಪಿಸಬೇಡವೆಂದು ತನ್ನ ಹೆಂಡತಿ ಪರಿಪರಿಯಾಗಿ ಬೇಡಿಕೊಂಡರೂ ಕೇಳಲಿಲ್ಲ. ಅದಾದ ನಂತರ ನ್ಯಾಯಾಧೀಶರು ವಿಚಾರಣೆ ನಡೆಸಿ 'ಕೆ'ನಿಗೆ ದಂಡವಿಧಿಸಿ ಜೇಲು ಶಿಕ್ಷೆನೀಡಿದರು. ಜೇಲಿನಿಂದ ವಾಪಸು ಬಂದನಂತರ 'ಕೆ' ಪುನಃ ತನ್ನ ವ್ಯವಹಾರದಲ್ಲಿ ತೊಡಗಿದನು. ಆಗ ಪಂಚಾಯಿತಿ ಆತನಿಗೆ ಮದ್ಯ ತಯಾರಿಕೆಯನ್ನು ಸ್ಥಗಿತಗೊಳಿಸಬೇಕು ಇಲ್ಲವೆ ತಾಂಡ ಬಿಟ್ಟು ಹೋಗಬೇಕು ಎಂದು ಆದೇಶಿಸಿತು ಎಂದು ಆಕ್ಷೇಪಿಸಿದನು.

ತಾಂಡದಲ್ಲಿ ಮರುಪ್ರವೇಶ ನೀಡಿದ ತಕ್ಷಣವೇ ಅಲ್ಲಿ ನಿವೇಶನವನ್ನು ಕಟ್ಟಿಕೊಳ್ಳದೇ ಪ್ರವೇಶಿಸುವುದು ಅಸಾಧ್ಯವೆಂದು ತಿಳಿಸಿದನು. ತನ್ನ ಹೊಸ ಮನೆಯನ್ನು ಕಟ್ಟುವತನಕ ಈಗ ಇರುವ ಸ್ಥಳದಲ್ಲಿಯೇ ಇರಲು ಬಯಸಿದನು. ಆತನಿಗೆ ಹಾಗೆ ಇರಲು ಅವಕಾಶ ನೀಡಬಾರದೆಂದೇ ಪಂಚಾಯಿತಿ ನಿವೇಶನ ಕಟ್ಟಿಕೊಳ್ಳಲು ಸಹಾಯ ಸಹಕಾರ ನೀಡುವ ಆಶ್ವಾಸನೆಯನ್ನು ನೀಡಿತು. ತಾನು ಆ ಸ್ಥಳವನ್ನು ಬಿಟ್ಟುಬಂದರೆ ಹಾಗೂ ಭಟ್ಟಿಸರಾಯಿಯ ದಂಧೆಯನ್ನು ಕೂಡಲೇ ಸ್ಥಗಿತಗೊಳಿಸಿದರೆ ತನ್ನ ಕುಟುಂಬ ಉಪವಾಸ ಸಾಯಬೇಕಾದೀತು ಎಂಬುದೇ ಆತನ ಸಮಸ್ಯೆಯಾಗಿತ್ತು. ಆತ ಮದ್ಯ ಸೇವಿಸಿದ್ದರಿಂದ ತನ್ನ ನಿಜವಾದ ವಿಚಾರಗಳನ್ನು ಹೇಳಲಾರದೇ ವಾದಮಾಡುವಲ್ಲಿ ವಿಫಲವಾಗಿದ್ದನು. ಪಂಚಾಯಿತಿಯ ಷರತ್ತುಗಳನ್ನು ಮನ್ನಿಸುವುದಾಗಿ ಹೇಳುತ್ತಿದ್ದರೂ ಮರುಕ್ಷಣವೇ ಪಂಚಾಯಿತಿ ತನ್ನ ವಿಷಯದಲ್ಲಿ ಪಕ್ಷಪಾತಮಾಡಿದೆ ಎಂಬುದನ್ನು ಹೇಳುತ್ತಿದ್ದನು.

ಮದ್ಯಪಾನ ಮಾಡಿದವರ ಜೊತೆಗೆ ವ್ಯರ್ಥವಾದ ಚರ್ಚೆಗೆ ಹಾರಬಾರದು ಎಂದು ತೀರ್ಮಾನಿಸಿದ ಪಂಚಾಯಿತಿ ಅವನೊಡನೆ ಖಡಾಖಂಡಿತವಾಗಿ ವ್ಯವಹರಿಸಿದ್ದೇ ಅಲ್ಲದೆ, 'ಕೆ' ಕುಟುಂಬದ ಯಜಮಾನನಲ್ಲದರಿಂದ ಆತನು ತನ್ನ ತಂದೆಯನ್ನು ಕರೆದುಕೊಂಡು ಮರುದಿನ ಚರ್ಚೆಗೆ ಬರಬೇಕೆಂದು ನಿರ್ದೇಶಿಸಿತು. ಆತನು ತಾಂಡದ ಹೊರಗೆ ಇರಲು ನಿರ್ಧರಿಸುವುದಾದರೆ, ಆತನು ಗೌರಿ ಉತ್ಸವದಲ್ಲಿ ಪಾಲುಗೊಳ್ಳಲು ಸ್ವತಂತ್ರನೆಂದು ಪಂಚಾಯಿತಿ ಸೂಚಿಸಿತು. ಉತ್ಸವದಲ್ಲಿ ಪಾಲುಗೊಳ್ಳುವುದಾದರೆ ಒಂದು ಸೇರು ಅಕ್ಕಿ ಹಾಗೂ ಪ್ರತಿವ್ಯಕ್ತಿಗೆ ತಲಾ ೫ ರೂಪಾಯಿಯಂತೆ ಕಾಣಿಕೆ ಕೊಡಬೇಕೆಂದು ತಿಳಿಸಲಾಯಿತು. ಆತನನ್ನು ಸಮುದಾಯದಿಂದ ಬಹಿಷ್ಕರಿಸಲಾಗಿಲ್ಲವಾದ್ದರಿಂದ ಆತನಿಗೆ ನೀಡಲಾದ ಶಿಕ್ಷೆಯನ್ನು 'ಹೊರಹಾಕುವಿಕೆ' ಎಂದು ತೀರ್ಮಾನಿಸಲಾಯಿತು.

ಚರ್ಚೆಯುದ್ದಕ್ಕೂ ಒಂದು ರಾಜಕೀಯ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಹಿಂದೆ ಪಂಚಾಯಿತಿ ಕೈಗೊಂಡ ತೀರ್ಮಾನ ಹಾಗೂ ಇಂದು ಕೂಡ ಒಮ್ಮತದಂತೆಯೇ ಎಲ್ಲವೂ ನಡೆಯುತ್ತಿದ್ದರೂ, ಕೆಲವು ಲಂಬಾಣಿಗಳು 'ಕೆ'ಯನ್ನು ಬೆಂಬಲಿಸುತ್ತಿದ್ದರು. ಪಂಚಾಯಿತಿಯ ಕಾರ್ಯಾಚರಣೆಗಳಿಂದ ಅತೃಪ್ತಗೊಂಡ ಈ ಜನರು 'ಕೆ'ನಿಗೆ ಪರೋಕ್ಷವಾಗಿ ಬೆಂಬಲ ನೀಡುತ್ತಿದ್ದರು. 'ಕೆ'ನ ಹಾಗೆ ಅವರು ಪರಿಷತ್ತನ್ನು ವಿರೋಧಿಸಲು ಸಿದ್ಧರಿರಲಿಲ್ಲ ಎಂಬುದೇ ಅವರಿಗೂ, 'ಕೆ'ನಿಗೂ ಇದ್ದ ವ್ಯತ್ಯಾಸವಾಗಿತ್ತು. ಈ ಸಮೀಕ್ಷೆಯ ಕಾಲಕ್ಕೆ ಎಂದರೆ ೧೯೯೯ರಲ್ಲಿ 'ಕೆ' ಆಗಿನ್ನೂ ತಾಂಡದ ಹೊರಗೆ ವಾಸಿಸುತ್ತಿದ್ದನು. ಸಮುದಾಯವು ಸಮಾಜವಿರೋಧಿ ಎಂದು ಪರಿಗಣಿಸುವ ಜನರನ್ನು ನಿಯಂತ್ರಿಸಲು ಸಾಂಪ್ರದಾಯಿಕ ಹಾಗೂ ಸರಕಾರಿ ನಿಯೋಗಗಳೆರಡನ್ನು ಬಳಸಿಕೊಳ್ಳುತ್ತದೆ ಎಂಬುದನ್ನು 'ಕೆ'ನ ಪ್ರಕರಣವು ತಿಳಿಸಿಕೊಡುತ್ತದೆ.

## ೨. ನಾಗಲಾಪುರ ತಾಂಡದಿಂದ ಒಂದು ನಿದರ್ಶನ

೧೯೯೮ರ ಮೇ ತಿಂಗಳಿನಲ್ಲಿ ನಾಗಲಾಪುರ ತಾಂಡದ ವರ ಹಾಗೂ ಚಿಕ್ಕಜೋಗಿಹಳ್ಳಿ ತಾಂಡದ ವಧುವಿನ ವಿವಾಹದ ನಿಶ್ಚಯ ಸಮಾರಂಭವೊಂದು ಜರುಗಿತು. ಕಾರ್ಯಕ್ರಮಕ್ಕಿಂತ ಮೊದಲು ಚಿಕ್ಕಜೋಗಿಹಳ್ಳಿ ತಾಂಡದ ಪಂಚಾಯಿತಿಗೆ ವರನ ಕಡೆಯವರು ಸಾಂಪ್ರದಾಯಿಕ ಶುಲ್ಕವನ್ನು ನೀಡಿದರು. ಹೀಗೆ ಪಡೆದ ಹಣವನ್ನು ಹಿರಿಯರ ಉಪಹಾರ, ಪಾನೀಯಕ್ಕಾಗಿ ಬಳಸಲಾಗುತ್ತದೆ. ತಮ್ಮ ಉಪಹಾರಕ್ಕಾಗಿ ಸಾಯಂಕಾಲ ಪಂಚಾಯಿತಿ ಸದಸ್ಯರು ಹತ್ತಿರದ ಪಟ್ಟಣಕ್ಕೆ ಹೋದಾಗ ಕೆಲವು ಸದಸ್ಯರು ತಮ್ಮ ಪಾಲಿನ ಸಾಂಪ್ರದಾಯಿಕ ಹಣವನ್ನು ತಮಗೆ ಕೊಟ್ಟುಬಿಡಬೇಕೆಂದೂ ಅದರಲ್ಲಿ ನಾವು ಮದ್ಯ ಸೇವಿಸುವುದಾಗಿಯೂ ಹೇಳಿದರಂತೆ. ಕೆಲವು ಸದಸ್ಯರು, ತಮ್ಮ ಹಣವನ್ನು ಕೂಡ ವೆಚ್ಚಮಾಡಿ ಸಾಕಷ್ಟು ಮದ್ಯ ಸೇವಿಸಿದರು. ಅವರಲ್ಲಿ ಓರ್ವ 'ಆರ್' ಎಂಬಾತನು ಶಾಲಾ ಶಿಕ್ಷಕನಾಗಿದ್ದನು. ಅಂದು ರಾತ್ರಿ ಚಿಕ್ಕಜೋಗಿಹಳ್ಳಿ ತಾಂಡ ಮತ್ತು ನಾಗಲಾಪುರ ತಾಂಡದ ಹಿರಿಯ ಸದಸ್ಯರು ಹಾಗೂ ಸುತ್ತಮುತ್ತಲಿನ ತಾಂಡಗಳ ಹಿರಿಯರು ವಿವಾಹ ನಿಶ್ಚಯದ ಕಾರ್ಯಕ್ರಮಕ್ಕಾಗಿ ಚಿಕ್ಕಜೋಗಿಹಳ್ಳಿ ತಾಂಡದ ಸೇವಾಭಯ ದೇವಸ್ಥಾನದಲ್ಲಿ ಸೇರಿದರು.

ಸರಾಯಿ ಕುಡಿದು ಉನ್ಮತ್ತ ಸ್ಥಿತಿಯಲ್ಲಿದ್ದ ಶಿಕ್ಷಕನು ವರನ ಕಡೆಯವರ ಮೇಲೆ ಆರೋಪ ಮಾಡಿದನು. ವರನ ಕಡೆಯವರು ಚಿಕ್ಕಜೋಗಿಹಳ್ಳಿ ತಾಂಡದ ಪಂಚಾಯಿತಿಗೆ ಸಾಂಪ್ರದಾಯಿಕ ಶುಲ್ಕವನ್ನು ನೀಡಿಲ್ಲವೆಂದು ಆತನು ತಕರಾರು ಮಾಡಿದನು. ಶುಲ್ಕವನ್ನು 'ಕೆ' ಎಂಬಾತನಿಗೆ ಕೊಡಮಾಡಲಾಗಿದೆ ಎಂದು ಅವರು ಆತನಿಗೆ ತಿಳಿಸಿದರು. ಮಾಮೂಲನ್ನು ಸ್ವೀಕರಿಸಲು 'ಕೆ' ಯಾರು? ನಾನು 'ಮುಖ್ಯಸ್ಥ' ಎಂದು ಆತನು ಕೆಟ್ಟಭಾಷೆಯಲ್ಲಿ ಕೂಗಾಡಿದ. 'ಕೆ'ನಿಗೆ ಕೋಪ ಬಂದಿತು. ಆತನು 'ಆರ್'ನ ಜೊತೆಗೆ ಸಿಟ್ಟಿನಿಂದ ವಾದಮಾಡಿದನು. ಜಗಳ ವಿಪರೀತಕ್ಕೆ ಹೋಯಿತು. ಅವರಿಬ್ಬರೂ ಹೊಡೆದಾಡಲು ತೊಡಗಿದಾಗ ಹಿರಿಯರು ಅವರನ್ನು ಪ್ರತ್ಯೇಕಿಸಿ, 'ಆರ್'ನನ್ನು ಆತನ ಮನೆಯಲ್ಲಿ ದೂಡಿ ಬಾಗಿಲನ್ನು ಹಾಕಿದರು. 'ಆರ್' ಮನೆಯೊಳಗಿಂದಲೇ ಎಲ್ಲರನ್ನೂ ದೊಡ್ಡಧ್ವನಿಯಿಂದ ಬೈಯತೊಡಗಿದನು. ಆತನ ಬೈಗುಳಕ್ಕೆ ರೋಸಿಹೋದ ಕೆಲವು ಯುವಕರು ಅತನನ್ನು ಚೆನ್ನಾಗಿ ಥಳಿಸಿದರು ಅನಂತರದಲ್ಲಿ ನಿಶ್ಚಯ ಕಾರ್ಯಕ್ರಮ ನಡೆಯಿತು. ಹಿರಿಯರು ಮನಸ್ಸು ಮಾಡಿದ್ದರೆ 'ಆರ್'ನನ್ನು ಪೋಲಿಸರಿಗೆ ಒಪ್ಪಿಸಬಹುದಾಗಿತ್ತು. ಮದ್ಯಪಾನ ಮಾಡಿದ ಆತನು ತನ್ನ ನೌಕರಿಯನ್ನೇ ಕಳೆದುಕೊಳ್ಳಬಹುದಾಗಿತ್ತು. 'ಆರ್'ನ ಮನೆಯಾತನಾದ 'ಎಚ್' ಎಂಬ ನಾಗಲಾಪುರ ತಾಂಡದ ಸ್ಥಿತಿವಂತನು. ಈ ಜಗಳ ನಡೆದಾಗ ಅಲ್ಲಿರಲಿಲ್ಲ. ಮರುದಿನ ಆತನು ಊರಿಗೆ ಬಂದೊಡನೆ ಎರಡೂ ತಾಂಡಗಳ ಹಿರಿಯರು ಆತನ ಬಳಿಗೆ ಬಂದು ನಡೆದ ಘಟನೆಯನ್ನು ಕುರಿತು ವಿವರಿಸಿದರಂತೆ. ಸರಿಯಾಗಿ ವರ್ತನೆ ಮಾಡುವಂತೆ ಆ ಶಿಕ್ಷಕನಿಗೆ ಎಚ್ಚರಿಕೆಯನ್ನು ನೀಡಲು ತೀರ್ಮಾನಿಸಿದರು. ಆತನು ಕೆಲಸಮಾಡುತ್ತಿದ ಗ್ರಾಮದ ಲಂಬಾಣೇತರ ನಾಯಕರಿಗೂ ಈ ವಿಷಯವನ್ನು ತಿಳಿಸಿದರು. ಶಾಲೆಯ ಅವಧಿಯ ನಂತರ ಆ ಶಿಕ್ಷಕನು ಚಿಕ್ಕಜೋಗಿಹಳ್ಳಿಯ ತನ್ನ ಮನೆಗೆ ಮರಳುವುದಕ್ಕೆ ಬದಲಾಗಿ ಕೂಡ್ಲಗಿಯಲ್ಲಿಯ ಸೋದರ ಮಾವನ ಮನೆಗೆ ಹೋದನು. ಆತನ ಸೋದರಮಾವನು ಪೋಲಿಸ್ ಇಲಾಖೆಯಲ್ಲಿ ಹೆಡ್‌ಕಾನ್‌ಸ್ಟೇಬಲ್ ಆಗಿದ್ದನು. ಊರಿನ ಹಿರಿಯರು ತನ್ನ ಮೇಲೆ ದಾಳಿಮಾಡಿದ್ದಾರೆಂದು ಆರಕ್ಷಕ ಠಾಣೆಯಲ್ಲಿ ಕೇಸನ್ನು ನೋಂದಣಿ ಮಾಡಬೇಕೆಂದು ಅತನು ಶಿಕ್ಷಕನಿಗೆ ಸಲಹೆಮಾಡಿದನು. ಊರಿನ ಹಿರಿಯರಿಗೆ ಈ ಸುದ್ದಿ ತಿಳಿಯುತ್ತಲೇ ಆ ಶಿಕ್ಷಕನನ್ನು ಭೇಟಿಮಾಡಿ ಹಾಗೆ ಮಾಡಬಾರದೆಂದು ವಿನಂತಿಸಿಕೊಂಡರು. ಅಲ್ಲಿಯ ಮಾಜಿ ಮುಖ್ಯಸ್ಥನು ಕೂಡ ಶಿಕ್ಷಕನಿಗೆ ಹಾಗೆ ಮಾಡಕೂಡದೆಂದು ಸೂಚಿಸಿದನು. ಆದರೆ ಶಿಕ್ಷಕನು ಅವರ ಮಾತುಗಳನ್ನು ಕೇಳಲಿಲ್ಲ. ಆರಕ್ಷಕ ಠಾಣೆಯಲ್ಲಿ ಕೇಸನ್ನು ನೊಂದಣಿ ಮಾಡಿದನು. ೧೨ ಜನರನ್ನು ಆರೋಪಿಗಳೆಂದು ಆತನು ಸೂಚಿಸಿದ್ದನು. ಪೋಲಿಸ್ ಇಲಾಖೆಯಲ್ಲಿದ್ದ ತನ್ನ ಮಾವನ ಪ್ರಭಾವವನ್ನು ಆತನು ಬಳಸಿಕೊಂಡನು.

ಮೇಲುನೋಟಕ್ಕೆ ಈ ಪ್ರಕರಣವು ಒಂದು ಸಾಮಾನ್ಯ ಘಟನೆ ಎಂದು ತೋರಿದರೂ ತಾಂಡದಲ್ಲಿಯ ಸ್ಪರ್ಧೆ ಹಾಗೂ ಗುಂಪುಗಾರಿಕೆ ಮೊದಲಾದವುಗಳನ್ನು ಈ ಪ್ರಕರಣವು ಸಂಕೇತಿಸುತ್ತದೆ. ಈ ಒಂದು ಜಗಳವು ಸಮುದಾಯದಲ್ಲಿ ಬಿರುಕನ್ನುಂಟುಮಾಡಿತ್ತು. ಶಿಕ್ಷಕನು ಇಡೀ ಸಮುದಾಯದ ಜನರನ್ನು ಎದುರುಹಾಕಿಕೊಂಡಿದ್ದನು. ಆತನು ಮಾಡಿದ ದಾವೆ ಕೂಡ್ಲಿಗಿ ಮ್ಯಾಜಿಸ್ಟ್ರೇಟ್ ಕೋರ್ಟನ್ನು ತಲುಪಿತ್ತು. ಊರಿನ ಹಿರಿಯರ ವಿರುದ್ಧ ಮಾಡಿದ ಸುಳ್ಳು ಅಪಾದನೆಯನ್ನು ಆತನು ವಾಪಸು ಪಡೆಯದೆ ಇದ್ದರೆ ಅತನನ್ನು ಸಮುದಾಯದಿಂದ ಬಹಿಷ್ಕರಿಸಬೇಕೆಂದು ಜನರು ತೀರ್ಮಾನಿಸಿದರು. ನಾಗಲಾಪುರ ಸಿರಿವಂತ 'ಎಚ್' ಈ ಹಗರಣದಲ್ಲಿ ಇರಲಿಲ್ಲವಾದ್ದರಿಂದ ಹಾಗೂ ಅತನು ಪ್ರಭಾವಿನಾಯಕನೂ ಸ್ಥಿತಿವಂತನೂ ಆಗಿದ್ದರಿಂದ ಆತನು ಈ ರಾದ್ಧಾಂತವನ್ನು ತಡೆಗಟ್ಟಬಹುದಾಗಿತ್ತಲ್ಲ ಎಂದು ಜನರು ಯೋಚಿಸಿದರು. ಸಮುದಾಯದಲ್ಲಿ ಶಾಂತಿಯನ್ನು ಕಾಪಾಡಲು ಆತನು ಏಕೆ ಮುತುವರ್ಜಿ ವಹಿಸಲಿಲ್ಲ ಎಂಬುದೇ ಜನರ ಆಕ್ರೋಶವಾಗಿತ್ತು. ಶಿಕ್ಷಕನು 'ಎಚ್'ನ ಮೇಲೆ ಕೂಡ ಆಪಾದನೆ ಮಾಡಿದನು. ಆತನೇ ಊರ ಹಿರಿಯರನ್ನು ಪ್ರಚೋದಿಸಿ ತನ್ನನ್ನು ಬಡಿಸಿದ್ದಾನೆ ಎಂದು ಹೇಳಿದಾಗ 'ಎಚ್' ತನ್ನ ರಕ್ಷಣೆಗೋಸ್ಕರ ಆರಕ್ಷಕ ಠಾಣೆಯಲ್ಲಿ ಕೇಸನ್ನು ನೋಂದಣಿ ಮಾಡಿದನು. ಶಿಕ್ಷಕನು ಆಪಾದಿಸಿದ್ದ ೧೨ ಜನರನ್ನು ದಸ್ತಗಿರಿ ಮಾಡಲಾಯಿತು. ಅವರು ಜಾಮೀನಿನ ಮೇಲೆ ಬಿಡುಗಡೆ ಹೊಂದಿದರು. 'ಎಚ್' ಅವರಿಗೆ ಜಾಮೀನು ನೀಡಿದವರಲ್ಲಿ ಓರ್ವನಾಗಿದ್ದನು. 'ಎಚ್' ಜಗಳವಾದ ಸನ್ನಿವೇಶದಲ್ಲಿ ಇರಲಿಲ್ಲವಾದ್ದರಿಂದ ಈ ಪ್ರಕರಣವು ನ್ಯಾಯಾಲಯಕ್ಕೆ ಹೋಗುವುದನ್ನು ತಪ್ಪಿಸಲು ಸಾಧ್ಯವಿದ್ದಿತು. ಆತನು ಮಧ್ಯಸ್ಥಿಕೆ ವಹಿಸಬೇಕಿತ್ತು. ಆತನು ಪ್ರಕರಣವನ್ನು ಇತ್ಯರ್ಥಗೊಳಿಸುವಂತೆ ನಟನೆ ಮಾಡುತ್ತಿದ್ದಾನೆಂದೂ ಆತನ ಒಳ ಉದ್ದೇಶವು ಸಮುದಾಯದಲ್ಲಿ ಬಿರುಕು ಇರಲಿ ಎಂಬುದಾಗಿಯೆಂದೂ ಜನರು ಭಾವಿಸಿದರು. ತನ್ನನ್ನು ಯಾರೂ ಮೀರಿಸದಂತಾಗಲಿ ಎಂಬುದು ಆತನ ಒಳ ಉದ್ದೇಶವಾಗಿದೆ ಎಂಬುದು ಎಲ್ಲರ ಅಭಿಪ್ರಾಯವಾಗಿತ್ತು. ಶಿಕ್ಷಕ ಹಾಗೂ ಇತರ ನಾಯಕರೊಂದಿಗೆ ಆತನ ಸ್ಪರ್ಧೆ ಇತ್ತು. ಅಲ್ಲದೇ ನಾಯಕತ್ವಕ್ಕಾಗಿ ಹೋರಾಟವಿದ್ದಿತು. ತಾಂಡದ ಸ್ಥಿತಿವಂತ ಹಾಗೂ ಪ್ರಭಾವಿ ವ್ಯಕ್ತಿ 'ಜ' ಎಂಬಾತನೊಂದಿಗೆ ಸುಪ್ತವಾದ ವೈಮನಸ್ಸು ಇದ್ದಿತು.

'ಎಚ್' ಹಿಂದೆ ತನ್ನ ಸಂಬಂಧಿಕರಲ್ಲಿ ಓರ್ವಳ ಪತಿ ತೀರಿಹೋದ ನಂತರ ಪ್ರೇಮಪ್ರಕರಣದಿಂದ ಆಕೆಯನ್ನು ವಿವಾಹವಾದಾಗ 'ಆರ್'ನ ತಂದೆಯ ಕುಮ್ಮಕ್ಕಿನಿಂದಾಗಿ ಬಹಿಷ್ಕೃತಗೊಂಡು ಅನಂತರ ಬಹುದೊಡ್ಡ ಮೊತ್ತದ ದಂಡ ನೀಡಿ ಸಮುದಾಯದಲ್ಲಿ ಮರುಪ್ರವೇಶ ಪಡೆದಿದ್ದನು. 'ಆರ್'ನ ತಂದೆ ಆಗ ಅತ್ಯಂತ ಜನಪ್ರಿಯ ವ್ಯಕ್ತಿಯಾಗಿದ್ದರಿಂದ ಹಾಗೂ ಪ್ರಭಾವಿ ವ್ಯಕ್ತಿಯಾಗಿದ್ದರಿಂದ 'ಎಚ್' ಅತನನ್ನು ಎದುರಿಸುವವನಿರಲಿಲ್ಲ. ಈ ಸಂದರ್ಭದಲ್ಲಿ ಆತನ ಮೇಲಿನ ಸೇಡನ್ನು ಆತನ ಮಗನ ಮೇಲೆ ತೀರಿಸಿಕೊಳ್ಳಲು 'ಎಚ್' ಹವಣಿಸಿದ್ದನು. ಈ ಕಾರಣದಿಂದ ಆತನು ಜಗಳವನ್ನು ಬಗೆಹರಿಸುವ ಗೋಜಿಗೆ ಹೋಗಲಿಲ್ಲ.

ಹಿಂದೆ ನಡೆದಿದ್ದ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಮೀಸಲಾತಿ ಸ್ಥಾನಕ್ಕೆ 'ಎಚ್'ನ ಹೆಂಡತಿ ಅಭ್ಯರ್ಥಿಯಾಗಿದ್ದಳು, ಆಗ 'ಆರ್'ನು 'ಜ'ಯ ಪರವಾಗಿ ಪ್ರಚಾರಮಾಡಿ 'ಎಚ್'ನ ಹೆಂಡತಿಯ ವಿರುದ್ಧ ಕೆಲಸಮಾಡಿದ್ದನು. ಆ ಚುನಾವಣೆಯಲ್ಲಿ 'ಜ' ವಿಜಯಿಯಾಗಿದ್ದಳು. ಈ ಜಗಳದ ಸನ್ನಿವೇಶದಲ್ಲಿ 'ಜ'ನ ಪತಿಗೆ ಶಿಕ್ಷೆಯಾಗಲಿ ಎಂದೇ ಆಶಿಸಿದ್ದ 'ಎಚ್'ನ ಪ್ರಕರಣವು ನ್ಯಾಯಾಲಯಕ್ಕೆ ಹೋಗಲೀ ಎಂದುಕೊಂಡೇ ಅದನ್ನು ಬಗೆಹರಿಸಲಿಲ್ಲ. 'ಜ'ನಿಗೆ ಶಿಕ್ಷೆಯಾಗಲೀ, ಆತನು ಮುಂದಿನ ಚುನಾವಣೆಗಳಲ್ಲಿ ಸ್ಪರ್ಧಿಸಲು ಅನರ್ಹನಾಗಲಿ ಎಂದೇ 'ಎಚ್' ಬಯಸಿದ್ದನು. 'ಜ' ನಾಯಕಿಯಾಗಿರುವುದು ಆತನಿಗೆ ಬೇಡವಾಗಿತ್ತು. ಈ ಪ್ರಕರಣದಲ್ಲಿ 'ಎಚ್'ನ ಪಾತ್ರವಿರದಿದ್ದರೂ ಜಗಳವನ್ನು ರಾಜೀ ಮಾಡಿಸದೇ ತನ್ನ ಪಾಡಿಗೆ ತಾನೂ ಎಂಬಂತಿದ್ದ 'ಎಚ್' ಅದರ ಸಂಪೂರ್ಣ ಪ್ರಯೋಜನ ಪಡೆಯಲು ಹವಣಿಸಿದ್ದನು. ಈ ಪ್ರಕರಣದಿಂದ 'ಆರ್' ಮತ್ತು 'ಎಚ್' ಇಬ್ಭಾಗವಾಗುವುದು ಆತನಿಗೆ ಅನುಕೂಲಕರವಾಗಿತ್ತು.

'ಆರ್'ನ ಮೇಲೆ ಸೇಡು ತೀರಿಸಿಕೊಳ್ಳಲು 'ಎಚ್'ನಿಗೆ ಇನ್ನೊಂದು ಬಲವಾದ ಕಾರಣವೂ ಇದ್ದಿತು. ಹಿಂದೊಂದು ಸಂದರ್ಭದಲ್ಲಿ ಓರ್ವ ಹೆಣ್ಣುಮಗಳು ಹಿರಿಯರ ವಿರುದ್ಧ ಆಕ್ಷೇಪಣೆ ಮಾಡಲು 'ಆರ್'ನ ಕುಮ್ಮಕ್ಕೇ ಕಾರಣವಾಗಿತ್ತೆಂಬುದು 'ಎಚ್'ನ ಶಂಕೆಯಾಗಿತ್ತು. ಓರ್ವ ಲಂಬಾಣಿ ಕೆಲವು ವರ್ಷಗಳ ಹಿಂದೆ ಅಸಹಜ ಸಾವನ್ನು ಅಪ್ಪಿದ್ದನು. ಆತನ ಹೆಂಡತಿ ಬರೆ ಹಾಕಿದ್ದೇ ಆತನ ಸಾವಿಗೆ ಕಾರಣವಾಗಿತ್ತು. ಆಕೆಯ ದುರ್ವರ್ತನೆಗೆ ಆಕೆಯನ್ನು ದಂಡಿಸಬೇಕೆಂದು ಹಿರಿಯರು ತೀರ್ಮಾನಿಸಿದ್ದರು. ಆಗ ಆಕೆ ಪೋಲಿಸರಿಗೆ ದೂರು ಸಲ್ಲಿಸಿ, ತಾಂಡದ ಜನರು ತನ್ನನ್ನು ಅನವಶ್ಯಕವಾಗಿ ಹಿಂಸಿಸುತ್ತಿದ್ದಾರೆ ಎಂದು ಆಪಾದನೆಯನ್ನು ಮಾಡಿದ್ದಳು. ಈ ಜನರೇ ತನ್ನ ಪತಿಯನ್ನು ಕೊಂದಿದ್ದಾರೆ ಎಂದೂ ಆಕೆ ಸಾರಿದ್ದಳು. ತನ್ನ ಪತಿಯ ಶವವನ್ನು ದಹನ ಮಾಡಿದ ನಂತರ ಆಕೆ ಆರಕ್ಷಕ ಠಾಣೆಯಲ್ಲಿ ಕೇಸ್ ನೊಂದಾಯಿಸಿದ, ಕಾರಣದಿಂದಾಗಿ ತಾಂಡದ ಕೆಲವು ಹಿರಿಯರುಗಳನ್ನು ದಸ್ತಗಿರಿ ಮಾಡಲಾಗಿತ್ತು. ಅನಂತರ ಅವರ ಬಿಡುಗಡೆಯಾಯಿತು. ಮಾಜಿ ಮುಖ್ಯಸ್ಥನು ಪೋಲಿಸರಿಗೆ ನಿಜಘಟನೆಯ ಬಗೆಗೆ ವಿವರಣೆ ನೀಡಿದ್ದರಿಂದ ಆ ಪ್ರಕರಣವನ್ನು ಅಲ್ಲಿಗೇ ಕೈಬಿಡಲಾಯಿತು. ಆ ಹೆಣ್ಣುಮಗಳು ಆಪಾದಿತರನ್ನಾಗಿ ಮಾಡಿದ್ದ 'ಜಿ' ಮತ್ತು ಇತರರು 'ಆರ್'ನೇ ಆ ಹೆಣ್ಣುಮಗಳಿಗೆ ಪ್ರಚೋದನೆ ನೀಡಿ ದಾವೆ ಮಾಡಿಸಿದ್ದಾನೆ ಎಂದು ಸಂದೇಹಪಟ್ಟಿದ್ದರು.

ಪ್ರಕರಣವನ್ನು ರಾಜೀ ಸಂಧಾನದ ಮೂಲಕ ಬಗೆಹರಿಸಿಕೊಳ್ಳಲು 'ಆರ್' ೧೯೯೮ರ ಜೂನ್ ತಿಂಗಳಿನ ಕೊನೆಯಲ್ಲಿ ಸಿದ್ಧನಿರಲಿಲ್ಲ. ಆಗ ಆತನು ಸಮುದಾಯದಿಂದ ಬಹಿಷ್ಕೃತನಾಗಿದನು. ಆದರೆ ಮಾನಸಿಕ ಕಾರಣದಿಂದಾಗಿ ರಾಜೀಸಂಧಾನವನ್ನು ಪರಿಗಣನೆ ಮಾಡಲು ಸಿದ್ಧನಾದನು. ಈ ಹಂತದಲ್ಲಿ ನಾನು 'ಆರ್' ಮತ್ತು 'ಎಚ್' ಹಾಗೂ ನಾಗಲಾಪುರ ತಾಂಡದ ನಾಯಕರು ಹಾಗೂ ಮೊದಲಾದವರನ್ನು ಪ್ರತ್ಯೇಕವಾಗಿ ಸಂಪರ್ಕಿಸಿ ರಾಜೀಸಂಧಾನದ ಪ್ರಸ್ತಾಪ ಮಾಡಿದೆ. ಆ ಮೂವರೂ ರಾಜಿಯಾಗಲು ಸಮ್ಮತಿಸಿದರು. 'ಎಚ್' ಈ ಸಂಧಾನದಲ್ಲಿ ಮುತುವರ್ಜಿ ವಹಿಸಲು ಕಾರಣವಿದ್ದಿತು. ಜುಲೈ ೨ ರಂದು ಆತನ ಮಗನ ವಿವಾಹವಿದ್ದಿತು. ತನ್ನ ಬೀಗರ ಎದುರಿನಲ್ಲಿ ತನ್ನ ಸಮುದಾಯದ (ವಿಶೇಷವಾಗಿ ತಾಂಡದ) ಒಡಕು ಕಾಣಬಾರದೆಂಬುದು ಆತನ ಉದ್ದೇಶವಾಗಿತ್ತು. ಚಿಕ್ಕಜೋಗಿಹಳ್ಳಿ ತಾಂಡದಲ್ಲಿ ತನ್ನ ಕುಟುಂಬವನ್ನು ಬಿಟ್ಟರೆ ಇನ್ನೊಂದು ಮಹತ್ವದ ಕುಟುಂಬದ ಸದಸ್ಯನು ಬಹಿಷ್ಕೃತನಾಗಿರುವುದು ಆತನಿಗೆ ಬೇಡವಾಗಿತ್ತು. ನಾನು ರಾಜೀ ಪ್ರಸ್ತಾಪ ಮಾಡಿದಾಗ ಆತನು ಸಂತೋಷದಿಂದಲೇ ಒಪ್ಪಿಕೊಂಡನು. ತಾನು 'ಆರ್'ನ ಕುಟುಂಬದ ಹಿತೈಷಿ ಎಂದು ಹೇಳಿದನು. ತನ್ನ ಹಾಗೂ 'ಆರ್'ನ ಕುಟುಂಬಗಳ ನಡುವಿನ ಸಂಬಂಧಗಳು 'ಆರ್'ನ ತಂದೆಯ ಕಾಲದಿಂದ ನಿಕಟವಾದವುಗಳು ಎಂದು ಹೇಳಿದನು. ಆದರೆ ಅದು ನಿಜವಾಗಿರಲಿಲ್ಲ. ಅನಾವಶ್ಯಕವಾಗಿ ಆರೋಪಿತರಾಗಿರುವ ಕೆಲವು ಹಿರಿಯರು ಈ ಸಂಧಾನಕ್ಕೆ ಒಪ್ಪಲಿಕ್ಕಿಲ್ಲ ಎಂದೇ ಆತನು ಎಣಿಸಿದನು. ಆ ಶಿಕ್ಷಕನನ್ನು ರಾಜೀ ಸಂಧಾನಕ್ಕೆ ಒಪ್ಪಿಸುತ್ತೇನೆ ಎಂಬುದಾಗಿಯೂ ಆಶ್ವಾಸನೆ ನೀಡಿದನು.

೨೯ ಜೂನ್, ೧೯೯೮ ರಂದು ನಾಗಲಾಪುರ ತಾಂಡ ಮತ್ತು ಚಿಕ್ಕಜೋಗಿಹಳ್ಳಿ ತಾಂಡಗಳ ಪಂಚಾಯಿತಿಗಳು ಸಂಯುಕ್ತ ಸಭೆ ಕೂಡ್ಲಿಗಿಯಲ್ಲಿ ಸೇರಿತು. ನನ್ನ ಮತ್ತು ಪೋಲೀಸ್ ಇಲಾಖೆಗೆ ಸೇರಿದ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ಸಾಂಗವಾಯಿತು. ನೆರೆಯ ಹಳ್ಳಿಯ ಲಂಬಾಣೇತರ ಮುಖ್ಯಸ್ಥರು ನಾಗಲಾಪುರ ಗ್ರಾಮದ ಲಂಬಾಣೇತರ ಗುಂಪಿನ ಕೆಲವು ಹಿರಿಯರು ಈ ಪ್ರಕರಣವನ್ನು ಇತ್ಯರ್ಥಗೊಳಿಸಲು ಆಮಂತ್ರಿತರಾಗಿ ಬಂದಿದ್ದರು. ಈ ಸಂದರ್ಭದಲ್ಲಿ ಎರಡೂ ಕಡೆಯವರು ಹಾಗೂ ತಾಂಡದ ಅನೇಕ ಜನರು ಉಪಸ್ಥಿತರಿದ್ದರು. ಸುಮಾರು ಬೆಳಿಗ್ಗೆ ೧೦-೩೦ಗಂಟೆಗೆ ಚರ್ಚೆ ಆರಂಭಗೊಂಡಿತ್ತು. ೧೨ ಜನ ಆರೋಪಿಗಳ ಪರವಾಗಿ 'ಜಿ' ಮಾತನಾಡಬೇಕೆಂದು ನಾನು ಸೂಚಿಸಿದೆ. ಆತನು ಸಮಸ್ತ ಪ್ರಕರಣವನ್ನು ಅರ್ಧ ಗಂಟೆಯ ಕಾಲ ಸಮಗ್ರವಾಗಿ ಮತ್ತು ಜಾಣ್ಮೆಯಿಂದ ವಿವರವಾಗಿ ತಿಳಿಸಿದ್ದನು. ಅನಂತರದಲ್ಲಿ ವಾದಿ 'ಆರ್' ಮಾತನಾಡಿದನು. ಮೂರನೆಯ ವ್ಯಕ್ತಿಯಾಗಿ 'ಎಚ್' ಮಾತನಾಡಿದನು.

ಎಲ್ಲರೂ ತಮ್ಮನ್ನು ಸಮರ್ಥಿಸಿಕೊಳ್ಳುವಂತೆ ಮಾತನಾಡಿದರೂ ಪ್ರಕರಣದ ವಿಷಯಗಳು ಸ್ಪಷ್ಟವಾಗಿ ತಿಳಿಯುವಂತಿದ್ದರೂ ವಾದಿ ಪ್ರತಿವಾದಿಗಳು ತಮ್ಮದೇ ಸರಿ ಬೇರೆಯವರಿಂದಲೇ ಅನ್ಯಾಯವಾಗಿದೆ ಎಂಬಂತೆ ನಿರೂಪಿಸಿದರು. ಚರ್ಚೆ ಕೊನೆಯೇ ಇಲ್ಲವೆಂಬಂತೆ ನಡೆಯಿತು. ತಾಳ್ಮೆಯಿಲ್ಲದ ಯುವಕರು ಹಾಗೂ ಕುಡಿದವರು ಮಾತನಾಡುವವರ ವಿರುದ್ಧ ತಮಗನಿಸಿದ್ದನ್ನು ವ್ಯಕ್ತಪಡಿಸತೊಡಗಿದರು. ಸಂಜೆ ೪.೦೦ ಗಂಟೆಯ ಸುಮಾರಿಗೆ ಸಂಧಾನಕಾರರಿಗೆ ಸಾಕಷ್ಟು ವಿಷಯಗಳು ತಿಳಿದಿದ್ದವು. ಸಂಧಾನದ ಪ್ರಸ್ತಾಪಕ್ಕೆ ಎರಡೂ ಪಕ್ಷಗಳ ಒಪ್ಪಿಗೆ ಕೇಳಲಾಯಿತು. ಆಪಾದಿತರು ಏನನ್ನೂ ಮಾಡಬೇಕಾಗಿರಲಿಲ್ಲ. ವಾದಿಯು ಕೇಸನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು ಎಂದು ಹೇಳಿದಾಗ ಎರಡೂ ಕಡೆಯವರು ಸುಮ್ಮನಾದರು. ಜನರು ತೀರ್ಮಾನವನ್ನು ಸ್ವಾಗತಿಸಿದರು. ಸಮುದಾಯದಲ್ಲಿ ಇದ್ದ ಒಡಕು ಮುಚ್ಚಿಹೋಯಿತು ಎಂಬುದೇ ಅವರ ಸಂತೋಷಕ್ಕೆ ಕಾರಣವಾದ ಅಂಶವಾಗಿತ್ತು.

ಮೊದಲಿನ ಹಂತದಲ್ಲಿ ಎಂದರೆ ಎಲ್ಲರೂ ಹೇಳುವುದನ್ನು ಕೇಳಿಯಾದ ಮೇಲೆ ಹಾಗೂ ತೀರ್ಪು ನೀಡುವ ಮೊದಲಿಗೆ ನಾನು ಅವರಿಗೆಲ್ಲ ಸೂಚಿಸಿದ್ದೇನೆಂದರೆ ಸಂಪೂರ್ಣ ರಾಜೀಸಂಧಾನಕ್ಕೆ ಅವರು ಒಪ್ಪಬೇಕು. ಮಾಜಿ ಮುಖ್ಯಸ್ಥರಂತಹ ಹಿರಿಯರು ಹಾಗೂ ಪೋಲಿಸ್ ಅಧಿಕಾರಿಗಳ ನೆರವಿನಿಂದ ಎಲ್ಲ ವಿಷಯಗಳನ್ನು ಅಂತಿಮವಾಗಿ ತೀರ್ಮಾನಿಸಬೇಕು ಎಂದು. ಆ ಹಂತದಲ್ಲಿ ಮಧ್ಯಸ್ಥರು ತಮ್ಮ ಹೊಣೆಗಾರಿಕೆಗಳಿಂದ ನುಣುಚಿಕೊಳ್ಳುತ್ತಿದ್ದಾರೆ ಎಂಬುದಾಗಿ 'ಎಚ್' ಆಕ್ಷೇಪಿಸಿದನು. ಪಂಚಾಯಿತಿಯು ತೀರ್ಪನ್ನು ಕೊಡದೇ ವಿಸರ್ಜಿತಗೊಳ್ಳಕೂಡದು ಎಂಬುದಾಗಿ ಆತನು ಒತ್ತಾಯಿಸಿದನು. 'ಎಚ್'ನಿಗೆ ರಾಜೀಸಂಧಾನ ಖಚಿತವಾಗಿ ಆಗುವುದು ಬೇಕಿತ್ತು. 'ಆರ್'ನಿಗೆ ವಿಧಿಸಿದ ಬಹಿಷ್ಕಾರವನ್ನು ಕೂಡಲೇ ಹಿಂದಕ್ಕೆ ತೆಗೆದುಕೊಳ್ಳುವುದು ಬೇಕಿತ್ತು. ಅಂದರೆ ತಾಂತ್ರಿಕವಾಗಿ ಇಡೀ ಪ್ರಕರಣವು ಮ್ಯಾಜಿಸ್ಟ್ರೇಟ್‌ರ ಎದುರಿನಲ್ಲಿ ತೀರ್ಮಾನವಾಗಬೇಕಿತ್ತು. ಆಗಸ್ಟ್ ೧೯೬೮ರಲ್ಲಿ ಆಪಾದಿತರನ್ನು ನಿರ್ದೋಷಿಗಳೆಂದು ನ್ಯಾಯಾಧೀಶರು ತೀರ್ಮಾನಿಸಿದರು.

ಪಂಚಾಯಿತಿ ಸದಸ್ಯರು ತಮ್ಮ ಭ್ರಮನಿರಸತೆಯನ್ನು ವ್ಯಕ್ತಪಡಿಸುವ ಹೇಳಿಕೆಗಳಿಂದ ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿಯ ಅಳಿದು ಹೋಗುತ್ತಿರುವ ಸತ್ವವನ್ನು ನಾವು ಗುರುತಿಸಬಹುದಾಗಿದೆ. ತಮ್ಮ ತೀರ್ಮಾನಗಳಿಗೆ ಬದ್ಧರಾಗುವಂತೆ ಸದಸ್ಯರನ್ನು ನಿಯಂತ್ರಿಸುವ ಹಾಗೂ ವರ್ತನೆಯ ನಿಯಮಾವಳಿಗಳನ್ನು ಅವರು ಪಾಲಿಸುವಂತೆ ಮಾಡುವಲ್ಲಿ ಹಾಗೂ ಅವರನ್ನು ನಿಯಂತ್ರಿಸುವ ಹಾಗೂ ಸಾಂಪ್ರದಾಯಿಕ ಶಿಕ್ಷೆಗಳನ್ನು ನೀಡುವ ವಿಷಯಗಳಲ್ಲಿ ಪಂಚಾಯಿತಿಯು ತನ್ನ ಸಾಂಪ್ರದಾಯಿಕ ನಿಯಂತ್ರಣವನ್ನು ಕಳೆದುಕೊಂಡಿದೆ. ಸಮಾಜವಿರೋಧಿ ವರ್ತನೆಯ ವಿರುದ್ಧ, ವೈಯಕ್ತಿಕ ವರ್ತನೆ ಮಾದರಿಗಳ ಉಲ್ಲಂಘನೆಗಳ ಪ್ರಕರಣಗಳಲ್ಲಿ ಅದು ತನ್ನ ಗತಕಾಲದ ನಿಯಂತ್ರಣವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ ಎಂಬುದು ನಿಶ್ಚಿತ. (ರ್‍ಯಾಡ್‌ಕ್ಲಿಫ್ ಬ್ರೌನ್, ೧೯೬೪ : ೩೨-೩೩). ಅಷ್ಟೇ ಅಲ್ಲದೆ, ಸಾಮುದಾಯಿಕ ಕಾರ್ಯಗಳಿಗಾಗಿ ಜನರ ಸಹಕಾರವನ್ನು ಪಡೆದುಕೊಳ್ಳುವಲ್ಲಿ ಹಾಗೂ ಸಾಮುದಾಯಿಕ ಸಮಾರಂಭಗಳಲ್ಲಿ ಜನತೆಯ ಸಹಕಾರವನ್ನು ಪಡೆಯುವಲ್ಲಿ ಕೂಡ ಈ ಪಂಚಾಯಿತಿ ಅಸಮರ್ಥವಾಗಿದೆ. ವೈಯಕ್ತಿಕತೆಯ ತೀವ್ರತೆಯು ಸಂಘಟಿತ ನಿಯಂತ್ರಣದ ನಿಷ್ಫಲತೆಗೆ ಕಾರಣವಾಗಿದೆ. ಅಲೆಮಾರಿ ಜೀವನದಿಂದ ಒಂದೇ ಸ್ಥಳದಲ್ಲಿ ನೆಲೆ ನಿಲ್ಲುವವರೆಗಿನ ಜೀವನಕ್ರಮದಲ್ಲಿನ ಪರಿವರ್ತನೆಯೂ ಇದಕ್ಕೆ ಕಾರಣವಾಗಿದೆ. ಅಲೆಮಾರಿ ಜೀವನದಲ್ಲಿ ದನಕರುಗಳ ಹಾಗೂ ಪ್ರಾಣಿಗಳ ಒಡೆತನವನ್ನುಳ್ಳ ಚಿಕ್ಕ ಗುಂಪುಗಳು ನಾಯಕರ ಹಿಡಿತದಲ್ಲಿದ್ದವು. ಇಂದು ನೆಲೆನಿಂತ ಲಂಬಾಣಿಗಳು ಇತರರಂತೆ ವೈಯಕ್ತಿಕ ಆಸ್ತಿಯ ಹಕ್ಕನ್ನು ಪಡೆದಿದ್ದಾರೆ. ಹೀಗಾಗಿ, ಅವರು ತಮ್ಮ ನಾಯಕರ ಹಾಗೂ ಸಾಂಪ್ರದಾಯಿಕ ಪಂಚಾಯಿತಿಯ ಕಪಿಮುಷ್ಟಿಯಲ್ಲಿಲ್ಲ. ಇತ್ತೀಚೆಗೆ ಆರ್ಥಿಕ ಕ್ಷೇತ್ರದಲ್ಲಿ ಸಂಭವಿಸಿದ ಬದಲಾವಣೆಗಳು, ವೈವಿಧ್ಯಮಯವಾದ ದುಡಿಮೆಯ ಅವಕಾಶಗಳು ಅವರಿಗೆ ವೈಯಕ್ತಿಕ ಸ್ವಾತಂತ್ರ್ಯವನ್ನು ನೀಡಿವೆ. ಸಾಂಪ್ರದಾಯಿಕ ಜೀವನದ ಕಟ್ಟುಪಾಡುಗಳನ್ನು ಪಾಲಿಸಲೇಬೇಕಾದ

ಅಗತ್ಯ ಅಂದಿನಂತೆ ಇಂದು ಇಲ್ಲವಾಗಿದೆ. ಲಂಬಾಣಿಗಳು ಈಗಿನ್ನೂ ಒಕ್ಕಲುತನದ ಆರಂಭದಲ್ಲಿದ್ದರೂ ಅವರಲ್ಲಿ ಕೆಲವರು ಆರ್ಥಿಕತೆಯ ವೈವಿಧ್ಯಮಯ ಅವಕಾಶಗಳನ್ನು ಬಳಸಿಕೊಂಡಿದ್ದು ಸಾಂಪ್ರದಾಯಿಕ ನಾಯಕತ್ವದ ಸಡಲಿಕೆಗೆ ಕಾರಣವಾಗಿದೆ. ಇಲ್ಲಿನ ಈ ವಸ್ತುಸ್ಥಿತಿಯನ್ನು ತುಲನೆಮಾಡಿ ನೋಡುವಾಗ ಪಶ್ಚಿಮ ರಾಜಸ್ಥಾನದಲ್ಲಿಯ ಲಂಬಾಣಿಗಳಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ತಾಂಡಗಳಲ್ಲಿಯ ಸಾಮೂಹಿಕ ಹೊಣೆಗಾರಿಕೆಯು ಹೆಚ್ಚು ಪ್ರಬಲವಾಗಿರುವುದು ಕಂಡುಬರುತ್ತದೆ (ನೋಡಿರಿ : ಮಲ್ಹೋತ್ರಾ ಮತ್ತು ಬೋಸ್, ೧೯೬೩ : ೨೦).

ಲಂಬಾಣಿಗಳ ಎರಡೂ ತಾಂಡಗಳಲ್ಲಿ ಗುಂಪುಗಾರಿಕೆಯೂ ಅಧಿಕವಾಗಿದೆ.[೧೧] ಸಾಂಪ್ರದಾಯಿಕ ಪಂಚಾಯಿತಿಯ ನ್ಯಾಯದಾನದ ಸಾಮರ್ಥ್ಯದ ಬಗೆಗೆ ಬಹುತೇಕ ಲಂಬಾಣಿಗಳಲ್ಲಿ ಅವಿಶ್ವಾಸದ ಭಾವನೆ ಇದೆ. ಆದಕಾರಣ ಅವರಲ್ಲಿ ಕೆಲವರು ತಮ್ಮ ವ್ಯಾಜ್ಯಗಳ ಪರಿಹಾರಕ್ಕೆ ಸರಕಾರಿ ಕೋರ್ಟುಗಳಿಗೆ ಹೋಗುತ್ತಾರೆ. ಈ ಅಧ್ಯಯನದ ಸಮೀಕ್ಷೆಗಿಂತ ಮೊದಲಿಗೆ ಮರಿಯಮ್ಮನಹಳ್ಳಿ ತಾಂಡದಿಂದ ಐದು ಪ್ರಕರಣಗಳು ನ್ಯಾಯಾಲಯದಲ್ಲಿ ದಾಖಲಾಗಿದ್ದವು. ಈ ವಿಷಯದಲ್ಲಿ ನಾಗಲಾಪುರ ತಾಂಡಕ್ಕಿಂತ ಮರಿಯಮ್ಮನಹಳ್ಳಿ ತಾಂಡವು ನಗರದ ನಿರಂತರ ಸಂಪರ್ಕಗಳಿಂದಾಗಿ ಆಧುನಿಕ ಸಂಸ್ಥೆಗಳ ಪ್ರಭಾವಕ್ಕೆ ಹೆಚ್ಚು ಒಳಗಾಗಿದೆ. ಈ ಪ್ರವೃತ್ತಿಯು ಅನೇಕ ಅಂಶಗಳ ಪರಿಣಾಮವಾಗಿ ನಡೆದಿದೆ ಎನ್ನಬಹುದು. ಪಂಚಾಯಿತಿಗಳು ಗುಂಪುಗಾರಿಕೆಗಳಿಂದ ಕೂಡಿದ್ದು ನಿಷ್ಪಕ್ಷಪಾತ ನ್ಯಾಯವನ್ನು ಒದಗಿಸುವಲ್ಲಿ ಅಸಮರ್ಥವಾಗಿರುವುದು, ಲಂಬಾಣಿಗಳ ನಗರ ಸಂಪರ್ಕಗಳಿಂದಾಗಿ ಕಾಯಿದೆ ಕಾನೂನುಗಳ ಬಗೆಗೆ ಹೆಚ್ಚಿನ ಪ್ರಜ್ಞೆ ಮೂಡಿಬಂದಿರುವುದು, ಸಾಂಪ್ರದಾಯಿಕ ನ್ಯಾಯದ ಪರಿಕಲ್ಪನೆಗಳು ಆಧುನಿಕ ನ್ಯಾಯದ ಪರಿಕಲ್ಪನೆಗಳಿಗಿಂತ ತೀರ ಭಿನ್ನವಾಗಿರುವುದು ಇತ್ಯಾದಿ. ಸಮಾಜದಿಂದ ಬಹಿಷ್ಕಾರ ಹಾಕುವುದು ಕಾನೂನಿನನ್ವಯ ನಿರ್ಬಂಧಿಸಲ್ಪಟ್ಟಿದೆ. ಆದಾಗ್ಯೂ ಕೂಡ ಸಾಂಪ್ರದಾಯಿಕ ಪಂಚಾಯಿತಿಗಳು ಅಂತಹದೇ ಶಿಕ್ಷೆಯ ಬೆದರಿಕೆಯನ್ನು ಒಡ್ಡುತ್ತಿರುವುದು ಜನರಿಗೆ ಇಷ್ಟವಾಗಲಾರದು. ಲಂಬಾಣಿಗಳ ಆರ್ಥಿಕ ಸ್ಥಿತಿಗತಿಗಳು ಸುಧಾರಿಸುತ್ತಿರುವುದರಿಂದ ತಮ್ಮ ಹಿತಾಸಕ್ತಿಗಳ ರಕ್ಷಣೆಗಾಗಿ ನ್ಯಾಯಾಲಯದಲ್ಲಿ ಪರಿಹಾರ ಕಂಡುಕೊಳ್ಳಲು ಅವರು ವೆಚ್ಚ ಮಾಡಬಲ್ಲವರಾಗಿದ್ದಾರೆ. ತಮ್ಮ ತಾಂಡಗಳ ಸಾಂಪ್ರದಾಯಿಕ ಪಂಚಾಯಿತಿ ವ್ಯವಸ್ಥೆಯಲ್ಲಿ ಅವರಿಗೆ ವಿಶ್ವಾಸವಿಲ್ಲವಾಗಿದೆ. ಹೀಗಾಗಿ ಅವರು ವಕೀಲರ ಸೇವೆ ಪಡೆದು ಸರಕಾರಿ ನ್ಯಾಯಾಲಯಗಳಲ್ಲಿ ತಮ್ಮ ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳುವಲ್ಲಿ ಆಸಕ್ತಿ ತೋರುತ್ತಿದ್ದಾರೆ.

ಒಂದು ವರ್ಷದ ಅವಧಿಯಲ್ಲಿ ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳು ವ್ಯಾಜ್ಯಗಳ ಪರಿಹಾರಕ್ಕಾಗಿ ಅನುಕ್ರಮವಾಗಿ ೫೦೦೦, ೧೪೦೦೦ ಮತ್ತು ೧೫,೦೭೦ರೂ.ಗಳನ್ನು ವ್ಯಯಿಸಿವೆ. ಬಾಹ್ಯ ಜಗತ್ತಿನೊಡನೆ ಲಂಬಾಣಿಗಳ ಸಂಪರ್ಕಗಳು ಅಧಿಕವಾಗುತ್ತಿರುವುದರ ಪರಿಣಾಮವಾಗಿ ಸಾಮಾಜಿಕ ನಿಯಂತ್ರಣದ ಸಾಧನಗಳಾಗಿದ್ದು ಸಂಪ್ರದಾಯಗಳಿಗೆ ಬದಲಾಗಿ ರಾಜ್ಯ ಹಾಗೂ ಕೇಂದ್ರ ಸರಕಾರಗಳ ಅಧಿಕಾರ ಶಾಹಿತ್ವ, ಕಾನೂನು ಹಾಗೂ ರಾಜಕೀಯ ವ್ಯವಸ್ಥೆಗಳನ್ನು ಅನುಸರಿಸುವ ಬಲವು ಮೂಡಿಬಂದಿದೆ. ಸರಕಾರಿ ಯಂತ್ರದ ವಿಸ್ತರಣೆಯು ಸ್ಥಳೀಯ ಮಟ್ಟದವರೆಗೂ ವ್ಯಾಪಕವಾಗಿ ಬೆಳೆದಿದ್ದರಿಂದ ತಾಂಡಗಳಲ್ಲಿಯ ರಾಜಕೀಯ ಹಾಗೂ ಸಾಮಾಜಿಕ ಸ್ವಾಯತ್ತತೆ ಕುಗ್ಗುತ್ತಿದೆ. ಲಂಬಾಣಿಗಳು ಇಂದು ಹೊಸ ಸಾಮಾಜಿಕ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾಗಿದ್ದು ಪ್ರಜಾಪ್ರಭುತ್ವ ಚೌಕಟ್ಟಿನಲ್ಲಿ ತಮ್ಮನ್ನು ಆಧುನೀಕರಣಗೊಳಿಸಿಕೊಳ್ಳುತ್ತಿದ್ದಾರೆ.

---

*೧೧ ಗುಂಪುಗಳು ಒಂದು ವಿಧದಲ್ಲಿ ಯಾಂತ್ರಿಕ ವ್ಯೂಹಗಳೇ ಆಗಿವೆ. ಆರ್ಥಿಕ ಅಂತಸ್ತನ್ನು ರಾಜಕೀಯ ಪ್ರಭಾವವನ್ನಾಗಿ ಮಾರ್ಪಡಿಸುವ ಮೂಲಗಳಾಗಿಯೇ ಈ ಗುಂಪುಗಳು ರೂಪುಗೊಳ್ಳುತ್ತವೆ. (ಎಪ್ಸ್ಟೀನ್, ೧೯೬೨ : ೩೧೮ - ಈ ಹಿಂದೆ ನಿರೂಪಿಸಲಾದ ಎರಡನೆಯ ಪ್ರಕರಣವನ್ನು ಹೋಲಿಸಿ ನೋಡಿರಿ).*

ಹಿರಿಯ ತಲೆಮಾರಿನ ಜನರು ಯುವಜನತೆಯ ಮೇಲಿನ ನಿಯಂತ್ರಣವನ್ನು ಕಳೆದುಕೊಳ್ಳುತ್ತಿರುವ ಸಾಮಾನ್ಯ ಸನ್ನಿವೇಶವೂ ಜನತೆಯ ಮೇಲಿನ ಸಾಂಪ್ರದಾಯಿಕ ಪಂಚಾಯಿತಿ ನಿಯಂತ್ರಣ ಕುಗ್ಗುತ್ತಿರುವುದಕ್ಕೆ ಕಾರಣವೂ ಆಗಿದೆ. ತಲೆಮಾರುಗಳ ನಡುವಿನ ಈ ಅಂತರ ಸಾಮಾನ್ಯವಾಗಿ ಸಮಾಜದ ಎಲ್ಲ ರಂಗಗಳಲ್ಲಿಯೂ ಕಾಣಿಸಿಕೊಂಡಿದೆ. ತಾಂಡದ ಯುವಜನರು ಬಾಹ್ಯಜಗತ್ತಿನಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುತ್ತಿರುವುದರಿಂದ ಮೊದಲಿನಂತೆ ಹಿರಿಯರ ಮಾರ್ಗದರ್ಶನಗಳನ್ನು ಅನುಕರಿಸುವುದು ಸಾಧ್ಯವಿಲ್ಲವಾಗಿದೆ. ಸಾಕ್ಷರತೆ, ಸರಕಾರಿ ಸೇವೆ, ಉದ್ಯೋಗದ ವೈವಿಧ್ಯಮಯ ಅವಕಾಶಗಳು, ಮುಕ್ತ ಚಲನೆ, ಲಂಬಾಣೇತರ ಸಮುದಾಯಗಳೊಂದಿಗಿನ ಸಂಪರ್ಕಗಳ ಹೆಚ್ಚಳ ಮೊದಲಾದ ಅಂಶಗಳು ವೈವಿಧ್ಯಮಯ ಜೀವನಮಾರ್ಗಗಳನ್ನು ಪರಿಚಯಿಸಿಕೊಟ್ಟಿವೆ. ತತ್ಪರಿಣಾಮವಾಗಿ ಯುವ ಪೀಳಿಗೆಯು ಸಾಂಪ್ರದಾಯಿಕ ಲಂಬಾಣಿ ಮೌಲ್ಯಗಳು ಹಾಗೂ ಆಚರಣೆಗಳನ್ನೇ ಅನುಸರಿಸಲು ಇಷ್ಟಪಡುತ್ತಿಲ್ಲ. ಹಿರಿಯ ಲಂಬಾಣಿಗಳಿಗೆ ತಿಳಿಯದ ಅನೇಕ ವಿಷಯಗಳನ್ನು ಯುವಕರು ಬಲ್ಲವರಾಗಿದ್ದಾರೆ. ಹೀಗಾಗಿ ಬದಲಾದ ಸಾಮಾಜಿಕ ಸನ್ನಿವೇಶದಲ್ಲಿ ಹಿರಿಯ ತಲೆಮಾರಿನ ಜನರು ಪಂಚಾಯಿತಿಯ ಸದಸ್ಯರಾಗಿ ಯುವ ಜನರ ಮೇಲೆ ಪ್ರಭಾವಬೀರುವಲ್ಲಿ ಅಸಮರ್ಥರಾಗಿದ್ದಾರೆ.

ಅಳಿಯುತ್ತಿರುವ ಸಾಂಪ್ರದಾಯಿಕ ಪಂಚಾಯಿತಿಯ ಪ್ರಭಾವ ಅಥವಾ ಬದಲಾದ ಸಾಮಾಜಿಕ ಸನ್ನಿವೇಶಗಳೊಂದಿಗೆ ಹೊಂದಿಕೊಳ್ಳುವ ಅದರ ಅಸಮರ್ಥತತೆಯಿಂದಾಗಿ ಅನೇಕ ಸಮಸ್ಯೆಗಳು ಹುಟ್ಟಿಕೊಂಡಿವೆ. ಆಧುನಿಕ ಕಾನೂನುಗಳು, ಅಧಿಕಾರದ ವಿಕೇಂದ್ರೀಕರಣ, ಸ್ಥಳೀಯ ರಾಜಕಾರಣದ ಪ್ರಕ್ರಿಯೆಯಲ್ಲಿ ಸ್ಥಳೀಯರಿಗೆ ಹೆಚ್ಚಿನ ಅವಕಾಶಗಳನ್ನು ಒದಗಿಸಿದ ವ್ಯವಸ್ಥೆ, ಸರಕಾರಿ ನೀತಿನಿಯಮಗಳ ಅನುಷ್ಠಾನ (ಭಟ್ಟಿಸರಾಯಿ ತಯಾರಿಕೆಯ ನಿಷೇಧ, ಕಾಡುಗಳ ರಕ್ಷಣೆಯ ನಿಯಮಗಳನ್ನು ಕಟ್ಟುನಿಟ್ಟುಗೊಳಿಸಲಾದುದು ಮೊದಲಾದವುಗಳು) ಲಂಬಾಣಿಗಳ ಸಾಂಪ್ರದಾಯಿಕ ಸಾಮಾಜಿಕ ಜೀವನಕ್ರಮವನ್ನು ಬಾಧಿಸಿದ ಸಂಗತಿಗಳಾಗಿವೆ. ಲಂಬಾಣಿಗಳು ಪರಿಹರಿಸಲಾರದ ವ್ಯಾಜ್ಯಗಳಿಗಾಗಿ ಕಳೆದ ೧೦೦ ವರ್ಷಗಳಿಂದ ಲಂಬಾಣೇತರ ಪ್ರಭಾವಿ ನಾಯಕರ ಬಳಿ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಹೋಗುತ್ತಿದ್ದಾರೆ. ಮರಿಯಮ್ಮನಹಳ್ಳಿ ತಾಂಡದ ಮಾಜಿ ನಾಯಕನು ತಾಂಡದ ಜನರಿಗೆಲ್ಲ ನಾಯಕನೆಂದು ಮನ್ನಿಸಲಾಗಿತ್ತು. ಆದಕಾರಣ, ಲಂಬಾಣಿಗಳು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಕಳೆದ ಮೂವತ್ತು ವರ್ಷಗಳಿಂದ ಆತನ ಬಳಿ ಹೊಗುತ್ತಿದ್ದರು. ತಮ್ಮ ಪಂಚಾಯಿತಿಯಲ್ಲಿ ಬಗೆಹರಿಯಲಾರದ ಸಮಸ್ಯೆಗಳ ಪರಿಹಾರಕ್ಕಾಗಿ ಈ ನಾಯಕನ ಬಳಿ ಜನರು ಹೋಗುತ್ತಿದ್ದರು. ಪೋಲಿಸ್ ಸ್ಟೇಶನ್ ಹಾಗೂ ನ್ಯಾಯಾಲಯಗಳಲ್ಲಿ ದುರ್ಬಲವಾದ ವ್ಯಾಜ್ಯಗಳನ್ನು ಕೂಡ ಆತನು ಪರಿಹರಿಸಲು ನೆರವಾಗುತ್ತಿದ್ದನು. ವ್ಯಾಜ್ಯಗಳು ಹುಟ್ಟು ಹಾಕಿದ ಎರಡೂ ಕಡೆಯ ಜನರನ್ನು ಸಂಧಾನಕ್ಕೆ ಅಣಿಗೊಳಿಸುತ್ತಿದ್ದನು. ಹೀಗಾಗಿ ಆತನನ್ನು ಲಂಬಾಣಿಗಳು ಮಹತ್ವದ ನಾಯಕ ಎಂದು ಅನೌಪಚಾರಿಕವಾಗಿ ಮನ್ನಿಸಿದರು ಆತನು ಜನರ ಕ್ಷೇಮಾಭಿವೃದ್ಧಿಯಲ್ಲಿ ಹಾಗೂ ಅವರ ಸುಧಾರಣೆಯಲ್ಲಿ ಆಸಕ್ತಿ ವಹಿಸಿದ್ದರಿಂದಲೇ ಕೃಷಿಕರ ನಾಯಕನೂ ಆಗಿದ್ದನು. ಕೆಲವರು ಮರಿಯಮ್ಮನಹಳ್ಳಿ ಸುತ್ತಮುತ್ತಲಿನ ಗ್ರಾಮಗಳ ಮುಖ್ಯಸ್ಥನೆಂದು ಮನ್ನಿಸಿದ್ದಾರೆ. ಆತನು ಸ್ಥಿತಿವಂತ ಲಿಂಗಾಯತ ರೈತಾಪಿ ಕುಟುಂಬಕ್ಕೆ ಸೇರಿದವನಾಗಿದ್ದನು. ಆತನು ನಿಷ್ಪಕ್ಷಪಾತಿಯಾಗಿದ್ದನು, ಸಭ್ಯ ವ್ಯಕ್ತಿಯಾಗಿದ್ದನು. ಜನರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಆತನು ಆಸಕ್ತನಾಗಿದ್ದನು. ತನ್ನ ಹೆಚ್ಚಿನ ಸಮಯವನ್ನು ಅಲ್ಲಿನ ಸಮಸ್ಯೆಗಳನ್ನು ಪರಿಹರಿಸಲು ವಿನಿಯೋಗಿಸುತ್ತಿದ್ದನು. ಸರಕಾರದಿಂದ ಸಾರ್ವಜನಿಕ ಸವಲತ್ತುಗಳು ಮತ್ತು ಸೌಲಭ್ಯಗಳನ್ನು ದೊರಕಿಸಿಕೊಡಲು ಆತನು ಯತ್ನಿಸುತ್ತಿದ್ದನು. ಈ ಭಾಗದ ರಾಜಕಾರಣಿಗಳಿಗೆ ಚುನಾವಣೆಗಳಲ್ಲಿ ಮತಗಳಿಸಿಕೊಡಲು ನೆರವಾಗುತ್ತಿದ್ದನು. ಹೀಗಾಗಿ ಆತನು ಪ್ರಭಾವಿ ನಾಯಕನಾಗಿದ್ದನು. ತನ್ನ ಪ್ರಭಾವವನ್ನು ಜನಹಿತಕ್ಕಾಗಿ ಬಳಸಿಕೊಳ್ಳುತ್ತಿದ್ದನು.

ಲಂಬಾಣಿಗಳು ತಮ್ಮ ನಾಯಕರಲ್ಲಿ ಅಪನಂಬಿಗೆಯನ್ನು ತಳೆಯಲು ಕಾರಣ ಭಾಗಶಃ ಆ ನಾಯಕರು ಅವರನ್ನು ಶೋಷಿಸುತ್ತಿರುವುದಾಗಿತ್ತು. ಲಂಬಾಣಿಗರಲ್ಲಿಯ ವಿಭಿನ್ನತೆಯು ಲಂಬಾಣಿಗಳ ಸಂಘಟಿತ ಅಭಿವೃದ್ಧಿಗೆ ಮಾರಕವಾಗಿತ್ತು. ಲಂಬಾಣಿಗಳನ್ನು ಲಂಬಾಣಿ ನಾಯಕರೇ ಶೋಷಣೆಗೀಡುಮಾಡುತ್ತಿದ್ದರು. ಲಂಬಾಣಿಗಳ ಅಭಿವೃದ್ಧಿಗಾಗಿ ಸರಕಾರದಿಂದ ಪಡೆಯಲಾಗುವ ಸಹಾಯಧನವನ್ನು ಈ ನಾಯಕರು ತಮ್ಮ ಹಾಗೂ ತಮ್ಮ ಸಂಬಂಧಿಕರ ಹಿತಾಸಕ್ತಿಗಳಿಗೆ ಬಳಸಿಕೊಳ್ಳುತ್ತಿದ್ದರು. ಸ್ಥಿತಿವಂತ ಲಂಬಾಣಿಯು ಸರಕಾರಿ ಕಛೇರಿಗಳಿಗೆ ಅಡ್ಡಾಡಲು, ಅಗತ್ಯಬಿದ್ದರೆ ಲಂಚ ನೀಡಲು ಹಾಗೂ ರಾಜಕೀಯ ನಾಯಕರ ಪ್ರಭಾವವನ್ನು ಪಡೆದುಕೊಳ್ಳುವಲ್ಲಿ ಸಮರ್ಥನಾಗಿರುತ್ತಾನೆ. ಸರಕಾರಿ ಅಧಿಕಾರಿಗಳು ಕೂಡ ತಮ್ಮನ್ನು ಭೇಟಿಮಾಡಿದವರಿಗೆ ನೆರವಾಗುತ್ತಾರೆ. ಅವರು ತಾಂಡಗಳಿಗೆ ಭೇಟಿ ನೀಡುವುದಿಲ್ಲ. ಹೀಗಾಗಿ ಪ್ರಭಾವಿ ಲಂಬಾಣಿ ನಾಯಕರು ತಮ್ಮ ಸ್ಥಿತಿವಂತಿಕೆಯನ್ನು ಬಳಸಿಕೊಂಡು ಸರಕಾರದ ನೆರವುಗಳನ್ನು ಪಡೆದುಕೊಳ್ಳುತ್ತಾರೆ. ಬಡತನದಲ್ಲಿ ಇರುವ ಲಂಬಾಣಿಗಳು ಈ ಅಭಿವೃದ್ಧಿ ಯೋಜನೆಗಳಿಂದ ವಂಚಿತರಾಗುತ್ತಲೇ ಬಂದಿದ್ದಾರೆ (ಅಧ್ಯಾಯ ೨ ನೋಡಿರಿ). ಲಂಬಾಣಿಗಳ ಅಭಿವೃದ್ಧಿಯು ಇಂತಹ ವಿಷವರ್ತುಲದಿಂದಾಗಿ ಅಸಾಧ್ಯವಾಗಿದೆ. ಈ ವಿಷವರ್ತುಲವನ್ನು ತೊಡೆದು ಹಾಕುವುದು ಸುಲಭಸಾಧ್ಯವಲ್ಲ. ಬಡತನದಲ್ಲಿ ಇರುವ ಲಂಬಾಣಿಗಳಿಗೆ ಸರಕಾರಿ ಯೋಜನೆಗಳ ನೆರವು ಸಿಕ್ಕುವವರೆಗೆ ಅವರ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳು ಸುಧಾರಿಸಲು ಸಾಧ್ಯವಿಲ್ಲ. ಅನಕ್ಷರತೆ, ಆರ್ಥಿಕ ಅಸಹಾಯಕತೆ ತೊಲಗುವವರೆಗೆ ಅವರಿಗೆ ಇಂತಹ ಅವಕಾಶಗಳು, ನೆರವುಗಳು ಸಿಕ್ಕುವುದು ಸಾಧ್ಯವಿಲ್ಲ. ಸಾಕ್ಷರರು ಸ್ಥಿತಿವಂತರು ಆಧುನಿಕ ಸಂಸ್ಥೆಗಳ ಕಾರ್ಯಾಚರಣೆ ಹಾಗೂ ರೀತಿನೀತಿಗಳನ್ನು ಅರಿತವರು ಸರಕಾರದ ಅಭಿವೃದ್ಧಿ ಯೋಜನೆಗಳನ್ನು ಪಡೆಯಲು ಹಣವನ್ನು (ಲಂಚ) ಖರ್ಚುಮಾಡಲು ಸಮರ್ಥರಾದವರು ಮಾತ್ರವೇ ಸರಕಾರದ ಕಾರ್ಯಕ್ರಮಗಳ ಪ್ರಯೋಜನಗಳನ್ನು ಗಿಟ್ಟಿಸಿಕೊಳ್ಳಬಲ್ಲರು. ಹೀಗಾಗಿ ಸರಕಾರವು ಉದ್ದೇಶಿಸಿದ ಅಭಿವೃದ್ಧಿ ಯೋಜನೆಗಳ ಸೌಲಭ್ಯಗಳ ನೆರವುಗಳು ಬಡಜನರನ್ನು ತಲುಪುವುದೇ ಇಲ್ಲ.

ಬಡತನದಲ್ಲಿ ಇರುವ ಜನರು ತಮ್ಮ ನಾಯಕರ ಮುತುವರ್ಜಿಯನ್ನು ಅವಲಂಬಿಸಿ ಜೀವಿಸಬೇಕಾಗಿದೆ. ನಾಯಕರನ್ನು ಪ್ರಶ್ನಿಸುವ ಜನರನ್ನು ಎಲ್ಲ ವಿಧದಲ್ಲಿಯೂ ಹತ್ತಿಕ್ಕಲಾಗುತ್ತದೆ. ಅವರಿಗೆ ನೆರವು ನೀಡುವುದನ್ನೂ ನಿಲ್ಲಿಸಲಾಗುತ್ತದೆ. ಅವರನ್ನು ಯಾವುದಾದರೂ ಪ್ರಕರಣಗಳಲ್ಲಿ ಸಿಲುಕಿಸಿ ಮಾನಸಿಕ ಕಿರುಕುಳಕ್ಕೆ ಈಡು ಮಾಡಲಾಗುತ್ತದೆ. ಪಂಚಾಯಿತಿಯ ಮೂಲಕ ಅವರಿಗೆ ಅನೇಕ ಬಗೆಯ ಕಿರುಕುಳ್ಳ ತೊಂದರೆಗಳನ್ನು ಉಂಟುಮಾಡಲಾಗುತ್ತದೆ. ಲಂಬಾಣೇತರ ಕೃಷಿಕರು ಲಂಬಾಣಿಗಳ ಮೇಲೆ ಕಳುವು ಮಾಡುವ ಆರೋಪಗಳನ್ನು ಹೊರಿಸುತ್ತಾರೆ. ಇಂತಹ ಪ್ರಕರಣಗಳಲ್ಲಿ ಪಂಚಾಯಿತಿಯ ಸದಸ್ಯರು ಆಪಾದಿತರಿಂದ ದಂಡವನ್ನು ವಸೂಲು ಮಾಡುತ್ತಾರೆ.

ಈ ಹಿಂದೆ ಚರ್ಚಿಸಲಾದ ಎಲ್ಲ ವಿದ್ಯಮಾನಗಳನ್ನು ಗಮನಿಸಿದಾಗ ಲಂಬಾಣಿ ತಾಂಡಗಳು ಮೇಧಾವಿ ಮತ್ತು ನಿಸ್ವಾರ್ಥ ನಾಯಕತ್ವವಿಲ್ಲದ ಒಡೆದ ಮನೆಗಳಂತಾಗಿವೆ. ವೈಯಕ್ತಿಕ ಪ್ರತಿಷ್ಠೆ, ಅಜ್ಞಾನ ಹಾಗೂ ಬಡತನದಿಂದಾಗಿ ಸಂಘಟಿತ ಅಭಿವೃದ್ಧಿ ಸಾಧಿಸಲಾರದೇ ಹಿಂದುಳಿದ ಗುಂಪುಗಳಾಗಿವೆ. ಪಂಚಾಯಿತಿ ಪ್ರಭುತ್ವದ ದುರ್ಬಲತೆಗೆ ನಾಯಕರ ಮಾತು ಮತ್ತು ಕೃತಿಗಳ ನಡುವಿನ ವಿರೋಧಾಭಾಸವೂ ಕಾರಣವಾಗಿದೆ. ಉದಾಹರಣೆಗೆ, ಸರಕಾರವು ಕಳ್ಳಭಟ್ಟಿ ತಯಾರಿಕೆ ಹಾಗೂ ಮದ್ಯಪಾನ ನಿಷೇಧಮಾಡಿದರೂ ಕರ್ನಾಟಕದ ಅನೇಕ ಲಂಬಾಣಿ ತಾಂಡಗಳಲ್ಲಿ ಕಳ್ಳಭಟ್ಟಿ ಸಾರಾಯಿ ತಯಾರಿಕೆಯು ಇಂದು ನಡೆಯುತ್ತಿದೆ. ಅಲ್ಲದೆ ನಿಷೇಧಿತ ಸಂದರ್ಭದಲ್ಲಿ ಸರಾಯಿ ಕುಡಿತ ಹಾಗೂ ಮಾರಾಟವನ್ನು ತಾಂಡಗಳಲ್ಲಿ ಇದ್ದರು, ಸಾರಾಯಿ ಮಾರಾಟ ಮತ್ತು ಕುಡಿತ ಇಂದು ಎಲ್ಲಾ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ. ಹೀಗಿರುವಾಗ ನಾಯಕತ್ವವು ಪರಿಣಾಮಕಾರಿ ಸಾಮಾಜಿಕ ನಿಯಂತ್ರಕ ಶಕ್ತಿಯಾಗಲು ಹೇಗೆ ಸಾಧ್ಯ ?

ಪಂಚಾಯಿತಿಗಳ ಕಾರ್ಯಾಚರಣೆಯಿಂದಾದ ಅನ್ಯಾಯ, ತೃಪ್ತಿಯಿಂದ ಜುಗುಪ್ಸೆಗೊಂಡ ಕೆಲವು ಲಂಬಾಣಿಗಳು ತಾಂಡವನ್ನು ಬಿಟ್ಟು ಬಹು ಜಾತಿಯ ಜನರು ವಾಸಿಸುವ ಗ್ರಾಮಗಳಿಗೆ ವಲಸೆಹೋದದ್ದೂ ಇದೆ. ಇಂತಹ ಜನರು ಪಂಚಾಯಿತಿಗಳಿಂದ ಬಹಿಷ್ಕಾರ ಶಿಕ್ಷೆಗೆ ಒಳಪಟ್ಟಿರಲೂಬಹುದಾಗಿದೆ ಅಥವಾ ತಮ್ಮ ತಾಂಡಗಳ ಸಮೀಪದಲ್ಲಿ ಉದ್ಯೋಗಗಳನ್ನು ಅರಸಿ ಹೊರಗ್ರಾಮಗಳಿಗೆ ವಲಸೆ ಕೂಡ ಹೋಗಿದ್ದಾರೆ. ತಾಂಡದ ಸಾಮಾಜಿಕ ಜೀವನದಲ್ಲಿ ಇರುವ ಸಮಸ್ಯೆಗಳನ್ನು ತಪ್ಪಿಸಿಕೊಂಡು ನೆಮ್ಮದಿಯಿಂದ ಬಾಳಲು ನಿರ್ಧರಿಸಿದ ಉದಾಹರಣೆಗಳೂ ಇವೆ.

ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣ ವ್ಯವಸ್ಥೆ ಗುಂಪುಗಳ ಸಂಬಂಧಿ ಹಾಗೂ ನಿಷ್ಠೆಯನ್ನಾಧರಿಸಿ ಕಾರ್ಯ ನಿರ್ವಹಿಸುತ್ತದೆ. ಆದಕಾರಣ ಬದಲಾದ ಸಾಮಾಜಿಕ ಸನ್ನಿವೇಶಗಳಲ್ಲಿ ಸಾಮುದಾಯಿಕ ಐಕ್ಯತೆ ಮತ್ತು ವಾಸಸ್ಥಾನದ ಏಕತೆಯ ಭಾವನೆಯನ್ನು ಅಂದಾಜಿಸುವುದು ಅಗತ್ಯವಾಗಿದೆ. ಬಹುಜಾತಿ ಜನರು ವಾಸಿಸುವ ಗ್ರಾಮಗಳಲ್ಲಿ ಜಾತಿಯ ಏಕತೆಯು ಗ್ರಾಮದ ಏಕತೆಗೆ ಅಡ್ಡಿಯನ್ನುಂಟುಮಾಡುತ್ತದೆ. ಆದರೆ ಲಂಬಾಣಿ ತಾಂಡದಲ್ಲಿ ಈ ಎರಡೂ ಅಂಶಗಳು ಪರಸ್ಪರ ವಿರೋಧವನ್ನು ಹೊಂದಿರುವುದಿಲ್ಲ. ವ್ಯಕ್ತಿನಿಷ್ಠ ಹಾಗೂ ಗುಂಪುಗಳ ನಿಷ್ಠೆಯ ಶಕ್ತಿಗಳು ತಾಂಡದಲ್ಲಿ ಸಹವರ್ತಿಗಳಾಗಿರುತ್ತವೆ. ತಾಂಡಗಳಲ್ಲಿ ಸಮಗ್ರತೆ ಇದೆಯೆಂದು ಇದುವರೆಗೆ ಹೇಳಲಾಗಿದ್ದರೂ ಅಲ್ಲಿ ಏಕತೆಯ ಭಾವನೆ ಇದೆ. ತಾಂಡದಲ್ಲಿ ಉತ್ಸವಗಳು ನಡೆಯುವ ಕಾಲಕ್ಕೆ ಈ ಏಕತೆಯ ಭಾವನೆ ನಿಚ್ಚಳವಾಗಿ ವ್ಯಕ್ತವಾಗುತ್ತದೆ. ತಾಂಡ ಹಾಗೂ ಗ್ರಾಮಗಳ ನಡುವಿನ ಜಗಳದ ಸಂದರ್ಭದಲ್ಲಿ ತಾಂಡದ ಏಕತೆಯ ಭಾವನೆಯು ಸ್ಪಷ್ಟವಾಗಿ ಪ್ರಕಟವಾಗುತ್ತದೆ. ಬಾಹ್ಯಶಕ್ತಿಗಳ ವಿರುದ್ಧ ಸಂಘರ್ಷಕ್ಕೆ ತೊಡಗಿದಾಗ ಇಡೀ ತಾಂಡ ಒಂದು ಎಂಬಂತೆ ವರ್ತಿಸುತ್ತದೆ. ಲಂಬಾಣಿಗಳು ಲಂಬಾಣೇತರರ ಸರಕುಗಳನ್ನು ಕಳುವು ಮಾಡಿದ ಬಗೆಗಿನ ವ್ಯಾಜ್ಯಗಳು ತಲೆದೋರಿದಾಗ, ಭೂಮಿಯ ಒಡೆತನಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ವ್ಯಾಜ್ಯಗಳು ಹುಟ್ಟಿಕೊಂಡಾಗ, ಇನ್ನೂ ಮುಂತಾದ ಸಂದರ್ಭಗಳಲ್ಲಿ ತಾಂಡಗಳಲ್ಲಿ ಜನರು ಒಂದಾಗುತ್ತಾರೆ. ತಾಂಡ-ತಾಂಡಗಳ ಮಧ್ಯೆ ಜಗಳಗಳು ಆದ ಸಂದರ್ಭಗಳಲ್ಲಿಯೂ ಈ ಏಕತೆಯು ಕಾಣಿಸಿಕೊಳ್ಳುತ್ತದೆ.

ವಾಸಸ್ಥಾನದ ನಂಟು ಗುಂಪುಗಳ ಏಕತೆಗಿಂತ ಹೆಚ್ಚು ಬಲವಾಗಿದೆ. ತಾಂಡಗಳು ಸಾಮಾನ್ಯವಾಗಿ ಮೇಲು ತಾಂಡ ಮತ್ತು ಕೆಳತಾಂಡಗಳಾಗಿ ಇಬ್ಭಾಗವಾಗಲು ಗುಂಪುಗಾರಿಕೆ ಬಹುತೇಕ ಕಾರಣವಾಗಿದೆ. ಎರಡೂ ಭಾಗಗಳು ಹೊಂದಿಕೊಂಡೇ ಇದ್ದರೂ, ಈ ಎರಡೂ ಭಾಗಗಳು ಒಂದೇ ಆಡಳಿತಾತ್ಮಕ ಘಟಕವಾಗಿದ್ದರೂ ತಾವು ಪ್ರತ್ಯೇಕ ಎಂಬ ಭಾವನೆ ಈ ಜನರಲ್ಲಿದೆ. ತಾಂಡಗಳ ಈ ಎರಡೂ ಭಾಗಗಳಲ್ಲಿಯೂ ಪ್ರತ್ಯೇಕ ನಾಯಕರಿದ್ದಾರೆ. ಪ್ರತ್ಯೇಕ ಸಾಂಪ್ರದಾಯಿಕ ಪಂಚಾಯಿತಿಗಳಿವೆ. ಪ್ರತ್ಯೇಕ ಸೇವಭಯ ದೇವಸ್ಥಾನಗಳಿವೆ. ಇಲ್ಲಿ ನೆಲೆಸಲು ಬಂದವರ ಚರಿತ್ರೆಗಳೂ ಪ್ರತ್ಯೇಕವಾಗಿವೆ. ದಿನನಿತ್ಯದ ಮಾತುಗಳಲ್ಲಿ, ವ್ಯವಹಾರಗಳಲ್ಲಿ ಮೇಲು ತಾಂಡ, ಕೆಳ ತಾಂಡ ಎಂಬುದಾಗಿ ಉಲ್ಲೇಖಿಸಲಾಗುತ್ತದೆ. ತಮ್ಮ ತಮ್ಮ ತಾಂಡಗಳಲ್ಲಿ ಶಾಲೆಗಳನ್ನು ನಡೆಸುವ ಶಾಲೆಗೆ ಮಕ್ಕಳನ್ನು ಕಳುಹಿಸುವ ಸ್ಪರ್ಧೆಯಲ್ಲಿಯೂ ಈ ಪ್ರತ್ಯೇಕತೆ ವ್ಯಕ್ತವಾಗುತ್ತದೆ.

ರಾಷ್ಟ್ರದಲ್ಲಿ ಆರ್ಥಿಕ ಪ್ರಗತಿ ಹಾಗೂ ಸಾಂಸ್ಕೃತಿಕ ಆಧುನೀಕರಣದ ಅಂಗವಾಗಿ ಅನುಷ್ಠಾನಗೊಳಿಸಲಾದ ಆಧುನಿಕ ರಾಜಕೀಯ ಸಂಸ್ಥೆಗಳು ತಾಂಡಗಳ ಏಕತಾಭಾವನೆಯನ್ನು ಛಿದ್ರಗೊಳಿಸಿವೆ. ಈ ಸಂಸ್ಥೆಗಳು ಎಲ್ಲ ಚಿಕ್ಕ ಗುಂಪುಗಳ ಮಧ್ಯೆ ಹಾಗೂ ಸರಕಾರಗಳ ಮಧ್ಯೆ ವ್ಯಾವಹಾರಿಕ ಹಾಗೂ ಸಾಂಸ್ಥಿಕ ಕೊಂಡಿಗಳನ್ನು ರೂಪಿಸಿವೆ. ಇಂದು ಲಂಬಾಣಿಗಳು ಕೂಡ ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ತಾಲೂಕು ಅಭಿವೃದ್ಧಿ ಮಂಡಳಿಗಳು, ವಿಧಾನ ಸಭೆ ಹಾಗೂ ಸಂಸತ್ತು ಮೊದಲಾದ ಪ್ರಜಾಪ್ರಭುತ್ವದ

ವಿಕೇಂದ್ರೀಕೃತ ಸಂಸ್ಥೆಗಳಲ್ಲಿ ಪಾಲುಗೊಳ್ಳುತ್ತಿದ್ದಾರೆ (ಅಧ್ಯಾಯ-೨ ನೋಡಿ). ಹಿಂದುಳಿದ ವರ್ಗಗಳಿಗೆ ಸ್ಥಾನ ಮೀಸಲಾತಿ ನೀಡಿದ್ದರಿಂದ ಈ ಸಂಸ್ಥೆಗಳಲ್ಲಿ ಲಂಬಾಣಿಗಳ ಪಾಲ್ಗೊಳ್ಳುವಿಕೆಯೂ ಸಾಧ್ಯವಾಗಿದೆ. ಈ ಪ್ರಕ್ರಿಯೆಯಲ್ಲಿ ಲಂಬಾಣಿಗಳಲ್ಲಿಯೇ ರಾಜಕೀಯ ಸ್ಥಾನಗಳಿಗೆ ಸ್ಪರ್ಧಿಸುವ ಬಗೆಗೆ ಸ್ಪರ್ಧೆ ಏರ್ಪಡುತ್ತಿದೆ. ಹಿಂದಿನ ಕಾಲದಲ್ಲಿ ಅನುವಂಶಿಕವಾಗಿದ್ದ ನಾಯಕತ್ವದ ವ್ಯವಸ್ಥೆಗೆ ಅವರು ಹೊಂದಿಕೊಂಡಿದ್ದರೂ ಸಾಂಪ್ರದಾಯಿಕ ಪಂಚಾಯಿತಿಯಲ್ಲಿ ನಾಮಕರಣದ ವ್ಯವಸ್ಥೆಗೆ ಅವರು ಹೊಂದಿಕೊಂಡಿದ್ದರು. ಇಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಯಾವುದೇ ವ್ಯಕ್ತಿ ಚುನಾವಣೆಗೆ ನಿಲ್ಲುವ ಅವಕಾಶಗಳಿವೆ. ಹೀಗಾಗಿ ಚುನಾವಣೆಗಳಲ್ಲಿ ಸ್ಪರ್ಧಿಸುವವರು ವಿಭಿನ್ನ ರಾಜಕೀಯ ಪಕ್ಷಗಳಲ್ಲಿ ಹರಿದು ಹಂಚಿಹೋಗುತ್ತಾರೆ. ಚುನಾವಣೆಗಳ ಸಂದರ್ಭಗಳಲ್ಲಿ ನಡೆಯುವ ಇಂತಹ ಒಡಕುಗಳಿಂದ ಕಾಣಿಸಿಕೊಳ್ಳುವ ಸಂಘರ್ಷಗಳು ಚುನಾವಣೆಯ ನಂತರದಲ್ಲಿ ಬಹುಸಮಯದವರೆಗೆ ತಾಂಡದ ಏಕತೆಗೂ ಸಂಚಕಾರ ತರುತ್ತವೆ. ಈ ರಾಜಕೀಯ ಪ್ರಕ್ರಿಯೆಗಳು ತಾಂಡದ ಐಕ್ಯತೆಯ ಭಾವನೆಯನ್ನು ಒಡೆದಿವೆ. ಈ ವಿಷಯವಾಗಿ ಹಿಂದೆ ವಿವರಿಸಲಾದ ನಾಗಲಾಪುರ ತಾಂಡದಲ್ಲಿಯ ಪ್ರಕರಣವು ಸ್ಪಷ್ಟ ತಿಳುವಳಿಕೆಯನ್ನು ನೀಡುತ್ತದೆ. ಲಂಬಾಣಿಗಳ ಸಾಂಪ್ರದಾಯಿಕತೆಯು ಬೃಹತ್ ಆರ್ಥಿಕತೆಯಲ್ಲಿ ಸೇರಿಹೋದ ಪರಿಣಾಮವಾಗಿ ಮೂಡಿಬಂದ ರಾಜಕೀಯ ಸಂಪರ್ಕಗಳು ತಾಂಡಗಳಲ್ಲಿಯ ಏಕತೆಯ ಭಾವನೆಗೆ ಬಲವಾದ ಪೆಟ್ಟು ನೀಡಿವೆ.

ಲಂಬಾಣಿ ಸಾಂಪ್ರದಾಯಿಕ ಪಂಚಾಯಿತಿಯು ತನ್ನ ಪ್ರತಿಷ್ಠೆಯನ್ನು ಹಾಗೂ ನಿಯಂತ್ರಣವನ್ನು ಸಾಕಷ್ಟುಮಟ್ಟಿಗೆ ಕಳೆದುಕೊಂಡಿದ್ದರೂ ಅದಿನ್ನೂ ಸಾಮಾಜಿಕ ನಿಯಂತ್ರಣದ ಮಹತ್ವದ ನಿಯೋಗಿಯಾಗಿ ಮುಂದುವರೆದಿದೆ.[೧೨] ಆದಕಾರಣ ಪಂಚಾಯಿತಿಗಳಲ್ಲಿ ಕಾಣಿಸಿಕೊಂಡ ಮಾರ್ಪಾಡುಗಳು, ಬದಲಾವಣೆಗಳು ಸಮುದಾಯದ ಸಾಂಪ್ರದಾಯಿಕ ನಿಯಂತ್ರಣ ವ್ಯವಸ್ಥೆಯನ್ನು ಸಂಪೂರ್ಣವಾಗಿ ಶಿಥಿಲಗೊಳಿಸಿವೆ ಎಂದು ಹೇಳಲಾಗದು. ಈಗಲೂ ಕೂಡ ಲಂಬಾಣಿ ಪಂಚಾಯಿತಿಗಳು ಅನೇಕ ಸಮಸ್ಯೆಗಳನ್ನು ವ್ಯಾಜ್ಯಗಳನ್ನು ಪರಿಹರಿಸುತ್ತಿವೆ. ಸಾಮಾನ್ಯವಾಗಿ ಎಲ್ಲ ಸರಳ ಸಮಾಜಗಳಲ್ಲಿ ಇಂತಹದೇ ಪ್ರವೃತ್ತಿ ಕಾಣಬರುತ್ತದೆ ಎಂಬುದಾಗಿ ಫೋರ್ಡ್ ಉಲ್ಲೇಖಿಸಿದ್ದಾರೆ. ''ಪ್ರಾಚೀನ ಆರ್ಥಿಕತೆಯು ಸಂಕೀರ್ಣ ಆರ್ಥಿಕತೆ ಸಂಪರ್ಕಕ್ಕೆ ಬಂದಾಗ ಅದು ತನ್ನ ಮೊದಲಿನ ಗುಣಲಕ್ಷಣಗಳನ್ನು ಮಾರ್ಪಡಿಸಿಕೊಳ್ಳುತ್ತದೆ. ಗ್ರಾಮದ ಏಕತೆ ಭಾವನೆಯು ಪರಸ್ಪರರಿಗೆ ನೆರವಾಗುವ ಹಾಗೂ ಅತಿಥಿ ಸತ್ಕಾರದ ಕರ್ತವ್ಯಗಳು ಸದಾಕಾಲವೂ ಅಸ್ತಿತ್ವದಲ್ಲಿರುತ್ತವೆ. ಆದರೆ ಅವುಗಳು ಕೆಲವುಮಟ್ಟಿಗೆ ನಿಸ್ಸಾರಗೊಳ್ಳುತ್ತವೆ''.

## ಲಂಬಾಣಿಗಳ ಸಾಮಾಜಿಕ ಅಂತಸ್ತು ಮತ್ತು ಜಾತಿ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿ ಅವರ ಸ್ಥಾನ

ಇದುವರೆಗೆ ನಾವು ತಾಂಡವನ್ನು ಒಂದು ರಾಜಕೀಯ ಘಟಕವೆಂಬಂತೆ ಪರಿಶೀಲಿಸಿದ್ದಾಗಿದೆ. ಆದರೆ ಲಂಬಾಣಿಗಳು ಒಂದು ಅಲ್ಪಸಂಖ್ಯಾತ ಸಮುದಾಯವಾಗಿದ್ದು ಜಾತಿ ಹಾಗೂ ಆಚರಣೆಗಳ ವಿಧಿವಿಧಾನಗಳನ್ವಯ ಏಣಿ-ಶ್ರೇಣಿ ಕ್ರಮದಲ್ಲಿ ಅಂತಸ್ತುಗಳನ್ನುಳ್ಳ ಬಹುಸಂಖ್ಯಾತ ಜನರಿರುವ ಪ್ರದೇಶದಲ್ಲಿ ವಾಸವಾಗಿದ್ದಾರೆ. ಈ ಸಮುದಾಯದಲ್ಲಿ ಲಂಬಾಣಿಗಳ ಸಾಮಾಜಿಕ ಅಂತಸ್ತನ್ನು ಕುರಿತಾಗಿಯೂ ನಾವು ಆಲೋಚಿಸಬೇಕಷ್ಟೇ. ಸ್ವಜಾತಿ ಬಾಂಧವ್ಯ ಪದ್ಧತಿಯನ್ನಾಧರಿಸಿದ ಲಂಬಾಣಿ ರಾಜಕೀಯ ವ್ಯವಸ್ಥೆಯು

---

*೧೨. ವಡ್ಡರ ಜಾತಿ ಪಂಚಾಯತಿಯ ಇತಂಹದೇ ಸನ್ನಿವೇಶವನ್ನು ಭಟ್ ವರದಿಮಾಡಿದ್ದಾರೆ (೧೯೭೮: ೨೮೪).*

ಒಂದು ಪ್ರತ್ಯೇಕವಾದ ಗುಣಲಕ್ಷಣಗಳನ್ನು ಒಳಗೊಂಡಿದೆ ಎಂಬುದಾಗಿ ಬೈಲೆ (೧೯೬೦: ೨೬೩) ಅಭಿಪ್ರಾಯಪಟ್ಟಿದ್ದಾರೆ. ಬಹುಜಾತಿ ಹಿಂದೂಗಳ ರಾಜಕೀಯ ವ್ಯವಸ್ಥೆಯು 'ಸಮಾಂತರ'ದ ತತ್ವವನ್ನಾಧರಿಸಿದ ವ್ಯವಸ್ಥೆಯೆಂಬುದಾಗಿ ಕಾಣುತ್ತಿದ್ದು, ಈ ವ್ಯವಸ್ಥೆಯೊಳಗೆ ಲಂಬಾಣಿಗಳ ರಾಜಕೀಯ ವ್ಯವಸ್ಥೆಯು ಒಂದು ಪ್ರತ್ಯೇಕ ಘಟಕವೆಂಬಂತೆ ತೋರುತ್ತದೆ. ಧಾರ್ಮಿಕ ವಿಧಿ ಆಚರಣೆಗಳ ಶುದ್ಧತೆಯನ್ನಾಧರಿಸಿದ ಜಾತಿ ತತ್ವದಿಂದ ಲಂಬಾಣಿಗಳು ಸಂಪೂರ್ಣವಾಗಿ ದೂರವಾಗಿ ಉಳಿದಿರಲಿಲ್ಲ. ಅಲೆಮಾರಿತ್ವದ ಹಂತದಲ್ಲಿ ಅವರು ಕೂಡ ತಮ್ಮ ಕುಲದ ಪರಿಶುದ್ಧತೆಯನ್ನು ಸಂಪೂರ್ಣವಾಗಿ ಕಾಪಾಡಿಕೊಳ್ಳಲಿಲ್ಲವಾದರೂ ಬಹುಜಾತಿಗಳ ಜನರ ವ್ಯವಸ್ಥೆಯೊಂದಿಗೆ ಪರಸ್ಪರ ಪ್ರಕ್ರಿಯೆಗಳಲ್ಲಿ ತೊಡಗುವ ಅವಕಾಶಗಳು ತೀರ ಕಡಿಮೆ ಇದ್ದವು. ಏಕೆಂದರೆ ಅವರು ಅಲೆಮಾರಿಗಳಾಗಿದ್ದು ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದರು. "ಬಂಜಾರಾ ಎಂಬ ವರ್ಗದ ಜನರು ಯಾವುದೇ ಜಾತಿಗೆ ಸಂಬಂಧಿಸಿಲ್ಲ ಹಾಗೂ ಹಿಂದೂಸ್ಥಾನದ ಯಾವುದೇ ನಿರ್ದಿಷ್ಟ ನೆಲೆಗೆ ಸಂಬಂಧಿಸಿಲ್ಲ" ಎಂಬುದಾಗಿ ಕ್ರಾಫೋರ್ಡ್ (೧೭೪೨ : ೪೯) ಸೂಚಿಸಿದ್ದಾರೆ.

### ಆರ್ಥಿಕತೆ ಮತ್ತು ಜಾತಿ ಏಣಿ-ಶ್ರೇಣಿಯನ್ನು ಒಟ್ಟುಗೂಡಿಸುವ ಅಂಶಗಳು

ಲಂಬಾಣಿಗಳು ಅಲೆಮಾರಿ ಜೀವನವನ್ನು ತ್ಯಜಿಸಿ ಒಂದೆಡೆ ನೆಲೆನಿಂತ ನಂತರದಲ್ಲಿ ಇತರ ಜಾತಿ ಗುಂಪುಗಳೊಡನೆ ಅವರ ಸಂಪರ್ಕಗಳು ನಿಧಾನವಾಗಿ ಹೆಚ್ಚುತ್ತ ಬಂದವು. ಬೃಹತ್ ಸಮುದಾಯಗಳ ಪರಂಪರೆಯ ಕೆಲವು ಸಂಪ್ರದಾಯಗಳು ಹಾಗೂ ಮೌಲ್ಯಗಳು ಪ್ರತ್ಯೇಕಿಸಲ್ಪಟ್ಟಂತಿರುವ ಲಂಬಾಣಿಗಳ ಮೇಲೆ ಪ್ರಭಾವ ಬೀರಿರದಬಹುದು. ಉದಾಹರಣೆಗೆ ಅವರು ಲಂಬಾಣೇತರ ಜನರ ಸಹಭೋಜನದ ನಿಯಮಗಳನ್ನು ತಿಳಿದವರಾಗಿದ್ದರೂ ತಮ್ಮ ಸಮುದಾಯದಲ್ಲಿ ಅವುಗಳನ್ನು ಅನುಸರಿಸಲಿಲ್ಲ. ಮುಸ್ಲಿಮರು, ಕ್ರಿಶ್ಚಿಯನ್‌ರು ಹಾಗೂ ಅಸ್ಪೃಶ್ಯ ಸಮುದಾಯಗಳಿಂದ ಆಹಾರವನ್ನು ಸ್ವೀಕರಿಸಲು ಒಪ್ಪುತ್ತಿರಲಿಲ್ಲ. ತಮ್ಮ ಸಮಾನರು ಎಂದು ಭಾವಿಸುವ ಹಾಗೂ ತಮಗಿಂತಲೂ ಶ್ರೇಷ್ಠ ಎಂದು ಭಾವಿಸುತ್ತಿದ್ದ ವೈಶ್ಯರು, ಮರಾಠರು, ಜೈನರು, ಲಿಂಗಾಯತರು ಮೊದಲಾದ ಮೇಲ್‌ಜಾತಿಗಳ ಸಮುದಾಯಗಳ ಜನರು ನೀಡುವ ಆಹಾರವನ್ನು ಸ್ವೀಕರಿಸುತ್ತಿದ್ದರು. ಬಹುಜಾತಿ ಗುಂಪುಗಳ ಅಂತಸ್ತಿನ ಏಣಿ-ಶ್ರೇಣಿಗಳ ಬಗೆಗೆ ತಿಳಿವಳಿಕೆಯಿದ್ದರೂ, ತಮಗೆ ಸರಿಸಮಾನರಾದ ಗುಂಪುಗಳ ಜನರ ಜೊತೆಗೂ ಅವರು ನಿರಂತರವಾದ ಸಂಪರ್ಕಗಳನ್ನು ಹೊಂದದೇ ಇರುವುದು ಗಮನಾರ್ಹ ಸಂಗತಿಯಾಗಿದೆ. ಒಂದೆಡೆ ನೆಲೆನಿಂತ ನಂತರ ಅವರು ತಮ್ಮನ್ನು ಬ್ರಾಹ್ಮಣ, ಕ್ಷತ್ರಿಯ, ಲಿಂಗಾಯತ, ವಿಶ್ವಕರ್ಮ, ಕುರುಬರು, ಇತ್ಯಾದಿ ಇತರೆ ಕೃಷಿ ಸಾಗುವಳಿ ಮತ್ತು ಕೈಕಸಬುದಾರರ ಗುಂಪುಗಳಲ್ಲಿ ಗುರುತಿಸಿಕೊಂಡರೂ ಮುಸ್ಲಿಮರು, ಕ್ರಿಶ್ಚಿಯನ್‌ರು, ಅಗಸರು, ವಾಲ್ಮೀಕಿಗಳು, ಕೊರವರು, ವಡ್ಡರು, ಸಿಕ್ಕಲಿಗಾರರು, ಹೆಳವರು, ಅಸ್ಪೃಶ್ಯರು, ಮೊದಲಾದವರಿಗಿಂತ ಮೇಲು ಎಂಬಂತೆ ಗುರುತಿಸಿಕೊಂಡರು (ಕ್ಯಾಂಪಬೆಲ್ ೧೮೮೩: ೩೪೯: ಎಂಥೋವನ್ ; ೧೯೨೨ : ೩೮೩).

ಲಂಬಾಣಿಗಳು ಈಗಲೂ ಕೂಡ ತಮ್ಮ ಸಮುದಾಯದ ಸಾಂಪ್ರದಾಯಿಕ ಪ್ರವೃತ್ತಿಗಳನ್ನು ಉಳಿಸಿಕೊಂಡಿದ್ದಾರೆ. ಎಲ್ಲರೂ ಸಮಾನರು, ಎಲ್ಲರಿಗೂ ಸಮಾನಾವಕಾಶಗಳು ಎಂಬ ತತ್ವಕ್ಕೆ ಬದ್ಧವಾದ ಪ್ರವೃತ್ತಿಗಳನ್ನು ಅವರು ಉಳಿಸಿಕೊಂಡಿದ್ದಾರೆ. ಅವರಲ್ಲಿ ಸಾಮಾಜಿಕವಾಗಿ ಅಥವಾ ಧಾರ್ಮಿಕ ಆಚರಣೆಗಳ ಅನುಸರಣೆಯ ದೃಷ್ಟಿಯಿಂದ ಮೇಲು ಮತ್ತು ಕೆಳಜಾತಿಗಳು ಎಂಬವುಗಳಿಲ್ಲ.[೧೩] ಆದರೆ ಇತರ

ಕೃಷಿಕ

---

೧೩. *ಅವರು ಬಹಳಷ್ಟು ಕೇಂದ್ರೀಕೃತವಾಗಿರುವ ಆಂಧ್ರ ಪ್ರದೇಶದ ಆದಿಲಾಬಾದ ಪ್ರದೇಶದಲ್ಲಿ ಬಂಜಾರಾ ಜನರು ಸಾಂಪ್ರದಾಯಿಕ ಆಚರಣೆಗಳಿಗಾಗಿ ತಮ್ಮ ಜನರಲ್ಲಿಯೇ ಜಾಟ್‌ರನ್ನು (ವಂಶಾವಳಿ ಅಧಿಕಾರರು), ಸೋನಾರರು (ಅಕ್ಕಸಾಲಿಗರು), ಢಾಡಿಗಳು (ಸಂಗೀತಗಾರರು ಮತ್ತು ಮದ್ದಳೆಗಾರರು) ಮತ್ತು ಭ್ರಾಂತರು ಎಂಬ ಗುಂಪುಗಳನ್ನು ಒಳಗೊಂಡಿದ್ದಾರೆ. ಈ ಜನರನ್ನು ಬಂಜಾರರು ಎಂದೇ ಕರೆಯಲಾದರೂ ಈ ಜನರು ಪ್ರತ್ಯೇಕ ಕುಲದ ಜನರೇ ಆಗಿದ್ದು ಬಂಜಾರರುಗಳ ಜೊತೆಗೆ ಸಂಬಂಧಗಳನ್ನು ಇರಿಸಿಕೊಂಡವರಾಗಿದ್ದಾರೆ. ಅವರು ಬಂಜಾರರುಗಳೊಂದಿಗೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಲೂ ಇದ್ದರು. ಈ ಜನರು ಸ್ವಗೋತ್ರ ವಿವಾಹ ಪದ್ಧತಿಯನ್ನು ಅನುಸರಿಸುವವರು ಆಗಿದ್ದಾರೆ. ಅವರಿಗೆ ಅವರದ್ದೇ ಆದ ಸಾಮಾಜಿಕ ನಿಯಂತ್ರಣದ ವ್ಯವಸ್ಥೆಯಿದೆ (ಸಿನ್ಹಾ : ೧೯೮೨ : ೪).*

ಜಾತಿಗಳೊಡನೆಯ ಸಂಪರ್ಕಗಳ ಹೆಚ್ಚಳದಿಂದಾಗಿ, ಹಿಂದಿಗಿಂತ ಹೆಚ್ಚಾಗಿ ಜಾತಿ ಏಣಿ ಶ್ರೇಣಿಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ತಮ್ಮ ತಾಂಡಗಳಲ್ಲಿ ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ ಬಹುಜಾತಿ ಗುಂಪುಗಳ ಜಾತಿ ಏಣಿ-ಶ್ರೇಣಿಯ ಪರಿಗಣನೆಯಲ್ಲಿ ತೊಡಗಿದ್ದಾರೆ. ಇತರ ಜಾತಿಗಳ ಜನರೊಡನೆ ಸಂಪರ್ಕಿಸುವಾಗ ಜಾತಿ ಏಣಿ-ಶ್ರೇಣಿಯ ವರ್ತನಾಂಶಗಳಿಗೆ ತಕ್ಕಂತೆ ವ್ಯವಹರಿಸುತ್ತಾರೆ.

ಲಂಬಾಣಿಗಳು ತಮ್ಮ ನಡುವಿನ ಸಾಮಾಜಿಕ ಪ್ರಕ್ರಿಯೆಗಳಲ್ಲಿ ಸಹಭೋಜನದ ಕಟ್ಟುಪಾಡುಗಳು, ನಿಯಮಗಳು ಮೊದಲಾದವುಗಳನ್ನೊಳಗೊಂಡ ಜಾತಿ ವ್ಯವಸ್ಥೆಯಿಂದ ತಾರತಮ್ಯದ ಭಾವನೆಗಳನ್ನು ಕಲಿತುಕೊಳ್ಳಲಿಲ್ಲ. ಇತರ ಜಾತಿಗಳೊಡನೆ ಸಂಪರ್ಕಗಳು ಹಾಗೂ ವ್ಯವಹಾರಗಳ ಮೂಲಕ ಈ ತಾರತಮ್ಯಗಳು ಸಾಮಾನ್ಯವಾದ ಹಾಗೂ ಅಪರಿಪೂರ್ಣವಾದ ಪ್ರಜ್ಞೆಯನ್ನು ಪಡೆದುಕೊಂಡಿದ್ದಾರೆ. ಅಂದರೆ, ಜಾತಿಪದ್ಧತಿಯ ಸಾಮಾಜಿಕ ವ್ಯವಸ್ಥೆಯ ತಾರತಮ್ಯದ ಭಾವನೆಯು ಅವರ ಬಾಹ್ಯಜಗತ್ತಿಗೆ ಸಂಬಂಧಿಸಿದಂತೆಯೇ ಉಳಿದುಕೊಂಡಿದೆ. ಇತರ ಜನರೊಡನೆ ಭೋಜನ ಸಂಪರ್ಕಗಳಲ್ಲಿ ಪಾಲುಗೊಳ್ಳಲು ಕೆಲವು ಸಂದರ್ಭಗಳು ಅವರಿಗೆ ಅವಕಾಶ ಕಲ್ಪಿಸಿಕೊಡುತ್ತವೆ. ಇತರ ಸಾಗುವಳಿದಾರರೊಂದಿಗೆ ಅಥವಾ ಜಮೀನುಗಳಲ್ಲಿ ಕೂಲಿಗಳೊಂದಿಗೆ ಊಟಮಾಡುವಾಗ, ವಿವಾಹ ಸಮಾರಂಭಗಳಲ್ಲಿ ಅಥವಾ ಬಹುಜಾತಿಯ ಜನರು ವಾಸಿಸುವ ಗ್ರಾಮಗಳಲ್ಲಿಯ ಸಾರ್ವತ್ರಿಕ ಊಟದ ಸಂದರ್ಭಗಳಲ್ಲಿ, ತಮ್ಮ ಒಡೆಯರ ಮನೆಗಳಲ್ಲಿ ಕೆಲಸಗಾರರಿಗೆ ವರ್ಷಕ್ಕೊಮ್ಮೆ ಏರ್ಪಡಿಸುವ ಊಟದ ಕಾರ್ಯಕ್ರಮಗಳಲ್ಲಿ ಅವರು ಪಾಲುಗೊಳ್ಳುವ ಅವಕಾಶಗಳಿವೆ. ಇಂತಹ ಸಂದರ್ಭಗಳಲ್ಲಿ ಲಂಬಾಣಿಗಳು ಜಾತಿ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿಯ ತಮ್ಮ ಸ್ಥಾನವನ್ನು ಅರ್ಥಮಾಡಿಕೊಳ್ಳುತ್ತಾರೆ. ಅಷ್ಟರ ಮಟ್ಟಿಗೆ ಅವರು ಜಾತಿ ಸಿದ್ಧಾಂತವನ್ನು ಹಂಚಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಅವರು ಒಂದು ಪ್ರತ್ಯೇಕ ಪಂಗಡವಾಗಿ ಉಳಿದಿಲ್ಲ. ಒಂದು ಹಿಂದೂ ಜಾತಿಯೇ ಆಗಿದ್ದಾರೆ. ಜಾತಿ ವ್ಯವಸ್ಥೆಯ ಪರಿಧಿಯ ಹೊರಗಡೆಯಲ್ಲಿರುವ ಗುಂಪು ಜಾತಿ ವ್ಯವಸ್ಥೆಯ ಅಂಗವಾಗಿ ಮಾರ್ಪಡುವುದರ ನಿದರ್ಶನವಿದಾಗಿದೆ. ಭಾರತೀಯ ನಾಗರಿಕತೆಯಲ್ಲಿಯ ಅಂಗವಾಗಿ ಮಾರ್ಪಡುವ ಈ ಪ್ರಕ್ರಿಯೆಯನ್ನು ಇತರ ಪಂಗಡಗಳ ವಿಷಯದಲ್ಲಿಯೂ ಗುರುತಿಸಲಾಗಿದೆ. ಬಸ್ತೇರ್‌ದ ಅಲಮಾರಿ ಪಂಗಡಗಳೂ ಇಂತಹದೇ ಪ್ರಕ್ರಿಯೆಗೆ ಒಳಗಾಗಿವೆ (ನೋಡಿರಿ : ಜೈ, ೧೯೫೫ : ೮೨). ಹಿಂದೂ ಪರಂಪರೆಯ ಪ್ರಭಾವಗಳು ಕೇವಲ ಜಾತಿ ಏಣಿ-ಶ್ರೇಣಿಯಲ್ಲಿ ಮಾತ್ರವಲ್ಲದೆ, ಲಂಬಾಣಿಗಳ ಜೀವನದ ಇತರ ಕ್ಷೇತ್ರಗಳಲ್ಲಿಯೂ ಆಗಿದೆ. ಲಂಬಾಣಿಗಳ ದೇವತೆಗಳು, ಧಾರ್ಮಿಕ ನಂಬಿಕೆಗಳು, ಅವರ ಜೀವನ ದೃಷ್ಟಿಕೋನ ಮೊದಲಾದವುಗಳ ಮೇಲೆಯೂ ಹಿಂದೂ ಪರಂಪರೆಯ ಪ್ರಭಾವವು ನಿಚ್ಚಳವಾಗಿ ಆಗಿದೆ. ಇವರುಗಳ ಜೀವನದ ಮೇಲೆ ಸ್ಥಳೀಯ ಜನರ ನಾಗರಿಕತೆಯ ಮೌಲ್ಯಗಳು ಮತ್ತು ಪರಿಕಲ್ಪನೆಗಳ ಮೇಲೆ ಆದ ಆಕ್ರಮಣಕಾರಿ ಪ್ರಭಾವವು ಹಿಂದಿನ ಕಾಲದಲ್ಲಿ ತೀರ ಅಲ್ಪವೂ ಆಗಿದ್ದಂತೆ ನಿಧಾನಗತಿಯದೂ ಆಗಿತ್ತು. ಈಗ ಅದು ತೀವ್ರತರವಾಗಿದೆ. ಜೇ ಇದನ್ನು ''ಪಾರಂಪರಿಕ ಪ್ರಕ್ರಿಯೆ''(Traditional Process) ಎಂದು ಕರೆದಿದ್ದಾರೆ ಮತ್ತು ಇದನ್ನು ಆಧುನಿಕ ಎಂಬರ್ಥದಿಂದ ಪ್ರತ್ಯೇಕಿಸಿದ್ದಾರೆ. ಆಧುನಿಕ ಎಂಬುದು ಉದ್ದೇಶಪೂರ್ವಕವಾಗಿ ಪ್ರಯೋಗಿಸಲಾದ ಪರಿಕಲ್ಪನೆ ಯೋಜನೆಯಾಗಿರುತ್ತದೆ. ಉದಾಹರಣೆಗೆ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮ, ಆಧುನಿಕ ವೈದ್ಯಕೀಯ ಸೌಲಭ್ಯಗಳು, ಶಾಲೆಗಳು, ಸಹಕಾರಿ ಸಂಸ್ಥೆಗಳು ಹಾಗೂ ಕಾನೂನಿನ ಅಧಿಕಾರಬಲವನ್ನುಳ್ಳ ಗ್ರಾಮಪಂಚಾಯಿತಿಗಳು ಇತ್ಯಾದಿ (ನೋಡಿರಿ ಅಧ್ಯಾಯ-೨). ಈ ಪ್ರಕ್ರಿಯೆಗಳು ನಿಸ್ಸಂದೇಹವಾಗಿ ಪರಸ್ಪರರನ್ನು ತಟ್ಟುತ್ತವೆ ಹಾಗೂ ಪರಸ್ಪರರನ್ನು ಪ್ರಭಾವಿಸುತ್ತಿವೆ.

ಇಂದಿನ ದಿನಗಳಲ್ಲಿ ಬದಲಾವಣೆ ಹೊಸದೊಂದು ಜೀವಕಳೆಯನ್ನು ನೀಡುತ್ತಿದೆ. ಹಿಂದೆ ಬದಲಾವಣೆಯ ಗತಿಯು ತೀರ ನಿಧಾನವಾಗಿದ್ದು ಮುಂದುವರೆದ ಜನರ ಗುಂಪುಗಳೊಂದಿಗಿನ ತೀರ ಸೀಮಿತ ಸಂಪರ್ಕಗಳಿಂದ ಉಂಟಾಗುತ್ತಿದ್ದುದನ್ನು ಇಂದಿನ ಬದಲಾವಣೆಯ ರೀತಿನೀತಿಗಳೊಂದಿಗೆ ತುಲನೆಮಾಡಿದಾಗ ಇವೆಲ್ಲವೂ ಥಟ್ಟನೆ ತಿಳಿಯುತ್ತದೆ.

## ಅಂತರ್ಜಾತಿಯ ಆರ್ಥಿಕ ಸಂಬಂಧಗಳು

ಲಂಬಾಣಿಗಳ ಸಂಪರ್ಕಗಳು ಕೇವಲ ಜಾತಿ ಏಣಿ-ಶ್ರೇಣಿಯ ಪರಿಕಲ್ಪನೆಗೆ ಸಂಬಂಧಿಸಿದವುಗಳಾಗಿಲ್ಲ. ಅವುಗಳು ಆರ್ಥಿಕ, ರಾಜಕೀಯ, ಜನಾಂಗೀಯ ಹಾಗೂ ವೃತ್ತಿಗೆ ಸಂಬಂಧಿಸಿದ ಸಂಬಂಧಗಳ ಇತರ ವಿಧಾನಗಳನ್ನು ಒಳಗೊಳ್ಳುತ್ತವೆ. ಹಿಂದೂ ಮೇಲ್‌ಜಾತಿಗಳೊಂದಿಗಿನ ಲಂಬಾಣಿಗಳ ಆರ್ಥಿಕ ಸಂಬಂಧವು ಮೇಲ್‌ಜಾತಿ ಮತ್ತು ಕೆಳಜಾತಿಗಳ ನಡುವಿನ ಸಂಬಂಧದ ರೀತಿಯೆ ಇದೆ. ಮೂಲಭೂತವಾಗಿ ಕೃಷಿ ಸಾಗುವಳಿ ಕೂಲಿಯ ಕೆಲಸ ಹಾಗೂ ಅನುವಂಶೀಯವಾಗಿ ಬಾಡಿಗೆಸಾಗುವಳಿದಾರರಾಗಿ (ಗೇಣಿದಾರರಾಗಿ) ಲಂಬಾಣಿಗಳ ಮೇಲ್‌ಜಾತಿಗಳು ಜನರೊಂದಿಗೆ ಆರ್ಥಿಕ ಸಂಬಂಧಗಳನ್ನು ಹೊಂದಿದ್ದಾರೆ. ಹೀಗಾಗಿ ಲಂಬಾಣಿಗಳನ್ನು ಕೆಳಜಾತಿಗಳ ಜನರಂತೆ ನಡೆಸಿಕೊಳ್ಳಲಾಗುತ್ತದೆ. ರಜಪೂತ ಮೂಲಕ್ಕೆ ಸೇರಿದವರು ಎಂದು ಲಂಬಾಣಿಗಳು ಹೇಳಿಕೊಳ್ಳುತ್ತಿದ್ದರೂ ಜಾತಿ ಏಣಿ-ಶ್ರೇಣಿಯಲ್ಲಿ ಕೆಳಜಾತಿಗಳಂತೆಯೇ ಅವರನ್ನು ನಡೆಸಿಕೊಳ್ಳಲಾಗುತ್ತದೆ. ಲಂಬಾಣಿಗಳ ಆರ್ಥಿಕ ಜೀವನವು ಬಹುತೇಕವಾಗಿ ಇತರರನ್ನು ಅವಲಂಬಿಸಬೇಕಾಗಿ ಬಂದಿದ್ದರಿಂದ, ಅದರ ಪರಿಣಾಮವಾಗಿ ಅವರು ಕೆಳಸ್ತರದ ಸಾಮಾಜಿಕ ಅಂತಸ್ತನ್ನು ಹೊಂದಿದ್ದರೂ ಅವರು ತಮ್ಮ ಜನಾಂಗೀಯ ಅಭಿಮಾನವನ್ನು ಕಾಯ್ದುಕೊಂಡು ಬಂದಿದ್ದಾರೆ. ಅವರ ಈ ಅಭಿಮಾನವು ದಂತಕತೆಗಳಲ್ಲಿ ಅವರ ಮೂಲವನ್ನು ಕುರಿತಾದ ನಿರೂಪಣೆಗಳಲ್ಲಿ ಏಕತೆಯು ವ್ಯಕ್ತವಾಗಿದೆ. ಅವರ ಸಮುದಾಯದ ವಾಸಸ್ಥಾನದ ಏಕತೆ, ಅವರ ದೃಷ್ಟಿಕೋನದಲ್ಲಿ ಹಾಗೂ ಸಾಂಸ್ಕೃತಿಕ ಪ್ರತ್ಯೇಕತೆಯಲ್ಲಿಯೂ ಈ ಭಾವನೆ ವ್ಯಕ್ತವಾಗುತ್ತದೆ.

ಇತರ ಜಾತಿಗಳೊಂದಿಗಿನ ಲಂಬಾಣಿಗಳ ಆರ್ಥಿಕ ಸಂಬಂಧಗಳನ್ನು ಕುರಿತು ಅಧ್ಯಾಯ ಎರಡರಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಗೇಣಿ ಸಾಗುವಳಿಯಲ್ಲಿ, ಕೂಲಿದುಡಿಮೆಯಲ್ಲಿ, ಅವರ ಆರ್ಥಿಕ ಅವಲಂಬನೆ ಸ್ಪಷ್ಟವಾಗಿ ಕಂಡುಬರುತ್ತದೆ. ವಿಶೇಷ ಸೇವೆಗಳಿಗಾಗಿ ಅವರು ಇತರರನ್ನು (ಅಕ್ಕಸಾಲಿಗ, ಬಡಗಿ, ಕಮ್ಮಾರ ಇತ್ಯಾದಿ) ಅವಲಂಬಿಸಿದ್ದಾರೆ. ಲಂಬಾಣಿ ಸಮುದಾಯದ ಧಾರ್ಮಿಕ ಉತ್ಸವಗಳಿಗೆ ಲಂಬಾಣೇತರ ರೈತರ ಕೊಡುಗೆ ಅಥವಾ ಧನ ಸಹಾಯಗಳನ್ನು ಕೂಡ ಅವರು ಪಡೆಯುತ್ತಾರೆ. ೧೯೯೯ರ ಗೌರಿ ಉತ್ಸವದ ಕಾಲಕ್ಕೆ ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಸುಮಾರು ೨೫೦೦ರೂ.ಗಳ ಮೊತ್ತದ ಧಾನ್ಯಗಳನ್ನು ಇತರ ಜಾತಿಯ ಜನರಿಂದ ಸಂಗ್ರಹಿಸಿದ್ದರು. ತಾಂಡಗಳ ನೆರೆಹೊರೆಯಲ್ಲಿ ಇರುವ ಇತರ ಕೃಷಿಕರು ತಮ್ಮ ಕೃಷಿ ಜಮೀನುಗಳ ಅಕ್ಕಪಕ್ಕದಲ್ಲಿ ಲಂಬಾಣಿಗಳ ಜಮೀನುಗಳಿದ್ದರೆ ಅವರ ಮೇಲೆ ಸಂಶಯಪಡುತ್ತಾರೆ. ಲಂಬಾಣಿಗಳು ಕಳ್ಳರು ಎಂಬ ಭಾವನೆಯೇ ಅವರ ಸಂಶಯ ಭಾವನೆಗೆ ಕಾರಣವಾಗಿದೆ. ಸಂಚಾರಿ ಕುರುಬರ ಕ್ಯಾಂಪುಗಳಿಂದ ಲಂಬಾಣಿಗಳು ರಾತ್ರಿಕಾಲದಲ್ಲಿ ಕುರಿಗಳನ್ನು ಕದಿಯುತ್ತಾರೆ ಎಂಬುದಾಗಿಯೂ ಕೆಲವರು ಹೇಳುತ್ತಾರೆ. ಲಂಬಾಣಿಗಳು ವ್ಯಾಪಾರ ವ್ಯವಹಾರಗಳಲ್ಲಿ ನಂಬಲರ್ಹರಲ್ಲ ಎಂಬ ಮಾತು ಆಧಾರರಹಿತವಾಗಿದೆ. ಇಂದು ಇತರರೂ ಕೂಡ ಅದೇ ರೀತಿಯಾಗಿ ವರ್ತಿಸುವುದನ್ನು ನಾವು ನೋಡುತ್ತೇವಷ್ಟೇ.

ಲಂಬಾಣಿ ಹಾಗೂ ಇತರ ಜಾತಿ ಗುಂಪುಗಳ ಜನರ ನಡುವಣ ಸಂಬಂಧಗಳು ಅನ್ಯೋನ್ಯವಾಗಿಲ್ಲವೆಂದು ಕೆಲವು ಲಂಬಾಣೇತರ ಹಿರಿಯ ಕೃಷಿಕರು ಹೇಳಿದ್ದಾರೆ. ಈ ಸಂಬಂಧಗಳು ಪರಸ್ಪರ ಪೂರಕವಾದವುಗಳೆಂಬುದನ್ನು ಅವರು ಚೆನ್ನಾಗಿ ಬಲ್ಲರು. ೫೦ ವರ್ಷಗಳ ಹಿಂದೆ ಲಂಬಾಣಿಗಳು ನಿಷ್ಠ ಹಾಗೂ ನಂಬಿಕಸ್ಥ ದುಡಿಮೆಗಾರರಾಗಿದ್ದರೆಂಬುದನ್ನು ಅವರು ಸ್ಮರಿಸುತ್ತಾರೆ. ಆ ಕಾರಣಕ್ಕೋಸ್ಕರ ಲಂಬಾಣಿಗಳನ್ನು ವಾರ್ಷಿಕ ಕೂಲಿ ಆಧಾರದ ಮೇಲೆ ನೇಮಿಸಿಕೊಳ್ಳಲಾಗುತ್ತಿತ್ತು ಎಂಬುದನ್ನೂ ಕೆಲವು ಹಿರಿಯರು ಸ್ಮರಿಸುತ್ತಾರೆ. ಆದರೆ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರದಲ್ಲಿ ಲಂಬಾಣಿಗಳ ವರ್ತನೆ ಬದಲಾಗಿದೆ ಎಂದು ಅವರು ಅಭಿಪ್ರಾಯಪಡುತ್ತಾರೆ. ಅವರಲ್ಲಿ ಶ್ರಮವಹಿಸಿ ದುಡಿಯುವ ಸಾಮರ್ಥ್ಯವಿದ್ದರೂ ಶ್ರಮವಹಿಸಿ ದುಡಿಯುವುದಿಲ್ಲ, ಮೇಲ್‌ಜಾತಿಯ ಜನರಿಗೆ ಗೌರವ ತೋರುವ ಪ್ರವೃತ್ತಿ ಅವರಲ್ಲಿ ಇಂದು ಇಲ್ಲವಾಗಿದೆ ಎಂದು ಕೆಲವು ಹಿರಿಯರು ಆಕ್ಷೇಪಿಸುತ್ತಾರೆ. ವಿಶೇಷವಾಗಿ ಸುಗ್ಗಿಯಕಾಲದಲ್ಲಿ ಕಳವು ಮಾಡುವುದನ್ನು ಅವರು ತಮ್ಮ ಕಸುಬನ್ನಾಗಿಸಿಕೊಂಡಿದ್ದಾರೆ, ಸುಳ್ಳು ಹೇಳುವ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದಾರೆ ಎಂಬುದಾಗಿಯೂ ಅವರು ಲಂಬಾಣಿಗಳ ಬಗೆಗೆ ಹೇಳುತ್ತಾರೆ. ಬಾಹ್ಯ ಜಗತ್ತಿನೊಡನೆ ಹಾಗೂ ವಿಶೇಷವಾಗಿ ನಗರದ ಜನರೊಡನೆ ಹೆಚ್ಚಿನ ಸಂಪರ್ಕಗಳಿಂದಾಗಿ, ಕಾನೂನುಗಳ ಬಗೆಗಿನ ಪ್ರಜ್ಞೆಯಿಂದಾಗಿ ಅವರು ತಾವು ಗುತ್ತಿಗೆಗೆ ಹಿಡಿದ ಕೃಷಿ ಜಮೀನುಗಳನ್ನು ಬಿಟ್ಟುಕೊಡುವುದಿಲ್ಲ, ಸಾಲಗಳನ್ನು ಮರುಪಾವತಿ ಮಾಡುವುದಿಲ್ಲ ಹಾಗೂ ವಾರ್ಷಿಕ ಗುತ್ತಿಗೆಯ ಕೂಲಿಯ ಅವಧಿಯನ್ನು ಮೊಟಕುಗೊಳಿಸುತ್ತಾರೆ ಎಂಬವುಗಳು ಲಂಬಾಣಿಗಳ ವಿರುದ್ಧ ಮಾಡಲಾದ ಆಪಾದನೆಗಳಾಗಿವೆ. ಲಂಬಾಣಿಗಳು ತಮ್ಮ ತಾಂಡಗಳಲ್ಲಿ ಕಳವು ಮಾಡುವುದಿಲ್ಲ. ಆದರೆ ಲಂಬಾಣೇತರ ಜನರ ಗದ್ದೆ, ಹೊಲ, ಮನೆಗಳಲ್ಲಿ ಕಳುವು ಮಾಡುತ್ತಾರೆ. ಅವರು ತಮ್ಮವರಲ್ಲಿಯೇ ಕಳವು ಮಾಡಿದರೆ ಸಿಕ್ಕಿಹಾಕಿಕೊಳ್ಳುವ ಹಾಗೂ ತಮ್ಮ ಸಾಂಪ್ರದಾಯಿಕ ಪಂಚಾಯಿತಿಯಿಂದ ಶಿಕ್ಷೆಗೀಡಾಗುವ ಭೀತಿಯನ್ನು ಹೊಂದಿದ್ದಾರೆ. ಹೊರಗಡೆಯಲ್ಲಿ ಅವರು ಕಳವು ಮಾಡಿದಾಗ ಅವರನ್ನು ಹಿಡಿಯುವುದು ಕಷ್ಟವಾಗುತ್ತದೆ, ಇಲ್ಲವೇ ಅವರ ಜನರೇ ಅವರನ್ನು ರಕ್ಷಿಸಿಕೊಳ್ಳುತ್ತಾರೆ.

ಈ ಎಲ್ಲ ಅಭಿಪ್ರಾಯಗಳು, ಆಪಾದನೆಗಳಲ್ಲಿ ಸತ್ಯಾಂಶವಿರದೇ ಹೋದರೂ ಲಂಬಾಣಿಗಳ ಬಗೆಗಿನ ಅನ್ಯರ ಈ ವಿಚಾರಗಳು ಹಲವಾರು ವಿಷಯಗಳನ್ನು ತಿಳಿಸುತ್ತವೆ. ಲಂಬಾಣಿಗಳ ಬಗೆಗೆ ಪರ ಹಾಗೂ ವಿರೋಧ ಭಾವನೆಗಳು ಈ ಜನರ ಅಭಿಪ್ರಾಯಗಳಲ್ಲಿ ವ್ಯಕ್ತವಾಗಿವೆ. ಲಂಬಾಣಿಗಳ ಸೇವೆಗಳು ಅವರಿಗೆ ಅಗತ್ಯವಾಗಿ ಬೇಕು. ಹಿಂದೆ ಅವಲಂಬಿತ ಸಮುದಾಯವಾಗಿದ್ದ ಲಂಬಾಣಿಗಳು ಇಂದು ರೈತಾಪಿ ಸಮುದಾಯವಾಗುತ್ತಿದೆ. ಕೆಲವು ಲಂಬಾಣೇತರ ಕೃಷಿಕರು ಕೇಳುತ್ತಾರೆ. "ಈ ಲಂಬಾಣಿಗಳಿಗೆ ಏಕೆ ಸಹಾಯ ಮಾಡಬೇಕು?. ಲಂಬಾಣಿಗಳಿಗೆ ಸಹಾಯ ಮಾಡಬಾರದೆಂಬ ಮನೋಭಾವ ಒಂದೆಡೆ ಇದ್ದರೆ, ಅವರ ಸೇವೆಗಳ ಅಗತ್ಯತೆ-ಅನಿವಾರ್ಯತೆ ಇನ್ನೊಂದೆಡೆಗೆ ಇದೆ. ಲಂಬಾಣೇತರ ಕೃಷಿಕರ ಈ ಮನೋಭಾವವೇ ಅವರ ಬಗೆಗೆ ಕೆಟ್ಟ ಅಭಿಪ್ರಾಯವನ್ನು ತಾಳುವಂತೆ ಮಾಡಿದೆ. ಮೂರನೆಯ ವ್ಯಕ್ತಿಗಳೊಂದಿಗೆ ಮಾತನಾಡುವಾಗ ಈ ಜನರು ಲಂಬಾಣಿಗಳನ್ನು ಟೀಕಿಸುತ್ತಾರೆ. ಲಂಬಾಣಿಗಳು ಮತ್ತು ಲಂಬಾಣೇತರರು ಪರಸ್ಪರರನ್ನು ದೂಷಿಸುವ ಈ ಕೆಳಗಿನ ಆರೋಪದ ಮಾತುಗಳು ಅರ್ಥಪೂರ್ಣವಾಗಿವೆ".

**ಲಂಬಾಣೇತರ ಕೃಷಿಕರು :** "ತಾಂಡದ ಜನರು ಹೊಲಸು, ನೀತಿ ನಿಯಮಗಳಲ್ಲಿ ಸಡಿಲು, ಕುಡುಕರು, ಕಳ್ಳರು, ಮುಂದಾಲೋಚನೆಯಿಲ್ಲದ ದುಂದುಗಾರರು......"

ಲಂಬಾಣಿಗಳು : "ಗ್ರಾಮಸ್ಥರು ಬಲು ಜಿಪುಣರು, ಕೈಹಿಡಿತದವರು, ಅವರಲ್ಲಿ ಗಂಡಸುತನವಿಲ್ಲ ಹಾಗಾಗಿ ಅವರ ಹೆಂಡತಿ ಅವರನ್ನು ಆಳುತ್ತಾರೆ. ತಾವು ಸಂಗ್ರಹಮಾಡಿದ್ದನ್ನು ತಿನ್ನದೇ ಅವರು ಒಂದು ದಿನ ಸತ್ತು ಹೋಗುತ್ತಾರೆ............"

## ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳು

ಧಾರ್ಮಿಕ ಅಧ್ಯಯನವು ಪುರುಷರ ಹಾಗೂ ಮಹಿಳೆಯರ ಧಾರ್ಮಿಕ ಜೀವನಚಕ್ರದ ವಿಶಿಷ್ಟ ವಿಧಿ ವಿಧಾನಗಳನ್ನು, ಆಚರಣೆಗಳನ್ನು ಮಾತ್ರವಲ್ಲದೆ ಸಂಸ್ಕೃತಿಯ ಭಾಗವಾದ ಜನರ 'ಜೀವನದೃಷ್ಟಿ'ಯನ್ನು ಕೂಡ ಬಿಂಬಿಸುತ್ತದೆ (ರೆಡ್‌ಫೀಲ್ಡ್, ೧೯೬೮:೮೫-೮೬). ಅತಿಮಾನುಷ ಶಕ್ತಿಗಳ ಬಗ್ಗೆ ನಂಬಿಕೆ, ಧಾರ್ಮಿಕ ಆಚರಣೆ, ಮಂತ್ರ ಮತ್ತು ಮಾಟ, ಸಾಂಸ್ಕೃತಿಕ ಅನನ್ಯತೆ ಮೊದಲಾದವುಗಳು ಜನರ ಜೀವನದೃಷ್ಟಿಯ ಕೆಲವು ಮಹತ್ವದ ಅಂಶಗಳಾಗಿವೆ. ಈ ಅಂಶಗಳು ಒಬ್ಬ ವ್ಯಕ್ತಿಯನ್ನು ಒಂದು ನಿರ್ದಿಷ್ಟ ಸಂಸ್ಕೃತಿಯ ಸದಸ್ಯನನ್ನಾಗಿ ಮಾರ್ಪಡಿಸುವಲ್ಲಿ ಹಾಗೂ ಆ ವ್ಯಕ್ತಿಯನ್ನು ಪರಿಪಕ್ವಗೊಳಿಸುವಲ್ಲಿ ನೇರವಾಗಿ ಪ್ರಭಾವವನ್ನು ಬೀರುತ್ತಿವೆ. ಬದಲಾಗುತ್ತಿರುವ ಆರ್ಥಿಕತೆಯು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಲಂಬಾಣಿಗಳ ಧಾರ್ಮಿಕ ನಂಬಿಕೆಗಳನ್ನು ಮತ್ತು ಅವರ ಜೀವನಶೈಲಿಯನ್ನು ಹೇಗೆ ಪ್ರಭಾವಿಸಿವೆ. ಧಾರ್ಮಿಕ ಅಂಶಗಳು ಎಷ್ಟರಮಟ್ಟಿಗೆ ಆರ್ಥಿಕತೆಯನ್ನು ಪ್ರಭಾವಿಸಿವೆ ಎಂಬುದನ್ನು ತಿಳಿಸಿಕೊಡುವುದು ಇಲ್ಲಿ ನನ್ನ ಮುಖ್ಯ ಉದ್ದೇಶವಾಗಿದೆ.

## ಲಂಬಾಣಿಗಳ ಸಾಂಪ್ರದಾಯಿಕ ಧರ್ಮ ಮತ್ತು ನಂಬಿಕೆಗಳು

ಇತ್ತೀಚಿನ ಶತಮಾನಗಳಲ್ಲಿ ಲಂಬಾಣಿಗಳ ಜೀವನ ಶೈಲಿ, ಭೌತಿಕ ಪರಿಸರ, ತಾಂತ್ರಿಕತೆ ಹಾಗೂ ಆರ್ಥಿಕ ಬದಲಾವಣೆ, ಅವರ ಕ್ರಮಬದ್ಧವಿಲ್ಲದ ಚರಿತ್ರೆ, ವಸಾಹತು ಆಳ್ವಿಕೆಗೆ ಸುಮಾರು ಇನ್ನೂರು ವರ್ಷಗಳವರೆಗೆ ಒಳಗೊಂಡಿದ್ದು, ಕೇಂದ್ರ ಹಾಗೂ ರಾಜ್ಯ ಸರಕಾರಗಳು ಆರಂಭಿಸಿದ ಕೆಲವು ಅಭಿವೃದ್ಧಿ ಮತ್ತು ಕಲ್ಯಾಣ ಕಾರ್ಯಕ್ರಮಗಳು, ನಗರ ಸಂಪರ್ಕಗಳಿಂದ ಉಂಟಾದ ಸಾಮಾಜಿಕ ಬದಲಾವಣೆಯ ಸ್ವರೂಪ, ಮೊದಲಾದ ಇತಿಮಿತಿಗಳಿಂದ ಪ್ರತಿಬಂಧಿಸಲ್ಪಟ್ಟಿದೆ.

ಲಂಬಾಣಿಗಳು ಅಲೆಮಾರಿ ಜೀವನದ ಸಂದರ್ಭದಲ್ಲಿ ಸರ್ವಚೇತನವಾದವನ್ನು (ಪ್ರಕೃತಿ ದೇವತೆ) ಮನ್ನಿಸುತ್ತಿದ್ದರು (ದುಬಾಯಿಸ್, ೧೯೩೬: ೭೦; ಥರ್ಸ್ಟನ್, ೧೯೦೯ : ೨೧೩-೨೨೦). ಇದಕ್ಕಿಂತ ಹೆಚ್ಚಾಗಿ ಇವರು ಪಿತೃವಂಶೀಯ ಗೋತ್ರಗಳಲ್ಲಿ ಗಟ್ಟಿಯಾಗಿ ಸಂಘಟಿತರಾಗಿದ್ದರು. ಪುರುಷಪ್ರಧಾನ ಪೂರ್ವಿಕರ ಪೂಜೆಗಳಲ್ಲಿ ಬಲವಾದ ನಂಬಿಕೆಯನ್ನು ಇಟ್ಟವರಾಗಿದ್ದರು. ಹೀಗಾಗಿ, ಇವರು ಪೂರ್ವಿಕರುಗಳನ್ನು ಆಗಾಗ್ಗೆ ಆರಾಧಿಸುತ್ತಿದ್ದರು. ಧಾರ್ಮಿಕ ಲೋಪಗಳು ಜನರ ಮೇಲೆ ಗಂಭೀರ ಪರಿಣಾಮಗಳನ್ನು ಬೀರುತ್ತವೆ ಎಂದು ಇವರು ನಂಬಿದ್ದರು (ಇದೇ ರೀತಿಯ ವಿವರಣೆಗೆ ನೋಡಿ : ಸ್ಟ್ಯಾನ್ಸನ್, ೧೯೬೦ : ೯೭-೧೦೮ ಮತ್ತು ೨೧೬).

ಸಾಂಪ್ರದಾಯಿಕ 'ನಾಯಕ'ನು ಸಮೂಹದ ಮುಖ್ಯಸ್ಥ ಹಾಗೂ ಪುರೋಹಿತನಂತೆ ಕಾರ್ಯ ನಿರ್ವಹಿಸುತ್ತಿದ್ದನು. ಕೆಲವು ಕಡೆಗಳಲ್ಲಿ ಈ ಪಾತ್ರಗಳನ್ನು ಪ್ರತ್ಯೇಕಿಸಲಾಗುತ್ತಿತ್ತು. ಅಲ್ಲದೇ ಬೇರೆ ಬೇರೆ ಇಬ್ಬರು ವ್ಯಕ್ತಿಗಳು ಈ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಲಂಬಾಣಿಗಳ ಧಾರ್ಮಿಕ ನಂಬಿಕೆ ವ್ಯವಸ್ಥೆಗಳು ಹಿಂದೂಗಳ ಧಾರ್ಮಿಕ ನಂಬಿಕೆ ವ್ಯವಸ್ಥೆಗಳಿಂದ ಪ್ರತ್ಯೇಕಿಸಲಾದುದನ್ನು ಕ್ರೈಸ್ತ ಮತ ಪ್ರಚಾರಕರು

ಹಾಗೂ ಪ್ರವಾಸಿಗರ ಬರಹಗಳಿಂದ ತಿಳಿಯಬಹುದಾಗಿದೆ. ''ಇತರ ಎಲ್ಲ ಹಿಂದೂ ಜಾತಿಗಳಿಗಿಂತ ಭಿನ್ನವಾದ ಧಾರ್ಮಿಕ ವರ್ತನೆಯ ರೀತಿ ನೀತಿಗಳು, ಸಂಪ್ರದಾಯಗಳು, ಪ್ರತ್ಯೇಕವಾದ ಧಾರ್ಮಿಕತೆ ಮತ್ತು ಭಾಷೆ ಅಲೆಮಾರಿ ಲಂಬಾಣಿಗಳಲ್ಲಿವೆ'' ಎಂಬುದಾಗಿ ದುಬಾಯಿಸ್ ಅವರು ೧೭೯೨ - ೧೮೨೩ರ ಅವಧಿಯಲ್ಲಿ ದಕ್ಷಿಣ ಭಾರತದ ಲಂಬಾಣಿಗಳ ಬಗೆಗೆ ಬರೆದಿದ್ದಾರೆ (೧೯೩೬ : ೬೮-೬೯).

ಪ್ರಾಕೃತಿಕವಾಗಿ ಸಂಭವಿಸಬಹುದಾದ ಮಿಂಚು, ಗುಡುಗು, ಮಳೆ. ಬಿರುಗಾಳಿ, ದುರ್ದೈವದ ಬಗೆಗಿನ ಗಾಢ ಆತಂಕ, ವಿಪತ್ತು, ಸಾಂಕ್ರಾಮಿಕ ರೋಗರುಜಿನಗಳು ಮತ್ತು ಸಾವು ಮೊದಲಾದ ಭಯ ಹುಟ್ಟಿಸುವ ಪ್ರಕೃತಿಕ ದುರಂತಗಳು ನಿಸರ್ಗದ ಬಗೆಗಿನ ಲಂಬಾಣಿಗಳ ಪ್ರವೃತ್ತಿಯನ್ನು ವಿವರಿಸುತ್ತವೆ. ಅಂದಿನ ಅವರ ಜೀವನವು ಹೆಚ್ಚಾಗಿ ಬರಗಾಲ, ಸಾಂಕ್ರಾಮಿಕ ರೋಗಗಳು, ಮೊದಲಾದ ಅತಿಮಾನುಷ ಶಕ್ತಿಗಳಿಂದ ತುಂಬಿಹೋಗಿತ್ತು. ದುಷ್ಟಶಕ್ತಿಗಳ ಪರಿಚ್ಛೇದನೆಯನ್ನು ಸಂಪಾದಿಸಲು, ಅವುಗಳಿಂದ ರಕ್ಷಣೆ ಪಡೆಯಲು ಅವುಗಳನ್ನು, ಪೂಜಿಸಿ ಗೌರವಿಸಬೇಕು ಎಂಬುದೇ ಅವರ ನಿತ್ಯದ ಹವಣಿಕೆಯಾಗಿರುತ್ತಿತ್ತು. ಆದ ಕಾರಣ ಅವರಿಗೆ ಮಾಟ - ಮದ್ದು, ಮಂತ್ರ - ತಂತ್ರ ಮೊದಲಾದ ಧಾರ್ಮಿಕ ವಿಧಿಗಳ ಆಚರಣೆಗಳಲ್ಲಿ ಬಲವಾದ ನಂಬಿಕೆಯಿದ್ದಿತು. ಅವರು ಆಗಾಗ್ಗೆ ಅವುಗಳಿಗೆ ಮೊರೆ ಹೋಗುತ್ತಿದ್ದರು.

ಅಲೆಮಾರಿ ಲಂಬಾಣಿಗಳಲ್ಲಿ ಪ್ರಯಾಣಕ್ಕೆ ಹೊರಡುವ ಮುನ್ನ ಪಾಲಿಸುವ ಒಂದು ವಿಚಿತ್ರ ಸಂಪ್ರದಾಯವಿತ್ತು. ಇತರ ಜಾತಿಗೆ ಸೇರಿದ ಒಂದು ಮಗುವನ್ನು ಹಿಡಿದುತಂದು ಆತನನ್ನು ಏಕಾಂತದ ಸ್ಥಳದಲ್ಲಿ ಭುಜದವರೆಗೆ ನೆಲದಲ್ಲಿ ಹೂಳುತ್ತಿದ್ದರು. ಆತನ ಮೇಲೆ ಸರಕುಗಳನ್ನು ಹೊತ್ತ ತಮ್ಮ ಜಾನುವಾರುಗಳನ್ನು ಎಗರಿಸುತ್ತಿದ್ದರು. ಆ ವ್ಯಕ್ತಿಯನ್ನು ತುಳಿದುಕೊಲ್ಲುವ ಕೆಲಸ ಪಕ್ಕಾ ಆದ ನಂತರ ತಮ್ಮ ಪ್ರಯಾಣದ ಯಶಸ್ಸು ಹೆಚ್ಚಾಗುತ್ತದೆ ಎಂದು ಅವರು ನಂಬಿದ್ದರು (ದುಬಾಯಿಸ್, ೧೯೩೬ : ೬೧ ; ಥರ್ಸ್ಟನ್, ೧೯೦೯: ೨೧೪). ಲಂಬಾಣಿಗಳು ಮಾಟ ಮತ್ತು ಮಂತ್ರಗಳ ಪ್ರಭಾವಗಳಿಂದ ರೋಗಗಳನ್ನು ಗುಣಪಡಿಸಬಹುದೆಂದೂ ನಂಬಿದ್ದರು (ಥರ್ಸ್ಟನ್, ೧೯೦೯ : ೨೧೪). ತಾಂಡಗಳಲ್ಲಿ ಸಾಂಕ್ರಾಮಿಕ ರೋಗ ಆರಂಭವಾದರೆ ತಮ್ಮ ವಾಸಸ್ಥಾನವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸ್ಥಳಾಂತರ ಮಾಡುತ್ತಿದ್ದರು. ಸಾಂಕ್ರಾಮಿಕ ರೋಗಗಳನ್ನು ಹರಡುವ ದೇವತೆಗಳಿಗೆ ಪೂಜೆ ಸಲ್ಲಿಸಿ ಸಂತೃಪ್ತಿಗೊಳಿಸಲು ಮೇಕೆ ಅಥವಾ ಕೋಳಿಯನ್ನು ಬಲಿ ಕೊಡುತ್ತಿದ್ದರು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಾಸಸ್ಥಾನವನ್ನು ಬದಲಿಸುವುದಾದರೆ ಸಾಂಕ್ರಾಮಿಕ ರೋಗದ ಸಾವಿನಿಂದ ತಪ್ಪಿಸಿಕೊಳ್ಳಬಹುದು ಎಂದು ಭಾವಿಸುತ್ತಿದ್ದರು. ಹಳೆಯ ಹಾಗೂ ಹೊಸ ವಾಸಸ್ಥಾನದ ಸ್ಥಳಗಳ ಮಧ್ಯೆ ಕೋಳಿ ಅಥವಾ ಮೇಕೆಯನ್ನು ಸಜೀವವಾಗಿ ಅದರ ತಲೆಯವರೆಗೆ ನೆಲದಲ್ಲಿ ಹೂಳುತ್ತಿದ್ದರು. ಆನಂತರ ಎಲ್ಲ ಸರಕುಗಳನ್ನು ಹೊತ್ತ ಜಾನುವಾರುಗಳನ್ನು ಅದರ ಮೇಲೆ ಓಡಿಸುತ್ತಿದ್ದರು. ಅದನ್ನು ಸಮೂಹದ ಎಲ್ಲ ಜನರೂ ತುಳಿದುಕೊಂಡೇ ದಾಟುತ್ತಿದ್ದರು (ಇದೇ ಪುಸ್ತಕದ ಪುಟ ೨೨೮ ನೋಡಿರಿ).

ಲಂಬಾಣಿಗಳಲ್ಲಿದ್ದ ಮತ್ತೊಂದು ನಂಬಿಕೆ ಎಂದರೆ ಬಾವಿಗಳು ಹಾಗೂ ಬುಗ್ಗೆಗಳಿಂದ ತರಲಾರದ ನೀರನ್ನು ಕುಡಿಯಕೂಡದು ಎಂಬ ನಂಬಿಕೆ ಅವರಲ್ಲಿತ್ತು. ನದಿಗಳು ಮತ್ತು ಕೆರೆಗಳಿಂದ ನೀರು ತರುವುದು ನಿಷೇಧವಾಗಿತ್ತು. ಆದಕಾರಣ ಕೆಲವು ಸಂದರ್ಭಗಳಲ್ಲಿ ಅವರು ನದಿ ಅಥವಾ ಕೆರೆಯ ದಂಡೆಯ ಪಕ್ಕದಲ್ಲಿ ಗುಂಡಿಯನ್ನು ತೋಡಿ, ಅದರಲ್ಲಿ ಬಂದ ನೀರನ್ನು ಎತ್ತಿಕೊಂಡು ಕುಡಿಯಲು

ಬಳಸುತ್ತಿದ್ದರು (ದುಬಾಯಿಸ್, ೧೯೩೬ : ೭೨). ಈ ತೆರನಾದ ರೂಢಿಗೆ ಕಾರಣವೇನು ಎಂಬುದು ತಿಳಿದಿಲ್ಲ. ನದಿ ಅಥವಾ ಕೆರೆಗಳಂತಹ ದೊಡ್ಡ ಜಲದಲ್ಲಿ ದುಷ್ಟಶಕ್ತಿಗಳು ವಾಸಿಸುತ್ತವೆ ಎಂಬುದು ಲಂಬಾಣಿಗಳ ಭೀತಿಯಾಗಿತ್ತು ಎಂದು ಅಂದಾಜಿಸಬಹುದಾಗಿದೆ. ಅಲೆಮಾರಿ ಜೀವನದ ದಿನಗಳಲ್ಲಿ ನೆರಳಿನಿಂದ ಕೂಡಿದ (ಗಿಡಮರಗಳ ಗುಂಪು) ಮತ್ತು ಕುಡಿಯುವ ಸುರಕ್ಷಿತ ನೀರು ಸಿಗುವ ಸ್ಥಳಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿದ್ದರು. ನೀರನ್ನು ಒದಗಿಸುವವರನ್ನು ಅವರು ಗೌರವಾದರಗಳಿಂದ ಕಾಣುತ್ತಿದ್ದರು. ಒಂದು ವನವನ್ನು, ಒಂದು ಕಟ್ಟಡವಿರುವ ಬಾವಿಯನ್ನು ನಿರ್ಮಿಸಿದ ಧರ್ಮಿಟೋ ಬಾಬಾ ಎಂಬಾತನು ಮಾಡಿರುವ ದಾನ ಧರ್ಮದ ಕಾರ್ಯವನ್ನು ಒಂದು ಜನಪದ ಗೀತೆಯು ಪ್ರಶಂಸಿಸುತ್ತದೆ (ಗ್ಯಾರಿಯರ್‌ಸ್ಸನ್, ೧೯೬೮ : ೨೬೧).

ಮೋರ್ ಅವರು ("ಟಿಪ್ಪುಸುಲ್ತಾನನೆದುರು ಲಿಟಲ್‌ನ ನಿರ್ಲಿಪ್ತತೆ........ಕಥನ", ೧೯೭೪) ಎಂಬ ತಮ್ಮ ಕೃತಿಯಲ್ಲಿ ಹಲವಾರು ಗಂಟೆಗಳನ್ನು ತೂಗುಬಿಟ್ಟ ಒಂದು ಮರದ ಬಳಿ ತಾನು ಹೋದೆ ಎಂಬುದಾಗಿ ಮೋರ್ ಹೇಳುತ್ತಾರೆ. ಅದು ಓರ್ವ ಬಂಜಾರನ ಮೂಢನಂಬಿಕೆಯಾಗಿತ್ತು. ಆತನು ಆ ದಾರಿಯಲ್ಲಿ ಹಾದು ಹೋಗುವಾಗ ಒಂದು ಅಥವಾ ಅದಕ್ಕಿಂತ ಹೆಚ್ಚು ಗಂಟೆಗಳನ್ನು ತೂಗುಬಿಡುತ್ತಿದ್ದನಂತೆ. ಆತನು ಅಸ್ವಸ್ಥ ದನಗಳ ಕೊರಳುಗಳಿಂದ ಅವುಗಳನ್ನು ಬಿಚ್ಚಿ ತಂದು ಕಟ್ಟುತ್ತಿದ್ದನು. ಹಾಗೆ ಮಾಡುವುದರಿಂದ ದನಗಳಿಗೆ ಬರುವ ರೋಗಗಳು (ಅಸ್ವಸ್ಥತೆ) ತೊಲಗುತ್ತದೆ ಎಂಬ ನಂಬಿಕೆಯಿತ್ತು. ಗಂಟೆಗಳನ್ನು ಮರಕ್ಕೆ ತೂಗುಹಾಕುವುದರಿಂದ ದನಗಳ ರೋಗವನ್ನು ಮರಕ್ಕೆ ಕಟ್ಟುವುದು ಮಾಟವಾಗಿತ್ತು. ಆ ಗಂಟೆಗಳನ್ನು ಮುಟ್ಟುವವನಿಗೆ ಅವುಗಳನ್ನು ಸಮರ್ಪಿಸಲಾದ ದೇವತೆಗಳ ಕ್ರೋಧವು ತಟ್ಟುತ್ತದೆ. ಅಲ್ಲದೇ ಆ ಮರದಿಂದ ತೆಗೆದುಕೊಂಡ ಹೋದ ಗಂಟೆಯನ್ನು ದನದ ಕೊರಳಿಗೆ ಹಾಕಿದಾಗ ಅದೇ ತೆರನಾದ ರೋಗ ಬರುತ್ತದೆ ಎಂದು ನಂಬುತ್ತಿದ್ದರು (ಥರ್ಸ್ಟನ್ ಅವರು ತಮ್ಮ ಕೃತಿಯಲ್ಲಿ ಇದನ್ನು ಉಲ್ಲೇಖಿಸುತ್ತಾರೆ, ೧೯೦೯ : ೩೪೪).

ಲಂಬಾಣಿಗಳು ಅಲೆಮಾರಿ ಜೀವನದ ಸಂದರ್ಭದಲ್ಲಿ ಮತ್ತು ಒಂದೆಡೆ ನೆಲೆನಿಂತ ಮೇಲೂ ಕೆಲವು ಸಮಯದವರೆಗೆ ಮಾಟ ಮಂತ್ರ ವಿದ್ಯೆಯಲ್ಲಿ ನಂಬಿಕೆಯಿರಿಸಿದ್ದರು. ಕಾಡಿನಲ್ಲಿ ಮಾಟಗಳನ್ನು (ಧಾಕುನ್) ಮಾಡಲು ಬಲಿಯನ್ನು ನೀಡಲು ಪ್ರಾಣಿಗಳ ಹತ್ಯೆ ಮಾಡಲಾಗುತ್ತಿತ್ತು. ಮೈಸೂರು ವಿರುದ್ಧ ಬ್ರಿಟೀಷ್ ಯುದ್ಧಗಳ ಅವಧಿಯಲ್ಲಿ (೧೭೯೧ - ೧೭೯೯) ಲಂಬಾಣಿಗಳನ್ನು ತಿದ್ದಲು ಸೂಚಿಸಲಾಗಿದ್ದ ಬ್ರಿಟಿಷರ ಎರಡು ಷರತ್ತುಗಳನ್ನು ಲಂಬಾಣಿಗಳು ಆಕ್ಷೇಪಿಸಿದರು. ಅವೆಂದರೆ ನ್ಯಾಯಾಂಗ ಪ್ರಭುತ್ವದ ತೀರ್ಪು ಇಲ್ಲದೆ ಯಾವುದೇ ಮರಣದಂಡನೆಯನ್ನು ವಿಧಿಸಕೂಡದು ಹಾಗೂ ಅವರನ್ನು ದಂಡನೆಗೊಳಪಡಿಸಬೇಕು. 'ಮರಣದಂಡನೆ' ಮತ್ತು 'ಕೊಲೆ' ಎಂಬ ಪದಗಳನ್ನು ಮಾಟಕ್ಕಾಗಿ ಬಳಸಲಾಗಿತ್ತು. ದುಷ್ಟಶಕ್ತಿಗಳೊಡನೆ ಸಂವಹನ ಮಾಡಲು ಮಾಟವೇ ಶಕ್ತಿಯನ್ನು ನೀಡುತ್ತಿತ್ತು. ಮಗು ಅಸ್ವಸ್ಥಗೊಳ್ಳುವುದು ಅಥವಾ ಪತ್ನಿಯು ಮಾನಸಿಕ ವಿಕಾರಕ್ಕೀಡಾಗುವುದು ಮೊದಲಾದ ಯಾವುದೇ ತೊಂದರೆಗಳು ಉದ್ಭವಿಸಿದಾಗ ಮಾಟಗಾರನನ್ನು ಶೋಧಿಸಿ ಶಿಕ್ಷಿಸಲಾಗುತ್ತಿತ್ತು (ಥರ್ಸ್ಟನ್ ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ, ೧೯೦೯ : ೨೧೩). ಲಂಬಾಣಿಗಳಲ್ಲಿ ಸೌಲಭ್ಯಗಳಿಂದ ಕೂಡಿದ ವಿಶಾಲವಾದ ಕಾಯಂ ಮನೆಕಟ್ಟುವುದು ನಿಷಿದ್ಧವಾಗಿತ್ತು. ಇದು ಅವರ ಅಲೆಮಾರಿ ಜೀವನದೃಷ್ಟಿಗೆ ಹೊಂದಿಕೆಯಾಗುವಂತಹ ನಿಲುವಾಗಿತ್ತು. ಹಿಂದೆ ಯಾವುದೇ ವ್ಯಕ್ತಿಯ ಸಾವಿನ ನಂತರ ಆತನ ಗುಡಿಸಲನ್ನು ದೂಡಿಕೊಂಡು ಹೋಗುವ ಸಂಪ್ರದಾಯವಿತ್ತು. ಯಾರೂ ಆ ಗುಡಿಸಲನ್ನು ಬಾಗಿಲ ಮೂಲಕ ಪ್ರವೇಶಿಸುತ್ತಿರಲಿಲ್ಲ. ಆ ಮಾರ್ಗವಾಗಿ ದುಷ್ಟಶಕ್ತಿಯ ಪ್ರವೇಶಿಸಿ ಆತನನ್ನು ಕೊಂದಿರಬಹುದು ಎಂಬ ನಂಬಿಕೆಯಿತ್ತು (ಎಂಥೋವೆನ್, ೧೯೨೨ : ೩೩೪). ಪ್ರಯಾಣಕ್ಕೆ ಹೊರಟ ವ್ಯಕ್ತಿಯ ಬಲಪಕ್ಕದಲ್ಲಿ ನವಿಲು ಕೂಗಿದರೆ ಹಾಗೂ ಎಡಪಕ್ಕದಲ್ಲಿ ಗುಳ್ಳೆನರಿ ಅರಚಿಕೊಂಡರೆ ಅವುಗಳನ್ನು ಅಪಶಕುನ ಎಂದು ಭಾವಿಸಲಾಗುತ್ತಿತ್ತು (ಗ್ಯಾರಿಯರ್‌ಸನ್, ೧೯೬೮ : ೨೬೮).

ಈ ನಂಬಿಕೆಗಳು, ಸಂಪ್ರದಾಯ ಆಚರಣೆಗಳ ಅಂಟುಜಾಡ್ಯಗಳನ್ನು ನಿರ್ದೇಶಿಸುತ್ತವೆ. ಲಂಬಾಣಿಗಳು ಸಾಮಾನ್ಯ ನಿರಕ್ಷರತೆಯ ಹಿನ್ನೆಲೆಯಲ್ಲಿ ಬರ್ಬರ, ಅಪಾಯಕಾರಿ ತೊಂದರೆಗಳಿಂದ ತುಂಬಿದ ಜೀವನಕ್ಕೆ ಅರ್ಥನೀಡಿ ಅದನ್ನು ತಾಳಿಕೊಳ್ಳುವಲ್ಲಿ ಮಾಟದ ಪಾತ್ರ ಎಂತಹದಿತ್ತು ಎಂಬುದನ್ನು ನಾವು ಕಲ್ಪಿಸಿಕೊಳ್ಳಬಹುದಾಗಿದೆ. ಈ ನಂಬಿಕೆಗಳು ಮತ್ತು ಆಚರಣೆಗಳು ಅತಿಮಾನುಷ ಶಕ್ತಿಗಳ ಮೇಲೆ ನಿಯಂತ್ರಣವನ್ನು  ಸಾಧಿಸುವ ಲಂಬಾಣಿಗಳ ಪ್ರಯತ್ನಗಳಾಗಿದ್ದವು. ಅವುಗಳ ನೆರವಿನಿಂದ ಜೀವನೋಪಾಯವನ್ನು ಮಾಡಬೇಕು ಎಂದು ನಂಬಿದರು. ಅಸಮರ್ಪಕತೆಯ ಭಾವನೆಗಳು, ಆತಂಕಗಳಿಂದ ಹುಟ್ಟಿಕೊಂಡ ಬಿಕ್ಕಟ್ಟು, ಮಾನಸಿಕ ಕ್ಲೇಶಗಳನ್ನು ಮಾಟ ಮಂತ್ರದ ಆಚರಣೆ ಮತ್ತು ನಂಬಿಕೆಗಳು ಪರಿಹರಿಸುವಲ್ಲಿ ನೆರವಾಗಿರಬೇಕು. ಬಹುಕಾಲದಿಂದ ಒಂದೆಡೆ ನೆಲೆಗೊಂಡಿದ್ದು ಹಿಂದೂ ಧರ್ಮವನ್ನು ಹೋಲುವ ಸಂಘಟಿತ ನಿರ್ದಿಷ್ಟ ಧರ್ಮದ ಪರಿಕಲ್ಪನೆ ಇವರಲ್ಲಿ  ಇರಲಿಲ್ಲ. ಆದಕಾರಣ ಪ್ರಾಚೀನ ಕಾಲದ ಲಂಬಾಣಿಗಳು ಅತಿಮಾನುಷ ಶಕ್ತಿಗಳೊಡನೆ ಸಂಬಂಧಗಳನ್ನು ಸ್ಥಾಪಿಸಿಕೊಳ್ಳುವಲ್ಲಿ ಮಾಟ ಮಂತ್ರದ ಪ್ರಾಬಲ್ಯವಿದ್ದಿತು. ಲಂಬಾಣಿಗಳ ಧರ್ಮವು ಉಚ್ಚಮಟ್ಟದ ವೈಯಕ್ತಿಕ ಹಾಗೂ ಸಾಮಾಜಿಕ ಅನುಕೂಲವನ್ನು ಒಳಗೊಂಡಿರುವುದರೊಂದಿಗೆ ತುಲನೆ ಮಾಡಿ ನೋಡಿದರೆ ಸಹಜಸ್ವಭಾವಕ್ಕೆ ಅನುಗುಣವಾಗಿ ಅವರ ಮಾಟ-ಮಂತ್ರದ  ಆಚರಣೆಗಳು ವೈಯಕ್ತಿಕ ಅಥವಾ ಚಿಕ್ಕಪುಟ್ಟ ಸಾಮುದಾಯಿಕ ವಿಷಯಗಳನ್ನೊಳಗೊಂಡಿದ್ದವು (ನಾಂಡೆಲ್, ೧೯೭೦ : ೧೯೯).  ಸಣ್ಣ ಪ್ರಮಾಣದ ಸಂಚಾರಿ ಜೀವನ ಮತ್ತು ಅಡವಿಗಳಲ್ಲಿಯ ವಾಸ ಲಂಬಾಣಿಗಳಲ್ಲಿ ಅತಿಮಾನುಷಶಕ್ತಿಯ ಪರಿಕಲ್ಪನೆಯನ್ನು ರೂಪಿಸಿತ್ತು.

## ಒಂದೇ ಸ್ಥಳದಲ್ಲಿ ನೆಲೆನಿಂತ ನಂತರ ಲಂಬಾಣಿಗಳ ಧರ್ಮ ಮತ್ತು ನಂಬಿಕೆಗಳು

ಸಾಂಪ್ರದಾಯಿಕ ವೃತ್ತಿಯಾದ ಸರಕುಗಳ ಸಾಗಾಣಿಕೆ ಮಾಡುವುದನ್ನು ತೊರೆದು, ಒಂದೇ ಸ್ಥಳದಲ್ಲಿ ಕಾಯಂ ನಿವೇಶನಗಳಲ್ಲಿ ನೆಲೆನಿಂತರು. ಆ ನಂತರ, ಸ್ಥಳೀಯವಾಗಿ ಮುಂದುವರೆದ ಸಮುದಾಯಗಳೊಡನೆ ಸಂಪರ್ಕದ ವ್ಯಾಪ್ತಿ ಅಧಿಕವಾಯಿತು. ಇದರ ಪರಿಣಾಮವಾಗಿ ಲಂಬಾಣಿಗಳ ಧಾರ್ಮಿಕತೆ ಹಾಗೂ ನಂಬಿಕೆಯ ವ್ಯವಸ್ಥೆಗಳು ನೆರೆಹೊರೆಯ ಇತರ ಹಿಂದೂ ಜಾತಿಗಳ ಅನುಕರಣೆಗಳೊಂದಿಗೆ ಮಾರ್ಪಾಡುಗೊಂಡವು.

## ಲಂಬಾಣಿ ದೇವಾಲಯ

ಬಂಜಾರ ಜನರು ಮೂಲತಃ ರಜಪೂತ ಸಂತತಿಯರು. ಮೊಘಲರು ಚಿತ್ತೂರು ಕೋಟೆಯನ್ನು ವಶಪಡಿಸಿಕೊಂಡ ಮೇಲೆ ಅವರು ಅಲೆಮಾರಿಗಳಾದರು  ಎಂಬುದಾಗಿ ದಂತಕತೆಯಲ್ಲಿ ನಿರೂಪಿತವಾಗಿದೆ. ಅವರು ಈಗ ವೈಷ್ಣವವಾದದಲ್ಲಿ ವಿಶ್ವಾಸವಿರಿಸಿ ಹಿಂದೂ ಧರ್ಮಿಗಳಾಗಿದ್ದಾರೆ. ವಿಷ್ಣುವಿನ ಅವತಾರವಾದ ಕೃಷ್ಣನು ಅವರ ಆರಾಧ್ಯ ದೇವತೆ. ಕೃಷ್ಣನನ್ನು ಅವರು ಬಾಲಾಜಿ (ದೈವಕಿ ಮಗು - ಗೋಪಾಲ) ಎಂದೂ ಸಂಬೋಧಿಸುತ್ತಾರೆ. ದನಗಾಹಿ ಜನಗಳಾಗಿದ್ದ ಇವರ ಹಿಂದಿನ ಪರಂಪರೆಯ ಹಿನ್ನೆಲೆಯಲ್ಲಿ ಗೋಪಾಲನ ಆರಾಧನೆಯು ಅಗ್ರಮಾನ್ಯ ದೈವ ಪರಿಕಲ್ಪನೆಯ ಔಚಿತ್ಯಪೂರ್ಣವೆನಿಸುತ್ತದೆ. ಆದಕಾರಣ, ಲಂಬಾಣಿಗಳು ದಕ್ಷಿಣ ಭಾರತದಲ್ಲಿ ನೆಲೆನಿಂತ ನಂತರದಲ್ಲಿ ತಿರುಪತಿಯ ವೆಂಕಟರಮಣ ಸ್ವಾಮಿ (ವಿಷ್ಣುವಿನ ಸ್ಥಳೀಯ ಅವತಾರ)ಗೆ ಅತಿ ಹೆಚ್ಚಿನ ಗೌರವ ತೋರುತ್ತಿದ್ದಾರೆ. ಅವರು ಹಿಂದೂಗಳು ಆರಾಧಿಸುವ ಅನೇಕ ದೇವತೆಗಳನ್ನು, ಸ್ತ್ರೀ ದೇವತೆಗಳನ್ನು (ತುಳುಜಾಭವಾನಿ, ಅಂಬಾಭವಾನಿ, ಮಾರಿಯಮ್ಮ,  ಮತ್ತು

ಹಿಂಗಲಾಜ್ ಇತ್ಯಾದಿ) ಪೂಜಿಸುತ್ತಾರೆ. ಇತರ ದೇವತೆಗಳಾದ ಸೀತಾಲ, ಲಕದ್ಯಾ, ವ್ಯಾಘ್ರ್ಯಾ, ಮಹಾಸೋಬಾ, ಬಹಿರೋಬಾ ಮೊದಲಾದ ದೇವತೆಗಳನ್ನು ಪೂಜಿಸುತ್ತಾರೆ. ಬಾಲಾಜಿ ಮೂರ್ತಿಯು ನಾಲ್ಕು ತಲೆಗಳನ್ನುಳ್ಳ ಪುರುಷರೂಪದಲ್ಲಿದ್ದರೆ, ಭವಾನಿ ಮತ್ತು ಇತರ ದೇವತೆಗಳು ಸ್ತ್ರೀರೂಪದಲ್ಲಿವೆ. ಲಕದ್ಯಾ ಮತ್ತು ಸೀತಾಲ ದೇವತೆಗಳು ಒರಟುಕಲ್ಲುಗಳಾಗಿದ್ದು (ಯಾವುದೇ ರೂಪವಿರದೆ) ಕುಂಕುಮವನ್ನು ಲೇಪಿಸಲಾಗಿರುತ್ತದೆ. ಬಾಲಾಜಿ ಮೂರ್ತಿಯ ಇಕ್ಕೆಲೆಗಳಲ್ಲಿ ಬಿಳಿಯ ಧ್ವಜಗಳನ್ನು ಇರಿಸಲಾಗಿರುತ್ತದೆ. ಆಪತ್ತಿನ ಕಾಲದಲ್ಲಿ ಹರಕೆಗಳನ್ನು ಈಡೇರಿಸುವಾಗ ಈ ಧ್ವಜಗಳನ್ನು ತೆಗೆದು ಹಾಕಿ ಹೊಸ ಧ್ವಜಗಳನ್ನು ಇರಿಸಲಾಗುತ್ತದೆ. ಜೂನ್-ಜುಲೈನ ಜೇಷ್ಠ ಮಾಸದಲ್ಲಿ ಹುಣ್ಣಿಮೆಯ ದಿನ ಅಥವಾ ದೀಪಾವಳಿಯಲ್ಲಿ (ಅಕ್ಟೋಬರ್-ನವೆಂಬರ್ ತಿಂಗಳಲ್ಲಿ) ಈ ಧ್ವಜಗಳನ್ನು ಬದಲಿಸಲಾಗುತ್ತದೆ.

ಲಂಬಾಣಿಗಳು ಈ ಪ್ರದೇಶದಲ್ಲಿಯ ಲಿಂಗಾಯತರು ಜಾನುವಾರುಗಳನ್ನು (ವಿಶೇಷವಾಗಿ ಹಸು ಮತ್ತು ಹೋರಿ) ಪೂಜೆ ಮಾಡುವುದಕ್ಕಿಂತ ಭಿನ್ನವಾದ ರೀತಿಯಲ್ಲಿ ಕಾರ ಹುಣ್ಣಿಮೆ ಹಾಗೂ ದೀಪಾವಳಿಯ ಸಂದರ್ಭಗಳಲ್ಲಿ ಹೋರಿಗಳನ್ನು ಪೂಜಿಸುತ್ತಾರೆ.[೧೪] ಲಂಬಾಣಿಗಳು ಹಸುಗಳು ಮತ್ತು ಹೋರಿಗಳನ್ನು ಗೌರವಿಸಲು ಕಾರಣ ಅವರ ಆರಾಧ್ಯದೇವತೆ ಶ್ರೀಕೃಷ್ಣನು ಸ್ವತಃ ಗೋಪಾಲಕನಾದದ್ದು. ಇವರ ಪೂರ್ವಿಕರ ಜೀವನದಲ್ಲಿ ದನಕರುಗಳು ಜೀವನೋಪಾಯದ ಮೂಲಾಧಾರಗಳಾಗಿದ್ದವು. ಆಗ ಅವುಗಳು ಸರಕುಗಳ ಸಾಗಾಣಿಕೆಗೆ ನೆರವಾಗುತ್ತಿದ್ದರೆ. ಈಗ ಕೃಷಿ ಸಾಗುವಳಿಯಲ್ಲಿ ಭಾರ ಎಳೆಯಲು ನೆರವಾಗುತ್ತಿವೆ (ಥರ್ಸ್ಟನ್, ೧೯೦೯ : ೨೨೬ ; ಎಂಥೋವನ್, ೧೯೨೨ : ೩೪೧).

ಲಂಬಾಣಿಗಳು ಒಂದೆಡೆ ನೆಲೆನಿಂತ ನಂತರದಲ್ಲಿ ನಿಧಾನವಾಗಿ ವಿವಿಧ ಬದಲಾವಣಾ ಪ್ರಕ್ರಿಯೆಗಳ ಮೂಲಕ ಮೊದಲಿನ ಸರ್ವಚೇತನವಾದದಿಂದ ಹಿಂದೂ ಧರ್ಮದ ದೇವಾಲಯ ಹಾಗೂ ಧಾರ್ಮಿಕ ವಿಚಾರಗಳ ಹಂಚಿಕೆಯವರೆಗಿನ ಬದಲಾವಣೆ ಆಗಿದೆ.

ಲಂಬಾಣಿಗಳಿಗೆ ಸಂತರ ಬಗೆಗೆ ಅತಿ ಹೆಚ್ಚಿನ ಗೌರವಭಾವವಿದೆ. ಸಂತರು ದೇವರು ಮತ್ತು ಮಾನವರ ನಡುವಿನ ಮಧ್ಯವರ್ತಿಗಳು ಎಂಬುದಾಗಿ ಅವರು ಭಾವಿಸುತ್ತಾರೆ. ಲಂಬಾಣಿಗಳು ಅವರ ಅನುಗ್ರಹ, ಕೃಪೆ ಸಂಪಾದಿಸಲು ಏನೆಲ್ಲವನ್ನು ಮಾಡಲು ಸಿದ್ಧರಿದ್ದಾರೆ. ಪ್ರತಿಯೊಂದು ತಾಂಡದಲ್ಲಿ ಸಂತ ಸೇವಭಯನ ದೇವಾಲಯವನ್ನು ಕಟ್ಟಲಾಗಿರುತ್ತದೆ. ಸಂಪೂರ್ಣ ಶಾಖಾಹಾರಿ ಹಾಗೂ ಮದ್ಯವರ್ಜಕನಾಗಿದ್ದ ಸೇವಭಯನು ಸಂತನಾಗಿಯೇ ದೇಹ ಪರಿತ್ಯಾಗ ಮಾಡಿದನು. ವರ್ಷದ ಕೆಲಸದ ಶುಭ ಆರಂಭವೆಂದೇ ಪ್ರತಿವರ್ಷ ದಸರಾ ಹಬ್ಬದ ನಂತರ ಹಲವಾರು ಜನರು ಸಂತರ ಸಮಾಧಿಗಳ ದರ್ಶನಕ್ಕಾಗಿ ಹೋಗುತ್ತಾರೆ. ಅದೇ ರೀತಿ ಮಿಠ್ಠು ಭುಕ್ಯಾ (ನರಭಕ್ಷಕ ಮತ್ತು ಮದ್ಯಪಾನ) ಮತ್ತು ಶಾಖಾಹಾರದ ಹವ್ಯಾಸಗಳನ್ನುಳ್ಳ ಸಾಧು ಸಂತರು ಕೂಡ ಸಾಂಸ್ಕೃತಿಕ ನಾಯಕರಾಗಿದ್ದು, ಅವರ ಬಗೆಗೆ ಲಂಬಾಣಿಗಳಿಗೆ ಗೌರವ ಭಾವನೆ ಇದೆ. ಬೇಟೆಯ ಆರಂಭದಲ್ಲಿ ಮಿಠ್ಠು ಭುಕ್ಯಾನಿಗೆ ತೆಂಗಿನಕಾಯಿ ನೈವೇದ್ಯವನ್ನು ಮಾಡಿಸಲಾಗುತ್ತದೆ. ಹೀಗೆ ಮಾಡುವುದರಿಂದ ಬೇಟೆಯು ಯಶಸ್ವಿಯಾಗುತ್ತದೆ ಎಂಬ ನಂಬಿಕೆಯಿದೆ.

ಲಂಬಾಣಿಗಳು ಒಂದೆಡೆ ನೆಲೆನಿಂತ ನಂತರ ಮುಂದುವರೆದ ಸಮುದಾಯದ ಜನರೊಂದಿಗಿನ ಸಂಪರ್ಕಗಳು ಹೆಚ್ಚಾದವು. ಹಿಂದೂಗಳಲ್ಲಿರುವಂತೆ ಸರ್ವಶಕ್ತಿ ಮತ್ತು ಆದಿಶಕ್ತಿ ದೇವತೆಗಳು ಇವರಲ್ಲಿ ಯಾರು ಸರ್ವಶಕ್ತರು ಎಂಬ ಬಗೆಗೆ ವಿಭಜಿತ ವಿಭಿನ್ನ ಬಣಗಳು ತಮ್ಮಲ್ಲಿಲ್ಲ ಎಂದು ಲಂಬಾಣಿಗಳು ಹೇಳುತ್ತಾರೆ. ಲಂಬಾಣಿಗಳು ವಿಷ್ಣುವನ್ನು ತಮ್ಮ ಪರಮಪ್ರಧಾನ ದೇವತೆಯನ್ನಾಗಿ ಮನ್ನಿಸಿದರು. ಗೋಪಾಲಕನೆಂದು ತಾವು ಭಾವಿಸಿದ್ದ ಸೇವಭಯನನ್ನು ವಿಷ್ಣುವಿನ ಅವತಾರವೆಂದು ಭಾವಿಸಿ ಪೂಜಿಸತೊಡಗಿದ್ದಾರೆ.

---

೧೪. *ಹೋರಿಗಳು ಭೂಮಿಯ ಮೇಲೆ ಶಿವನ ವಾಹನ ನಂದಿಯ ಅವತಾರಗಳು ಎಂಬ ಕಾರಣದಿಂದ ಪ್ರಧಾನವಾಗಿ ಶಿವನ ಆರಾಧಿತರಾದ ಲಿಂಗಾಯತರು ಹೋರಿಗಳನ್ನು ಪೂಜಿಸುತ್ತಾರೆ.*

ಹಿಂದೂ ಮೇಲ್‌ಜಾತಿಗಳಿಂದ ಅನೇಕ ಧಾರ್ಮಿಕ ಆಚಾರ-ವಿಚಾರಗಳನ್ನು ಎರವಲು ಪಡೆದುಕೊಂಡರೂ, ಸಾಂಪ್ರದಾಯಿಕವಾದ ಪೂರ್ವಿಕರ ಪೂಜೆ ಮುಂದುವರೆಯಿತು. ವರ್ಷಕ್ಕೊಮ್ಮೆ ದಸರಾ ಹಬ್ಬದಂದು ಶುದ್ಧೀಕರಣದ ವಿಧಿ ಎಂದು ಮನೆಯನ್ನು ಸಗಣಿಯಿಂದ ಸಾರಿಸಿ, ಮೇಕೆ ಅಥವಾ ಕುರಿಯನ್ನು ಬಲಿ ನೀಡಿ ಪೂರ್ವಿಕರ ಸಂಕೇತ ಚಿನ್ನೆಗಳನ್ನು ಪೂಜಿಸುತ್ತಾರೆ. ಕುಟುಂಬದಲ್ಲಿ ಯಾರಾದರೂ ಅಸ್ವಸ್ಥತೆಯಿಂದ ಗುಣವುುಖರಾದಾಗಲೂ ಈ ಆಚರಣೆಯನ್ನು ವಾಡಲಾಗುತ್ತದೆ. ಪೂರ್ವಿಕರ ಚೇತನಗಳು ಅಸ್ವಸ್ಥತೆಯನ್ನುಂಟುಮಾಡುತ್ತವೆ ಎಂಬ ನಂಬಿಕೆಯಿರುವುದರಿಂದ ಅವುಗಳನ್ನು ಸಂತೃಪ್ತಿಗೊಳಿಸಲಾಗುತ್ತದೆ ಎಂದು ಕೆಲವು ಮಾಹಿತಿದಾರರು ಹೇಳುತ್ತಾರೆ.

ಲಂಬಾಣಿಗಳು ಹಿಂದೂ ಸಂತರಂತೆಯೇ ಕೆಲವು ಮುಸಲ್ಮಾನ್ ಸಂತರನ್ನೂ ಆರಾಧಿಸುತ್ತಾರೆ. ಮೊಹರಂ ಸಂದರ್ಭದಲ್ಲಿ ಲಂಬಾಣಿಗಳು ಹಸನ್ ಹಾಗೂ ಹುಸೇನ್‌ರ ಪಂಜಾಗಳನ್ನು ವಿಧಿವತ್ತಾಗಿ ಸ್ಥಾಪಿಸುತ್ತಾರೆ. ಮುಸಲ್ಮಾನ ಹಬ್ಬದ ಆಚರಣೆಯನ್ನು ಕುಟುಂಬದ ಮಟ್ಟದಲ್ಲಿ ಮಾಡಲಾಗುತ್ತದೆ. ಕೆಲವು ಹರಕೆಗಳನ್ನು ಈಡೇರಿಸಲು ಕೈಕೊಳ್ಳಲಾಗುವ 'ಸಂದಿಗ್ಧ' (ಟೆಟ್ಟೈವ್ ಬಳಸಿದ ಪರಿಭಾಷೆಯಲ್ಲಿ - ೧೯೬೮ : ೨೮೫) ವಿಧಿಯಾಗಿರುತ್ತದೆಯೇ ಹೊರತು ಒಟ್ಟಾರೆ ಸಮುದಾಯದ ಧಾರ್ಮಿಕ ಅವಿಭಾಜ್ಯ ಅಂಗವೆಂಬಂತೆ, ಆಚರಿಸುವ ಧಾರ್ಮಿಕ ಕಾರ್ಯವಾಗಿರುವುದಿಲ್ಲ.

ಹಿಂದೂ - ಮುಸಲ್ಮಾನ ಮತಬೇಧದ ಸೈದ್ಧಾಂತಿಕ ಸೂಕ್ಷ್ಮಾತಿಸೂಕ್ಷ್ಮಗಳ ಬಗೆಗೆ ಲಂಬಾಣಿಗಳು ತಲೆಕೆಡಿಸಿಕೊಳ್ಳದೆ ತಮಗೆ ಅಪೇಕ್ಷಿತ ಫಲವನ್ನು ನೀಡಬಲ್ಲ ಎಲ್ಲಾ ಧಾರ್ಮಿಕ ಆಚರಣೆಗಳನ್ನು ನೆರವೇರಿಸುತ್ತಾರೆ.

ಕೆಲವರು "ಮೂರೂವರೆ ದೇವತೆ (ಸಾಡೇ ತೀನ್ ದೇವಿ)"ಯನ್ನು ಕೂಡ ಪೂಜಿಸುತ್ತಾರೆ. ಆದರೆ ಅಂತಹ ದೇವತೆಯ ಹೆಸರನ್ನು ಬಯಲು ಮಾಡುವುದಿಲ್ಲ. ಕಾಲರಾ, ಪ್ಲೇಗ್, ಮುಂತಾದ ಸಾಂಕ್ರಾಮಿಕ ರೋಗಗಳು ಹರಡಿದಾಗ ಸೇವಭಯ, ದುರ್ಗಾ ಮತ್ತು ಮಾರಿ ದೇವತೆಗಳಿಗೆ ಬೆಣ್ಣೆ, ಮೊಸರು, ನೀರು, ಅನ್ನ ಮತ್ತು ಮೇಕೆ ಅಥವಾ ಕುರಿಮಾಂಸದ ನೈವೇದ್ಯ ನೀಡಿ ಸಂತೃಪ್ತಿಗೊಳಿಸಲಾಗುತ್ತದೆ.

ಲಂಬಾಣಿಗಳ ಧರ್ಮದ ಮೂಲಭೂತ ಪ್ರಯೋಜನಕಾರಿ ದೃಷ್ಟಿಯ ವಿಚಿತ್ರ ಕಲ್ಪನೆಯು ನಿಗೂಢವಾದ ಅಥವಾ ಅತಿಮಾನುಷ ಶಕ್ತಿಯೊಡನೆಯ ಯಾವುದೇ ಸಂಬಂಧವನ್ನು ಒಳಗೊಂಡಿರುವುದಿಲ್ಲ. ದಿನನಿತ್ಯದ ಜೀವನದ ಸಮಸ್ಯೆಗಳಿಗೆ ಅವರು ಧರ್ಮದಿಂದ ನಿರ್ದಿಷ್ಟ ಪರಿಹಾರಗಳನ್ನು ಹುಡುಕಲು ಪ್ರಯತ್ನಿಸುತ್ತಾರೆ. ತಾವು ಮಾಡುವ ತಪ್ಪು - ಪ್ರಮಾದಗಳಿಗೆ ಅಲೌಕಿಕ ಶಕ್ತಿಯಿಂದ ಶಿಕ್ಷೆಯಾಗುತ್ತದೆ ಎಂಬುದನ್ನು ಅವರು ಬಲ್ಲರು. ಅದೇ ರೀತಿಯಾಗಿ, ತಾವು ಯಾವ ತೆರನಾಗಿ ವರ್ತಿಸಿದರೆ ಅವುಗಳಿಂದ ರಕ್ಷಣೆಯಾಗುತ್ತದೆ ಎಂಬುದನ್ನೂ ಅವರು ಅರಿತಿದ್ದಾರೆ. ದೀಪದ ಬತ್ತಿ ಉರಿಸುವುದು, ಧೂಪ ಹಾಕುವುದು, ಪ್ರಾರ್ಥನೆ ಮಾಡುವುದು ಅಥವಾ ಧಾರ್ಮಿಕ ಕ್ರಿಯಾ ವಿಧಿಬದ್ಧವಾಗಿ ವರ್ತನೆಮಾಡುವುದು ಮೊದಲಾದವುಗಳಿಂದ ಅಲೌಕಿಕ ಶಕ್ತಿಗಳನ್ನು ಸಂತೃಪ್ತಗೊಳಿಸಿ ಅವುಗಳಿಂದ ರಕ್ಷಣೆ ಪಡೆಯಬಹುದೆಂದು ಅವರು ಭಾವಿಸುತ್ತಾರೆ.

### ಧಾರ್ಮಿಕ ಪರಿಣಿತರು

ಲಂಬಾಣಿಗಳು ಅಲೆಮಾರಿ ವ್ಯಾಪಾರಿ ಗುಂಪುಗಳಾದ ಗೋಸಾಯಿ ಮತ್ತು ಕಂಜರ್ ಭಟ್ ಜನರನ್ನು ತಮ್ಮ ಪುರೋಹಿತರು ಮತ್ತು ಗುರುಗಳು ಎಂದು ಮನ್ನಿಸುತ್ತಾರೆ. ಈ ಪ್ರದೇಶದ 'ಹೆಳವರು' ಶಿವಾಚಾರ ಜನರಿಗೆ ಹೇಗೋ ಹಾಗೆಯೇ ಸುರಿ ಅಥವಾ ಧಾದಿ

(ಮುಸಲ್ಮಾನರಾಗಿ ಮತಾಂತರಗೊಂಡ ಲಂಬಾಣಿಗಳು) ಅವರ ವಂಶ ಪರಂಪರೆಗಳ ಲಿಪಿಕಾರರಾಗಿ ಕಾರ್ಯ ಮಾಡುತ್ತಾರೆ (ಬ್ರಿಗ್ಸ್, ೧೮೮೯ : ೧೭೩ ; ಥರ್ಸ್ಟನ್, ೧೯೦೯ : ೨೨೭). ಆದರೆ ೧೯ನೆಯ ಶತಮಾನದ ನಂತರ ಗೋಸಾಯಿ ಮತ್ತು ಕಂಜರ್ ಭಟ್ ಧಾರ್ಮಿಕ ಪರಿಣಿತತೆಯಿಂದ ಅಗತ್ಯ ಜೀವನ ಅವಶ್ಯಕತೆಗಳನ್ನು ಸಂಪಾದಿಸಲು ಸಾಧ್ಯವಾಗದೆ ಇದ್ದುದರಿಂದ ಲಂಬಾಣಿಗಳಿಗೆ ತಮ್ಮ ಸೇವೆಯನ್ನು ಒದಗಿಸುವುದನ್ನು ಸ್ಥಗಿತಗೊಳಿಸಿದರು. ಅವರು ಕಾಲಾನುಕ್ರಮದಲ್ಲಿ ಕೃಷಿ ಸಾಗುವಳಿಗೆ ಹೊಂದಿಕೊಂಡರು. ಈ ಪ್ರದೇಶದಲ್ಲಿ ವೀರಶೈವರು, ಬ್ರಾಹ್ಮಣರ ಪುರೋಹಿತರ ಸೇವೆಯನ್ನು ಬಳಸಿಕೊಳ್ಳುವಂತೆ, ಲಂಬಾಣಿಗಳು ಬ್ರಾಹ್ಮಣಕ ಸೇವೆ ಪಡೆಯುತ್ತಿರಲಿಲ್ಲ (ಕ್ಯಾಂಪ್‌ಬೆಲ್, ೧೮೮೩ : ೩೩೯; ೧೮೮೪ ಎ, ೧೮೮೪ ಬಿ :೨೦೭).

ಲಂಬಾಣಿಗಳಿಗೆ ಧಾರ್ಮಿಕ ಸೇವೆ ಒದಗಿಸುತ್ತಿದ್ದ ಗೋಸಾಯಿ ಮತ್ತು ಕಂಜರ್‌ಭಟ್ ಒಂದೆಡೆ ನೆಲೆನಿಂತ ಜೀವನಕ್ಕೆ ಹೊಂದಿಕೊಂಡರು. ನಂತರ ಈ ವೃತ್ತಿಯನ್ನು ತೊರೆದ ಮೇಲೆ ಪ್ರತಿ ತಾಂಡಕ್ಕೆ ಅವರಲ್ಲಿ ಒಬ್ಬನಂತೆ ನಿಗದಿತ ವಾರ್ಷಿಕ ಸಂಭಾವನೆಯ ಆಧಾರದ ಮೇಲೆ ಪುರೋಹಿತ್ಯಕ್ಕಾಗಿ ನೇಮಿಸಿಕೊಳ್ಳಲಾಯಿತು. ಈ ಪೂಜಾರಿಗಳು ಸೇವಾಭಯ ದೇವಾಲಯಗಳಲ್ಲಿ ಪೂಜೆ ಪುನಸ್ಕಾರಗಳು, ಧಾರ್ಮಿಕ ಕ್ರಿಯಾವಿಧಿಗಳನ್ನು ನಡೆಸುತ್ತಿದ್ದಾರೆ. ಅಲ್ಲದೆ ಧಾರ್ಮಿಕ ಚೇತನಗಳ ಮಧ್ಯವರ್ತಿಗಳಾಗಿ ಕಾರ್ಯ ಮಾಡಬಲ್ಲವರಾಗಿರುತ್ತಾರೆ. ಭಾರತದಲ್ಲಿ ಮಾಟಗಾರರಲ್ಲಿ ಎರಡು ವಿಧಗಳಿವೆ : ಒಳ್ಳೆಯ ಮತ್ತು ಕೆಟ್ಟ. ಈ ಇಬ್ಬರನ್ನು ಜನರು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಅವಲಂಬಿಸುತ್ತಾರೆ (ನಂಜುಂಡಯ್ಯ ಮತ್ತು ಐಯ್ಯರ್, ೧೯೨೮ : ೧೮೦).

## ನಂಬಿಕೆಗಳು

ಪೂರ್ವಿಕರ, ಪ್ರಾಕೃತಿಕ ಚೇತನದಲ್ಲಿ, ಶುಭ ಹಾಗೂ ಅಶುಭ ಶಕುನಗಳಲ್ಲಿ ಹಿಂದಿನ ನಂಬಿಕೆಗಳು ಇನ್ನೂ ಉಳಿದುಕೊಂಡಿವೆಯಾದರೂ ಬದಲಾದ ಜೀವನ ಶೈಲಿಯ ರೀತಿ ನೀತಿಗಳಿಗನುಗುಣವಾಗಿ ಮಾರ್ಪಾಡುಗೊಂಡಿವೆ. ಮೊದಲು ಪ್ರಚಲಿತವಿದ್ದ ಮಾಟ ಮಂತ್ರ ಆಚರಣೆಗಳಿಂದ ನರ ಬಲಿನೀಡಿಕೆ, ಬುಗ್ಗೆಯ ನೀರು ಕುಡಿಯಬಾರದು ಹಾಗೂ ಕಾಯಂ (ಪಕ್ಕ ಮನೆ) ನಿವೇಶನಗಳು ಇರಕೂಡದೆಂಬ ನಿಷಿದ್ಧಗಳು, ಮಂತ್ರ ಮಾಟದ ಆಚರಣೆಗಳು, ಅವರ ಹಿಂದಿನ ಧಾರ್ಮಿಕ ನಂಬಿಕೆ ವ್ಯವಸ್ಥೆ ಇಂದು ಕಾಣೆಯಾಗಿವೆ. ವೃತ್ತಿಯಲ್ಲಿನ ಬದಲಾವಣೆಗಳು ಹಾಗೂ ಅಲೆಮಾರಿ ಜೀವನಶೈಲಿಯ ತ್ಯಜಿಸುವಿಕೆಯಿಂದ ಇವೆಲ್ಲವುಗಳು ಸಾಧ್ಯವಾಗಿವೆ. ಹಾಗೆಯೇ ಇತರೆ ಹಿಂದೂ ಜಾತಿಗಳ ಸಂಪರ್ಕಗಳಿಂದ, ಅನುಕರಣೆಗಳಿಂದ ಹೊಸ ಧಾರ್ಮಿಕ ವಿಚಾರಗಳು, ನಂಬಿಕೆಗಳು ಮತ್ತು ಆಚರಣೆಗಳು ಅವರ ಜೀವನ ಕ್ರಮದಲ್ಲಿ ಸೇರಿಕೊಂಡಿವೆ. ಉದಾಹರಣೆಗೆ, ಜೈಲಿನಲ್ಲಿರುವ ವ್ಯಕ್ತಿಗೆ ಶಿಕ್ಷೆಯಲ್ಲಿ ವಿನಾಯತಿ ದೊರೆತು ಮರಳಿಬಂದಾಗ ಅಥವಾ ಜಾತಿಯಿಂದ ಹೊರ ಹಾಕಿದವನನ್ನು ಪುನಃ ಜಾತಿಯಲ್ಲಿ ಸೇರ್ಪಡಿಸಿಕೊಂಡಾಗ, ಆ ವ್ಯಕ್ತಿಯು ಸಮುದಾಯಕ್ಕೆ ಮೇಕೆಯ ಮಾಂಸದ ಔತಣವನ್ನು ನೀಡಬೇಕು. ಪರಿಶುದ್ಧತೆಯ ಸಂಕೇತವಾಗಿ ಆತನ ನಾಲಿಗೆಯನ್ನು ಚಿನ್ನದ ತಂತಿಯಿಂದ ಸ್ವಲ್ಪ ಸುಡಲಾಗುತ್ತದೆ.

ಲಂಬಾಣಿ ಮಹಿಳೆಯರು ಆಗಾಗ್ಗೆ ಭೂತ ಪ್ರೇತಗಳಿಂದ ಬಾಧೆಗೀಡಾಗುತ್ತಾರೆ. ಹಾಗೆ ಪೀಡಿತರಾದಾಗ ಅವರ ಎದುರಿನಲ್ಲಿ ಧೂಪದ ಹೊಗೆ ಹಾಕಿ ಅವರನ್ನು ಪೀಡಿಸುತ್ತಿರುವ ಭೂತದ ಹೆಸರನ್ನು ಹಾಗೂ ಅದು ಏನನ್ನು ಬಯಸುತ್ತದೆ ಎಂಬುದನ್ನು ಪ್ರಶ್ನಿಸಲಾಗುತ್ತದೆ.

ಭೂತವು ಮಾತನಾಡಲು ನಿರಾಕರಿಸಿದರೆ ದೆವ್ವ ಬಿಡಿಸುವ ಮಾಂತ್ರಿಕನನ್ನು ಕರೆಯಿಸಿ ಅದನ್ನು ಓಡಿಸುವ ಪ್ರಯತ್ನ ಮಾಡಲಾಗುತ್ತದೆ. ಅಕಾಲಿಕವಾಗಿ ತೀರಿಹೋದವರು, ಜಿಪುಣರು, ಚಿಕ್ಕ ಮಕ್ಕಳನ್ನು ಬಿಟ್ಟು ಸತ್ತು ಹೋದ ಮಹಿಳೆಯರು, ಸಾಲಗಾರರು ಸತ್ತು ಹೋದರೆ ಪ್ರೇತಗಳಾಗಿ ಜೀವಂತವಾಗಿರುವವರನ್ನು ಪೀಡಿಸುತ್ತವೆ ಎಂದು ಲಂಬಾಣಿಗಳು ಭಾವಿಸುತ್ತಾರೆ. ಇತರ ಹಿಂದೂಗಳಂತೆ ಲಂಬಾಣಿಗಳು ಕೂಡ ಜ್ಯೋತಿಷ ಶಾಸ್ತ್ರವನ್ನು ನಂಬುತ್ತಾರೆ. ಧಾರ್ಮಿಕ ಸಮಾರಂಭಗಳನ್ನು ಆಚರಿಸಲು, ಹೊಸ ಉದ್ಯಮ-ವ್ಯವಹಾರಗಳನ್ನು ಕೈಗೊಳ್ಳಲು ಶುಭದಿನ, ಒಳ್ಳೆಯ ಮುಹೂರ್ತಗಳಿಗಾಗಿ ಇತ್ತೀಚೆಗೆ ಬ್ರಾಹ್ಮಣ ಜ್ಯೋತಿಷಿಗಳ ಮಾರ್ಗದರ್ಶನ ಪಡೆಯುತ್ತಾರೆ. ಸಾವಿನ ನಂತರದಲ್ಲಿ ಆತ್ಮದ ದೇಹಾಂತರ ಪ್ರವೇಶದಲ್ಲಿ ನಂಬಿಕೆಯಿರಿಸಿದ್ದಾರೆ. ಸಾವಿನ ನಂತರ ಒಳ್ಳೆಯ ವ್ಯಕ್ತಿಯು ಸ್ವರ್ಗಕ್ಕೆ ಹೋಗುತ್ತಾನೆಂದೂ, ದೇವರು ಬಯಸುವುದಾದರೆ ಪುನಃ (ಪುನರ್‌ಜನ್ಮದ ಬಗ್ಗೆ) ಜನಿಸುತ್ತಾನೆಂದೂ ಹೇಳುತ್ತಾರೆ.

## ಇತ್ತೀಚಿನ ಬದಲಾವಣೆಗಳು ಮತ್ತು ಇಂದಿನ ಧಾರ್ಮಿಕತೆ ಹಾಗೂ ನಂಬಿಕೆಗಳು

ಅಧ್ಯಯನವನ್ನು ಕೈಗೊಂಡ ಎರಡು ತಾಂಡಗಳಲ್ಲಿ ಸಂಶೋಧನೆಯ ಕಾಲಕ್ಕೆ ಕಂಡುಬಂದ ಧಾರ್ಮಿಕ ಆಚರಣೆ, ಸಂಘಟನೆ ಹಾಗೂ ನಂಬಿಕೆ ವ್ಯವಸ್ಥೆಗಳನ್ನು ಹಾಗೂ ಅವುಗಳ ಬದಲಾವಣೆಗೆ ಪೂರಕವಾದ ಕಾರ್ಯ-ಕಾರಣಗಳನ್ನು ಮುಂದೆ ವಿವರಿಸಲಾಗಿದೆ. ಲಂಬಾಣಿಗಳು ಒಂದೆಡೆ ನೆಲೆ ನಿಲ್ಲುವವರೆಗಿನ ಜೀವನದಲ್ಲಿ ಸರ್ವಚೇತನವಾದವು ಅವರ ಧರ್ಮದ ಮೂಲ ತಿರುಳಾಗಿತ್ತು. ಅದಾದನಂತರ ಮುಂದುವರೆದ ಹಿಂದೂ ಹಾಗೂ ಮುಸ್ಲಿಮ್ ಜೀವನಶೈಲಿಯ ರೀತಿ ನೀತಿಗಳೊಂದಿಗೆ ಸಂಪರ್ಕ ಉಂಟಾಗಿ ಬದಲಾವಣೆಗಳಾಗುತ್ತ ಬಂದಿವೆ. ಕೆಲವೊಂದು ಸಮ್ಮಿಶ್ರ ರೀತಿ ನೀತಿಗಳು ಲಂಬಾಣಿಗಳಿಗೆ ಸ್ವಯಂವ್ಯಕ್ತವಾಗುತ್ತಿವೆ. ಇನ್ನುಳಿದವುಗಳು ತಮ್ಮ ಮೂಲದ ಬಗೆಗಿನ ಕಲ್ಪನೆಗಳನ್ನು ಮಸುಕುಗೊಳಿಸಿವೆ ಅಥವಾ ಸ್ಥಳೀಯ ಅಂಶಗಳೊಂದಿಗೆ ಅಂತರ್ಗತಗೊಂಡಿವೆ.

## ಆಚರಣೆಗಳು ಮತ್ತು ಸಮಾರಂಭಗಳು

ಲಂಬಾಣಿಗಳು ಹಬ್ಬ, ಉತ್ಸವ ಮತ್ತು ಧಾರ್ಮಿಕ ಆಚರಣೆಗಳಿಗಾಗಿ ಹಿಂದೂ ಕ್ಯಾಲೆಂಡರನ್ನು ಅನುಸರಿಸುತ್ತಾರೆ. ಹಿಂದೂಗಳಲ್ಲಿಯೇ ಒಂದು ಜಾತಿ ಎಂಬುದಾಗಿ ಅವರು ಪರಿಗಣಿಸಲ್ಪಟ್ಟಿದ್ದಾರೆ. ಸಾಂಪ್ರದಾಯಿಕವಾಗಿ ಅವರು ಆಚರಿಸುತ್ತ ಬಂದಿರುವ ಹಬ್ಬಗಳು, ಉತ್ಸವಗಳು ಈ ರೀತಿಯಾಗಿವೆ : ಹಿಂದೂ ಹೊಸ ವರ್ಷದ ದಿನ (ಯುಗಾದಿ), ದಸರಾ, ದೀಪಾವಳಿ ಮತ್ತು ಹೋಳಿ ಹಬ್ಬ. ಈ ಉತ್ಸವಗಳಲ್ಲಿ ಅವರು ತಮ್ಮ ಸಮುದಾಯದ ದೇವತೆಗಳು, ಕುಲದೇವತೆ ಹಾಗೂ ಪೂರ್ವಿಕರುಗಳಿಗೆ ಪಕ್ವಾನ್ನಗಳ ನೈವೇದ್ಯ ನೀಡಿ ಪೂಜಿಸುತ್ತಾರೆ. ಈ ಎಲ್ಲ ಹಬ್ಬಗಳ ಕೊನೆಯ ದಿನದಂದು ಮೇಕೆ ಅಥವಾ ಕುರಿಗಳನ್ನು ಬಲಿಕೊಟ್ಟು ಬೇಯಿಸಿದ ಮಾಂಸವನ್ನು ಎಡೆ ಕೊಡುತ್ತಾರೆ. ಸಮುದಾಯದ ಈ ಸಂಘಟಿತ ಕಾರ್ಯದಲ್ಲಿ ಬಲಿಪ್ರಾಣಿಗಳ ಖರೀದಿಗೆ ಹಣ ಸಂಗ್ರಹಿಸುವಲ್ಲಿ ಹಾಗೂ ಮಾಂಸವನ್ನು ಹಂಚುವ ಕೆಲಸದಲ್ಲಿ ಸಂಪ್ರದಾಯಿಕ, ಪಂಚಾಯಿತಿಯು ಸಕ್ರಿಯ ಪಾತ್ರವಹಿಸುತ್ತದೆ.

ಗೌರಿ ಹಬ್ಬವು ಅತ್ಯಂತ ಮಹತ್ವದ ಆಚರಣೆಯಾಗಿದ್ದು ೪-೫ ವರ್ಷಗಳಿಗೊಮ್ಮೆ ಹತ್ತುದಿನಗಳ ಕಾಲ ವಿಜೃಂಭಣೆಯಿಂದ ಆಚರಿಸಲ್ಪಡುತ್ತದೆ. ಚೈತ್ರ ಮಾಸದ (ಮಾರ್ಚ್-ಏಪ್ರಿಲ್) ಮೊದಲ ಅರ್ಧಭಾಗದಲ್ಲಿ ಭಾದ್ರಪದದಿಂದ ದಶಮಿಯವರೆಗೆ ಈ

ಆಚರಣೆ ನಡೆಯುತ್ತದೆ. ೧೯೯೯ರಲ್ಲಿ ಮರಿಯಮ್ಮನಹಳ್ಳಿ ತಾಂಡದಲ್ಲಿ ಗೌರಿ ಹಬ್ಬದ ಆಚರಣೆಯಲ್ಲಿ ಕ್ಯಾಲೆಂಡರ್‌ಗಿಂತ ಭಿನ್ನವಾದ ರೀತಿಯಲ್ಲಿ ಎಂದರೆ ಚತುರ್ಥಿಯಿಂದ ತ್ರಯೋದಶಿಯವರಿಗೆ ಹಬ್ಬವನ್ನು ಆಚರಿಸಲಾಯಿತು. ತಾಂಡದಲ್ಲಿ ಸಂಭವಿಸಿದ ಒಂದು ಸಾವಿನಿಂದಾಗಿ (ಸೂತಕ ೧೩ ದಿನಗಳ ಅವಧಿ ಇದ್ದುದರಿಂದ) ಹಬ್ಬವನ್ನು ಮುಂದೂಡಬೇಕಾಯಿತು. ಉತ್ಸವದ ಆಚರಣೆಯಲ್ಲಿ ಮಾಡಲಾದ ಈ ಬದಲಾವಣೆ ಎರಡು ಮಹತ್ವದ ಅಂಶಗಳನ್ನು ಒಳಗೊಂಡಿದೆ. ಗೌರಿ ಹಬ್ಬದ ಆಚರಣೆಗೆ ಶುದ್ಧೀಕರಣದ ಕರ್ಮಾಚರಣೆಗಳು ಅಗತ್ಯ ಎಂಬುದು ಒಂದು ಅಂಶವಾದರೆ, ಸಾವಿನಿಂದ ನೊಂದ ಕುಟುಂಬದ ಬಗೆಗೆ ಸಮುದಾಯವು ತೋರಿದ ಸಹಾನುಭೂತಿ, ಅನುಕಂಪ ಹಾಗೂ ಸಾಮುದಾಯಿಕ ಏಕತೆಯ ಇನ್ನೊಂದು ಅಂಶವಾಗಿದೆ. ಲಂಬಾಣಿಗಳಲ್ಲಿ 'ಮಡಿ' ಮತ್ತು ಮೈಲಿಗೆಯ ಕಲ್ಪನೆಗಳೂ ಎಷ್ಟು ಪ್ರಾಧಾನ ಪಾತ್ರವನ್ನು ವಹಿಸುತ್ತವೆ ಎಂಬುದಕ್ಕೆ ಇದೊಂದು ನಿದರ್ಶನ.

ಈ ಆಚರಣೆಗೆ ಬಹಳಷ್ಟು ಸಂಘಟನಾತ್ಮಕ ಕಾರ್ಯದ ಅವಶ್ಯಕತೆಯಿದೆ. ಪೂಜಾ ವಿಧಿವಿಧಾನಗಳ ನಿರ್ವಹಣೆ, ಅಗತ್ಯ ವಸ್ತುಗಳಿಗೆ ಹಣದ ಸಂಗ್ರಹಣೆ, ಪಾಲುಗೊಳ್ಳುವ ಅತಿಥಿಗಳಿಗೆ, ಭಕ್ತಾದಿಗಳಿಗೆ ಕೊನೆಯ ಎರಡು ದಿನಗಳ ಕಾಲ ಪ್ರಸಾದದ ವ್ಯವಸ್ಥೆ, ತಾಂಡದಲ್ಲಿಯ ದೇವಾಲಯಗಳಿಗೆಲ್ಲ ಸುಣ್ಣ ಬಣ್ಣದ ವ್ಯವಸ್ಥೆ ಇತ್ಯಾದಿ. ಇಂದ್ರಿಯ ನಿಗ್ರಹ ಮತ್ತು ಕರ್ಮಾಚರಣೆಗಳ ಪರಿಶುದ್ಧತೆಯನ್ನು ಉತ್ಸವದ ಅವಧಿಯುದ್ದಕೂ ಪ್ರತಿಯೊಬ್ಬ ವ್ಯಕ್ತಿ ಕಟ್ಟುನಿಟ್ಟಾಗಿ ಪಾಲಿಸಬೇಕು. ಆಶ್ರಯಿಸಿದ ಸಂತರ ಎದುರಿನಲ್ಲಿ ಗೋಧಿಯ ಸಸಿಗಳನ್ನು ಬೆಳೆಸಬೇಕು. ದೀಪದ ಬತ್ತಿಗಳು (ನಂದಾದೀಪ) ಉತ್ಸವದ ಕೊನೆಯವರೆಗೂ ನಿರಂತರವಾಗಿ ಉರಿಯುತ್ತಲೇ ಇರಬೇಕು. ಪ್ರೌಢಾವಸ್ಥೆ ತಲುಪಿರದ ಐದು ಬಾಲಕರು ಹಾಗೂ ಹತ್ತು ಬಾಲಕಿಯರು ಗೋಧಿ ಸಸಿಗಳನ್ನು ಬೆಳೆಸಿದ ೧೦ ಬುಟ್ಟಿಗಳನ್ನು (ಗೌರಿ ಎಂದು ಕರೆಯಲಾಗುವ) ಹಿಡಿದುಕೊಂಡು ಭಕ್ತಿ ಭಾವದಿಂದ ಪ್ರಾರ್ಥಿಸುವವರು. ಈ ಸ್ಥಾನಗಳಿಗೆ ಆಯ್ಕೆಗೊಳ್ಳಬೇಕೆಂದು ಎಲ್ಲ ಬಾಲಕ ಬಾಲಿಕೆಯರು ಹಂಬಲಿಸುತ್ತಾರೆ. ಆಯ್ಕೆಗೊಂಡವರು ಸುದೈವಿಗಳು ಹಾಗೂ ಪುಣ್ಯವಂತರು ಎಂದು ಭಾವಿಸಲಾಗುತ್ತದೆ. ಆದ ಕಾರಣ, ತಾಂಡದೊಳಗಿನ ಎಲ್ಲ ಮನೆತನಗಳ ಹಾಗೂ ಗೋತ್ರಗಳ ಬಾಲಕ ಬಾಲಕಿಯರಿಗೆ ಅವಕಾಶಗಳು ಸಿಕ್ಕಲಿ ಎಂಬ ಉದ್ದೇಶದಿಂದ ಆಯ್ಕೆಯಲ್ಲಿ ಪ್ರಾತಿನಿಧ್ಯವನ್ನು ನೀಡಲಾಗುತ್ತದೆ. ಧಾರ್ಮಿಕ ವಿಧಿವಿಧಾನಗಳ ಪಾತ್ರಗಳನ್ನು ನಿರ್ವಹಿಸುವುದರೊಂದಿಗೆ ವಿವಿಧ ರಕ್ತಸಂಬಂಧಿ ಗುಂಪುಗಳು ಸ್ವೀಕರಿಸುವ ಬಹುಮಾನಗಳ ಮೂಲಕ ತಾಂಡದ ಸಮುದಾಯಿಕ ಏಕತೆಯ ಭಾವನೆಯನ್ನು ಗಟ್ಟಿಗೊಳಿಸಲು ಅವಕಾಶವಾಗುತ್ತದೆ. ಈ ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ಜಾತಿ ಪಂಚಾಯಿತಿ ಸಭೆಯಲ್ಲಿ ಎಲ್ಲ ಮನೆತನಗಳಿಗೂ ಪ್ರಾತಿನಿಧ್ಯ ನೀಡುವ ಅವಶ್ಯಕತೆಯನ್ನು ಪರಿಗಣಿಸಲಾಗಿದೆ ಎಂಬುದು ಗಮನಾರ್ಹವಾಗಿದೆ.

ಗೋಧಿ ಸಸಿಗಳನ್ನು ಬೆಳೆಸುವಲ್ಲಿ ತೋರುವ ವಿಶೇಷ ಕಾಳಜಿ ಮತ್ತು ಕೌಶಲಗಳು ಲಂಬಾಣಿಗಳ ಸಾಂಪ್ರದಾಯಿಕ ಕೃಷಿ ತಂತ್ರಗಳ ಆಚರಣೆಗಳ ಬಗೆಗೆ ಗಾಢವಾದ ಪರಿಜ್ಞಾನವನ್ನು ನಿದರ್ಶಿಸುತ್ತದೆ. ಈ ಅಪರೂಪದ ವಿಧಿ ವಿಧಾನಬದ್ಧ ಉತ್ಸವದ ಆಚರಣೆಗೆ ಕಾರಣ ಸಮುದಾಯಕ್ಕೆ ಎದುರಾಗುವ ವಿಪತ್ತುಗಳು, ತಮ್ಮನ್ನು, ತಮ್ಮ ದನಕರುಗಳು ಹಾಗೂ ಬೆಳೆಗಳನ್ನು ಬಾಧಿಸುವ ಅತಿಮಾನುಷ, ಶಕ್ತಿಗಳು ಹಾಗೂ ಸಾಂಕ್ರಾಮಿಕ ರೋಗಗಳ ಸಂದರ್ಭಗಳಲ್ಲಿ ಹೊತ್ತ ಹರಕೆಯಾಗಿರಬಹುದು. ಉತ್ಸವದ ಹಿಂದೆ ಅಡಕವಾದ ಪ್ರಬಲ ಮೌಲ್ಯವು ಕೃಷಿ ಅಭ್ಯುದಯವಾಗಿದ್ದು, ಆಚರಿಸುವವರಿಗೆ ಅದು ತಿಳಿಯದೇ ಇರಬಹುದಾಗಿದೆ. ಫಲವತ್ತತೆಯ ಉಪಾಸನೆಯೇ (ಸ್ತ್ರೀಯರ ಮತ್ತು ಕೃಷಿ ಭೂಮಿಯನ್ನು ಫಲವತ್ತತೆ) ಉತ್ಸವದ (ಆಚರಣೆಯ) ಮೂಲ ತಿರುಳಾಗಿದೆ.

೧೯೯೮ರಲ್ಲಿ ಮರಿಯಮ್ಮನಹಳ್ಳಿ ತಾಂಡದಲ್ಲಿ ಗೌರಿ ಹಬ್ಬದ ಮುಕ್ತಾಯದ ಕಾರ್ಯಕ್ರಮದ ಅಂಗವಾಗಿ ಜನಪದ ಆಟಗಳು ಮತ್ತು ನಾಟಕ ಪ್ರದರ್ಶನಗಳನ್ನು ಸಂಘಟಿಸಲಾಗಿತ್ತು. ರಾಮಾಯಣದ ಸನ್ನಿವೇಶ 'ರಾಮಾಂಜನೇಯ ಯುದ್ಧ'ವೇ ನಾಟಕದ

ಾವಸ್ತುವಾಗಿತ್ತು. ಮರಿಯಮ್ಮನಹಳ್ಳಿಯ ಸುತ್ತಮುತ್ತಲಿನ ಗ್ರಾಮಗಳ ಜನರು ನಾಟಕ ನೋಡಲು ಕಿಕ್ಕಿರಿದು ನೆರೆದಿದ್ದರು. ಬಾಣಿಗಳಲ್ಲಿಯ ಓರ್ವ ವ್ಯಕ್ತಿಯೇ ನಾಟಕದ ನಿರ್ದೇಶನವನ್ನೂ ಮಾಡಿದ್ದನು. ಕೆಲವು ವರ್ಷಗಳ ಹಿಂದೆ ಒಬ್ಬ ಲಿಂಗಾಯತ ಜಾರಿ ಕೆಲವು ಬಗೆಯ ಜನಪದ ಕಲೆಗಳನ್ನು ಲಂಬಾಣಿಗಳಿಗೆ ಕಲಿಸಿಕೊಟ್ಟಿದ್ದರು ಎಂದು ಕೆಲವು ಮಾಹಿತಿದಾರರು ಹೇಳುತ್ತಾರೆ. ಟಕ ಪ್ರದರ್ಶನವು ಲಂಬಾಣಿ ಪರಂಪರೆ ಮತ್ತು ಹಿಂದೂ ಪರಂಪರೆಗಳ ಸಮ್ಮಿಶ್ರಕ್ಕೆ ಉದಾಹರಣೆಯಾಗಿದೆ. ಕನ್ನಡದಲ್ಲಿಯೇ ಆದಿದ ನಾಟಕವು ಲಂಬಾಣಿಗಳ ಕನ್ನಡ ಭಾಷೆಯನ್ನು ಚೆನ್ನಾಗಿ ಕರಗತ ಮಾಡಿಕೊಂಡಿದ್ದರೆಂಬುದನ್ನು ಕೂಡ ಸಾರಿ ಹೇಳುವಂತಿತ್ತು.

ಪ್ಲೇಗು, ಕಾಲರಾ ಮೊದಲಾದ ಸಾಂಕ್ರಾಮಿಕ ರೋಗಗಳು ಹರಡಿದಾಗ ಹೊತ್ತ ಹರಕೆ ತೀರಿಸಲು ಸಾಂಕ್ರಾಮಿಕ ರೋಗಗಳ ಆದಿ ವತೆ ಮಾರಿಕಾಂಬಾ ದೇವತೆ (ಸ್ಥಳೀಯವಾಗಿ ಈಕೆಯನ್ನು ಗಾಳಿಯಮ್ಮ, ದುರ್ಗವ್ವ, ಮಾರಿ, ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ) ನ್ನು ಆರಾಧಿಸಲಾಗುತ್ತದೆ. ಜೇಷ್ಠಮಾಸದ (ಜೂನ್ - ಜುಲೈ ತಿಂಗಳಲ್ಲಿ) ಹುಣ್ಣಿಮೆಯ ದಿನದೊಂದು ಮತ್ತು ಹೋಳಿ ಸಮಾರಂಭದಲ್ಲಿ ದೇವತೆಗೆ ಕೋಳಿ ಮಾಂಸದ ಎಡೆ ನೀಡಲಾಗುತ್ತದೆ. ಸಿತ್ಲಭವಾನಿಯು (ಸ್ಥಳೀಯವಾಗಿ 'ಏಳುಮಕ್ಕಳ ತಾಯಿ' ಎಂದು ಕರೆಯಲಾಗುತ್ತದೆ) ದೃಷ್ಟಿದೋಷ, ಕೆಮ್ಮು- ನೆಗಡಿ ಮತ್ತು ಜ್ವರ ಮೊದಲಾದ ರೋಗಗಳನ್ನುಂಟುಮಾಡುವ ದೇವತೆ ಎಂದು ಭಾವಿಸಲಾಗುತ್ತದೆ. ಈ ದೇವತೆಯನ್ನು ಸಂತೃಪ್ತಿಗೊಳಿಸಲು ತಾಂಡದ ಪ್ರತಿಕುಟುಂಬವೂ ಒಂದು ಅಥವಾ ಎರಡು ಮೇಕೆ ಅಥವಾ ಕೋಳಿಯ ಮಾಂಸವನ್ನು ಪ್ರತಿವರ್ಷ ಆಷಾಢ ಮಾಸ(ಜುಲೈ - ಆಗಸ್ಟ್)ದಲ್ಲಿ ಹುಣ್ಣಿಮೆಯ ನಂತರದ ಮೊದಲ ಮಂಗಳವಾರ ಅಥವಾ ಶುಕ್ರವಾರ ಎಡೆ ೀಡುತ್ತಾರೆ. ಈ ದೇವತೆಗಳ ಗುಡಿಗಳು ಸಾಮಾನ್ಯವಾಗಿ ಪ್ರತಿ ತಾಂಡದ ಸರಹದ್ದಿನ ಅಂಚಿನಲ್ಲಿರುತ್ತವೆ.

ಲಂಬಾಣಿಗಳು ತಮ್ಮ ಗಂಡು ಮಕ್ಕಳ ಚೌಲ ಸಮಾರಂಭವನ್ನು ನೆರವೇರಿಸುವಾಗ ವೆಂಕಟರಮಣ ದೇವರಿಗೆ ಪಕ್ವಾನ್ನದ ನೈವೇದ್ಯ ಮಾಡುತ್ತಾರೆ. ಇಲ್ಲವೆ ತಾಂಡದಲ್ಲಿ ಇರುವ ಈ ದೇವತೆಯ ದೇವಾಲಯಕ್ಕೆ ಕೋಳಿ, ಮೇಕೆ ಅಥವಾ ಕುರಿಯ ಬಲಿಯನ್ನು ಸಮರ್ಪಿಸುತ್ತಾರೆ. ಈ ಧಾರ್ಮಿಕ ಆಚರಣೆಯು ಹಿಂದೂಗಳ ಬೃಹತ್ ಪರಂಪರೆಗೆ ಸೇರಿದವುಗಳು. ಮರಿಯಮ್ಮನಹಳ್ಳಿ ತಾಂಡದ ಸರಹದ್ದಿನಲ್ಲಿ ಸ್ಥಾಪಿಸಲಾದ ದುರ್ಗವ್ವಳ (ಮಾರಿಕಾಂಬಾ) ಸಾಂಪ್ರದಾಯಿಕ ಶಿಲಾ ಸಂಕೇತವಿದೆ. ೧೯೯೫ರಲ್ಲಿ ತಾಂಡದೊಳಗೆ ದುರ್ಗಾ ದೇವತೆಯ ಕ್ಕ ದೇವಾಲಯವನ್ನು ಕಟ್ಟಲಾಗಿದೆ. ಇತರ ಮುಂದುವರೆದ ಹಿಂದೂಗಳು ಈ ದೇವತೆಗಳನ್ನು ಆರಾಧಿಸುತ್ತಾರೆ. ಇದು ಒಂದು ಬೃಹತ್ ಪರಂಪರೆಯಿಂದ ಎರವಲುಪಡೆದ ದೇವತಾರಾಧನೆಯ ನಿದರ್ಶನವಿದಾಗಿದೆ.

ಲಂಬಾಣಿಗಳು ಧಾರ್ಮಿಕ ಜೀವನ ಚಕ್ರದ ವಿಧಿ ವಿಧಾನಗಳ ಆಚರಣೆಗಳ ಮೂಲಕ (ಅಧ್ಯಾಯ ೨ರಲ್ಲಿ ಚರ್ಚಿಸಲಾಗಿದೆ) ಸಾಮಾಜಿಕ ವ್ಯವಸ್ಥೆಯ ಅಂಗಗಳಾದ (ಜನನ ಅಥವಾ ದತ್ತು ತೆಗೆದುಕೊಂಡ ಸಂದರ್ಭಗಳಲ್ಲಿ ಔತಣ ಕೂಟ ಸಂದರ್ಭಗಳು) ವಿವಾಹ ಸಂಬಂಧಗಳು, ಹಕ್ಕು ಮತ್ತು ಬಾಧ್ಯತೆಗಳ ಪ್ರಜ್ಞೆ (ದೀಕ್ಷೆ ನೀಡಿಕೆಯ ಸಮಾರಂಭಗಳು) ಮೊದಲಾದವುಗಳನ್ನು ಸ್ಥಿರೀಕರಿಸಿ ಪ್ರದರ್ಶಿಸುತ್ತಾರೆ, ಇಲ್ಲವೆ ಆರಂಭಿಸುತ್ತಾರೆ (ನಾಂಡೆಲ್, ೧೯೭೦ : ೧೯೯). ಅವರು ದೀಕ್ಷಾ ಕಾರ್ಯಕ್ರಮವನ್ನು ವಿವಾಹ ಕಾಲಕ್ಕೆ ಡೆಸುತ್ತಾರೆ. ಕೆಂಪಗೆ ಕಾಯಿಸಿದ ಸೂಜಿಯಿಂದ ಮಂತ್ರ ಘೋಷಗಳೊಂದಿಗೆ ಹೊಸಬನಿಗೆ ಎರಡು ಮುದ್ರೆಗಳನ್ನು ಹಾಕುತ್ತಾರೆ. ಸಾಮಾನ್ಯವಾಗಿ ದೀಕ್ಷಾ ಸಮಾರಂಭಕ್ಕೆ ಇಬ್ಬರು ಸೋದರರು ಬೇಕಾಗುತ್ತಾರೆ. ಅವರಲ್ಲಿ ದೀಕ್ಷೆನೀಡಲಾದ ಕಿರಿಯನು ತನ್ನ ವಿವಾಹ ಕಾಲಕ್ಕೆ ಪುನಃ ಮುದ್ರೆ ಹಾಕಿಸಿಕೊಳ್ಳಬೇಕಾಗಿಲ್ಲ. ಒಂದುವೇಳೆ ವರನಿಗೆ ಸೋದರನು ಇರದಿದ್ದರೆ ಅದೇ ವಂಶದ ಒಬ್ಬ ಹುಡುಗನನ್ನು ದೀಕ್ಷಾ ಸಮಾರಂಭದ ಉದ್ದೇಶಕ್ಕಾಗಿ ಸೋದರ ಎಂದು ಸ್ವೀಕರಿಸಲಾಗುತ್ತದೆ. ಈ ಆಚರಣೆಯು ಸೋದರರ ಮಧ್ಯೆ ಏಕತೆಯ ಮಹತ್ವವನ್ನು ರುತ್ತದೆ. ಸೋದರರು ಜೀವನದಲ್ಲಿ ಸಂತೋಷ ಹಾಗೂ ದುಃಖದ ಸನ್ನಿವೇಶಗಳೆರಡರಲ್ಲಿಯೂ ಒಟ್ಟಾಗಿರಬೇಕು ಎಂಬುದನ್ನು ದೀಕ್ಷಾ ಸಮಾರಂಭವು ಸಂದೇಶಿಸುತ್ತದೆ.

ಪಂಚಾಂಗ ಅಥವಾ ಕಾಲನಿರ್ದೇಶನ ಪಟ್ಟಿಯು ಜೀವನಚಕ್ರದ ಆಚರಣೆಗಳು ನೈತಿಕತೆಯ ಋಣಸಂಬಂಧಿ ಕರ್ತವ್ಯವಾಗಿವೆ. ಹಿಂದೆ ಕೇವಲ ನಾಲ್ಕು ಹಬ್ಬಗಳನ್ನು ಮಾತ್ರವೇ ಆಚರಿಸುತ್ತಿದ್ದ ಲಂಬಾಣಿಗಳು, ಲಂಬಾಣೇತರ ರೈತರು ಆಚರಿಸುವ ಎಲ್ಲ ಹಬ್ಬಗಳನ್ನು, ಉತ್ಸವಗಳನ್ನು (ಪಂಚಾಂಗದ ಕ್ರಮಾನುಸಾರವಾಗಿ) ಈಗ ಆಚರಿಸುತ್ತಿದ್ದಾರೆ ಎಂಬುದು ಬದಲಾವಣೆಯ ದೃಷ್ಟಿಯಿಂದ ಗಮನಿಸಬಹುದಾದ ಅಂಶವಾಗಿದೆ. ೧೯೩೦ರವರೆಗೆ ಸಾಂಪ್ರದಾಯಿಕ ರೂಢಿಯಲ್ಲಿರದೇ ಇದ್ದ ಹೆಚ್ಚಿನ ಧಾರ್ಮಿಕ ಉತ್ಸವ ಮತ್ತು ಆಚರಣೆಗಳನ್ನು ಅವರಿಂದು ಆಚರಿಸುತ್ತಿದ್ದಾರೆ. ಕೆಲವು ಲಂಬಾಣಿಗಳು ಪಂಢರಪುರದ ಪುರಂದರ ವಿಠ್ಠಲನ ಹಾಗೂ ಸವದತ್ತಿ ಎಲ್ಲಮ್ಮನ ಕಟ್ಟಾ ಭಕ್ತರಾಗಿದ್ದಾರೆ. ಈ ಯಾತ್ರಾಸ್ಥಳಗಳಿಗೆ ಪ್ರತಿವರ್ಷ ನಿರ್ದಿಷ್ಟ ಸಂದರ್ಭಗಳಲ್ಲಿ ಯಾತ್ರೆಗೆ ಹೋಗುತ್ತಾರೆ. ಸೇವಾಭಯ ದೇವಾಲಯಗಳಲ್ಲಿ ಸಾಂಪ್ರದಾಯಿಕ ವಿಷಯಗಳನ್ನೊಳಗೊಂಡ ಬಂಜಾರಾ ನುಡಿಕಟ್ಟಿನ ಭಜನೆಗಳನ್ನು ಮಾಡಲಾಗುತ್ತದೆ. ಭಜನೆಯ ಧಾಟಿಗಳು ಮಾತ್ರ ಸಾಂಪ್ರದಾಯಿಕ ರೀತಿಯೇ ಇವೆ.

ಲಂಬಾಣಿಗಳು ಈಗ ಕೃಷಿ ಸಾಗುವಳಿಗೆ ಸಂಬಂಧಿಸಿದ ವಿವಿಧ ಹಂತದ ಸಂಬಂಧಿಸಿದ ಧಾರ್ಮಿಕ ವಿಧಿಗಳನ್ನು ಆಚರಿಸುತ್ತಿದ್ದಾರೆ. ಕೃಷಿ ಸಾಗುವಳಿಯಲ್ಲಿ ನೇರವಾಗಿ ತೊಡಗಿದ ಲಂಬಾಣಿಗಳು ಮಾತ್ರವಲ್ಲದೆ, ಕೃಷಿ ಕೂಲಿ ಮಾಡುವ ಹಾಗೂ ಇತರೇ ಕೆಲಸಗಳನ್ನು ಮಾಡುವವರನ್ನು ಒಳಗೊಂಡಂತೆ ಎಲ್ಲರೂ ಈ ಹಬ್ಬಗಳನ್ನು, ಧಾರ್ಮಿಕ ಸಮಾರಂಭಗಳನ್ನು ಆಚರಿಸುತ್ತಿದ್ದಾರೆ. ಅನೇಕ ವರ್ಷಗಳ ಅವಧಿಯಲ್ಲಿ ಹೊಸತಾಗಿ ರೂಢಿಸಿಕೊಂಡ ಹೊಸ ಸೇರ್ಪಡೆಗಳನ್ನು ತಮ್ಮ ಪಾರಂಪರಿಕ ಧಾರ್ಮಿಕ ವಿಧಿ ವಿಧಾನಗಳ ಭಂಡಾರಕ್ಕೆ ಸೇರಿಸಿಕೊಂಡಿದ್ದಾರೆ. ಧಾರ್ಮಿಕ ಬದಲಾವಣೆಗಳಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ನಂಬಿಕೆ ಹಾಗೂ ದೇವತೆಗಳ ಆರಾಧನೆಯ ರೀತಿ ನೀತಿಗಳನ್ನು ಹೊಸ ರೈತಾಪಿ ವ್ಯವಸ್ಥೆಗೆ ಮುಂದುವರೆದು ಅಧೀನಮಾಡಿಕೊಂಡ ಪ್ರಕರಣವಿದಲ್ಲ. ಅದಕ್ಕೆ ಬದಲಾಗಿ ಹೊಸದನ್ನು ಸೇರ್ಪಡಿಸಿಕೊಂಡ ಪ್ರಕರಣವಿದಾಗಿದೆ. ಆದ ಕಾರಣ, ಅವರ ಕಡಿಮೆ ಆದಾಯದಲ್ಲಿ ಬಹುಭಾಗವು ವಿಶೇಷ ಧಾರ್ಮಿಕ ಆಚರಣೆಗಳಿಗೆ ಹಾಗೂ ಸಮಾರಂಭಗಳಿಗೆ ವೆಚ್ಚವಾಗುತ್ತದೆ. ಸರಕುಗಳ ಬೆಲೆ ಏರಿಕೆಯಿಂದಾಗಿ ಅವರ ಆಚರಣೆಗಳು ಸಂಕ್ಷಿಪ್ತ ಸ್ವರೂಪ ಪಡೆದು, ಕಡಿಮೆ ಆಡಂಬರದ್ದಾಗಿರುವುದು ೧೯೫೫ರ ನಂತರದಲ್ಲಿ. ಇದು ಲಂಬಾಣಿಗಳ ಧಾರ್ಮಿಕ ಆಚರಣೆಯಲ್ಲಿ ತೋರಿ ಬಂದಿರುವ ಬದಲಾವಣೆಯಾಗಿದೆ.

ಮುಂದುವರೆದ ಹಿಂದೂ ಜಾತಿ ಗುಂಪುಗಳು ತಮ್ಮ ಧಾರ್ಮಿಕ ಆಚರಣೆಗಳನ್ನು ಹಾಗೂ ನಂಬಿಕೆಗಳನ್ನು ರೂಪಿಸಿಕೊಳ್ಳುವಲ್ಲಿ, ವಿವಾಹ ಸಂಸ್ಕಾರವನ್ನು ನಡೆಸುವಲ್ಲಿ ಮಗುವು ಜನಿಸಿದ ನಕ್ಷತ್ರ ಗ್ರಹಗಳ ಬಗೆಗೆ ತಿಳಿದುಕೊಳ್ಳುವಲ್ಲಿ, ಬ್ರಾಹ್ಮಣ ಪುರೋಹಿತರ ಸೇವೆ ಪಡೆಯುವಂತೆ, ಹೊಸ ಉದ್ಯಮ ಅಥವಾ ವ್ಯವಹಾರಗಳನ್ನು ಕೈಗೊಳ್ಳುವಲ್ಲಿ ಮತ್ತು ವಿವಾಹ ಮಾಡುವಲ್ಲಿ ಘಳಿಗೆ/ಸಮಯವನ್ನು ಇಟ್ಟುಕೊಳ್ಳುವಲ್ಲಿ ಗಮನಾರ್ಹ ಬದಲಾವಣೆಯನ್ನು ಲಂಬಾಣಿಗಳು ಹೊಂದಿದ್ದಾರೆ.

ಲಂಬಾಣಿಗಳ ಪುರೋಹಿತ ವರ್ಗವು ಪೌರೋಹಿತ್ಯದ ಆದಾಯಕ್ಕೆ ಪೂರಕವಾಗಿ ಒಕ್ಕಲುತನ, ಕೂಲಿದುಡಿಮೆಯೊಂದಿಗೆ ತಮ್ಮ ಕುಟುಂಬಗಳನ್ನು ಆರ್ಥಿಕವಾಗಿ ಪೋಷಿಸಿಕೊಳ್ಳುತ್ತಿರುವುದು ಗಮನಾರ್ಹ ಬದಲಾವಣೆಯಾಗಿದೆ. ಒಂದೆಡೆ ನೆಲೆನಿಂತ ಬಳಿಕ ಆರಂಭದಲ್ಲಿ ಪುರೋಹಿತರ ಜೀವನೋಪಾಯಕ್ಕೆ ಬೇಕಾದ ವರಮಾನವನ್ನು ಸಮುದಾಯವು ಕೊಡುತ್ತಿತ್ತು. ಅದಕ್ಕಿಂತ ಮೊದಲಿನ ಅಲೆಮಾರಿ ಜೀವನದ ದಿನಗಳಲ್ಲಿ ಸಮುದಾಯದ ನಾಯಕತ್ವ ಹಾಗೂ ಪೌರೋಹಿತ್ಯ ಒಂದಕ್ಕೊಂದು ಪೂರಕವಾಗಿದ್ದವು. ಆಗ ನಾಯಕ ಪುರೋಹಿತನು ಸಮುದಾಯದಲ್ಲಿ ಪ್ರಬಲನೂ, ಆರ್ಥಿಕವಾಗಿ ಸ್ಥಿತಿವಂತನೂ ಆಗಿರುತ್ತಿದ್ದನು.

ಲಂಬಾಣೇತರ ರೈತರ ಸಂಪರ್ಕಗಳಿಂದಾಗಿ ಲಂಬಾಣಿಗಳು ಕೃಷಿ, ವ್ಯವಸಾಯಕ್ಕೆ ತೊಡಗಿದರು. ಸಾಂಕ್ರಾಮಿಕ ರೋಗಗಳ ಹರಡುವ ದೇವತೆಗಳಿಗೆ ಗೌರವಾದರಗಳನ್ನು ತೋರುವ ಸೂಚನೆಯಾಗಿ ವಾರದಲ್ಲಿ ಕೆಲವು ನಿರ್ದಿಷ್ಟ ದಿನಗಳೊಂದು (ಮಂಗಳವಾರ ಹಾಗೂ ಶುಕ್ರವಾರ) ಕೆಲಸಕ್ಕೆ ಹೋಗದಿರುವ ಪದ್ಧತಿಯು ಅವರ ಧಾರ್ಮಿಕ ವಿಧಿ ಆಚರಣೆಗಳಿಗೆ ಸೇರ್ಪಡೆಯ ಇನ್ನೊಂದು ಅಂಶವಾಗಿದೆ. ಆಚರಣೆಗಳು ಸಮುದಾಯಕ್ಕೆ ರಕ್ಷಾ ಕವಚವೆಂದೂ, ಮಳೆಯಾಗದಿದ್ದಾಗ ದೇವತೆಗಳನ್ನು ಸಂತೃಪ್ತಿಗೊಳಿಸುವ ವಿಧಾನವೆಂದೂ ಭಾವಿಸಲಾಗುತ್ತದೆ.

ದುಡಿಮೆಯನ್ನು ತ್ಯಜಿಸುವ ನಿಷ್ಠೆ ಹಾಗೂ ಅದಕ್ಕನುಗುಣವಾದ ರೀತಿಯಲ್ಲಿ ಸಮಸ್ತ ಸಮುದಾಯವು ಅನುಸರಿಸುವ ಸಂಯಮತೆ, ಶೀಲ - ಶುಚಿತ್ವದ ರೀತಿ ನೀತಿಗಳು, ಪ್ರಾರ್ಥನೆ - ಭಜನೆಗೆ ಅರ್ಪಿತವಾದ ದಿನಗಳಲ್ಲಿ ಐದುವಾರಗಳ ಕಾಲ ಧಾರ್ಮಿಕ ಕ್ರಿಯೆ ಹಿಡಿಯುವುದು. ಭೋಗವರ್ಜನೆ, ಉಪವಾಸ ವ್ರತ ಮೊದಲಾದ ಆಚರಣೆಗಳು 'ವರ್ಜನೆಯ ಕ್ರಿಯಾಚರಣೆ'ಗಳಲ್ಲಿ ಅಡಕವಾದ ಅಂಶಗಳಾಗಿವೆ.

ದುಡಿಮೆಯನ್ನು ತ್ಯಜಿಸುವಿಕೆಯ ಪರಿಣಾಮವಾಗಿ ಆಗುವ ಮಾನವ ಶಕ್ತಿಯ ನಷ್ಟ, ಕೃಷಿ ಸಾಗುವಳಿಗಳಲ್ಲಿ ಆಗುವ ವಿಳಂಬ, ಹಾಗೂ ಅಡೆತಡೆಗಳು, ಮೊದಲಾದವುಗಳನ್ನು ವಿವೇಚನಾತ್ಮಕ ಆರ್ಥಿಕ ದೃಷ್ಟಿಕೋನದಿಂದ ಯೋಚಿಸುವುದಾದರೆ ಈ ಧಾರ್ಮಿಕ ಆಚರಣೆಗಳು ಅನುತ್ಪಾದಕ ಎಂದು ಹೇಳಬಹುದು. ಆದರೆ ಲಂಬಾಣಿಗಳು ಹಾಗೆ ಭಾವಿಸುವುದಿಲ್ಲ. ಅದರ ಅಗತ್ಯತೆ ಹಾಗೂ ಸಫಲತೆಯಲ್ಲಿ ಅವರಿಗೆ ನಂಬಿಕೆ ಇದೆ. ಇಂತಹ ಸಂದರ್ಭಗಳಲ್ಲಿ ಸಾಲಮಾಡಿ ತಮ್ಮ ಧಾರ್ಮಿಕ ಅಗತ್ಯಗಳನ್ನು ಪೂರೈಸಿಕೊಳ್ಳುವ ಕುಟುಂಬಗಳು ಕೂಡ ಇದೇ ಅಭಿಪ್ರಾಯ ಹೊಂದಿವೆ. ಮರಿಯಮ್ಮನಹಳ್ಳಿ ತಾಂಡದಲ್ಲಿ ಕೃಷಿ ಜಮೀನುಗಳನ್ನುಳ್ಳ ಕೆಲವು ಸ್ಥಿತಿವಂತ ಕುಟುಂಬಗಳ ಸದಸ್ಯರು ಇಂತಹ ವೆಚ್ಚಗಳಿಗಾಗಿ ಸಾಕಷ್ಟು ಸಾಲ ಮಾಡಬೇಕಾಗಿದೆ. ಅವರ ವಾರ್ಷಿಕ ಉಳಿತಾಯದಲ್ಲಿ ಹೆಚ್ಚಿನ ಭಾಗ ಸಾಲದ ಬಡ್ಡಿಗಾಗಿಯೇ ವ್ಯಯವಾಗುತ್ತದೆ. ಐದು ವರ್ಷಗಳ ಅವಧಿಯಲ್ಲಿ ಇಂತಹ ಪ್ರತಿಯೊಂದು ಕುಟುಂಬವು ೨ - ೩ ವಿವಾಹ ಕಾರ್ಯಗಳನ್ನು ಜರುಗಿಸುತ್ತಾರೆ. ಅಲ್ಲದೆ ವೈದ್ಯಕೀಯ ಚಿಕಿತ್ಸೆಗಿಂತ, ರೋಗಗಳನ್ನು ಗುಣಪಡಿಸಿದ ದೇವತೆಗಳಿಗೆ ಕೃತಜ್ಞತಾಭಾವದ ದ್ಯೋತಕವಾಗಿ ಹೆಚ್ಚಿನ ಕಾಣಿಕೆಗಳನ್ನು ನೀಡಲಾಯಿತು ಎಂಬುದು ಗಮನಾರ್ಹ ಸಂಗತಿಯೇ ಸರಿ.

ಧಾರ್ಮಿಕ ವಿಧಿ ವಿಧಾನದ ಸಮಾರಂಭಗಳಲ್ಲಿ ಆಚರಣೆಗಳನ್ನು ಅಧ್ಯಯನ ಮಾಡುವ ಮೂಲಕ ಬಂಧುತ್ವ, ಆರ್ಥಿಕತೆ, ರಾಜಕೀಯ ಹಾಗೂ ಧರ್ಮ ಎಲ್ಲವೂ ಒಂದುಗೂಡಿದ ಬಲೆಯಂತೆ ನಮಗೆ ತೋರುತ್ತದೆ. ಕುಲದೇವತೆ, ಕೃಷಿಗೆ ಸಂಬಂಧಿಸಿದ ದೇವತೆಗಳಿಗೆ, ಸಮುದಾಯದ ದೇವತೆಗಳಿಗೆ ಹಾಗೂ ಹಿರಿಯರಿಗೆ ತೋರುವ ಗೌರವ- ಋಣಭಾರದ ದ್ಯೋತಕವಾದ, ಪ್ರಾಣಿಗಳ ಬಲಿಗಳು, ಔತಣಕೂಟಗಳು ವೆಚ್ಚದಾಯಕವಾಗಿವೆ. ಇಂತಹ ವೆಚ್ಚಗಳನ್ನು ಕುಟುಂಬದ ಸೋದರರು ಹಂಚಿಕೊಳ್ಳುತ್ತಾರೆ. ಪ್ರತ್ಯೇಕವಾಗಿ ವಾಸವಾಗಿರುವ ಸೋದರರು ಕುಟುಂಬದ ಸಾರ್ವತ್ರಿಕ ಆಚರಣೆಗಳ ವೆಚ್ಚಗಳನ್ನು ಹಂಚಿಕೊಳ್ಳುತ್ತಾರೆ. ಈ ರೀತಿಯಾದ ಹಂಚಿಕೊಳ್ಳುವಿಕೆಯು ಲಂಬಾಣಿಗಳ ಸ್ವಜಾತಿ ಹಾಗೂ ಬಂಧುತ್ವ ಸಂಬಂಧಕ್ಕೆ ನೀಡುವ ಮಹತ್ವವನ್ನು ಸಾರಿ ಹೇಳುತ್ತದೆ. ಅಷ್ಟೇ ಅಲ್ಲದೆ ವೆಚ್ಚದಾಯಕ ಸನ್ನಿವೇಶಗಳನ್ನು ನಿರ್ವಹಿಸಲು ಹಣಕಾಸಿನ ಭಾರವನ್ನು ಹಂಚಿಕೊಳ್ಳುವ ಒಂದು ವ್ಯವಸ್ಥಿತ ವಿಧಾನವು ಆಗಿದೆ.

**ಆರ್ಥಿಕತೆಯ ಮೇಲೆ ನಂಬಿಕೆಯ ಪರಿಣಾಮ**

ಲಂಬಾಣಿಗಳ ಕೆಲವು ನಂಬಿಕೆ, ಆಚರಣೆಗಳು ಸಕಾರಾತ್ಮಕವಾಗಿ, ಇಲ್ಲವೆ, ನಕರಾತ್ಮಕವಾಗಿ ಅವರ ಆರ್ಥಿಕ ಚಟುವಟಿಕೆಗಳನ್ನು ಬಾಧಿಸುತ್ತವೆ. ಉದಾಹರಣೆಗೆ, ಗೌರಿ ಹಬ್ಬದ ಸನ್ನಿವೇಶದಲ್ಲಿ ಅವರು ಬೆಳೆಸುವ ಗೋಧಿ ಸಸಿಗಳ ವಿಷಯದಲ್ಲಿ ಅವರು ತೋರುವ ಕಾಳಜಿ, ಶ್ರದ್ಧೆ, ಕೌಶಲ್ಯ ಹಾಗೂ ಕಿರಿಯರಿಗೆ ಅವುಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ವಹಿಸಿಕೊಡುವ ಹೊಣೆಗಾರಿಕೆ, ಕಿರಿಯರಿಗೆ ಒಕ್ಕಲುತನದ ಕರ್ಮಾಚರಣೆಗಳ ಬಗೆಗೆ ನೀಡುವ ಅನೌಪಚಾರಿಕ ಶಿಕ್ಷಣದ ಪ್ರಕ್ರಿಯೆಯಾಗಿದೆ. ಸಸಿಗಳನ್ನು ಬೆಳೆಸಲು ಒಳ್ಳೆಯ ಮಣ್ಣನ್ನು ಆಯ್ಕೆ ಮಾಡುವುದು, ಸೂರ್ಯನ ಬೆಳಕು ಬೀಳುವಂತೆ ನೋಡಿಕೊಳ್ಳುವುದು, ಸರಿಯಾಗಿ ನೀರನ್ನು ಉಣಿಸುವುದು ಮೊದಲಾದ ಚಟುವಟಿಕೆಗಳು ಕೃಷಿ ತರಬೇತಿಗಳೇ ಆಗಿವೆ. ಅದೇ ರೀತಿ ಕೃಷಿ ಸಾಗುವಳಿಯು ವಿವಿಧ ಹಂತಗಳಿಗೆ ಸಂಬಂಧಿಸಿದ ವಿಧಿ ಆಚರಣೆಗಳು ಹವಾಮಾನ ಹಾಗೂ ಇತರೆ ನೈಸರ್ಗಿಕ ವಿಪತ್ತುಗಳನ್ನು ಎದುರಿಸಲು ಕೃಷಿಕರ ನೈತಿಕ ಮನೋಬಲವನ್ನು ಸಂವರ್ಧಿಸುತ್ತದೆ.

ಲಂಬಾಣಿಗಳು ಸಾಮಾನ್ಯವಾಗಿ ವಾರದಲ್ಲಿ ಒಂದು ಬಾರಿ ಸ್ನಾನ ಮಾಡುತ್ತಾರೆ. ವಾರದಲ್ಲಿ ಕೆಲವು ದಿನಗಳನ್ನು ಶುಭದಿನಗಳೆಂದು ಅವರು ಪರಿಗಣಿಸಿ ಆ ದಿನಗಳಂದು ಅವರು ಸ್ನಾನ ಮಾಡುತ್ತಾರೆ. ಅಂದು ತಮ್ಮ ಬಟ್ಟೆಗಳನ್ನು, ದನಕರುಗಳನ್ನು ತೊಳೆಯುತ್ತಾರೆ. ಇಂತಹ ದಿನಗಳಲ್ಲಿ ಅವರು ಹೊಸ ಕೆಲಸಗಳನ್ನು, ಹೊಸ ವ್ಯವಹಾರಗಳನ್ನು ಆರಂಭಿಸುತ್ತಾರೆ. ಶುಕ್ರವಾರ ಹಾಗೂ ಮಂಗಳವಾರಗಳನ್ನು ದೇವತೆಗಳಿಗೆ, ವಿಶೇಷವಾಗಿ ದೇವಿಯರಿಗೆ ಹಾಗೂ ಸಂತರಿಗೆ ಮೀಸಲಾಗಿಸಿರುವುದರಿಂದ ಶುಭದಿನಗಳೆಂದು ಪರಿಗಣಿಸುತ್ತಾರೆ. ಸೋಮವಾರಗಳು ಮತ್ತು ಗುರುವಾರಗಳನ್ನು ಕೃಷಿ ಸಾಗುವಳಿಯ ಕಾರ್ಯಾಚರಣೆ ಆರಂಭಿಸಲು ಶುಭದಿನಗಳೆಂದು ಬಗೆಯುತ್ತಾರೆ.

ಲಿಂಗಾಯತ ರೈತರಿಗೆ ಸೋಮವಾರವು ಪವಿತ್ರ ದಿನವಾಗಿದೆ. ಅದು ಅವರ ಆರಾಧಕ - ಸಂತ ಬಸವಣ್ಣನಿಗೆ ಮುಡಿಪಾಗಿಟ್ಟ ದಿನವಾಗಿದೆ. ಅಷ್ಟೇ ಅಲ್ಲದೆ ಶಿವನ ವಾಹನ ನಂದಿಯ ಪುನರ್‌ಅವತಾರದ ದಿನವಾಗಿದೆ. ಆದಕಾರಣ ಆ ದಿನ ಅವರು ಕೃಷಿಯ ಕೆಲಸಗಳನ್ನು ಮಾಡುವುದಿಲ್ಲ. ವಿಶೇಷವಾಗಿ ಹೋರಿ ಅಥವಾ ಎತ್ತುಗಳ ಮೇಲೆ ನೊಗ ಹೂಡುವುದಿಲ್ಲ. ಅಂದು ದನಗಳ ಮೈತೊಳೆದು ಅವುಗಳಿಗೆ ವಿಶ್ರಾಂತಿ ಕೊಡುತ್ತಾರೆ. ಆ ದಿನ ಅವರು ತಮ್ಮ ಕುಲ ದೇವತೆಯನ್ನು ಆರಾಧಿಸುವುದರಿಂದ ಅವರಿಗೆ ಅದು ಪವಿತ್ರ ದಿನವಾಗಿದೆ. ವಿಷ್ಣುವಿನ ಆರಾಧಕರಾದ ಲಂಬಾಣಿಗಳಿಗೆ ಸಾಂಪ್ರದಾಯಿಕ ಸೋಮವಾರವು ಅಷ್ಟೊಂದು ಮಹತ್ವದ ದಿನವಾಗಿರುವುದಿಲ್ಲ. ಒಕ್ಕಲುತನವನ್ನು ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡ ಕೆಲವರು ಲಿಂಗಾಯತ ಕೃಷಿ ಸಾಗುವಳಿದಾರರಂತೆಯೇ ಸೋಮವಾರ ನೊಗ ಹೂಡದ ಆಚರಣೆಯನ್ನು ಪಾಲಿಸುತ್ತಿದ್ದಾರೆ. ಹೀಗಾಗಿ ಸೋಮವಾರವನ್ನು ಪವಿತ್ರ ದಿನವೆಂದು ಪರಿಗಣಿಸುವ ರೂಢಿ ಬೆಳೆದುಬಂದಿದೆ. ಕುಟುಂಬ ಮಟ್ಟದ ಕೆಲಸ ಕಾರ್ಯಗಳಲ್ಲಿ ಲಂಬಾಣಿಗಳಿಗೆ ಸೋಮವಾರವು ಅಷ್ಟೊಂದು ಮಹತ್ವದ್ದಾಗಿಲ್ಲ. ಇದಕ್ಕೆ ಅಪವಾದವೆಂಬಂತೆ ಮರಿಯಮ್ಮನಹಳ್ಳಿ ತಾಂಡದ ಲಂಬಾಣಿಗಳು ಸೋಮವಾರ ಮಾಂಸ ತಿನ್ನುವುದಿಲ್ಲ. ನಾಗಲಾಪುರ ತಾಂಡದಲ್ಲಿ ಸೋಮವಾರ ಮಾಂಸ ತಿನ್ನಬಾರದೆಂಬ ನಿಷೇಧವೇನಿಲ್ಲ. ವಾರದ ರಜೆಯಾಗಿರುವ ಸೋಮವಾರದೊಂದಿಗೆ ಮಂಗಳವಾರ ಹಾಗೂ ಶುಕ್ರವಾರಗಳನ್ನು (ಸರದಿಯಂತೆ ಐದು ಮಂಗಳವಾರಗಳು ಅಥವಾ ಶುಕ್ರವಾರಗಳು) ಸಂಯಮತೆಯನ್ನು ಪಾಲಿಸುವ ದಿನಗಳೆಂದು ಸಾರಲಾಗಿದೆ. ಮಳೆ ಸಕಾಲಿಕವಾಗಿ ಆಗದಿದ್ದರೆ ಅಥವಾ ಸಾಂಕ್ರಾಮಿಕ ರೋಗಗಳ ಹಾವಳಿ ಹೆಚ್ಚು ಆದಾಗ ಆ ದಿನಗಳಂದು ವೃತ್ತಿಗಳನ್ನು ಕೈಗೊಳ್ಳಲಾಗುತ್ತದೆ. ಈ ತರನಾದ ಧರ್ಮಾಚರಣೆಗಳು ಕೃಷಿ ಚಟುವಟಿಕೆಗಳ ಪ್ರಕ್ರಿಯೆಯಲ್ಲಿ ತೀವ್ರ ಬಾಧೆಯನ್ನು ಒಡ್ಡುತ್ತವೆ. ಮಳೆ ಬಿದ್ದನಂತರ ಕೆಲವು ಗಂಟೆಗಳ ಕಾಲ ಮಣ್ಣಿನಲ್ಲಿ ತೇವಾಂಶ ಉಳಿದುಕೊಳ್ಳುವುದರಿಂದ ಕೃಷಿ ಸಾಗುವಳಿ ಕೆಲಸಗಳನ್ನು ಸಂದರ್ಭಕ್ಕನುಸಾರವಾಗಿ ಕೈಕೊಳ್ಳುವ ಅವಶ್ಯಕತೆಯಿರುವುದರಿಂದ ಇಂತಹ ನಿಯಮಾವಳಿಗಳು ಕೃಷಿ ಸಾಗುವಳಿಯಲ್ಲಿ ಅಹಿತಕರ ಪರಿಣಾಮಗಳನ್ನು ಬೀರುತ್ತವೆ.

ಲಂಬಾಣಿಗಳು ಬಹುಜಾತಿ ಹಳ್ಳಿಗಳ ಹೊರಗೆ ಪ್ರತ್ಯೇಕ ತಾಂಡಗಳಲ್ಲಿ ವಾಸವಾಗಿರುವುದೇಕೆ ಎಂಬ ಪ್ರಶ್ನೆಗೆ ಅವರೇ ನೀಡುವ ಎರಡು ವಿವರಣೆಗಳು ಈ ರೀತಿಯಾಗಿವೆ : (೧) ಬಾಹ್ಯ ಸಂಸ್ಕೃತಿಯ ಪ್ರಭಾವಗಳಿಂದ ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದು ಹಾಗೂ (೨) ಸೇವಭಯಕ್ಕೆ ಸಂಬಂಧಿಸಿದ ದಂತಕತೆಯನ್ನೊಳಗೊಂಡ ಧಾರ್ಮಿಕ ವಿವರಣೆ ಈ ಕೆಳಗಿನಂತಿದೆ : ಲಂಬಾಣಿಗಳು ಇತರರಿಂದ ಖರೀದಿಸಿದ ಕೋಳಿ ಮಾಂಸವನ್ನು ತಿನ್ನುತ್ತಾರೆಯಾದರೂ ತಾಂಡದಲ್ಲಿ ಕೋಳಿ ಸಾಗಾಣಿಕೆ ನಿಷಿದ್ಧವಾಗಿತ್ತು. ಸಿತ್ಲಭವಾನಿ ದೇವತೆಯಿಂದ ಸೇವಭಯ ೧೪ ವರಗಳನ್ನು ಪಡೆದಿದ್ದನಂತೆ. ತೀವ್ರ ಅಪಾಯಕಾರಿಯಾದ ಪ್ಲೇಗು ಮತ್ತು ಕಾಲರಾಗಳಂತಹ ಸಾಂಕ್ರಾಮಿಕ ರೋಗಗಳಿಂದ ತನ್ನ ಜನರು ಬಾಧಿತರಾಗಕೂಡದು ಎಂಬುದು ವರಗಳಲ್ಲಿ ಒಂದಾಗಿತ್ತು. ಆತನ ಆ ವಿನಂತಿಯನ್ನು ದೇವತೆ ಮನ್ನಿಸಿದ್ದಳು. ಲಂಬಾಣಿಗಳ ನೆಲೆ ಅಥವಾ ವಾಸಸ್ಥಾನವನ್ನು ತಾನು ಹೇಗೆ ಗುರುತಿಸಬೇಕು ಎಂದು ದೇವತೆ ಕೇಳಿದ್ದಳಂತೆ. ಆಗ ಸಂತನು ಆಕೆಗೆ ನೀಡಿದ ಸುಳಿವು ಈ ರೀತಿಯಾಗಿತ್ತು : "ಎಲ್ಲಿ ಹುಂಜವು ಕೂಗುವುದಿಲ್ಲವೋ ಅದು ಲಂಬಾಣಿಗಳ ನೆಲೆ ಎಂದು ಭಾವಿಸಿ ಅದನ್ನು ರಕ್ಷಿಸು. ಎಲ್ಲಿ ಹುಂಜ ಕೂಗುತ್ತಿದೆಯೋ ಅದು ಲಂಬಾಣೇತರರು ವಾಸಿಸುವ ಗ್ರಾಮವೆಂದು ತಿಳಿದು, ಅಲ್ಲಿ ಪ್ರವೇಶಿಸಲು ನೀನು ಸ್ವತಂತ್ರಳು". ಹೀಗಾಗಿ ಲಂಬಾಣಿ ತಾಂಡದಲ್ಲಿ ಕೋಳಿ ಸಾಕಾಣಿಕೆ ನಿಷಿದ್ಧಗೊಳಿಸಲಾಯಿತು. ಇದು ಲಂಬಾಣಿ ತಾಂಡವನ್ನು ಗುರುತಿಸುವ ಸೂಚಕಗಳಲ್ಲಿ ಒಂದಾಯಿತು. ಆದಕಾರಣ, ಆದಾಯದ ಮೂಲಕ್ಕೆ ಪೂರಕವಾಗಿ ಕೋಳಿಗಳನ್ನು ಉಚಿತವಾಗಿ ಕೊಡಮಾಡಿದರೂ ಲಂಬಾಣಿಗಳು ಅವುಗಳನ್ನು ಸ್ವೀಕರಿಸುವುದಿಲ್ಲ. ಸಾಂಪ್ರದಾಯಿಕ ಧಾರ್ಮಿಕ ಕಲ್ಪನೆಗಳು ಅಥವಾ ವಿಚಾರಗಳು ಆರ್ಥಿಕ ಸುಧಾರಣೆಗಳನ್ನು ಹೇಗೆ ತಡೆಗಟ್ಟುತ್ತವೆ ಎಂಬುದಕ್ಕೆ ಈ ಅಂಶವು ಒಂದು ನಿದರ್ಶನವಾಗಿದೆ. ಆದರೆ ಈ ನಂಬಿಕೆಗೆ ವಿರುದ್ಧವಾಗಿ ಇತ್ತೀಚೆಗೆ ತಾಂಡಗಳಲ್ಲಿ ಕೋಳಿಗಳನ್ನು ಸಾಕುವ ಪರಿಪಾಟ ಆರಂಭಗೊಂಡಿದೆ.

## ಇತರ ನಂಬಿಕೆಗಳು

ಲಂಬಾಣಿಗಳು ಒಂದೆಡೆ ನೆಲೆನಿಂತ ಆರಂಭದ ದಿನಗಳಿಂದಲೇ ಸೇವಾಭಯ ಅವರಿಗೆ ಇಷ್ಟವಾದ ಸಂತನಾಗಿದ್ದನು. ಆತನ ಬಗೆಗೆ ವಿವರಣೆಗಳನ್ನು ನೀಡುವ ಅನೇಕ ಜಾನಪದಗೀತೆಗಳಿವೆ. ಅವುಗಳಲ್ಲಿ ಆತನಿಗೆ ದೈವತ್ವವನ್ನು ನೀಡಲಾಗಿದೆ (ನೋಡಿ: ಗ್ಯಾರಿಯರ್‌ಸನ್, ೧೯೬೮ : ೨೭೦). ಇಂದು ಸೇವಾಭಯನು ಪ್ರತಿಯೊಂದು ತಾಂಡದ ಧಾರ್ಮಿಕ ಕೇಂದ್ರ ಸ್ಥಾನವಾಗಿದ್ದು ಇದು ಲಂಬಾಣಿಗಳ ಎಲ್ಲ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿದೆ. ಇಲ್ಲಿ ಅವರು ತಮ್ಮ ಸಾಂಪ್ರದಾಯಿಕ ಪಂಚಾಯತಿಗಳ ಸಭೆಗಳನ್ನು ನಡೆಸುತ್ತಾರೆ. ಭಜನೆಗಳನ್ನು ಮಾಡುತ್ತಾರೆ. ತಮ್ಮನ್ನು ಕಾಣಲು ಬಂದ ಪ್ರಮುಖ ವ್ಯಕ್ತಿಗಳನ್ನು ಭೇಟಿಮಾಡುತ್ತಾರೆ ಮತ್ತು ವಿರಾಮದ ಅವಧಿಯಲ್ಲಿ ಹರಟೆ ಹೊಡೆಯುತ್ತಾರೆ. ಬೆಳಗ್ಗೆ ಕೆಲಸಕ್ಕೆ ಹೋಗುವಾಗ ಅಥವಾ ಪ್ರಮುಖವಾದ ಕೆಲಸಕ್ಕೆ ಹೊರಟಾಗ ಲಂಬಾಣಿಗಳು ದೇವಾಲಯಕ್ಕೆ ಹೋಗಿ ದರ್ಶನ ಪಡೆದುಕೊಂಡೇ ಹೊರಡುವುದು ಪದ್ಧತಿ. ಸೇವಾಭಯನ ಬಗೆಗೆ ಲಂಬಾಣಿಗಳಲ್ಲಿದ್ದ ಗೌರವ, ಶ್ರದ್ಧೆ, ಭಾವವನ್ನು ಇದು ನಿದರ್ಶಿಸುತ್ತದೆ.

ಲಂಬಾಣಿಗಳ ಅಂತ್ಯ ಸಂಸ್ಕಾರದ ಸಂಪ್ರದಾಯಗಳು ಸಾಂಕ್ರಾಮಿಕ ರೋಗಗಳ ಬಗೆಗಿನ ಭೀತಿಯನ್ನು ಪ್ರತಿಫಲಿಸುತ್ತವೆ (ಪ್ರಾಚೀನಕಾಲದ ಜೀವನಾನುಭವದ ಕರಿನೆರಳು). ಸಾರ್ವಜನಿಕ ಆರೋಗ್ಯದ ನಿಯೋಗಗಳು ಸಾಂಕ್ರಾಮಿಕ ರೋಗಗಳನ್ನು ಪರಿಣಾಮಕಾರಿಯಾಗಿ

ನಿಯಂತ್ರಿಸುತ್ತಿರುವ ಇಂದಿನ ದಿನಗಳಲ್ಲಿಯೂ ದೇವತೆಗಳ ಕೋಪವೇ ಕಾರಣವೆಂದು ಅವರು ನಂಬುತ್ತಿದ್ದಾರೆ. ಸಾಂಕ್ರಾಮಿಕ ರೋಗಗಳನ್ನು ಹರಡುವ ದೇವತೆಗಳನ್ನು ಸಿಟ್ಟಿಗೆಬ್ಬಿಸುವಂತಹ ಯಾವುದೇ ಕೆಲಸವನ್ನು ಅವರು ಮಾಡುತ್ತಿರಲಿಲ್ಲ. ವಿವಾಹಿತ ಅಥವಾ ದೀಕ್ಷೆ ಪಡೆದ ಲಂಬಾಣಿಯು ಪೂರ್ಣವ್ಯಕ್ತಿ ಎಂದು ಪರಿಗಣಿಸುತ್ತಾರೆ. ಆದ ಕಾರಣ, ಅಂತಹ ವ್ಯಕ್ತಿಯ ಸಾವಿನ ನಂತರ ಆತನ ಶರೀರವನ್ನು ಸುಡಲಾಗುತ್ತದೆ. ವಿವಾಹದ ಮೊದಲೇ ತೀರಿ ಹೋದವರನ್ನು ಅಥವಾ ದೀಕ್ಷೆಯ ಮೊದಲೇ ತೀರಿಹೋದವರನ್ನು ಅಪೂರ್ಣ ವ್ಯಕ್ತಿಗಳು ಎಂದು ಪರಿಗಣಿಸಲಾಗುವುದರಿಂದ ಅವರ ಮೃತದೇಹಗಳನ್ನು ದಹನ ಮಾಡಲಾಗುವುದಿಲ್ಲ. ಅವುಗಳನ್ನು ಭೂಮಿಯಲ್ಲಿ ಹೂಳಲಾಗುತ್ತದೆ. ಐವತ್ತು ವರ್ಷಗಳ ಹಿಂದೆ ಗರ್ಭಿಣಿ ಸ್ತ್ರೀ ತೀರಿಹೊದರೆ ಆಕೆಯ ಗರ್ಭವನ್ನು ಸೀಳಿ ಶಿಶುವನ್ನು ಹೊರತೆಗೆದು ಅದನ್ನು ಹೂಳಲಾಗುತ್ತಿತ್ತು ಹಾಗೂ ಆ ಮಹಿಳೆಯ ಶರೀರವನ್ನು ದಹನಮಾಡಲಾಗುತ್ತಿತ್ತು. ಆದರೆ ಸಾಂಕ್ರಾಮಿಕ ರೋಗಗಳಿಂದ ತೀರಿಹೋದವರ ಮೃತ ಶರೀರಗಳನ್ನು ಹೂಳಲಾಗುತ್ತಿತ್ತೆ ವಿನಹ ಸುಡಲಾಗುತ್ತಿರಲಿಲ್ಲ. ಏಕೆಂದರೆ ಅಂತಹ ಶರೀರಗಳನ್ನು ಸಾಂಕ್ರಾಮಿಕ ರೋಗಗಳ ಅಧಿದೇವತೆಯ ಬಾಯಿಯಲ್ಲಿ ಸುಟ್ಟು ಹೋಗಿರುತ್ತವೆಯಾದ್ದರಿಂದ ಅವುಗಳು ದೇವತೆಯಲ್ಲಿ ವಿಲೀನವಾಗಿವೆ ಎಂದೂ ಅಂತಹ ವ್ಯಕ್ತಿಗಳ ಶರೀರಗಳನ್ನು ಸುಡುವುದು ಎಂದರೆ ದೇವತೆಯನ್ನು ಸುಟ್ಟಂತೆ, ಇದರಿಂದ ಹೆಚ್ಚಿನ ವಿಪತ್ತನ್ನು ತಂದುಕೊಂಡಂತಾಗುತ್ತದೆ ಎಂದೂ ಭಾವಿಸಲಾಗುತ್ತಿತ್ತು. ಮೃತಶರೀರಕ್ಕೆ ಸರಿಯಾದ ರೀತಿಯಲ್ಲಿ ಸಂಸ್ಕಾರವಾಗದಿದ್ದರೆ ಸಮಸ್ತ ಸಮುದಾಯವು ಮಳೆಯ ಕೊರತೆಯಿಂದ ಹಾಗೂ ಸಾಂಕ್ರಾಮಿಕ ರೋಗಗಳ ಹಾವಳಿಯಿಂದ ಸಂಕಷ್ಟಕೀಡಾಗುತ್ತದೆ ಎಂದು ಭಾವಿಸಲಾಗುತ್ತಿತ್ತು.

ಲಂಬಾಣಿಗಳು ಮಾಟ, ಮಂತ್ರ ಹಾಗೂ ಶಕುನಗಳಲ್ಲಿ ನಂಬಿಕೆಯಿರಿಸಿದ್ದರು. ಲಂಬಾಣೇತರರು ಭಾವಿಸುವಂತೆ ಲಂಬಾಣಿಗಳು ಕೂಡ ಗೂಬೆಯನ್ನು ಅಪಶಕುನವೆಂದು ಭಾವಿಸುತ್ತಾರೆ. ಗೂಬೆಯು ಸಂಭವಿಸಲಿರುವ ಸಾವು, ನೈಸರ್ಗಿಕ ವಿಪತ್ತು ಅಥವಾ ಸಾಂಕ್ರಾಮಿಕ ರೋಗದ ಮುನ್ಸೂಚನೆಯ ಅಪಶಕುನ ಎಂದು ಅವರು ಭಾವಿಸುತ್ತಾರೆ. ಅವರು ಇಂದಿಗೂ ಕಪ್ಪು ಮತ್ತು ಬಿಳಿ ಮಾಟವನ್ನು ನಂಬುತ್ತಾರೆ. ಮತ್ಸರದಿಂದ ಕೂಡಿದ ಸ್ವಾರ್ಥಗಳು ಮತ್ತು ವೈರಿಗಳು ಮಾಡಿಸುವ ಮಾಟ ಮದ್ದುಗಳು ಗಟ್ಟಿಮುಟ್ಟಾದ ವ್ಯಕ್ತಿಗೂ ಅಪಾಯವನ್ನುಂಟುಮಾಡಬಹುದು ಎಂದು ನಂಬುತ್ತಾರೆ. ಅದೇ ರೀತಿಯಾಗಿ ಕೃಷಿಯ ಬೆಳೆಯ ಪೈರುಗಳು, ದನಕರುಗಳು, ಹೈನು ದನಕರುಗಳು ಮೊದಲಾದವುಗಳು ಕೂಡ ಮಾಟಮದ್ದಿನಿಂದ ಬಾಧಿತಗೊಳ್ಳುತ್ತವೆ ಎಂದು ನಂಬುತ್ತಾರೆ. ಒಟ್ಟಿನಲ್ಲಿ, ಮಾಟದ ಆಚರಣೆಗಳಲ್ಲಿಯ ನಂಬಿಕೆಯು ಮುಂದುವರೆದಿದೆಯಾದರೂ ಅಲೆಮಾರಿ ಜೀವನದ ಮಾಟದ ರೀತಿ ನೀತಿಗಳಿಗಿಂತ ಭಿನ್ನವಾಗಿದ್ದು, ರೈತಾಪಿ ಜನರ ನಂಬಿಕೆಗಳ ಸ್ವರೂಪದ ರೀತಿಯೇ ಮಾರ್ಪಟ್ಟಿದೆ. ಲಂಬಾಣಿಗಳಲ್ಲಿ ಮಾಂತ್ರಿಕರು ಅಥವಾ ಮಾಟಮದ್ದುಗಳನ್ನು ಮಾಡುವವರನ್ನು ನಾನು ಕಂಡಿಲ್ಲ. ತಮಗೆ ಅಗತ್ಯವೆನಿಸಿದಾಗ ಈ ವಿಷಯಗಳಲ್ಲಿ ಲಂಬಾಣೇತರ ಪರಿಣತರ ಸೇವೆಗಳನ್ನು ಪಡೆದುಕೊಳ್ಳುವುದಾಗಿ ಅವರು ಹೇಳುತ್ತಾರೆ. ಅಡಗಿಸಿಟ್ಟಿದ್ದ ಸಂಪತ್ತನ್ನು ಪಡೆಯುವ ದುರಾಸೆಯಿಂದ ಮರಿಯಮ್ಮನಹಳ್ಳಿ ಲಂಬಾಣಿಯೋರ್ವನು ಕೆಲವು ವರ್ಷಗಳ ಹಿಂದೆ ತನ್ನ ಸೋದರನ ತರುಣ ಪುತ್ರಿಯನ್ನೇ ಬಲಿ ನೀಡಿದ್ದ ಒಂದು ಘಟನೆ ನಡೆದ್ದಿದೆ ಎಂದು ಕೆಲವು ಮಾಹಿತಿಗಾರರು ಹೇಳುತ್ತಾರೆ. ಆದರೆ ಇದಕ್ಕೆ ಯಾವುದೇ ಆಧಾರಗಳಿಲ್ಲ.

## ಲಂಬಾಣಿಗಳ ಲೋಕದೃಷ್ಟಿ

ಆದಿವಾಸಿ ಜೀವನದಿಂದ ರೈತಾಪಿ ಜೀವನದವರೆಗಿನ ಅಂದರೆ ಕಳೆದ ೧೫೦ ವರ್ಷಗಳ ಅವಧಿಯಲ್ಲಿ ಲಂಬಾಣಿಗಳ ಜೀವನ ದೃಷ್ಟಿಯು ತೀವ್ರತರವಾಗಿ ಬದಲಾವಣೆಗೊಂಡಿದೆ. ಆರ್ಥಿಕತೆಯಲ್ಲಿಯ ಬದಲಾವಣೆ, ವಾಸಸ್ಥಾನದ ರೀತಿ ನೀತಿಗಳಲ್ಲಿಯ ಬದಲಾವಣೆ (ಅಲೆಮಾರಿ ಜೀವನದಿಂದ ಒಂದೇ ಸ್ಥಳದಲ್ಲಿ ನೆಲೆನಿಂತ ಜೀವನದವರೆಗೆ), ಜೀವನದ ಇತರ ಕ್ಷೇತ್ರಗಳಲ್ಲಿಯ ಬದಲಾವಣೆಗಳು, ನೆರೆಹೊರೆಯ ಕೃಷಿಕರ ಜೀವನ ದೃಷ್ಟಿಯ ಪ್ರಭಾವಗಳು ಮೊದಲಾದವುಗಳು ಈ ಬದಲಾವಣೆಗಳಿಗೆ ಕಾರಣವಾಗಿವೆ. ಲಂಬಾಣಿಗಳ ದಂತಕತೆಗಳು, ಪುರಾಣಗಳು ಅವರ ಮೂಲಕ್ಕೆ ಸಂಬಂಧಿಸಿದ ವಿವರಣೆಗಳನ್ನು ನೀಡುತ್ತವೆ. ಅವರ ವಲಸೆಗೆ ಸಂಬಂಧಿಸಿದ ವಿವರಗಳು, ಅವರ ಸಂಸ್ಕೃತಿಯ ನಾಯಕರು ಮೊದಲಾದವುಗಳನ್ನು ಈ ದಂತಕತೆಗಳು, ಪುರಾಣಗಳು ತಿಳಿಸುತ್ತವೆ. ಹಾಗೆಯೇ ಅವರ ಧಾರ್ಮಿಕ ನಂಬಿಕೆಗಳು, ನೈತಿಕತೆ ಹಾಗೂ ಉತ್ತಮ ಜೀವನ ದೃಷ್ಟಿಕೋನಗಳನ್ನು ತಿಳಿಸುತ್ತವೆ.

ಸತ್ಯಯುತ, ಶೂರ ಹಾಗೂ ಯೋಧ ರಜಪೂತ ಪರಂಪರೆಯಿಂದ ಶಾಂತಿಯುತವಾದ, ಮೃದು ಮನಸ್ಸಿನ ರೈತಾಪಿ ಜೀವನದೆಡೆಗೆ ಸಾಗಿಬಂದುದೇ ಅವರ ಜೀವನದಲ್ಲಿ ಆವರಿಸಿದ ಮೌಲ್ಯಗಳಲ್ಲಿ ಬದಲಾವಣೆಗಳು ತಲೆದೋರಲು ಪ್ರಮುಖ ಕಾರಣವಾಗಿದೆ. ಅವರ ಪ್ರಸ್ತುತ ಸಾಮಾಜಿಕ ಜೀವನದಲ್ಲಿ ಒಕ್ಕಲುತನವೇ ಒಂದು ಪ್ರಬಲ ಸಾಮಾಜಿಕ ಮೌಲ್ಯ. ಆದಕಾರಣ, ಉತ್ತಮ ಜೀವನದ ಇಂದಿನ ಪರಿಕಲ್ಪನೆಯಲ್ಲಿ ಒಬ್ಬ ವ್ಯಕ್ತಿಯು ಜೀವನೋಪಾಯಕ್ಕೆ ಸಾಕಾಗುವಷ್ಟು ಕೃಷಿ ಭೂಮಿಯನ್ನು, ಸುಖವಾಗಿ ಊಟಮಾಡಲು ಬೇಕಾಗುವಷ್ಟು ಆಹಾರ, ಸದೃಢ ಜೀವನಕ್ಕೆ ಅಗತ್ಯವಾದ ಆರೋಗ್ಯಭಾಗ್ಯ, ಕುಟುಂಬದ ವೃತ್ತಿ ನಿರ್ವಹಣೆಗೆ ಬೇಕಾದಷ್ಟು ಸಂಖ್ಯೆಯಲ್ಲಿ ಸಂತಾನ ಹೊಂದಿರಬೇಕು. ಒಟ್ಟಿನಲ್ಲಿ ಆಸ್ತಿಯನ್ನು, ಪ್ರಾಣಿಗಳನ್ನು ಖರೀದಿಸಲು, ಪೋಷಿಸಲು ಸಾಮರ್ಥ್ಯ, ಕೆಲಸ, ಉದ್ದಿಮೆ ಹಾಗೂ ಮಿತವ್ಯಯ ಮೊದಲಾದ ಗುಣವಿಶೇಷಗಳು ಅವರು ಬಯಸುವ ನಿರಂತರ ಮೌಲ್ಯಗಳಾಗಿವೆ. ಈ ಮೌಲ್ಯಗಳನ್ನು ಜೀವನದಲ್ಲಿ ಸಾಧಿಸಿದವರು ಕೆಲವೇ ವ್ಯಕ್ತಿಗಳು ಮಾತ್ರ ಎಂಬುದನ್ನು ಎರಡನೆ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಪ್ರದೇಶದ ಲಂಬಾಣಿಗಳ ವಿಶಿಷ್ಟ ಸ್ಥಳೀಯ ರೈತಾಪಿ ಜೀವನ ಮಾರ್ಗವನ್ನು ಅಂತರ್ಗತಿಸಿಕೊಂಡಿದ್ದಾರೆ. ಅವರು ಉನ್ನತ ಶಿಕ್ಷಣಕ್ಕಾಗಿ, ಆಧುನಿಕತೆಗಾಗಿ ಇಲ್ಲವೇ ನಗರೀಕರಣಕ್ಕಾಗಿ, ಹಂಬಲಿಸುತ್ತಿಲ್ಲ. ಸಾಕಷ್ಟು ಶಿಕ್ಷಣ ಪಡೆದಿಲ್ಲವಾದ್ದರಿಂದ, ನಗರ ಜೀವನದಲ್ಲಿ ವೃತ್ತಿಕೌಶಲವಿಲ್ಲದೆ ಸಂಪಾದನೆ ಮಾಡಲಿಕ್ಕಾಗದು ಎಂದೇ ಅವರು ನಗರವಾಸಿಗಳಾಗಲು ಇಷ್ಟಪಡುತ್ತಿಲ್ಲ. ಒಕ್ಕಲುತನದಲ್ಲಿ ಕೂಲಿಕೆಲಸ ಅಥವಾ ಕಾಡಿನಲ್ಲಿಯ ಕೆಲಸಕ್ಕಿಂತ ಕೀಳಾದ ಸ್ಥಾನ ನಗರ ಜೀವನದಲ್ಲಿ ಸಿಕ್ಕುವುದರಿಂದ ಅದು ಅವರಿಗೆ ಬೇಡವಾಗಿದೆ. ಒಬ್ಬ ವ್ಯಕ್ತಿ ಕಠಿಣ ಪರಿಶ್ರಮಿಯಾಗಿರಬೇಕು, ಕಳವು ಮಾಡಬಾರದು (ಹಿಂದೊಂದು ಕಾಲದಲ್ಲಿ ಲಂಬಾಣಿಗಳು ದರೋಡೆ - ಕಳುವನ್ನು ಕಸುಬಾಗಿಸಿಕೊಂಡಿದ್ದು ಅಲ್ಲಿಂದ ಇಂದಿನವರೆಗೆ ಆದ ಬದಲಾವಣೆ), ಅಮಲನ್ನುಂಟು ಮಾಡುವ ಮದ್ಯವನ್ನು ಕುಡಿಯಕೂಡದು. ಅನ್ಯರಿಗೆ ತೊಂದರೆ ನೀಡಕೂಡದು ಮತ್ತು ಎಲ್ಲಕ್ಕಿಂತ ಮಹತ್ವದ್ದು ಸಮುದಾಯಕ್ಕೆ ಕೆಟ್ಟ ಹೆಸರು ತರಕೂಡದು. ಇಂತಹ ವ್ಯಕ್ತಿ ಮಾತ್ರ ಒಳ್ಳೆಯವನು ಇಲ್ಲವಾದರೆ ಆತನು ಕೆಟ್ಟವನು ಎಂಬುದು ಅವರ ಪ್ರಚಲಿತ ಸಾಮಾಜಿಕ ನಡವಳಿಕೆಯ ಮೌಲ್ಯಗಳಾಗಿವೆ.

ಓರ್ವ 'ಒಳ್ಳೆಯ ಮಹಿಳೆ' ವಿವಾಹವಾಗಲೇಬೇಕು. ಸಮೃದ್ಧ ಸಂತಾನಶಕ್ತಿಯನ್ನು ಹೊಂದಿರಬೇಕು ಹಾಗೂ ಅನೇಕ ಮಕ್ಕಳನ್ನು ಹೆರಬೇಕು. ಎರಡನೇ ವಿವಾಹಕ್ಕೆ ಸಮಾಜದಲ್ಲಿ ಗೌಣವಾದ ಕೆಳ ಅಂತಸ್ತು ಇದೆ. ಬಂಜೆತನವನ್ನು ದೌರ್ಭಾಗ್ಯವೆಂದು ಭಾವಿಸಲಾಗುತ್ತದೆ. ಮಹಿಳೆಯು ತಂದೆ-ತಾಯಿಗಳ ಬಗೆಗೆ, ಅತ್ತಿಗೆ, ನಾದಿನಿ, ಅತ್ತೆ ಇತ್ಯಾದಿಯವರ ಬಗೆಗೆ ಕೆಟ್ಟದ್ದನ್ನು ಆಡಬಾರದು. ತನ್ನ ಪತಿಯೊಂದಿಗೆ ನಿಷ್ಠೆ - ನಂಬಿಕೆಯಿಂದ ನಡೆದುಕೊಳ್ಳಬೇಕು. ಈ ನಿಯಮಗಳಲ್ಲಿ ಯಾವುದೊಂದನ್ನು ಉಲ್ಲಂಘಿಸುವ ಮಹಿಳೆಯನ್ನು 'ಮನೆಯಲ್ಲಿಯ ದೆವ್ವ' ಎಂದು ಭಾವಿಸಲಾಗುತ್ತದೆ.

ದನಕರುಗಳನ್ನು ಯಾರೂ (ವಿಶೇಷವಾಗಿ ಹಸು ಮತ್ತು ಎತ್ತು) ಹಿಂಸೆ ಮಾಡಬಾರದು. ಬೆಳೆದ ಪೈರನ್ನು ಕಿತ್ತು ಹಾಕುವುದಾಗಲಿ, ಕಟಾವು ಮಾಡಿದ ಪೈರುಗಳಿಗೆ ಅಥವಾ ಬಣವೆಗಳಿಗೆ ಬೆಂಕಿ ಹಚ್ಚುವುದಾಗಲಿ ಪಾಪದ ಕೆಲಸವೆಂದು ತಿಳಿಯಲಾಗುತ್ತದೆ. ಇಂತಹ ಅಸಹಜವಾದ ಅನೀತಿಯ ಕೆಲಸಗಳಲ್ಲಿ ತೊಡಗುವುದು ಸರಿಯಲ್ಲ. ಎಲ್ಲ ರೀತಿಯ ನಿರ್ಬಂಧಿತ ಲೈಂಗಿಕ ಸಂಬಂಧಗಳು - ವಿವಾಹಪೂರ್ವ ಹಾಗೂ ವಿವಾಹಬಂಧನದಾಚೆಗಿನ ಲೈಂಗಿಕ ಸಂಬಂಧಗಳು, ಬಂಧುತ್ವ, ಮನೆತನ ಸಂಬಂಧಿಗಳು ಹಾಗೂ ಸಮುದಾಯದೊಳಗಿನ ಒಳಬಾಂಧವ್ಯ ವಿವಾಹ ನಿಯಮಗಳ ಉಲ್ಲಂಘನೆಯು ಅನೈತಿಕವಾದುದು. ಅನೀತಿಯುತ ಕಾರ್ಯಗಳಲ್ಲಿ ತೊಡಗಿದವರನ್ನು ದೇವರು ಶಿಕ್ಷಿಸುತ್ತಾನೆ. ಅಂತಹ ವ್ಯಕ್ತಿಗಳು ಅಪಘಾತಗಳಿಗೀಡಾಗಿಯೋ, ನೈಸರ್ಗಿಕ ವಿಪತ್ತು ಇಲ್ಲವೆ ವಾಸಿಯಾಗದ ಕಾಯಿಲೆಗಳಿಗೆ ತುತ್ತಾಗಿಯೋ ಸಾಯುತ್ತಾರೆ ಎಂಬುದಾಗಿ ಲಂಬಾಣಿಗಳು ನಂಬುತ್ತಾರೆ.

ಲಂಬಾಣಿಗಳು ಇತರ ಜನರು ತಮಗೆ ವಿರೋಧಿಗಳು ಮತ್ತು ಅಪಾಯಕಾರಿ ಎಂದು ಭಾವಿಸುವವರ ಬಗೆಗೆ ರಕ್ಷಣೋಪಾಯದ ನಿಲುವುಗಳನ್ನು ಅನುಸರಿಸುತ್ತಾರೆ. ಅವರು ಪ್ರತ್ಯೇಕವಾದ ಹಾಗೂ ತಮ್ಮದೇ ಆದ ತಾಂಡಗಳಲ್ಲಿ ವಾಸಿಸುತ್ತಿರುವುದು ಈ ಕಲ್ಪನೆಯ ಭೌತಿಕ ನಿಲುವಾಗಿದೆ. ಕೃಷಿ ಸಾಗುವಳಿಯ ಆಧುನೀಕರಣಕ್ಕೆ ಹಾಗೂ ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರಕಾರಿ ಸೌಲಭ್ಯಗಳನ್ನು ಲಂಬಾಣಿಗಳು ಸದುಪಯೋಗ ಪಡಿಸಿಕೊಳ್ಳದಿರುವುದಕ್ಕೆ ಅವುಗಳ ಬಗೆಗಿನ ಅವರ ಅಪನಂಬಿಕೆಯೂ ಭಾಗಶಃ ಕಾರಣವಾಗಿದೆ. ತಮ್ಮವರಲ್ಲದ ಹೊರಗಿನವರು ತಮ್ಮಿಂದ ಲಂಚ ಪಡೆದು ಮೋಸಮಾಡುತ್ತಾರೆ ಎಂದು ಅವರು ಭಾವಿಸುತ್ತಾರೆ. ಕುಟುಂಬದ ಆರ್ಥಿಕ ಸ್ವಾತಂತ್ರ್ಯದ ಮೂಲಕ ಅಸ್ಥಿರತೆಯನ್ನುಳ್ಳ ಈ ಜಗತ್ತಿನಲ್ಲಿ ಸುಭದ್ರತೆಯನ್ನು ಕಂಡುಕೊಳ್ಳಲು ಹವಣಿಸುತ್ತಾರೆ. ಸಾಮುದಾಯಿಕ ಏಕತೆಯು ಅವರಿಗೆ ಸಂಘಟಿತ ಮಾನಸಿಕ-ಸಾಮಾಜಿಕ ಸ್ಥಿರತೆಯ ಭಾವನೆಯನ್ನು ನೀಡುತ್ತದೆ. ಕುಟುಂಬದ ಸದಸ್ಯರಿಗೆ ಆಹಾರ, ಬಟ್ಟೆ, ವಸತಿಯನ್ನು ನೀಡುವುದರಿಂದ ಮಾತ್ರವೇ ಅನ್ಯರು ಕುಟುಂಬದ ವಿಷಯಗಳಲ್ಲಿ ಹಸ್ತಕ್ಷೇಪಿಸುವುದನ್ನು ತಡೆಯಲು ಸಾಧ್ಯವೆಂಬುದು ಅವರ ಅಭಿಮತವಾಗಿದೆ. ತನ್ನ ಕೆಲಸದಲ್ಲಿ ಶ್ರದ್ಧೆ, ನಿಷ್ಠೆಯನ್ನು ಹೊಂದಿರುವ ಲಂಬಾಣಿ ಅದರಿಂದ ಲಭಿಸುವ ಆದಾಯ ಎಷ್ಟೇ ಇದ್ದರೂ ತಾನು ಸುರಕ್ಷಿತ ಹಾಗೂ ಕಳಂಕರಹಿತ ಎಂಬ ಭಾವವನ್ನು ತಳೆದಿರುತ್ತಾನೆ. ಆದಕಾರಣ, ಪ್ರಾಪಂಚಿಕ ಯಶಸ್ಸು ಒಂದು ಮೌಲ್ಯವೆಂದೇ ಪರಿಗಣಿಸಲ್ಪಟ್ಟಿದ್ದು ಪ್ರಶಂಸೆಗೆ ಪಾತ್ರವಾಗಿದೆ. ಕಷ್ಟಪಟ್ಟು ದುಡಿದರೂ ಆರ್ಥಿಕ ಕ್ಷೇತ್ರದಲ್ಲಿ ಯಶಸ್ಸು ಸಿಕ್ಕದೇ ಇರಬಹುದು. ಇದು ವಿಶೇಷತಃ ಕೃಷಿ ಸಾಗುವಳಿಗೆ ಸಂಬಂಧಿಸಿದ ನಿಜವಾದ ವಿಚಾರವಾಗಿದೆ. ಅನಿಶ್ಚಿತ ಮುಂಗಾರು, ಹಿಂಗಾರು ಮಳೆ ಹಾಗೂ ಅನಿಯಮಿತ ವಾತಾವರಣವನ್ನು ಅವಲಂಬಿಸಿದ ಕೃಷಿ ಸಾಗುವಳಿಯಲ್ಲಿ ಶ್ರಮವಹಿಸಿ ದುಡಿದರೂ ಆರ್ಥಿಕ ಯಶಸ್ಸು ನಿಶ್ಚಿತವಲ್ಲ. ಆದಕಾರಣ, ಲಂಬಾಣಿಗಳು ತಮ್ಮ ಆರ್ಥಿಕ ಯಶಸ್ಸಿಗಾಗಿ ದೈವಶಕ್ತಿಗಳನ್ನು ನಂಬುತ್ತಾರೆ. ತಮ್ಮ ನೆರೆಹೊರೆಯ ಸಹಜೀವಿಗಳಿಗೆ ಕಷ್ಟದ ಸಮಯದಲ್ಲಿ ನೆರವಾಗುತ್ತಾರೆ. ತಮಗೂ ಅಂತಹ ಸಂದರ್ಭಗಳು ಎದುರಾಗಬಹುದೆಂಬ ಪ್ರಜ್ಞೆ ಇಂತಹ ಸಹಾನುಭೂತಿ ನಿಲುವಿಗೆ ಪ್ರೇರಣೆ ನೀಡುತ್ತದೆ. ಅವರ ಆರ್ಥಿಕ ಅಭಿವೃದ್ಧಿಯ ಕನಿಷ್ಠಮಟ್ಟವು ರಾಜಕೀಯ ಸಾಂಸ್ಥಿಕ ಸಹಕಾರಿ ಯತ್ನಗಳಲ್ಲಿ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತದೆ.

ಆದರೆ ಅತಿಮಾನುಷ ಶಕ್ತಿಗಳ ಮೇಲಿನ ಅತಿಯಾದ ಅವಲಂಬನೆಯು ಲಂಬಾಣಿಗಳ ವೈಯಕ್ತಿಕತೆ ಮತ್ತು ಸ್ವಾತಂತ್ರ್ಯಗಳನ್ನು ಸಂಪೂರ್ಣವಾಗಿ ಮುಕ್ತಗೊಳಿಸಿಲ್ಲ. ಆದರೂ ಅವರಲ್ಲಿಯ ವೈಯಕ್ತಿಕತೆಯು ಸಾರ್ವತ್ರಿಕತೆಯ ಸಾಧನೆಯನ್ನೇ ಗುರಿಯಾಗಿರಿಸಿಕೊಂಡ ಪಾಶ್ಚಾತ್ಯರಂತೆ ಕಟ್ಟುನಿಟ್ಟಾಗಿ ಸ್ಪರ್ಧಾತ್ಮಕವಾಗಿಲ್ಲ. ಆದಕಾರಣ ತಾಂಡಗಳಲ್ಲಿ ವ್ಯಕ್ತಿಯು ಕುಟುಂಬ ಹಾಗೂ ಸ್ಥಳೀಯ ಸಮುದಾಯದ ಅವಶ್ಯಕತೆಗಳಿಗೆ ಹೊಂದಿಕೊಳ್ಳುವ ಹಾಗೂ ಸಮರ್ಪಿಸಿಕೊಳ್ಳುವ ಮೂಲಕ ಸುಭದ್ರತೆ ಮತ್ತು ಮಾನ್ಯತೆಯನ್ನು ಪಡೆದುಕೊಳ್ಳಲು

ಪ್ರಯತ್ನಿಸುತ್ತಾನೆ. ಗೌರವವನ್ನು ಪರಸ್ಪರವಾಗಿ ಕೊಟ್ಟು ತೆಗೆದುಕೊಳ್ಳುವ ಮೂಲಕ ಸಾಮಾಜಿಕ ಸುಭ್ರದತೆಯನ್ನು ಪಡೆಯಲು ಹವಣಿಸುತ್ತಾರೆ. ಗೌರವದ ಸಂಬಂಧವು ಸುರಕ್ಷಿತವಾದುದೆಂದು ಅವರು ಬಗೆಯುತ್ತಾರೆ. ಒಳ್ಳೆಯ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ಥಾನದಿಂದ ವೃದ್ಧಾಪ್ಯದಲ್ಲಿ ನಿಕಟ ಬಾಂಧವ್ಯಗಳನ್ನು ವ್ಯಕ್ತಿಗಳ ಮಧ್ಯೆ ಅಥವಾ ಕುಟುಂಬಗಳ ಮಧ್ಯೆ ಪ್ರತಿಷ್ಠಾಪಿಸುತ್ತಾರೆ.

ಲಂಬಾಣಿಗಳನ್ನು ಬಾಹ್ಯ ಜನರ ಸಂದೇಹದ ಮನೋಭಾವದಿಂದಾಗಿ ಅರ್ಥಮಾಡಿಕೊಳ್ಳುವುದು ಅಷ್ಟೊಂದು ಸುಲಭವಲ್ಲ. ಅವರು ಸಂಪರ್ಕ ಮಾಡುವ ಮನೋಭಾವವನ್ನು ಹೊಂದಿಲ್ಲ. ಅವರಲ್ಲಿ ವ್ಯಕ್ತಿ-ವ್ಯಕ್ತಿಗಳ ನಡುವಿನ ಸಂಬಂಧಗಳು ಮುಕ್ತ ಹಾಗೂ ಸ್ವಚ್ಛಂದ ವರ್ತನೆಯಿಂದ ಕೂಡಿದವುಗಳಾಗಿವೆ. ವ್ಯಕ್ತಿ ಕಡಿಮೆ ಮಾತನಾಡಿದರೂ ತನ್ನ ಕೆಲಸ ಕಾರ್ಯಗಳತ್ತ ಗಮನ ನೀಡುವವನನ್ನು ಬುದ್ಧಿವಂತ ಎಂದು ಭಾವಿಸಲಾಗುತ್ತದೆ. ಲಂಬಾಣಿಗಳು ಬಡತನದ ಮಧ್ಯೆಯೂ ಜೀವನದ ಪ್ರಮುಖ ಸಾಮಾಜಿಕ ಧಾರ್ಮಿಕ ವಿಷಯಗಳು, ಒಂದನ್ನೊಂದು ಸತ್ವಯುತವಾಗಿಸಿವೆ. ಲಂಬಾಣಿ ರೈತರು ತಮ್ಮ ಆದಿವಾಸಿ ಅಂಶಗಳನ್ನು ಈಗಲೂ ರಕ್ಷಿಸಿಕೊಂಡಿದ್ದಾರೆ. ತನಗೆ ಅನಿಸಿದ್ದನ್ನು ಹಾಗೂ ತೋಚಿದ್ದನ್ನು ಮರೆಮಾಚದೆ ಸನ್ನೆಗಳೊಂದಿಗೆ ಮುಕ್ತವಾಗಿ ಹೇಳುವುದು, ಹಗೆತನವನ್ನು ಕೂಡ ನೇರವಾಗಿ ವ್ಯಕ್ತಪಡಿಸುವುದು ಮೊದಲಾದವು ಅನುವಂಶಿಕವಾಗಿ ಅವರಿಗೆ ಬಳುವಳಿಯಾಗಿ ಬಂದ ಸ್ವಭಾವಜನ್ಯ ಪ್ರವೃತ್ತಿಗಳಾಗಿವೆ. ಕೆಲವು ಸಂದರ್ಭಗಳಲ್ಲಿ ಮನದಾಳದಲ್ಲಿ ಅದುಮಿತಳ್ಳಲ್ಪಟ್ಟ ಶತ್ರುತ್ವಭಾವವು ಕೆಟ್ಟ ಮಾತುಗಳ ಮೂಲಕ, ಕದಿಯುವ ಮೂಲಕ, ಆಸ್ತಿಯನ್ನು ರಹಸ್ಯವಾಗಿ ನಾಶಮಾಡುವ ಮೂಲಕ, ಅಸೂಯೆ, ಅಸಮ್ಮತಿ ಸೂಚಿಸುವ ಮೂಲಕ ಮತ್ತು ಮಾಟ-ಮದ್ದುಗಳನ್ನು ಮಾಡುವ ಅಥವಾ ಮಾಡಿಸುವ ಮೂಲಕ ಪರೋಕ್ಷವಾಗಿ ಪ್ರಕಟಗೊಳ್ಳುತ್ತದೆ. ಕೊಲೆ ಕೂಡ ಆಗುವುದಿಲ್ಲವೆಂದಿಲ್ಲ. ಸರಿಯಾದ ಆಹಾರ ಪೋಷಣೆ ಇಲ್ಲದಿರುವುದು, ಸಾಕಷ್ಟು ಸೌಲಭ್ಯಗಳಿಲ್ಲದಿರುವುದು ವಸ್ತುಸ್ಥಿತಿಯಾಗಿದ್ದರೂ, ಅವರ ಮಕ್ಕಳು, ಸಂತೋಷದಿಂದಿರುತ್ತಾರೆ. ಸಂಜೆ ವೇಳೆ ಹಾಡುತ್ತ ಕಲೆಯುತ್ತಿರುವ ಮಕ್ಕಳು ಸುಖದ ಕಲ್ಪನೆಯನ್ನು ನೀಡುತ್ತವೆ.

ಲಂಬಾಣಿಗಳಲ್ಲಿ ಸೃಜನಾತ್ಮಕತೆ, ರಚನಾತ್ಮಕತೆ ಹಾಗೂ ಕಲಾತ್ಮಕ ಅಭಿವ್ಯಕ್ತಿಗಳು ಸೀಮಿತವಾಗಿವೆ. ಅವರಲ್ಲಿ ಪಾತ್ರೆ ಮಾಡುವ (ಕುಂಬಾರಿಕೆ), ಕಟ್ಟಿಗೆಯಲ್ಲಿ ಕೆತ್ತನೆಯ ಕೆಲಸ (ಬಡಿಗತನ), ನೇಯುವ ಅಥವಾ ಬುಟ್ಟಿ ಹೆಣೆಯುವ ಮೊದಲಾದ ಕೈಕಸಬುಗಳು ಇಲ್ಲ. ಅವರ ಜಾನಪದ, ಹಾಡುಗಳು ಮತ್ತು ನರ್ತನಗಳು ಭಾವಗರ್ಭಿತವಾಗಿ ಮನತಟ್ಟುತ್ತವೆ. ಮಹಿಳೆಯರಲ್ಲಿ ಎದ್ದು ಕಾಣುವ ರಂಗುರಂಗಿನ ಗಾಢ ಕಸೂತಿಗಳುಳ್ಳ ವಿಶಿಷ್ಟ ಕಸೂತಿಯ ಬಟ್ಟೆ ಅವರ ಕಲಾತ್ಮಕ ಅಭಿವ್ಯಕ್ತಿಯ ಆಕರ್ಷಕ ಅಂಶವಾಗಿದೆ.

ಲೈಂಗಿಕತೆಯ ಬಗೆಗೆ ಲಂಬಾಣಿಗಳ ಪ್ರವೃತ್ತಿಯು ಸ್ವಸ್ಥಮಯವಾಗಿದೆ. ಅದು ಜೀವನದ ಒಂದು ಪ್ರಮುಖ ಭಾಗವಾಗಿದೆ. ವಿವಾಹ ನಿಶ್ಚಯದ ವಿತಣಕೂಟಗಳಲ್ಲಿ ಹಾಡುವ ಹಾಡು [೧೫] ಅವರ ಪ್ರವೃತ್ತಿಯನ್ನು ವಿವರಿಸುತ್ತದೆ. "ಶೂರ ವ್ಯಕ್ತಿಯು ಹೆಣ್ಣುಕುದುರೆಯನ್ನು ಇಷ್ಟಪಡುತ್ತಾನೆ ; ಖಡ್ಗವು ಯುದ್ಧದಲ್ಲಿ ಪ್ರಿಯವಾಗಿರುತ್ತದೆ; ಪತ್ನಿಯು ಹಾಸಿಗೆಯಲ್ಲಿ ಪ್ರಿಯವಾಗಿರುತ್ತಾಳೆ ಮತ್ತು ಭರ್ಜಿಯು ಬೇಟೆಯಾಡುವಾಗ ಪ್ರಿಯವಾಗಿರುತ್ತದೆ. ಅದೇ ರೀತಿಯಾಗಿ ಈ ಭಾಂಗಾ (ಮದ ತರಿಸುವ ಒಂದು ಪೇಯ) ನಿನಗೆ ಖುಷಿ ನೀಡುವಂತಹದಾಗಿರಬಹುದು" (ಪಲಾಂಡೆ, ೧೯೫೯ : ೧೯೫).

---

*೧೫ ಬಂಜಾರಿ ಭಾಷೆಯಲ್ಲಿ ಈ ಹಾಡು ಹೀಗಿದೆ:*

*ರಾಧಾ ಮಿಥಿ ಗೋಧಾಲಿ*
*ರಾಣಾ ಮಿಥಿ ತಲ್ವಾರ್*
*ಸೇಜಾ ಮಿಥಿ ಕಾಮಿನಿ*
*ಸುರಾ ಮಿಥಿ ಸಂಗಾ*
*ಲೋ ಭಾಯಿ ಭಾಂಗಾ*

ಭವಿಷ್ಯದ ಬಗೆಗೆ ಯೋಚಿಸದೇ ಇರುವುದು ಬಹುತೇಕ ಲಂಬಾಣಿಗಳಲ್ಲಿ ಕಂಡುಬರುವ ಕೊರತೆಯಾಗಿದ್ದು, ಭವಿಷ್ಯದ ದಿನಗಳಿಗೋಸ್ಕರ ಉಳಿತಾಯ ಮಾಡದೇ ಇರುವ ಸ್ಥಿತಿ ಸಾಮಾನ್ಯವಾಗಿದೆ. ನಾಳಿನ ದಿನಗಳ ಬಗೆಗೆ ಯೋಚಿಸುವ ಅಗತ್ಯವಿದೆ ಎಂದು ಅರಿತಿರುವ ಕೆಲವು ಲಂಬಾಣಿಗಳು ಯಶಸ್ವಿ ವ್ಯಕ್ತಿಗಳೂ ಆಗಿದ್ದಾರೆ. ಶಿಕ್ಷಣವು ಬದಲಾವಣೆಯನ್ನುಂಟುಮಾಡುವ ನಿಯೋಗ ಎಂಬುದನ್ನು ಕೂಡ ಅವರು ತಿಳಿದಿದ್ದಾರೆ. ಉಳಿದವರು ಸಾಮಾನ್ಯ ರೀತಿಯಲ್ಲಿ ಮಿತವ್ಯಯ ಮಾಡುತ್ತಾರೆ. ಹಣವಿದ್ದಾಗ ವೆಚ್ಚ ಮಾಡುತ್ತಾರೆ, ಹಣ ಕಡಿಮೆ ಇದ್ದಾಗ, ಕಡಿಮೆ ವೆಚ್ಚದಲ್ಲಿಯೇ ಎಲ್ಲವನ್ನು ನಿಭಾಯಿಸುತ್ತಾರೆ. 'ಇಂದಿನದಷ್ಟೇ ಆಲೋಚಿಸುವ' ಅಲೆಮಾರಿ ಜನರ ಪ್ರವೃತ್ತಿಯು ಲಂಬಾಣಿಗಳಲ್ಲಿ ಇದೆ. ಇತರ ಜಾತಿಗಳ ಜನರಲ್ಲಿ ಒಂದು ಬಗೆಯ ವಿಶಿಷ್ಟವಾದ ಮನೋಭಾವ ಗಾಢವಾಗಿ ಮೂಡಿದೆ. ಲಂಬಾಣಿಗಳು ಕಷ್ಟಪಟ್ಟು ದುಡಿಯುತ್ತಿದ್ದರೂ ಅವರೆಂದಿಗೂ ಸಂಪೂರ್ಣ ತೃಪ್ತಿಯ ಸ್ಥಿತಿಯನ್ನು ತಲುಪಲಾರರು ಎಂಬುದೇ ಈ ಕಲ್ಪನೆಯಾಗಿದೆ. ಈ ಅಭಿಪ್ರಾಯದಲ್ಲಿ, ಗುಪ್ತ ಧಾರ್ಮಿಕ ನೀತಿಯ ಗೌಣ ಸ್ವರೂಪದ ಛಾಯೆಯಿದೆ. ಲಂಬಾಣಿಗಳು ಪ್ರಾಮಾಣಿಕರಲ್ಲ ಹಾಗೂ ಸದ್ಗುಣಿಗಳಲ್ಲ ಎಂಬುದು ಇದರ ಸೂಚ್ಯಾರ್ಥವಾಗಿದೆ.

ಲಂಬಾಣಿಗಳಲ್ಲಿ ಸ್ವಂತ ಸುಧಾರಣೆಯ ಮಹತ್ವಾಕಾಂಕ್ಷೆ ಅಥವಾ ಒತ್ತಾಸೆ ಬಹುಪಾಲು ಜನರಲ್ಲಿ ಇಲ್ಲವಾಗಿದೆ. ಸುಗ್ಗಿಯಿಂದ ಸುಗ್ಗಿಯವರೆಗೆ ಸಾಕಷ್ಟು ಆಹಾರ, ಬಟ್ಟೆಯ ಅಗತ್ಯಗಳು ಈಡೇರಿದರೆ ಸಾಕು ಎನ್ನುವ ಮನೋಭಾವ ಅವರದು. ಯುವ ಜನರು ಕೂಡಾ ಇದೇ ತೆರನಾದ ಜೀವನಮಾರ್ಗವನ್ನು ಜಿಜ್ಞಾಸೆಯಿಲ್ಲದೆ ಒಪ್ಪಿಕೊಂಡಿದ್ದಾರೆ. ತಮ್ಮ ಜೀವನವನ್ನು ಚೆನ್ನಾಗಿ ರೂಪಿಸಿಕೊಳ್ಳಬೇಕು ಎಂಬ ಬಗೆಗೆ ಅನಾಸಕ್ತಿ ಹೊಂದಿದ್ದಾರೆ. ತಮ್ಮ ಹಿರಿಯರ ಹಾಗೆ ತಾವೂ ಕೃಷಿಕರಾಗಬೇಕೆಂದು ತರುಣರು ಬಯಸಿದರೆ, ತಮ್ಮ ತಾಯಂದಿರಂತೆ ತಾವು ಕುಟುಂಬದಲ್ಲಿ ಪಾತ್ರವಹಿಸಬೇಕು ಎಂದು ತರುಣಿಯರು ಬಯಸುತ್ತಾರೆ.

ಲಂಬಾಣಿಗಳ ಜೀವನದಲ್ಲಿ ಸಾಕಷ್ಟು ಬೇಡಿಕೆಗಳಿದ್ದರೂ ಸಾಕಷ್ಟು ಕೊರತೆ, ದುಃಖ ದುಮ್ಮಾನಗಳಿದ್ದರೂ ಮಾನಸಿಕ ಅಸ್ವಸ್ಥತೆಯಿಲ್ಲ (ನಾಗಲಾಪುರ ತಾಂಡದಲ್ಲಿ ಮಾನಸಿಕವಾಗಿ ಅಸ್ವಸ್ಥನಾದ ಓರ್ವ ವ್ಯಕ್ತಿಯನ್ನು ಬಿಟ್ಟರೆ). ವೈಯಕ್ತಿಕ ಹೊಣೆಗಾರಿಕೆಯನ್ನು ಅನ್ಯರ ಮೇಲೆ, ಇಲ್ಲವೆ ಪ್ರಕೃತಿಯ ಅಗೋಚರ ಶಕ್ತಿಗಳ ಮೇಲೆ ಹೊರಿಸುವ ಪ್ರವೃತ್ತಿಯು ಇದಕ್ಕೆ ಕಾರಣವೆನ್ನಬಹುದು. ಹೀಗೆ ಮಾಡುವುದರ ಮೂಲಕ ಅವರು ತಮ್ಮ ಮನಸ್ಸುಗಳನ್ನು ವಿಕೃತ ಮನೋಭಾವ, ಆತಂಕ, ಅಳುಕು ಹಾಗೂ ಸ್ವಆರೋಪ ಮೊದಲಾದವುಗಳಿಂದ ಮುಕ್ತಗೊಳಿಸಿಕೊಳ್ಳುತ್ತಾರೆ. ಈ ಜನರು ಹಣೆಬರಹ, ಅದೃಷ್ಟದಲ್ಲಿಯ ನಂಬಿಕೆ, ದುರ್ದೈವದ ಮಧ್ಯೆಯೂ ಸಮಚಿತ್ತದ ಭಾವ, ಅನಾಸಕ್ತಿ, ಜಡತೆ, ತತ್ವಾಚರಣೆಗಳ ವಿಷಯದಲ್ಲಿ ಅನುಕೂಲಸಿಂಧು ಪ್ರವೃತ್ತಿ ಕಂಡುಬರುತ್ತದೆ. ಕಡುಬಡತನದ ಮಧ್ಯೆಯೂ, ಆತ್ಮಹತ್ಯೆಗಳ ಘಟನೆಗಳ ಅಪರೂಪ, ಮೊದಲಾದ ಗುಣಲಕ್ಷಣಗಳನ್ನು ಹೊಂದಿರುವುದು ಕೂಡ ಈ ಮೇಲಿನ ವಿವರಣೆಯನ್ನು ಸಮರ್ಥಿಸುತ್ತದೆ.

ಲಂಬಾಣಿ ಪುರುಷರು ಮತ್ತು ಮಹಿಳೆಯರು ತಮ್ಮ ಧಾರ್ಮಿಕ ಆಚರಣೆಗಳನ್ನು, ನಂಬಿಕೆಗಳನ್ನು ಮತ್ತು ಒಳ್ಳೆಯ ನೈತಿಕ ನಡವಳಿಕೆಗಳನ್ನು ರಕ್ಷಿಸಿಕೊಂಡು ಮುಂದುವರೆಸುವಲ್ಲಿ ಆಸಕ್ತಿಯನ್ನು ಹೊಂದಿದ್ದಾರೆ. ಈ ಮೌಲ್ಯಗಳನ್ನು ಮಕ್ಕಳ ಪಾಲನೆ ಪೋಷಣೆಯ ಮಾದರಿಗಳಲ್ಲಿ ಯುವ ಪೀಳಿಗೆಗೆ ಕಲಿಸಿಕೊಡಲಾಗುತ್ತದೆ. ಆದರೆ ಇಂದಿನ ದಿನಗಳಲ್ಲಿ ಯುವ ಪೀಳಿಗೆಯಲ್ಲಿ ಧಾರ್ಮಿಕತೆಯು ಕಡಿಮೆಯಾಗುತ್ತದೆ. ಹಿರಿಯ ತಲೆಮಾರಿನ ಜನರು ಇಂದಿನ ದಿನಗಳಲ್ಲಿ ಯುವ ಪೀಳಿಗೆಯಲ್ಲಿ ಧಾರ್ಮಿಕತೆ ಕಡಿಮೆಯಾಗುತ್ತಿದೆ ಎಂದು ಆಕ್ಷೇಪಿಸುತ್ತಾರೆ. ಸಮಾಜ ಮತ್ತು ನಿಸರ್ಗದ ಬಗೆಗಿನ ತಿಳುವಳಿಕೆಯ ಅರಿವು ಅಧಿಕವಾಗುತ್ತಿದ್ದಂತೆ ಈ ಬಗೆಗಿನ ಗತಕಾಲದ ನಿಗೂಢತೆ ಕಳಚಿ ಬೀಳುತ್ತಿದೆ. ಮಾಟ - ಮಂತ್ರದ ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದ ಹಿಂದಿನ ಕಾಲದ ನಂಬಿಕೆಗಳಲ್ಲಿಯ ಸಂವೇದನಾತ್ಮಕತೆ ತನ್ನಷ್ಟಕ್ಕೆ ತಾನೇ ಕುಗ್ಗಿ ಹೋಗುತ್ತಿದೆ.

## ಆರ್ಥಿಕ ಬದಲಾವಣೆ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಎದುರಾಗುವ ಸಮಸ್ಯೆಗಳು

"ಲೋಕದೃಷ್ಟಿ" ಎಂಬುದರ ಅರ್ಥವು ಜನರು "ಅಲ್ಲಿರುವ ಬಾಹ್ಯ" ಪ್ರಪಂಚವನ್ನು ನೋಡುವ ದೃಷ್ಟಿ ಎಂಬುದಾದರೆ, ಒಂದು ಸಮುದಾಯದ "ಸಾಮಾಜಿಕ - ಸಾಂಸ್ಕೃತಿಕ ಅನನ್ಯತೆ" ಎಂದರೆ ಅವರು ತಮ್ಮನ್ನು ತಾವೇ ಅನ್ಯ ಗುಂಪುಗಳಿಂದ ಬೇರ್ಪಟ್ಟಂತೆ ಪರಿಕಲ್ಪಿಸಿಕೊಳ್ಳುವುದು ಅಲ್ಲದೇ ಅವರೊಡನೆ ಸಂಪರ್ಕಗಳನ್ನುಳ್ಳ ಇತರೆಯವರನ್ನು ಒಂದು ಸಾಮಾಜಿಕ ಗುಂಪು ಎಂದು ನೋಡುವ ದೃಷ್ಟಿಕೋನವಾಗಿದೆ. ಆದಕಾರಣ, ಸಾಂಸ್ಕೃತಿಕ / ಸಾಮಾಜಿಕ ಅನನ್ಯತೆ ಅಥವಾ ಜನರ ಸ್ವಯಂ ಕಲ್ಪನೆಯು (Self-Image) ಲೋಕ ದೃಷ್ಟಿಗೆ ಪೂರಕವಾಗುವ (ಮಾನಸಿಕ) ವಿಸ್ತಾರವಾಗಿದೆ.

ಜನಾಂಗಿಕ, ಸಾಮಾಜಿಕ ಅಥವಾ ಸಾಂಸ್ಕೃತಿಕ ಅನನ್ಯತೆಯನ್ನು ಒಂದು ಗುಂಪು ಅನುಭವಿಸುತ್ತದೆ. ಇದು ಆ ಗುಂಪಿನ ಚಾರಿತ್ರಿಕ ಪರಂಪರೆಗಳ ಬದಲಾವಣೆಗಳಿಂದ ಪಡೆಯಲಾದ ವಿಭಿನ್ನವಾದ ಪಾತ್ರಗಳ ಸಮುಚ್ಚಯ. ಇದನ್ನು ಸಾಂಸ್ಕೃತಿಕ ಅಂಶಗಳ ಪಟ್ಟಿ ಮತ್ತು ಸಾಮಾಜಿಕ ವ್ಯವಸ್ಥೆ ಎಂಬುದಾಗಿ ತಿಳಿಯಬಹುದು. ಬದಲಾವಣೆಗೆ ಅವಕಾಶವಿರುವ ಶೋಧನೆಗಳನ್ನು ಮಾಡಲು ಇದು ನಿರಂತರತೆಯ ಭಾವನೆಯನ್ನು ನೀಡುತ್ತದೆ. ಅಲ್ಲದೆ ಹೊಸತನ್ನು ಶೋಧಿಸುವಲ್ಲಿ ಸಾಮಾನ್ಯ ಸಾದೃಶ್ಯಗಳ ಹಿನ್ನೆಲೆಯನ್ನು ಒದಗಿಸುತ್ತದೆ (ಲೂರಿ, ೧೯೬೮ : ೨೯೭).

ಸಾಕಷ್ಟು ಪ್ರಕಟಿತ ಸಾಕ್ಷ್ಯಾಧಾರಗಳ ಕೊರತೆಯಿಂದಾಗಿ ಲಂಬಾಣಿಗಳ ಪ್ರಾಚೀನ ಸಾಂಸ್ಕೃತಿಕ ಅನನ್ಯತೆಯ ಬಗೆಗೆ ಮಾತನಾಡುವುದು ತುಂಬಾ ಕಷ್ಟಕರವಾಗಿದೆ. ಲಂಬಾಣಿಗಳ ಸಂಪರ್ಕಕ್ಕೆ ಬಂದ ಇತರರು, ಎಂದರೆ ವಸಾಹತು ಅಧಿಕಾರಿಗಳು, ಧರ್ಮಪ್ರಚಾರಕರು ಹಾಗೂ ಪ್ರವಾಸಿಗರ ಬರಹಗಳು ಲಂಬಾಣಿಗಳ ಅಲೆಮಾರಿ ಜೀವನದ ದಿನಗಳ ಸಾಂಸ್ಕೃತಿಕ ಪರಿಚಯವನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಾಕಷ್ಟು ಉಪಯುಕ್ತ ಮಾಹಿತಿಗಳಾಗಿವೆ. ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶಗಳೊಡನೆ ನಿರಂತರವಾಗಿ ಮಾಡಿಕೊಳ್ಳಲಾಗುತ್ತಿರುವ ಹೊಂದಾಣಿಕೆಗಳ ಪ್ರಕ್ರಿಯೆಯನ್ನು ಗುರುತಿಸಲು ಉಲ್ಲೇಖನಗಳೊಂದಿಗೆ ಲಂಬಾಣಿಗಳ ಪ್ರಚಲಿತ ಸಾಂಸ್ಕೃತಿಕ ಅನನ್ಯತೆಯನ್ನು ಹೋಲಿಸಲಾಗಿದೆ.

## ಲಂಬಾಣಿಗಳ ಪ್ರಾಚೀನ ಅನನ್ಯತೆ

ಲಂಬಾಣಿಗಳು ಯುದ್ಧದ ಅವಧಿಯಲ್ಲಿ ಸೇನೆಗಳಿಗೆ ನೀಡುವ ಪ್ರಯೋಜನವನ್ನು ಮನ್ನಿಸಲಾಗಿತ್ತು. ಅಂತೆಯೇ ಯುದ್ಧದ ಎರಡೂ ಪಕ್ಷಗಳು ಅವರಿಂದ ಏನನ್ನು ಕಸಿಯಬಾರದು ಎಂಬುದೂ ಒಂದು ವಾಡಿಕೆಯಾಗಿತ್ತು (ನೋಡಿ : ಕ್ರಫೋರ್ಡ್, ೧೭೮೨ : ೬೦). ಲಂಬಾಣಿಗಳು ಜೀವ ಕಳೆದುಕೊಳ್ಳಲು ಸಿದ್ಧರಿದ್ದರೆ ವಿನಃ ತಮ್ಮ ಜವಾಬ್ದಾರಿಗೆ ವಹಿಸಿಕೊಟ್ಟಿದ್ದ ಆಸ್ತಿಯನ್ನು ಬಿಟ್ಟುಕೊಡುತ್ತಿರಲಿಲ್ಲ. ಅವರು ಸರಕುಗಳ ಸಾಗಾಣಿಕೆಯ ಶ್ರೇಷ್ಠ ಮಾಧ್ಯಮಗಳಾಗಿದ್ದರು (ನಂಜುಂಡಯ್ಯ ಮತ್ತು ಅಯ್ಯರ್ ೧೯೨೮ : ೧೮೨).

ಲಂಬಾಣಿಗಳು ತಮ್ಮ ಬಾಂಧವರ ಜೊತೆಗೆ ಮಾತ್ರವೇ (ಅನ್ಯರ ಜೊತೆ ಬೆರೆಯಲಾರದಂತೆ) ಸಾಹಚರ್ಯ ಹೊಂದಿದ್ದರು. ಯುದ್ಧದ ಅವಧಿಗಳಲ್ಲಿ ಅವರು ತಾವು ಸಂಚಾರಮಾಡುತ್ತಿದ್ದ ಮಾರ್ಗದಲ್ಲಿ ಪ್ರತ್ಯೇಕ ನೆಲೆಗಳಲ್ಲಿಯೇ ತಂಗುತ್ತಿದ್ದರು. ತಮ್ಮ ರಕ್ಷಣೆಗೆ ತಮ್ಮ ಧೈರ್ಯವನ್ನೇ ಆಶ್ರಯಿಸುತ್ತಿದ್ದರು. ಲಂಬಾಣಿ ಮಹಿಳೆಯರು ದನಕರುಗಳನ್ನು ಮೇಯಿಸಲು ಹೋಗುತ್ತಿದ್ದರು. ಅವರು ಗಟ್ಟಿಮುಟ್ಟಾಗಿದ್ದರು. ಕಷ್ಟಕರವಾದ ಕೆಲಸಗಳನ್ನು ಪ್ರಯಾಸವಿಲ್ಲದಂತೆ ನಿಭಾಯಿಸುವ ಸಾಮರ್ಥ್ಯವನ್ನು ಹೊಂದಿದ್ದರು. ಅವರು

ಪರಿಶುದ್ಧರೂ, ಸೌಜನ್ಯಶೀಲರೂ ಆಗಿದ್ದರು. ಮಹಿಳೆಯರೊಡನೆ ಅನುಚಿತವಾಗಿ ವರ್ತಿಸುವವರ ಬಗೆಗೆ ಲಂಬಾಣಿ ಪುರುಷರು ತೀವ್ರ ಅಸಮಾಧಾನ ತಾಳುತ್ತಿದ್ದರು. ಮಹಿಳೆಯರ ಬಗೆಗೆ ಅವರಿಗೆ ಉತ್ತಮ ಗೌರವವಿದ್ದಿತ್ತು (ಥರ್ಸ್ಟನ್, ೧೯೦೯ : ೨೧೦ - ೨೧೨).

ಲಂಬಾಣಿಗಳ ಜನಾಂಗಿಕ ವಿಭಿನ್ನತೆ, ಪ್ರತ್ಯೇಕತೆಯಿಂದ ಪ್ರಭಾವಿತರಾದ ಜನರಲ್ ಬ್ರಿಗ್ಸ್ ೧೮೮೯ರ , ತಮ್ಮ ಟಿಪ್ಪಣಿಗಳಲ್ಲಿ ಭಾಷೆ, ಹವ್ಯಾಸಗಳು ಹಾಗೂ ಸಾಮಾಜಿಕ ವರ್ತನೆಯ ರೀತಿ ನೀತಿಗಳು ದಕ್ಷಿಣದ ರಾಜ್ಯಗಳ ಇತರ ಎಲ್ಲ ಜನರಿಗಿಂತ ಎಷ್ಟೊಂದು ಭಿನ್ನವಾಗಿದ್ದವೆಂದರೆ, ಅವರನ್ನು ನೋಡಿದ ತಕ್ಷಣವೇ ಇವರು ಪರನಾಡಿನವರು ಎಂದು ಗುರುತಿಸಬಹುದಾಗಿತ್ತು ಎಂಬುದಾಗಿ ಹೇಳಿದ್ದಾರೆ (೧೮೭೭ : ೧೭೨). ಲಂಬಾಣಿ ಮಹಿಳೆಯರ ಉಡುಪು ದಕ್ಷಿಣದ ಜನರ ಉಡುಪುಗಳಿಗಿಂತ ತೀರ ಭಿನ್ನವಾಗಿದ್ದು, ತನ್ನದೇ ಆದ ವಿಶಿಷ್ಟತೆಯನ್ನು ಒಳಗೊಂಡಿತ್ತು. ದಪ್ಪನೆಯ ಒರಟಾದ ಬಹುಬಣ್ಣದ ಪೆಟ್ಟಿಕೋಟನ್ನು ಹಾಗೂ ಬೆನ್ನಿನ ಭಾಗದಲ್ಲಿ ತೆರೆದಂತೆ ಇರುವ ಕುಪ್ಪಸವನ್ನು ಧರಿಸುತ್ತಿದ್ದರು. ಇತರ ಮಹಿಳೆಯರು ಆಭರಣಗಳನ್ನು ಬಳಸುತ್ತಿದ್ದರೆ, ಲಂಬಾಣಿ ಮಹಿಳೆಯರು ಹಗುರವಾದ ಹಸ್ತಿದಂತದ ಬಳೆಗಳನ್ನು ಎರಡೂ ಕೈಗಳಲ್ಲಿ ಧರಿಸುತ್ತಾರೆ. ಪುರುಷರು ಲಾಡಿಗಳನ್ನುಳ್ಳ ಚಡ್ಡಿಗಳನ್ನು ಹಾಗೂ ಹೊಡೆದುಕಾಣುವ ಬಣ್ಣದ ದಪ್ಪನೆಯ ಭಾರವಾದ ಟೋಪಿಗಳನ್ನು ಧರಿಸುತ್ತಾರೆ. ಅವರ ಈ ವೇಷಭೂಷಣಗಳಿಂದಾಗಿ ಅವರು ದಕ್ಷಿಣದಲ್ಲಿಯ ಇತರ ಜನರಿಗಿಂತ ತೀರ ಭಿನ್ನವಾಗಿ ಕಾಣುತ್ತಾರೆ.

ತಮ್ಮ ವಿಶಿಷ್ಟ ಹವ್ಯಾಸಗಳನ್ನು, ವರ್ತನೆಯ ರೀತಿ ನೀತಿಗಳನ್ನು, ದಕ್ಷಿಣ ಭಾರತದಲ್ಲಿ ಜೀವನ ನಡೆಸುತ್ತಿರುವಾಗಲೂ ಮಾರವಾಡಿ ಮೂಲಕ ತಮ್ಮ ಭಾಷೆಯನ್ನು ರಕ್ಷಿಸಿಕೊಂಡ ಲಂಬಾಣಿಗಳ ಸಾಮರ್ಥ್ಯವು ಬ್ರಿಗ್ಸ್ ಅವರನ್ನು ಪ್ರಭಾವಿಸಿದ ಅಂಶವಾಗಿದೆ. ಅನೇಕ ಶತಮಾನಗಳವರೆಗೆ ತಮ್ಮ ಆಚರಣೆಗಳನ್ನು, ಭಾಷೆಯನ್ನು ರಕ್ಷಿಸಿಕೊಂಡಿರುವುದು (ಲಿಖಿತ ಬರಹದ ದಾಖಲೆಗಳಿಲ್ಲದಿರುವ ಹಿನ್ನೆಲೆ ಹಾಗೂ ತಮ್ಮ ಗುಂಪುಗಳನ್ನುಳಿದು ಅನ್ಯ ಗುಂಪುಗಳೊಡನೆ ಸಂಪರ್ಕಗಳನ್ನು ಹೊಂದಿರದ ಹಿನ್ನೆಲೆಯಲ್ಲಿ) ಯಾವುದೇ ಸಮುದಾಯದ ಇತಿಹಾಸದಲ್ಲಿ ಕಾಣುವ ಅತ್ಯಂತ ಗಮನಾರ್ಹ ನಿದರ್ಶನಗಳಲ್ಲಿ ಒಂದಾಗಿದೆ. "ಒಳ್ಳೆಯ ಜೀವನ"ದ ಪರಿಕಲ್ಪನೆಗೆ ಸಂಬಂಧಿಸಿದಂತೆ (ಲಂಬಾಣಿಗಳು ಮತ್ತು ರಜಪೂತರ ಮಧ್ಯೆ ರಜಪೂತ ಮೂಲದವರು) ಬ್ರಿಗ್ಸ್ ಇದನ್ನು ಗುರುತಿಸಿದ್ದಾರೆ. ಲಂಬಾಣಿಗಳು ರಜಪೂತರಂತೆ ಮಿಲಿಟರಿ ವೃತ್ತಿಯನ್ನು ಅವಲಂಬಿಸಿದ್ದರು. ಒಬ್ಬ ರಜಪೂತನು ತನ್ನ ಸ್ವಂತ ಭೂಮಿಯಲ್ಲಿ ಕೃಷಿ ಸಾಗುವಳಿ ಮಾಡುತ್ತಿದ್ದನೇ ವಿನಃ ಅನ್ಯರ ಸೇವಕನಾಗಿ ಅಥವಾ ಆಳಾಗಿ ದುಡಿಯುತ್ತಿರಲಿಲ್ಲ. ಸೈನಿಕನಾಗಿ ಆತ ಸೇವೆ ಸಲ್ಲಿಸುತ್ತಿದ್ದನು. ತನಗೋಸ್ಕರ ಆತನು ಯಾವುದಾದರೂ ಕೆಲಸಮಾಡಲು ಸಂಪ್ರದಾಯವು ಅವಕಾಶ ನೀಡುತ್ತಿತ್ತೇ ವಿನಃ, ಬೇರೆ ವ್ಯಕ್ತಿಯ ಸೇವೆ ಮಾಡುವುದು ಅವಮಾನದ ಕೆಲಸ ಎಂದು ಭಾವಿಸಲಾಗುತ್ತಿತ್ತು (ಅದೇ ಪುಸ್ತಕದ ಪುಟಗಳು ೧೭೨ - ೧೭೪ ನೋಡಿರಿ). ಲಂಬಾಣಿಗಳು ರಜಪೂತರ ಇದೇ ಸ್ವಭಾವವನ್ನು ಪ್ರವೃತ್ತಿಯನ್ನೂ ಉಳಿಸಿಕೊಂಡು ಬಂದಿದ್ದಾರೆ. ಆದಕಾರಣ, ತಮ್ಮ ಪಾರಂಪರಿಕ ವೃತ್ತಿಯನ್ನು ಕಳೆದುಕೊಂಡ ಮೇಲೆ ಕೂಲಿಯಾಳಾಗಿ ದುಡಿಯುವುದನ್ನು ಲಂಬಾಣಿ ಪುರುಷರು ಇಂದು ಕೂಡ ಇಷ್ಟಪಡುವುದಿಲ್ಲ.

ಲಂಬಾಣಿಗಳು ಸರಕುಗಳ ಸಾಗಾಣಿಕೆ ಮತ್ತು ವ್ಯಾಪಾರ ವೃತ್ತಿಯನ್ನು ಕೈಗೊಂಡಿದ್ದ ಅವಧಿಯಲ್ಲಿ ನಿರಕ್ಷರಿಗಳಾಗಿದ್ದರೂ ಇತರ ಯಾವುದೇ ಸಮುದಾಯದ ಜನರಂತೆ ಎಲ್ಲವನ್ನು ಲೆಕ್ಕಾಚಾರ ಮಾಡುವ ವ್ಯವಹಾರ ಚತುರರಾಗಿದ್ದರು. ಉದಾಹರಣೆಗೆ, ಸರಕುಗಳ ಬೆಲೆಗಳಲ್ಲಿ ಹೆಚ್ಚಳವಾದಾಗ ಸರಕುಗಳನ್ನು ಖರೀದಿಸಿ ಕೂಡಲೇ ಮಾರಾಟ ಮಾಡಿಬಿಡುತ್ತಿದ್ದರು. ಬೆಲೆಗಳು ಇಳಿತವಾಗಿದ್ದರೆ ಸರಕುಗಳನ್ನು ದಾಸ್ತಾನು ಮಾಡುತ್ತಿದ್ದರು. ಹೀಗೆ ಲಾಭಾಂಶ ಪಡೆಯುವಲ್ಲಿ ತುಂಬ ಜಾಣ್ಮೆಯಿಂದ ವ್ಯವಹರಿಸುತ್ತಿದ್ದವರಾಗಿದ್ದರು. ಸಂಚಾರಿ ನೆಲೆಯಲ್ಲಿಯೇ

ಹುಟ್ಟಿ ಬೆಳೆದ ಲಂಬಾಣಿಗಳು ತೀಕ್ಷ್ಣ ಬಿಸಿಲನ್ನು, ಬಾರೀ ಮಳೆಯನ್ನು ದಿಟ್ಟತನದಿಂದ ತಾಳಿಕೊಳ್ಳುತ್ತಿದ್ದರು. ಹಾಗಾಗಿ ಅವರು ಗಟ್ಟಿಮುಟ್ಟಾಗಿರುತ್ತಿದ್ದರು. ದಿಟ್ಟವರ್ತನೆ, ಸ್ವತಂತ್ರ ವಿಚಾರ ವ್ಯವಹಾರದ ಸ್ವಭಾವವನ್ನುಳ್ಳ ಅವರು ಸದೃಢ ಶರೀರ, ಕಷ್ಟ ಸಹಿಷ್ಣು ಮನೋಭಾವ, ಶೌರ್ಯ ಮೊದಲಾದ ಗುಣವಿಶೇಷಗಳನ್ನು ಹೊಂದಿದ್ದರು.

ವಿವೇಚನಾತ್ಮಕ ಲೆಕ್ಕಾಚಾರ ಹಾಗೂ ವಿಭಿನ್ನ ಸೈನಿಕ ಪಡೆಗಳಲ್ಲಿಯ ಉದ್ಯೋಗದಿಂದ ಸಾಕಷ್ಟು ಪ್ರಮಾಣದಲ್ಲಿ ಹಣ ಸಂಪಾದನೆ ಮಾಡುತ್ತಿದ್ದರು. ಆದರೆ ಅವರ ಅರ್ಥಿಕ ಸ್ಥಿತಿ ಸಾಮಾನ್ಯವಾಗಿ ಬಡತನದ ಸ್ಥಿತಿಯಾಗಿತ್ತು. ಇದಕ್ಕೆ ಅವರ ಪರಸ್ಪರ ವಿರೋಧಾಭಾಸ, ಅಲೆಮಾರಿ ಹವ್ಯಾಸಗಳು, ಬುಡಕಟ್ಟುಗಳ ನಿಯಮಾವಳಿಗಳು ಕಾರಣವಾಗಿವೆ. ಕೆಲಸ ಮಾಡದವರನ್ನು (ಸೋಮಾರಿಗಳು) ಪೋಷಿಸುವುದು ಅವರ ಸಾಮಾಜಿಕ ನಿಲುವು. ದುಂದುವೆಚ್ಚದ ಸ್ವಭಾವ, ಮದ್ಯಪಾನದ ಗೀಳು ಅವರನ್ನು ಕಾಯಂ ಆಗಿ ಬಡತನದ ದೆಸೆಯಲ್ಲಿರಿಸಿವೆ.

ಲಂಬಾಣಿಗಳು ಬ್ರಿಟಿಷರೊಡನೆ ತಮ್ಮ ವ್ಯವಹಾರಗಳನ್ನು ಅತ್ಯಂತ ಪ್ರಾಮಾಣಿಕವಾಗಿ ನಿರ್ವಹಿಸಿದರು. ಅವರ ಈ ವ್ಯವಹಾರಗಳು ಗೌರವ ಸ್ವಭಾವಜನ್ಯ ತತ್ವಗಳಿಗಿಂತ ಹೆಚ್ಚಾಗಿ ಹಣದಾಸೆ ಅಥವಾ ಬ್ರಿಟಿಷ ಆಡಳಿತ ವ್ಯವಸ್ಥೆಯ ಭೀತಿಯಿಂದ ಪ್ರೇರೇಪಿಸಲ್ಪಟ್ಟಿದ್ದವು (ಬ್ರಿಗ್ಸ್, ೧೮೭೭ : ೧೮೮ - ೧೮೯). ದಕ್ಷಿಣ ಭಾರತದಲ್ಲಿ ಮುಸಲ್ಮಾನರ ದಾಳಿಗಳು ಆರಂಭವಾದಾಗಿನಿಂದ ಲಂಬಾಣಿಗಳು ತಮ್ಮ ಸಾಂಪ್ರದಾಯಿಕ ವೃತ್ತಿಯೊಡನೆ ದರೋಡೆ - ಕಳ್ಳತನವನ್ನು ರೂಢಿಸಿಕೊಂಡಿದ್ದರು (ಬ್ರಿಗ್ಸ್, ೧೮೭೭ : ೧೯೦ - ೧೯೧ ; ದುಬಾಯಿಸ್, ೧೯೩೬ : ೬೯-೭೦; ಬುಚನ್, ೧೮೦೭ : ೧೪೪ - ೧೯೦ ಹಾಗೂ ಮುಂದಿನ ಪುಟಗಳು). ಕೆಲವು ಲಂಬಾಣಿಗಳು ತಮ್ಮ ಉತ್ತಮ ದಿನಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಡಕಾಯಿತಿಗಳನ್ನು ಮಾಡಿದರು. ಗುಂಡು ಮದ್ದುಗಳಿಂದ ಸುಸಜ್ಜಿತವಾದ ೫೦ರಿಂದ ೧೫೦ರವರೆಗೆ ಜನರು ಇರುವ ಗುಂಪುಗಳು ಸುರಕ್ಷಿತವಾದ ಸ್ಥಳದಲ್ಲಿ ತಾಂಡಗಳನ್ನು ರಚಿಸಿಕೊಂಡು ತಮ್ಮ ತಾಂಡಗಳಿಂದ ದೂರದಲ್ಲಿಯ ಗ್ರಾಮಗಳ ಮನೆಗಳನ್ನು ಹಾಗೂ ದಾರಿಗಳಲ್ಲಿಯ ಪ್ರಯಾಣಿಕರನ್ನು ದೋಚುತ್ತಿದ್ದರು. ದನಕರುಗಳನ್ನು ಕೂಡ ಅಪಹರಿಸುತ್ತಿದ್ದರು ಎಂಬುದಾಗಿ ೧೮೮೨ರಲ್ಲಿ ಮೇಜರ್ ಗುಂಥ್ರೋಪ್ ಹೇಳಿದ್ದಾರೆ. ಅವರು ಲಂಬಾಣಿಗಳ ಸದ್ಗುಣಗಳನ್ನು ಕೂಡ ಕೊಂಡಾಡಿದ್ದಾರೆ. ಪ್ರಾಮಾಣಿಕ ಜೀವನೋಪಾಯ ಮಾಡಿಕೊಂಡಿದ್ದವರ ಸಂಖ್ಯೆಯು ಹೆಚ್ಚುತ್ತಿದ್ದಿತು. ಭಾರತೀಯ ಅರಸರ ಮಧ್ಯೆ ನಿಂತರವಾಗಿ ಸಂಭವಿಸುತ್ತಿದ್ದ ಯುದ್ಧಗಳು ನಿಂತು ಹೋದ ಮೇಲೆ ಲಂಬಾಣಿಗಳ ಮೂಲ ಉದ್ಯೋಗವಾಗಿದ್ದ ಸೈನಿಕ ವೃತ್ತಿಗೆ ಸಂಚಕಾರ ಬಂದಿತು. ನಂತರದಲ್ಲಿ ರಸ್ತೆ ಹಾಗೂ ರೈಲ್ವೆ ಸಾರಿಗೆಯ ವ್ಯಾಪಕ ಅಭಿವೃದ್ಧಿ ಹಾಗೂ ನಿರ್ಮಾಣದಿಂದಾಗಿ ಸರಕುಗಳ ಸಾಗಾಣಿಕೆಯ ಅವರ ಸಾಂಪ್ರದಾಯಿಕ ವೃತ್ತಿ ಸ್ಥಗಿತಗೊಂಡಿತ್ತು. ಹೀಗಾಗಿ ಜೀವನೋಪಾಯಕ್ಕಾಗಿ ಇವರಲ್ಲಿ ಕೆಲವರು ಕೊಳ್ಳೆ-ದರೋಡೆ ಮಾಡಲು ಪ್ರಾರಂಭಿಸಿದರು (ರಸೆಲ್ ಮತ್ತು ಹೀರಾಲಾಲ್, ೧೯೧೬ : ೧೯೦ - ೧೯೧ ಅವರ ಉಲ್ಲೇಖನಗಳು).

ಮೆಕೆಂಝಿ ಎಂಬ ಬರಹಗಾರರ ದೃಷ್ಟಿಯಲ್ಲಿ ಲಂಬಾಣಿಗಳು ಮೂಲಭೂತವಾಗಿ ಬುದ್ಧಿವಂತರು. ಅವರು ನಿರಕ್ಷರಿಗಳಾಗಿದ್ದರು. ಅವರ ಸದ್ಗುಣಗಳು ದುರ್ಗುಣಗಳಿಗಿಂತ ಹೆಚ್ಚು ಮೌಲ್ಯಯುತವಾದವು. ಸಾಮಾನ್ಯವಾಗಿ ಅವರು ಸತ್ಯನಿಷ್ಠರು ಮತ್ತು ಶೂರರು. ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡರೆ ಅತ್ಯಂತ ನಿಷ್ಠ ಹಾಗೂ ಶ್ರದ್ಧಾಪೂರ್ವಕ ಕೆಲಸಗಾರರು. ಭವಿಷ್ಯದಲ್ಲಿ ಅವರ ಎಲ್ಲ ಗುಣ ಲಕ್ಷಣಗಳು ಮತ್ತು ಸಂಪ್ರದಾಯಗಳು ಅಳಿಸಿಹೋಗಬಹುದೆಂಬ ಅವರ ಭೀತಿಯ ಗ್ರಹಿಕೆಗೆ ವಿರುದ್ಧವಾಗಿ ನೂರಾರು ವರ್ಷಗಳ ನಂತರವೂ ಅವರು ತಮ್ಮ ವೈಶಿಷ್ಟ್ಯಗಳನ್ನು ರಕ್ಷಿಸಿಕೊಳ್ಳಬಲ್ಲರು. ಆರ್ಥಿಕ ಬದಲಾವಣೆಗಳು ಆದಾಗ್ಯೂ ಕೂಡ ಅವರ ಸಾಂಸ್ಕೃತಿಕ ಸಂಘಟನೆಯ ದೃಢತೆಯೇ ಅವರ ಈ ಸಾಮರ್ಥ್ಯದ ಅಂತಃ ಸತ್ವವಾಗಿದೆ ಎಂದು ಹೇಳುತ್ತಾರೆ.

ಈ ಎಲ್ಲ ವಿಚಾರಧಾರೆಗಳು ಯಾವುದೇ ವೈಯಕ್ತಿಕ ಪೂರ್ವಾಗ್ರಹವಿಲ್ಲದವುಗಳು. ಇವುಗಳನ್ನು ವ್ಯಕ್ತಪಡಿಸಿದವರು ಅವರ ಪರ ಅಥವಾ ವಿರೋಧ ಪಕ್ಷವನ್ನು ವಹಿಸಿಲ್ಲ ಎಂಬುದು ಸೂಕ್ಷ್ಮವಾಗಿ ತಿಳಿದುಬರುವ ಸಂಗತಿ. ಬರಹಗಾರರ, ಪ್ರವಾಸಿಗರ ಹಾಗೂ ಮತ ಪ್ರಚಾರಕರ ಒಟ್ಟಾರೆ ಅಭಿಪ್ರಾಯಗಳಲ್ಲಿ ಕಂಡುಬರುವ ವಿರೋಧಾಭಾಸಗಳು ಗತಕಾಲದ ಲಂಬಾಣಿಗಳ ಜೀವನದಲ್ಲಿ ತೂರಿಬಂದ ವೈರುಧ್ಯಗಳೇ ಆಗಿವೆ ಎಂಬುದು ಸ್ಪಷ್ಟವಾಗಿ ತಿಳಿದುಬರುವಂಥ ವಿಚಾರ. ಲಂಬಾಣಿಗಳ ಅಲೆಮಾರಿ ಹಾಗೂ ದರೋಡೆ ಹವ್ಯಾಸಗಳು, ನಿರಕ್ಷರತೆ ಮತ್ತು ಮಾನವ ಬಲಿಗಳನ್ನೊಳಗೊಂಡ ಮಾಟದ ಆಚರಣೆಗಳು ಮೊದಲಾದವುಗಳನ್ನು ಪರಿಶೀಲಿಸಿದಾಗ ನಾಗರಿಕರಲ್ಲಿ ಅವರು ಒಂದು ಅನಾಗರಿಕ ಸಮುದಾಯ ಎಂಬಂತೆ ತೋರುತ್ತಾರೆ. ಆದರೆ ಅವರು ಸರಕಾರಗಳೊಡನೆ ಹೊಂದಾಣಿಕೆ ಮಾಡಿಕೊಂಡ ಸದಸ್ಯರು ಎಂಬುದನ್ನು ಪರಿಗಣಿಸಿದಾಗ ಅವರಿಂದ ಜನರಿಗೆ ಉಪಯೋಗವಾಗಿದೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ವಾಣಿಜ್ಯವನ್ನು ಅಭಿವೃದ್ಧಿಗೊಳಿಸಿದ ಹಾಗೂ ಯುದ್ಧಭೂಮಿಗಳ ಸೈನ್ಯಗಳಿಗೆ ಸರಕುಗಳನ್ನು ಪೂರೈಸಿದ ಸೇವೆಗಳಿಂದ ಲಂಬಾಣಿಗಳು ಸಾಮಾಜಿಕ ಸೇವೆಯನ್ನು ಸಲ್ಲಿಸಿದವರಾಗಿದ್ದಾರೆ.

**ಲಂಬಾಣಿ ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳಲು ಇರುವ ಸಮಸ್ಯೆಗಳು**

ಲಂಬಾಣಿಗಳು ದಕ್ಷಿಣ ಭಾರತದ ಸಾಂಸ್ಕೃತಿಕ ಪರಿಸರದ ಸನ್ನಿವೇಶದಲ್ಲಿ ತಮ್ಮ ವಿಶಿಷ್ಟ ಗುಣಲಕ್ಷಣಗಳಿಂದ ವರ್ಣರಂಜಿತ ಹಾಗೂ ಆಸಕ್ತಿಯುತವಾದ ಬುಡಕಟ್ಟುಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದ್ದಾರೆ. ಇತರ ಜನಸಮೂಹಗಳೊಂದಿಗೆ ಇಂದು ಅವರ ಸಂಪರ್ಕಗಳು ಹೆಚ್ಚುತ್ತಲಿರುವುದರಿಂದ ಭವಿಷ್ಯದಲ್ಲಿ ಅವರು ತಮ್ಮ ಸಾಂಸ್ಕೃತಿಕ ವಿಶಿಷ್ಟತೆ - ವಿಭಿನ್ನತೆಯನ್ನು ಉಳಿಸಿಕೊಳ್ಳಲಾರರು ಎಂಬುದು ಕೆಲವು ಲೇಖಕರ ಗ್ರಹಿಕೆಯಾಗಿದೆ. ಈ ಲೇಖಕರ ಗ್ರಹಿಕೆಗಳು ಅಥವಾ ಎಣಿಕೆಗಳು ಇದುವರೆಗಂತೂ ನಿಜವಾಗಿಲ್ಲ. ತಮ್ಮ ಆರ್ಥಿಕತೆಯಲ್ಲಿಯ ಆಮೂಲಾಗ್ರ ಮಾರ್ಪಾಡುಗಳು ಹಾಗೂ ಇತರರೊಡನೆಯ ಸಂಪರ್ಕಗಳ ಹೆಚ್ಚಳದಿಂದಾದ ತೀವ್ರತರ ಬದಲಾವಣೆಗಳನ್ನು ಎದುರಿಸಿಯೂ ಲಂಬಾಣಿಗಳು ತಮ್ಮ ಸಾಮಾಜಿಕ - ಸಾಂಸ್ಕೃತಿಕ ವಿಶಿಷ್ಟತೆ - ವಿಭಿನ್ನತೆಯನ್ನು ಕಾಪಾಡಿಕೊಂಡಿದ್ದಾರೆ ಎಂಬುದು ಮಹತ್ವದ ವಿಷಯವಾಗಿದೆ.

ಸಮುದಾಯದ ಸೀಮಾರೇಖೆಗಳನ್ನು ಕಾಪಾಡುವ ಸಾಧನಗಳು ಹಾಗೂ ರಚನಾ ತಂತ್ರಗಳಂತೆ ಕಾರ್ಯನಿರ್ವಹಿಸುವ ಕೆಲವು ವಿಶಿಷ್ಟ ಅನನ್ಯತೆಯ ಲಕ್ಷಣಗಳು ಹೀಗಿವೆ : (೧) ಸಾಮಾನ್ಯ ಹೆಸರು - ಬಂಜಾರಾ (೨) ಒಳಬಾಂಧವ್ಯ ವಿವಾಹ (೩) ಮಹಿಳೆಯರ ವಿಶಿಷ್ಟ ವಿಭಿನ್ನ ಸ್ವರೂಪದ ಉಡಿಗೆ - ತೊಡಿಗೆ ಹಾಗೂ ಆಭರಣಗಳು (೪) ಬಂಜಾರಾ ಭಾಷೆ (೫) ಪ್ರತ್ಯೇಕವಾದ ಹಾಗೂ ಅವರದ್ದೇ ತಾಂಡಗಳಗಲ್ಲಿ ವಾಸ (೬) ಕುಲ ಅಥವಾ ಪಂಗಡದ ಬಗ್ಗೆ ಗಾಢವಾದ ಪ್ರಜ್ಞೆ. (೭) ವಿಶಿಷ್ಟವಾದ ಧಾರ್ಮಿಕ ಮೌಲ್ಯಗಳು.

ಹೆಸರು ಎಂಬುದು ಒಂದು ಗುಂಪಿನ ಪರಿಚಯವನ್ನು ನೀಡುವ ಭಾಷಾ ಮಾಧ್ಯಮದ ನಿರೂಪಣೆ. ಪರಸ್ಪರ ಪ್ರಕ್ರಿಯೆಯಲ್ಲಿ ತೊಡಗಿರುವ ಸಾಮಾಜಿಕ ಗುಂಪುಗಳು ಪ್ರತ್ಯೇಕ ಪರಿಚಯಗಳನ್ನು ಅವುಗಳಿಗೆ ನೀಡಲಾದ ಪ್ರತ್ಯೇಕ ಹೆಸರುಗಳಿಂದ ಸೂಚಿಸಲಾಗುತ್ತದೆ. ಲಂಬಾಣಿಗಳು ತಮ್ಮನ್ನು ಲಂಬಾಣೇತರರಿಂದ ಪ್ರತ್ಯೇಕಿಸಿಕೊಳ್ಳುತ್ತಾರೆ. ತಮ್ಮೊಳಗೆ ತಾವು ಪರಸ್ಪರರನ್ನು ಸಂಬೋಧಿಸುವಾಗ 'ಘೋರ್' ಎಂಬ ಪದವನ್ನು ಬಳಸುತ್ತಾರೆ : ಘೋರ್ ಮಾತಿ, ಘೋರ್ ದಾಸಿ (ತಿರುಗಾಡುವ ಜನರು) ಲಂಬಾಣೇತರ ವ್ಯಕ್ತಿಯನ್ನು ಸಂಬೋಧಿಸುವಾಗ 'ಘೋರ ಮಾಡಿ' ಎಂದು ಹೇಳುತ್ತಾರೆ. ತನ್ಮೂಲಕ ತಮ್ಮ ಪ್ರತ್ಯೇಕತೆಯನ್ನು ದಿನನಿತ್ಯದ ಪರಿಭಾಷೆಯಲ್ಲಿ ಪ್ರಕಟಿಸುತ್ತಾರೆ. ದೇಶದ ತುಂಬ

ಅಲ್ಲಲ್ಲಿ ಹರಡಿರುವ ತಮ್ಮವರು ಒಂದು ಎಂಬ ಸ್ವಜಾತಿ ಪ್ರಜ್ಞೆಯನ್ನು ಅವರು ರೂಢಿಸಿಕೊಂಡಿದ್ದಾರೆ. ಆಯಾ ಸ್ಥಳೀಯ ಭಾಷೆಗಳಲ್ಲಿ ಅವರಿಗೆ ಪ್ರತ್ಯೇಕ ಹೆಸರುಗಳಿವೆ. ಆದಾಗ್ಯೂಕೂಡ ಅವರು ತಮ್ಮ ಮೂಲದ ಸಾಮಾನ್ಯ ಹೆಸರು 'ಬಂಜಾರಾ' ಎಂಬುದರಿಂದಲೇ ಕರೆಯಲ್ಪಡಲು ಇಚ್ಛಿಸುತ್ತಾರೆ. ಇದು ಅವರು ಸ್ವಪರಿಕಲ್ಪನೆಯ ಪ್ರಜ್ಞೆಯನ್ನು ವ್ಯಕ್ತಪಡಿಸುವ ನಿದರ್ಶನವಾಗಿದೆ.

ಲಂಬಾಣಿಗಳಲ್ಲಿಯ ವಿವಾಹ ಸಂಸ್ಕಾರವು ಸಮುದಾಯದಲ್ಲಿ ಒಳಬಾಂಧವ್ಯ ವಿವಾಹ ಮತ್ತು ಮನೆತನ, ಗೋತ್ರ ಗುಂಪುಗಳ ನಡುವೆ ಹೊರಬಾಂಧವ್ಯ ವಿವಾಹದ ತತ್ವವನ್ನಾಧರಿಸಿದೆ. ಒಂದು ವೇಳೆ ಮಹಿಳೆಯು ಸಮುದಾಯದ ಹೊರಗೆ ವಿವಾಹ ಮಾಡಿಕೊಂಡರೆ ಆಕೆಯನ್ನು ಕಾಯಂ ಆಗಿ ಹೊರಹಾಕಲಾಗುತ್ತದೆ. ಇಂತವರ ಮಕ್ಕಳನ್ನು 'ಸಾಕುಮಕ್ಕಳು' (ಪಾಲಗೂಟ) ಎಂದು ಕರೆಯಲಾಗುತ್ತಿದೆ. ಅವರ ಸಂತತಿಯನ್ನು ಮೂರನೆಯ ತಲೆಮಾರಿನಲ್ಲಿ ಮಾತ್ರವೇ ಜಾತಿಯಲ್ಲಿ ಸೇರಿಸಿಕೊಳ್ಳಲಾಗುತ್ತದೆ. ಈ ಎಲ್ಲ ಕಟ್ಟುಪಾಡುಗಳು ಹಾಗೂ ನಿಷಿದ್ಧಗಳು ಏಕೈಕ ಉದ್ದೇಶವು ಸಮುದಾಯದ ಪರಿಶುದ್ಧತೆಯನ್ನು ಕಾಪಾಡುವುದಾಗಿತ್ತು. ಈ ಬಗೆಗೆ ಅವರು ಮಾಡಿದ ಎಲ್ಲ ಯತ್ನಗಳನ್ನು ಮೀರಿ ಸಂಭವಿಸಿದ ಜಾತಿ ಸಂಕರದ ಕೆಲವು ಘಟನೆಗಳನ್ನು ತಡೆಯಲು ಸಾಧ್ಯವಾಗಿಲ್ಲ. ಆದಾಗ್ಯೂ ಕೂಡ ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳಲ್ಲಿ ಇತ್ತೀಚೆಗೆ ಸಾಮಾಜಿಕ ಆರೋಗ್ಯ ಇಲಾಖೆ ಕೈಗೊಂಡ ರಕ್ತದ ಗುಂಪುಗಳ ಪರೀಕ್ಷೆ ಅಧ್ಯಯನವು ಸ್ಥಳೀಯ ಲಂಬಾಣೇತರ ಜನಸಮೂಹದಿಂದ ಪ್ರತ್ಯೇಕಿಸಿದೆ. ಇವರಲ್ಲಿ ಬಹುತರವಾಗಿ ಉತ್ತರ ಭಾರತೀಯರ ರೀತಿಯ 'ಬಿ' ಜೀವಾಣುವಿನ ರಕ್ತದ ಗುಂಪುಳ್ಳವರು ಅಧಿಕ ಪ್ರಮಾಣದಲ್ಲಿ ಇರುವುದು ಕಂಡುಬಂದಿದ್ದು, ದಕ್ಷಿಣ ಭಾರತದಲ್ಲಿ 'ಎ' ಜೀವಾಣುವಿನ ರಕ್ತದ ಗುಂಪುಗಳ್ಳವರು ಅಧಿಕ ಪ್ರಮಾಣದಲ್ಲಿ ಇರುವುದು ಕಂಡುಬಂದಿದೆ. .

ಹಿಂದಿನ ಕಾಲದಲ್ಲಿ ಲಂಬಾಣಿ ಪುರುಷರ ಉಡುಗೆ - ತೊಡಿಗೆ ವಿಶಿಷ್ಟ ರೀತಿಯದಾಗಿತ್ತು. ಕಿರಿದಾದ ಚೆಡ್ಡಿ, ಅಂಗಿ ಹಾಗೂ ರುಮಾಲು, ನಡುವಿನಿಂದ ಇಳಿಬಿದ್ದ ಸಿಲ್ಕುಗೊಂಡೆಗಳು, ಕಿವಿಯಲ್ಲಿ ಮುರುವುಗಳು ಅವರ ಅನನ್ಯತೆಯ ಕುರುಹುಗಳಾಗಿದ್ದವು. ಆದರೆ ಇಂದು ಪುರುಷರ ಉಡುಪುಗಳು ಇತರ, ರೈತರಿಗಿಂತ ಭಿನ್ನವಾಗಿ ಕಾಣಲಾರದಷ್ಟು ಬದಲಾಗಿವೆ. ಲಂಬಾಣಿ ಪುರುಷರು ಇಂದು ಚೆಡ್ಡಿ ಹಾಗೂ ಗೊಂಡೆಗಳನ್ನು ಧರಿಸುವುದನ್ನು ಬಿಟ್ಟಿದ್ದಾರೆ. ಆದರೆ ಲಂಬಾಣಿ ಮಹಿಳೆಯರ ಉಡುಪುಗಳು (ಮೂಲತಃ ಮಾರವಾಡಿಯ ಭಿನ್ನ ರೂಪದ ರಜಪೂತ ಮಹಿಳೆಯ ವೇಷ) ಹಿಂದಿನಂತೆಯೇ ಇಂದು ಕೂಡ ಭಿನ್ನವಾಗಿಯೇ ಉಳಿದುಕೊಂಡಿವೆ. ಕೆಲವು ಸುಶಿಕ್ಷಿತ ಮಹಿಳೆಯುರನ್ನು ಮತ್ತು ಹೊಸ ತಲೆಮಾರಿನ ಮಹಿಳೆಯರು ಸೀರೆ ಕುಪ್ಪಸಗಳನ್ನು ಧರಿಸುತ್ತಿದ್ದಾರೆ. ಆದರೂ ಕೂಡ ಅವರು ಸೀರೆಯನ್ನು ಮಾರವಾಡಿ ಮಹಿಳೆಯರ ರೀತಿಯೇ ಉಡುತ್ತಿರುವುದರಿಂದ ಇತರರಿಗಿಂತ ಭಿನ್ನವಾಗಿ ಕಾಣುವ ಶೈಲಿ ಮಾತ್ರ ಹಾಗೆಯೇ ಉಳಿದುಕೊಂಡಿದೆ. ಮಹಿಳೆಯರ ಸಾಂಪ್ರದಾಯಿಕ ಉಡುಪು ಒರಟಾದ ಕೆಂಪು ಹೊಳಪಿನ ಬಟ್ಟೆಯಿಂದ ತಯಾರಿಸಲಾಗಿದ್ದು, ತುಂಡು ತುಂಡು ಬಟ್ಟೆಗಳನ್ನು ಕೈಹೊಲಿಗೆಯಿಂದ ಸಿದ್ಧಪಡಿಸಲಾಗಿರುತ್ತದೆ. ಅಡವಿಯ ಮಾರ್ಗದಲ್ಲಿ ಕಂಟಿಗಳಿಂದ ತುಂಬಿದ ಕಾಡುದಾರಿಗಳಲ್ಲಿ ಕಟ್ಟಿಗೆ ಮತ್ತು ಇತರ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವ ತಮ್ಮ ವೃತ್ತಿಗೆ ಅನುಕೂಲಕರವಾಗುವಂತೆ ಉಡುಪಿನ ವಿನ್ಯಾಸವನ್ನು ರೂಪಿಸಲಾಗಿರುತ್ತದೆ. ಲಂಬಾಣೇತರ ಕೃಷಿಕ ಮಹಿಳೆಯರು ಧರಿಸುವ ತೆಳ್ಳನೆಯ ಸೀರೆಯು ಇಂತಹ ವೃತ್ತಿಗೆ ತೀರ ತೊಡಕಾಗಿರುತ್ತದೆ. ಲಂಬಾಣಿ ಮಹಿಳೆಯರ ಉಡುಪಿನಲ್ಲಿ ಹೆಚ್ಚಿನ ಬದಲಾವಣೆಯಾಗದೇ ಇರುವುದು ಇದೇ ಕಾರಣಕ್ಕಾಗಿರಲೂಬಹುದು ಏಕೆಂದರೆ ಅವರು ಇಂದಿಗೂ ಕೆಲವು ಭಾಗಗಳಲ್ಲಿ ಅರಣ್ಯ ಉತ್ಪನ್ನಗಳನ್ನು, ಕಟ್ಟಿಗೆಗಳನ್ನು ಸಂಗ್ರಹಿಸುವ ಕೆಲಸ ಮಾಡುತ್ತಲೇ ಇದ್ದಾರೆ. ಪರಿಸರದ ಹವಾಗುಣ ಹಾಗೂ ಆರ್ಥಿಕ ಅಗತ್ಯಗಳಿಗೆ ಅನುಗುಣವಾಗಿ ಒಮ್ಮೆ ನಿಗದಿಪಡಿಸಲಾದ ಉಡುಪಿನ ಮಾದರಿಯು ಅವುಗಳಲ್ಲಿ ಬದಲಾವಣೆಗಳಾದಾಗಲೂ ಹಾಗೆಯೇ ಉಳಿದುಕೊಳ್ಳುತ್ತವೆ ಎಂಬರ್ಥದಲ್ಲಿ ಅವರ ಸಾಂಸ್ಕೃತಿಕ ಗುಣಲಕ್ಷಣ ಹಾಗೆಯೇ ಉಳಿದುಕೊಂಡ ನಿದರ್ಶನವಿದೆ.

ಆದರೆ ಈ ಉಡುಪು ತೀರ ದಪ್ಪವಾಗಿದ್ದು ಮೇಲಿಂದ ಮೇಲೆ ತೊಳೆದು ಸ್ವಚ್ಛ ಪಡಿಸಲು ತೀರ ಅನಾನುಕೂಲವಾಗಿದೆ. ಅದರಲ್ಲಿ ಅಂದಚೆಂದವಾಗಿ ಕೂಡಿಸಲಾದ ಚಿಕ್ಕ ಕನ್ನಡಿಗಳು, ಹೊಲಿಗೆಗಳಿಂದ ಅಂಟಿಸಲಾದ ಬಟ್ಟೆಯ ತುಂಡುಗಳು, ಕವಡೆಗಳು ಇತ್ಯಾದಿಗಳನ್ನೊಳಗೊಂಡ ಆ ಬಟ್ಟೆಯನ್ನು ತೊಳೆಯುವುದು ಕಷ್ಟಕರವಾದ ಕೆಲಸವಾಗಿದೆ. ಆದಕಾರಣ, ಲಂಬಾಣಿ ಮಹಿಳೆಯರು ಅವುಗಳನ್ನು ಯಾವಾಗಲಾದರೊಮ್ಮೆ ತೊಳೆಯುತ್ತಾರೆ. ಹಾಗಾಗಿ ಅವುಗಳು ಸಾಮಾನ್ಯವಾಗಿ ಹೊಲಸಾಗಿಯೇ ಇರುತ್ತವೆ. ಆದಕಾರಣ, ಸುಧಾರಣೆಯ ಕ್ರಮವಾಗಿ ಹಳೆಯ ಉಡುಪನ್ನು ತ್ಯಜಿಸಿ ಸರಳವಾದ, ತೆಳುವಾದ ಸೀರೆಯನ್ನು ಧರಿಸಲು ಸೂಚಿಸಲಾಯಿತು.[೧೬] ಈ ಬದಲಾವಣೆಯು ಉದ್ದೇಶಿತ ಪರಿಣಾಮವಾಗಿ ಸೀರೆ ಧರಿಸಿದಾಗ ಅತಿ ಚೆಲುವೆಯರಾಗಿ ಕಾಣತೊಡಗಿದ್ದು ವೇಶ್ಯಾವೃತ್ತಿಗೂ ಅವಕಾಶ ನೀಡಿತ್ತು ಎಂಬುದಾಗಿ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಇತ್ತೀಚೆಗೆ ದಪ್ಪನೆಯ ಹಾಗೂ ಆಭರಣಗಳಿಂದ ಅಲಂಕೃತವಾದ ಸಾಂಪ್ರದಾಯಿಕ ಉಡುಪನ್ನು (ವಿವಾಹ, ಗೌರಿ ಹಬ್ಬ ಮತ್ತು ಕೆಲವು ಸಾಂಪ್ರದಾಯಿಕ ಸಮಾರಂಭದ ಸಂದರ್ಭಗಳಲ್ಲಿ ಬಹುತೇಕ ಮಹಿಳೆಯರು ತಮ್ಮ ಸಾಂಪ್ರದಾಯಿಕ ಉಡುಪನ್ನೇ ಧರಿಸಲು ಆಸಕ್ತರಾಗಿರುತ್ತಾರೆ) ವಿಶೇಷ ಸಂದರ್ಭಗಳಿಗಾಗಿ ಉಪಯೋಗಿಸುವ ಹಾಗೂ ಸುಲಭವಾಗಿ ತೊಳೆಯಬಹುದಾದ ಸರಳ ಉಡುಪುಗಳನ್ನು ದಿನನಿತ್ಯದ ಉಪಯೋಗಕ್ಕಾಗಿ ಧರಿಸಲಾಗುತ್ತದೆ.

ಅದೇ ತೆರನಾಗಿ ಆಭರಣಗಳನ್ನು ಧರಿಸುವ ಹಾಗೂ ತಲೆಕೂದಲನ್ನು ಬಾಚುವ ವಿಧಿವಿಧಾನಗಳಲ್ಲಿ ಲಂಬಾಣಿ ಮಹಿಳೆಯರು ಈ ಪ್ರದೇಶದ ಇತರ ಮಹಿಳೆಯರಿಗಿಂತ ಭಿನ್ನವಾಗಿ ತೋರುತ್ತಾರೆ. ಲಂಬಾಣಿ ಮಹಿಳೆಯರು ದಪ್ಪನೆಯ ದಂತದ ಅಥವಾ ಪ್ಲಾಸ್ಟಿಕ್ ಬಳೆಗಳನ್ನು ಕೈಗಳಲ್ಲಿ ತೊಡುತ್ತಾರೆ ಮತ್ತು ಅವರ ಉಡುಪು ಕಸೂತಿಯಿಂದ ತುಂಬಿ ಹೋಗಿರುತ್ತದೆ. ಉಡುಪಿನ ತುಂಬೆಲ್ಲ ಕನ್ನಡಿಯ ಚಿಕ್ಕಪುಟ್ಟ ತುಂಡುಗಳನ್ನು ಅಂದವಾದ ಹೊಲಿಗೆಯ ಮಧ್ಯೆ ಅಲಂಕಾರಿಕವಾಗಿ ಕೂರಿಸಲಾಗಿರುತ್ತದೆ. ಒಂದು ಉಡುಪು ೨೫೦ರಿಂದ ೫೦೦ರೂ.ಗಳವರೆಗೆ ಬೆಲೆಬಾಳುತ್ತದೆ. ವಿವಾಹಿತ ಮಹಿಳೆಯರ ವಿಷಯದಲ್ಲಿ ವೈವಾಹಿಕ ಜೀವನವನ್ನು ಸಂಕೇತಿಸುವ ದಂತದ ಬಳೆಗಳನ್ನು ಮೊಳಕೈಯ ಮೇಲೆ ಧರಿಸಲಾಗುತ್ತದೆ. ಕಿವಿಗಳ ಮೇಲೆ ಧರಿಸುವ ಕೆನ್ನೆ ಸರಪಳಿಗಳು, ಕೊರಳ ಸರ (ಘುಗ್ರಿಸ್) ಮೊದಲಾದವುಗಳನ್ನು ಧರಿಸಲಾಗುತ್ತದೆ. ದಕ್ಷಿಣ ಭಾರತದಲ್ಲಿ ಲಂಬಾಣೇತರ ಮಹಿಳೆಯರು ವಿವಾಹಿತ ಸ್ಥಿತಿಯನ್ನು ಸಾರಿಹೇಳುವ ಸಂಕೇತವಾದ ತಾಳಿಯನ್ನು ಧರಿಸುತ್ತಾರೆ. ಇಂದಿನ ದಿನಗಳಲ್ಲಿ ಲಂಬಾಣಿ ವಧುಗಳು ಕೂಡ ತಮ್ಮ ಸಾಂಪ್ರದಾಯಿಕ ಆಭರಣಗಳೊಂದಿಗೆ ತಾಳಿಯನ್ನೂ ಧರಿಸತೊಡಗಿದ್ದಾರೆ. ಹಚ್ಚೆ ಹಾಕಿಸಿಕೊಳ್ಳುವ ವಿಷಯದಲ್ಲಿ ಕೂಡ ಲಂಬಾಣಿ ಮಹಿಳೆಯರು ಇತರ ಮಹಿಳೆಯರಿಗಿಂತ ಭಿನ್ನವಾಗಿ ಕಾಣುತ್ತಾರೆ. ಲಂಬಾಣೇತರ ಮಹಿಳೆಯರು ತಮ್ಮ ಹಣೆಯ ಮೇಲೆ ಕುಂಕುಮ ಹಚ್ಚಿಕೊಳ್ಳುವ ಸ್ಥಳದಲ್ಲಿ ಜಾತಿಗನುಗುಣವಾದ ರೀತಿಯಲ್ಲಿ ವಿಭಿನ್ನ ವಿನ್ಯಾಸಗಳ ಹಚ್ಚೆಗಳನ್ನು ಹಾಕಿಸಿಕೊಂಡರೆ, ಲಂಬಾಣಿ ಮಹಿಳೆಯರು ರಜಪೂತ ಮಹಿಳೆಯರ ಶೈಲಿಯಲ್ಲಿ ತಮ್ಮ ಮೂಗಿನ ಎಡಬದಿಯಲ್ಲಿ ಶ್ವಾಸಮಾರ್ಗದ ಬುಡದಲ್ಲಿ ಒಂದು ಚುಕ್ಕೆಯನ್ನು ಹಾಕಿಸಿಕೊಳ್ಳುತ್ತಾರೆ. ಆಭರಣಗಳು ಬಹಳಷ್ಟು ದುಬಾರಿ ಇದ್ದರೂ ಸಾಂಸ್ಕೃತಿಕ ಅನನ್ಯತೆಯ ದ್ಯೋತಕವಾಗಿರುವುದರಿಂದ ಅವುಗಳಿಗೆ ಹೆಚ್ಚಿನ ಮಹತ್ವ ಪ್ರಾಪ್ತವಾಗಿದೆ.

ಮೂಲತಃ ರಾಜಸ್ಥಾನದ ಮೇವಾಡ ಪ್ರದೇಶದಿಂದ ದಕ್ಷಿಣದ ಪ್ರದೇಶಗಳತ್ತ ಸಂಚರಿಸುತ್ತ ಬಂದಿರುವ ಲಂಬಾಣಿಗಳು ಅನೇಕ ಪ್ರಾದೇಶಿಕ ಭಾಷೆಯ ಪದಗಳನ್ನು ಎರವಲು ಪಡೆಯುತ್ತ ಬಂದಿದ್ದರೂ, ತಮ್ಮ ಮಾರವಾಡಿ ಮೂಲದ ಬಂಜಾರಿ ಭಾಷೆಯನ್ನು ಮಾತ್ರ ಉಳಿಸಿಕೊಂಡಿದ್ದಾರೆ. ಸಾಂಸ್ಕೃತಿಕ ಅನನ್ಯತೆಯನ್ನು ಅತ್ಯಂತ ಗಮನಾರ್ಹವಾಗಿ ಕಾಪಾಡಿಕೊಂಡ ನಿದರ್ಶನ ಇದಾಗಿದೆ. ಬಂಜಾರಿ

---

೧೬. *ಗಮನಿಸಿರಿ : ಸುಧಾರಣಾ ಕಾರ್ಯಕ್ರಮದ ಅಂಗವಾಗಿ ವಡ್ಡರ ಮಹಿಳೆಯರಿಗೆ ಸಾಂಪ್ರದಾಯಿಕವಾಗಿ ನಿಷೇಧಿಸಲಾಗಿದ್ದ ಕುಪ್ಪಸ ಹಾಗೂ ಬಳೆಯನ್ನು ಧರಿಸುವಂತೆ ಸೂಚಿಸಲಾಗಿದೆ (ಭಟ್, ೧೯೮೨ : ೨೮೪).*

ಭಾಷೆಯನ್ನು ಅವರು ತಮ್ಮ ತಮ್ಮಲ್ಲಿ ಮಾತ್ರವೇ ಅಂದರೆ ಮನೆಗಳಲ್ಲಿ, ಸಂಬಂಧಿಕರ ನಡುವೆ ಮತ್ತು ತಾಂಡಗಳಲ್ಲಿ ಬಳಸುತ್ತಾರೆ. ಜಾತ್ರೆ, ಮಾರುಕಟ್ಟೆ, ರೈಲು ನಿಲ್ದಾಣ, ಬಸ್ ನಿಲ್ದಾಣ ಮೊದಲಾದ ಬೃಹತ್ ಜನಸಮೂಹಗಳಿರುವಲ್ಲಿ, ಲಂಬಾಣಿ ಮಹಿಳೆಯರನ್ನು ಅವರ ಸಾಂಪ್ರದಾಯಿಕ ಉಡುಪುಗಳಿಂದ ಗುರುತಿಸುವುದು ಕಷ್ಟಕರವಲ್ಲ, ಆದರೆ ಲಂಬಾಣಿ ಪುರುಷರನ್ನು ಗುರುತಿಸುವುದು ಕಷ್ಟಕರವಾಗಿದೆ. ಅವರು ಇತರ ರೈತಾಪಿ ಜನರಂತೆಯೇ ಕಾಣುತ್ತಾರೆ. ಅವರನ್ನು ಗುರುತಿಸುವ ಏಕಮಾತ್ರ ಮಾರ್ಗವೆಂದರೆ ಅವರು ತಮ್ಮ ಭಾಷೆಯಲ್ಲಿ ಸಂಭಾಷಿಸುವುದನ್ನು ಆಲಿಸಬೇಕು. ದೇಶದ ಸಾಂಸ್ಕೃತಿಕ ವಿಭಿನ್ನತೆಯ ಪದಗಳಲ್ಲಿ ಹೇಳುವುದಾದರೆ ಲಂಬಾಣಿಗಳನ್ನು ಜನಾಂಗೀಯ ಮತ್ತು ಭಾಷಾ ಅಲ್ಪಸಂಖ್ಯಾತರ ಗುಂಪು (Ethnic- cum-linguistic minority) ಎಂದು ಕರೆಯಬಹುದು.

ತಮ್ಮ ಪ್ರತ್ಯೇಕ ಸಾಂಸ್ಕೃತಿಕ ಪರಿಚಯ ಹಾಗೂ ಪ್ರಭಲ ಸ್ಥಾನಿಕ ಜಾತಿಗಳಿಂದ ಅದನ್ನು ಕಾಪಾಡುವ ಹಾಗೂ ರಕ್ಷಿಸುವ ಅವಶ್ಯಕತೆಯ ಬಗೆಗೆ ಲಂಬಾಣಿಗಳು ಬಹಳಷ್ಟು ಪ್ರಜ್ಞಾವಂತರಾಗಿದ್ದಾರೆ. ಬದಲಾಗುತ್ತಿರುವ ಸನ್ನಿವೇಶಗಳಲ್ಲಿ ಹಲವಾರು ವಿಷಯಗಳನ್ನು ಅನ್ಯರಿಂದ ಅವರು ಎರವಲು ಪಡೆಯಲೇಬೇಕಾಗುತ್ತದೆ ಹಾಗೂ ಕೆಲವು ವಿಷಯಗಳನ್ನು ಸ್ವಯಂಪ್ರೇರಣೆಯಿಂದ ತಿಳಿದುಕೊಳ್ಳಬೇಕಾಗುತ್ತದೆ. ಆದರೆ ಅವರು ಅನ್ಯರಿಂದ ಪಡೆಯುತ್ತಿರುವ ಹಾಗೂ ಅನುಸರಿಸುತ್ತಿರುವ ಸಂಗತಿಗಳು ಅವರ ಜೀವನಶೈಲಿಯನ್ನು ಸಂಪೂರ್ಣವಾಗಿ ಮಾರ್ಪಡಿಸ ಬಹುದಾದಷ್ಟು ಪ್ರಮಾಣದಲ್ಲಿಲ್ಲ. ಅನ್ಯರಿಂದ ಪಡೆದ ಅಂಶಗಳನ್ನು ತಮ್ಮ ಸಾಂಸ್ಕೃತಿಕ ರೀತಿ ನೀತಿಯಲ್ಲಿ ಅಂತರ್ಗತಿಸಿಕೊಳ್ಳುತ್ತಾರೆ. ತಮ್ಮ ದೇವಾಲಯದ ಪೂಜಾ ಪದ್ಧತಿ ಹಾಗೂ ಮಹಿಳೆಯರ ಉಡುಪುಗಳನ್ನು ಬದಲಾಯಿಸಿದ ರೀತಿಯಲ್ಲಿಯೇ ಅನ್ಯ ಸಂಸ್ಕೃತಿಗಳಿಂದ ಪಡೆದ ಅಂಶಗಳನ್ನು ತಮ್ಮ ಸಂಸ್ಕೃತಿಯ ವಿಭಿನ್ನತೆ - ವಿಶಿಷ್ಟತೆ ಕಾಪಾಡುವ ರೀತಿಯಲ್ಲಿಯೆ ಅಂತರ್ಗತಿಸಿಕೊಳ್ಳುವ ತಂತ್ರವನ್ನು ಅನುಸರಿಸಲಾಗುತ್ತದೆ.

ಪ್ರತ್ಯೇಕವಾದ ಹಾಗೂ ಸಂಪೂರ್ಣವಾಗಿ ತಮ್ಮದೇ ಆದ ತಾಂಡಗಳಲ್ಲಿ ವಾಸಿಸುವ ಬಗೆಗಿನ ಅವರ ಪ್ರಬಲ ಒತ್ತಾಸೆಯು ಇತರರಿಂದ ಸುರಕ್ಷಿತ ಅಂತರದಲ್ಲಿರುವ ಹವಣಿಕೆಯಿಂದ ಮೂಡಿಬಂದದ್ದಾಗಿದೆ. ಈ ಕ್ರಮದಿಂದಾಗಿ ಅವರು ತಮ್ಮ ವಿಶಿಷ್ಟ ಗುರುತನ್ನು ಕಾಪಾಡಿಕೊಳ್ಳುವಲ್ಲಿ ನೆರವಾಗಬಹುದಾದ ಸಾಮಾಜಿಕ ಸಂಪರ್ಕಗಳನ್ನು ಕಡಿಮೆ ಮಾಡಲು ಸಹಜವಾಗಿಯೇ ಅವಕಾಶವಾಗುತ್ತದೆ. ಇದರಿಂದ ಅಭಿವೃದ್ಧಿಗೆ ಅಗತ್ಯವಾಗಿ ಬೇಕಾದ ಆರ್ಥಿಕ ಪರಸ್ಪರಾವಲಂಬನೆ, ಪರಸ್ಪರ ಪ್ರಕ್ರಿಯೆ, ಆಧುನಿಕ ರಾಜಕೀಯ ಆಡಳಿತಾತ್ಮಕ, ಸಂಪರ್ಕಗಳನ್ನು ಏರ್ಪಡಿಸಿಕೊಳ್ಳಲೂ ಅವಕಾಶವಾಗುತ್ತದೆ.

ಸುಮಾರು ಒಂದು ಶತಮಾನದ ಕಾಲ ಒಂದೆಡೆಯಲ್ಲಿ ನೆಲೆನಿಂತು ವಾಸಿಸುತ್ತಿರುವ ಲಂಬಾಣಿಗಳು ಇಂದಿಗೂ ತಮ್ಮನ್ನು ಸ್ಥಳೀಯ ಗ್ರಾಮಸ್ಥರಿಗಿಂತ (ಊರ ಮನೆಯವರು) ಭಿನ್ನ ಎಂಬರ್ಥದಲ್ಲಿ ತಾಂಡದ ನೆಲೆಸಿಗರು (ಕಾರವಾನ್‌ಗಳು ಅಥವಾ ಅಲೆದಾಡುವ ದಳಗಳು) ಅಥವಾ ಶಿಬಿರಗಳ ನೆಲೆಸಿಗರು ಎಂಬುದಾಗಿಯೇ ಪ್ರತ್ಯೇಕಿಸಿಕೊಳ್ಳುತ್ತಾರೆ. ಲಂಬಾಣಿಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರತ್ಯೇಕತೆಯು 'ನಾವು' ಎಂಬ ಅವರ ವಾಡಿಕೆಯ ಪದಬಳಕೆಯಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ನೆಲೆಗೊಂಡಿರುವ ಗ್ರಾಮಸ್ಥರನ್ನು 'ಅವರು' ಎಂದೇ ಲಂಬಾಣಿಗಳು ಸಂಬೋಧಿಸುತ್ತಾರೆ.

ಲಂಬಾಣಿಗಳು ಪ್ರತ್ಯೇಕವಾಗಿ ಜೀವಿಸಿರುವ ಬಗೆಗೆ ಬಹುಜಾತಿ ಗ್ರಾಮಸ್ಥರು ವಿಶೇಷವಾಗಿ ತಲೆ ಕೆಡಿಸಿಕೊಂಡಿಲ್ಲ. ಲಂಬಾಣಿಗಳ ಸಾಂಸ್ಕೃತಿಕ, ಅರೆ ಸ್ವಾಯತ್ತತೆಯ ಬಗೆಗೂ ಅವರು ಉದಾಸೀನರಾಗಿದ್ದಾರೆ. ಹಾಗಾಗಿ ಲಂಬಾಣಿಗಳು ತಮ್ಮಷ್ಟಕ್ಕೆ ತಾವು ಪ್ರತ್ಯೇಕವಾಗಿರಲು ಅವಕಾಶವೂ ಆಗಿದೆ. ಲಂಬಾಣಿಗಳು ಅನ್ಯರಿಂದ ಅನೇಕ ಗುಣಲಕ್ಷಣಗಳನ್ನು ಎರವಲು ಪಡೆದಿದ್ದರೂ ಲಂಬಾಣೇತರ ಸಂಸ್ಕೃತಿಯಲ್ಲಿ ಲಂಬಾಣಿ ಸಂಸ್ಕೃತಿಯ ಯಾವುದೇ ಗುಣವು ಅಂತರ್ಗತವಾದುದನ್ನು ಅಧ್ಯಯನದ ಕಾಲದಲ್ಲಿ ಸಂಶೋಧಕನು ಗಮನಿಸಿಲ್ಲ.

ಬಹುಪಾಲು ಸ್ಥಳೀಯ ರೈತರು ಶಾಖಾಹಾರಿಗಳಾದ ಲಿಂಗಾಯತ ಗುಂಪಿಗೆ ಸಂಬಂಧಿಸಿದವರಾಗಿದ್ದಾರೆ. ಆದಕಾರಣ ಮಾಂಸಾಹಾರಿಗಳಾದ ಲಂಬಾಣಿಗಳು ತಮ್ಮಿಂದ ದೂರದಲ್ಲಿರುವುದೇ ಒಳ್ಳೆಯದು ಎಂದು ಭಾವಿಸುತ್ತಾರೆ. ಲಂಬಾಣಿ ತಾಂಡಗಳಲ್ಲಿ ಆರೋಗ್ಯದ ವಿಷಯಕ್ಕೆ ಸಂಬಂಧಿಸಿದಂತೆ ಶುಚಿತ್ವ ಇಲ್ಲದೆ ಹೊಲಸು ಬಹಳವಾಗಿರುವುದರಿಂದ ಹಾಗೂ ಮನೆಗಳ ಮುಂದೆ ನೊಣಗಳು ಹಾಗೂ ಹೊಲಸು ವಾಸನೆಯಿಂದಾಗಿ ಮಳೆಗಾಲದಲ್ಲಿ ಅವರ ತಾಂಡಗಳಿಗೆ ಹೋಗುವುದು ತೀರ ಪ್ರಯಾಸಕರ ಎಂಬುದು ಲಿಂಗಾಯತ, ಬ್ರಾಹ್ಮಣ, ವೈಶ್ಯ ಹಾಗೂ ಇತರೇ ಮುಂದುವರಿದ ಜಾತಿಗುಂಪುಗಳ ಆಕ್ಷೇಪಣೆಯಾಗಿದೆ. ಬಹುಜಾತಿ ಗ್ರಾಮಗಳಿಂದ ದೂರದಲ್ಲಿರುವುದರಿಂದ ಲಂಬಾಣಿಗಳು ಸುಖಿಗಳಾಗಿದ್ದಾರೆ. ಅವರು ಮದ್ಯಪಾನ ಮಾಡಿ ತಮ್ಮ ಸಮಚಿತ್ತತೆ ಕಳೆದುಕೊಂಡು ಜೋರಾಗಿ ಕೂಗಾಡುತ್ತಾ, ಜಗಳವಾಡುತ್ತಾ ರಂಪ ಮಾಡುತ್ತಾರೆ. ಇದರಿಂದ ಇತರರಿಗೆ ತೊಂದರೆಯೂ ಆಗುತ್ತದೆ.

ಈ ಅಧ್ಯಾಯದಲ್ಲಿ ಲಂಬಾಣಿಗಳ ಆರ್ಥಿಕ ಸ್ಥಿತಿ, ಬಂಧುತ್ವ, ಸಾಮಾಜಿಕ ನಿಯಂತ್ರಣ ಮತ್ತು ಧರ್ಮ ಇವುಗಳಲ್ಲಾಗಿರುವ ಬದಲಾವಣೆಗಳನ್ನು ಕುರಿತು ಚರ್ಚಿಸುವ ದೃಷ್ಟಿಯಿಂದ ಈ ಅಧ್ಯಾಯವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆ ಭಾಗದಲ್ಲಿ ಸಾಮಾಜಿಕ ಸಂಘಟನೆ ಮತ್ತು ಬದಲಾವಣೆಗಳನ್ನು ಕುರಿತು ಚರ್ಚಿಸಿದರೆ, ಎರಡನೇ ಭಾಗದಲ್ಲಿ ಲಂಬಾಣಿಗಳ ಸಾಂಪ್ರದಾಯಿಕ ರಾಜಕೀಯ ಸಂಘಟನೆಯ ಬಗ್ಗೆ, ಮೂರನೇ ಭಾಗದಲ್ಲಿ ಬದಲಾಗುತ್ತಿರುವ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮತ್ತು ಅವುಗಳ ಮೇಲೆ ಉಂಟಾಗಿರುವ ಆರ್ಥಿಕ ಪರಿಣಾಮಗಳನ್ನು ವಿಶ್ಲೇಷಿಸಿದ್ದರೆ ನಾಲ್ಕನೇ ಭಾಗದಲ್ಲಿ ಲಂಬಾಣಿಗಳ ಲೋಕ ದೃಷ್ಟಿ ಕುರಿತು ಚರ್ಚಿಸಲಾಗಿದೆ. ಕೊನೆಯ ಭಾಗದಲ್ಲಿ ಲಂಬಾಣಿಗಳು ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳಲು ಇರುವ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲಲು ಪ್ರಯತ್ನಸಲಾಗಿದೆ.

# References

Bhat, Chandrasekhar. "Social Adjustment and Change among the Wadders" in Misra, P.K. and K . C . Malhotra (eds.) ***Indian Nomads***, Calcutta : Anthropological Survey of India, 1982.

Briggs, John. "An Account of the Origin, History and Manners ... of Banjaras" in ***Transactions of the Literary Society of Bombay***, Vol. I, Bombay: Education Society Press (Orig. edn. 1819), 1877.

Buchanan, Francis. ***A Journey from Madras through the Country of Mysore, Canara and Malabar***, Vols. II and III: London: W.Blumer and Co., 1807.

Campbell, James M. ***Bombay Gazetteer- Karnataka (Kanara)***, Bombay: Government of Bombay Presidency, 1883.

Campbell, James M , 1884. ***Bombay Gazetteer- Karnataka (Dharwar)***, Bombay: Government of Bombay Presidency.

Campbell, James M ***Bombay Gazetteer- Karnataka (Bijapur)***, Bombay: Government of Bombay Presidency, 1884.

Craufurd, Q. ***Sketches Chiefly relating to the History, Religion, Learning, and Manners of the Hindus***, London: Printed for T.Cadale, in the Strand, Second Edn. Vol. II. ,1742.

Dubois,A,J.A. ***Hindu Manners, Customs and Ceremonies***, Oxford : Clarendon Press, 1936.

Enthoven, R.E. ***The Tribes and Castes of Bombay***, Vol. II Bombay : Government of Bombay Presidency, 1922.

Epstein, T.S. ***Economic Development and Social Change in South India***, Bombay: Oxford University Press,1962.

Epstein, T.S. "Productive Efficiency and Customary Systems of Rewards in Rural South India" in R. Firth (ed.) ***Themes in Economic Anthropology***, London: Tavistock Publications, 1967.

Evans-Pritchard, E.E. "Kinship and the Local Community among the Nuer" in A.R.Radcliffe-Brown and D.Forde (ed.) ***African Systems of Kinship and Marriage***, Bombay : Oxford University Press, 1950.

Furer-Haimendorf, ***Christoph Von. The Gonds of Andhra Pradesh***, New Delhi: Vikas, 1979.

Geertz C. "The Dutch Colonial Period in Indonesia: Agricultural Involution" in George Dalton (ed.) ***Economic Development and Social Change***, New York : Natural History Press, , 1971

Gough E.K. "Changing Kinship Usages in the Setting of Political and Economic Change among the Nayaras of Malabar," ***J.R.A.I.*** Vol.82, 71-88, 1952.

Grierson, G.A. ***Linguistic Survey of India.*** Vol. IX Part III (First Edn. 1907) Delhi : Motilal Banarasidas, Report, 1968.

Hsu, Francis, L.K."Dominant Kinship Relationship". ***American Anthropologist,*** Vol. 67, No. 3, 1965.

Jay, Edward J. "The Anthropologists and Tribal Welfare Hill Maria - A Case Study" in L.P. Vidyarthi (ed.) Anthropology and Tribal Welfare in India (Special Issue of the ***Journal of Social Research,*** Ranchi), 1959.

Lurie, Nancy, "Culture Change" in James A. Cliffton (ed). ***Introduction to Cultural Anthropology*** (Essays in the Scope & Methods of the Science of Man), Boston : Houghton Mifflin, 1968.

Malhotra,S.P. & A.B. Bose. "Problems of Rehabilitation of Nomadic Banjaras of Western Rajasthan," ***Annals of Arid Zone,*** Vol.2, No. 1, 1963.

Mead, Margaret ***New Lives for Old: Trasformation*****, Manus 1928-53,** London : Gollancz, 1956.

Mead, P.J. and G.L. Mac Gregor. ***Census of India***- 1911.: (Bombay), Bombay: Government of Bombay, 1912.

Montagu, Ashley. ***Man: His First Million Years***, New York: TheNew American Library, Third ptg, 1960.

Merdock, G.P. ***Social Structure***, New York: The Free Press, (First Free press Paperback edn.), 1965.

Nadel, S.F. Malinowski on Magic and Religion" in R. Firth (ed.) ***Man and Culture,*** London: Routledge & Kegan Paul (Routledge first Paperback; orig. 1957), 1970.

Nanjundayya, H.V.& L.K. Ananthakrishna Iyer, ***The Mysore Tribes and Castes,*** Vol.II, Mysore: University of Mysore Press, 1928.

Radcliffe-Brown, A.R. ***Structure and Function in Primitive Society***, London: The English Language Book Society and Cohen & West Ltd., 1964.

Rao, P.K.M. "The Mythological Origin and Clan System of the Banjaras of Hyderabad," ***Man in India,*** Vol.XXX, No.1, 1950.

Redfield, R. ***The Primitive World and Its Transformation*** Ithaca, New York: Cornel University Press (Cornel Paperbacks, tenth ptg., orig.1953.), 1968.

Russel, R.V. & Hiralal. ***The Tribes and Castes of Central Provinces of India*** (in four vols.), Vol. II, London: Macmillan & Co., 1916.

Siddiqui, M.K.A.***Peasantization of the Banjara in a village in Adilabad***, Paper presented at the Seminar on Agrarian Situation in India organized by the Southern Regional Office, A.S.I.Mysore, 1982.

Spoehr, A. "Changing Kinship Systems (Anthropological Series, ***Field Mus.Nat. Hist***. XXXIII," No.1-4), 1947.

Swanson, G.E. ***The Birth of the Gods***, Ann Arbor: The University of Michigan Press, 1960.

Thurston, Edgar. ***Ethnographic Notes in Southern India***, Madras: Government Press (Second Issue), 1907.

Thurston, Edgar ***Castes and Tribes of Southern India***, Vol. IV, Madras : Government of Madras Press, 1909.

Titiev, Mischa. "A Fresh approach to the Problem of Magic and Religion" in Peter B.Hammand (ed.) ***Cultural and Social Anthropology,*** New York: Collier and MacMillan Co., 1968.

# ಅಧ್ಯಾಯ ೪

# ಉಪಸಂಹಾರ

ಲಂಬಾಣಿ ಸಮಾಜದ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗಿರುವ ಅಂಶಗಳು.

ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆಯ ಪ್ರಕ್ರಿಯೆಗಳು ಮತ್ತು ಸಮಸ್ಯೆಗಳು

ಲಂಬಾಣಿಗಳ ಸಾಂಸ್ಕೃತಿಕ ಅನನ್ಯತೆ : ಕೆಲವು ದೃಷ್ಟಿಕೋನಗಳು

# ಅಧ್ಯಾಯ ೪

## ಉಪಸಂಹಾರ

ಇದುವರೆಗೂ ಚರ್ಚಿಸಲಾದ ಲಂಬಾಣಿಗಳ ಸಾಮಾಜಿಕ ಆರ್ಥಿಕ ಜೀವನದ ಪ್ರಮುಖ ಅಂಶಗಳು ಪ್ರಾದೇಶಿಕ ಐಕ್ಯತೆಯ ಚಿನ್ಹೆಗಳಾಗಿವೆ. ಇವು ಪರೋಕ್ಷವಾಗಿ ರಾಷ್ಟ್ರೀಯ ಸಾಮಾಜಿಕ, ಆರ್ಥಿಕ ರೂಪ ಪಡೆಯುತ್ತಿವೆ. ಈ ವ್ಯವಸ್ಥೆ ಅಷ್ಟೇನೂ ಪ್ರಾಚೀನ ವಲ್ಲದ, ಇತ್ತೀಚೆಗಷ್ಟೇ ನೆಲೆಗೊಂಡಿರುವ, ರೈತಾಪೀಕರಣ ಪ್ರಕ್ರಿಯೆಗೆ ಒಳಪಡುತ್ತಿರುವ ಅಲೆಮಾರಿ ಬುಡಕಟ್ಟಿಗೆ ಸಂಬಂಧಪಟ್ಟದ್ದಾಗಿದೆ. ಲಂಬಾಣಿ ಆರ್ಥಿಕತೆ ಅನೇಕ ಸಾಮಾಜಿಕ, ಆರ್ಥಿಕ ಚಲಕಗಳನ್ನು (ವೇರಿಯಬಲ್ಸ್) ಒಳಗೊಂಡಿದೆ. ಅಷ್ಟೇ ಅಲ್ಲದೆ ಹೊಸದಾಗಿ ಅನೇಕ ಸಾಮಾಜಿಕ, ಆರ್ಥಿಕ ಅಂಶಗಳನ್ನು ತನ್ನದಾಗಿಸಿಕೊಳ್ಳುತ್ತಲಿದೆ. ಅವುಗಳಲ್ಲಿ ಮುಂದೆ ಉಲ್ಲೇಖಿಸಲಾದ ಅಂಶಗಳು ಪ್ರಮುಖವಾದವು. ಅಭಿವೃದ್ಧಿಹೊಂದಿದ ಖಾಸಗಿ ಆಸ್ತಿಯ ಸಂಪಾದನೆಯ ಆಲೋಚನೆ ಹಾಗೂ ಪರಿಕಲ್ಪನೆ, ಆರಂಭದಲ್ಲಿ ಇದ್ದ ಬುಡಕಟ್ಟು ಸಮಷ್ಟಿವಾದ ವ್ಯಕ್ತಿ ಕೇಂದ್ರಿತವಾದವಾಗಿ ಪ್ರತ್ಯೇಕಗೊಳ್ಳುತ್ತಿರುವುದು, ಮುಕ್ತ ಅಥವಾ ಸರಳ ಮಾರುಕಟ್ಟೆ, ಸಂಪತ್ತನ್ನು ಭೂಮಿಯ ಮಾದರಿಯಲ್ಲಿ ಕ್ರೋಢೀಕರಣ ಮಾಡಬೇಕೆಂಬ ಕಲ್ಪನೆ, ಕೃಷಿಸಾಗುವಳಿಯ ಸಲಕರಣೆಗಳು (ಜಾನುವಾರು ಮತ್ತು ಇತ್ಯಾದಿ ಸಲಕರಣೆಗಳು) ಮತ್ತು ಗೃಹೋಪಯೋಗಿ ಸಾಮಗ್ರಿಗಳಲ್ಲಿ ಹೆಚ್ಚಳ, ಕುಟುಂಬಗಳ ನಡುವೆ ಸಂಪತ್ತಿನ ಅಸಮಾನತೆಯ ಉದಯ, ಇದು ಇಲ್ಲದಿದ್ದ ಪಕ್ಷದಲ್ಲಿ ನಿರ್ದಿಷ್ಟವಾಗಿ ಜಾತಿ ಮತ್ತು ವರ್ಗವಾರು ವಿಭಜನೆ, ಮಾರುಕಟ್ಟೆ ಮತ್ತು ವ್ಯಾಪಾರದಿಂದ ನಗದು ಹಣದ ಬಳಸುವಿಕೆಯ ಹೆಚ್ಚಳ, ಸಾಲಗಳ ಮೇಲಿನ ಬಡ್ಡಿ, ಕೂಲಿಗಾಗಿ ಕೆಲಸ, ಆಸ್ತಿ ಒತ್ತೆ ಇಡುವುದು, ಗುತ್ತಿಗೆ ಆಧಾರದ ಮೇಲೆ (ಗೇಣಿ) ಕೃಷಿ ಭೂಮಿ ಹಿಡಿಯುವುದು, ಎತ್ತುಗಳಿಂದ ಉಳುಮೆ ಮಾಡುವ ತಾಂತ್ರಿಕತೆ, ಇತರೆ ಸಾಗುವಳಿ ತಂತ್ರಜ್ಞಾನದ ಅಳವಡಿಕೆಯಿಂದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾದ ಅನೇಕ ಪ್ರಭಾವ ಮತ್ತು ಪರಿಣಾಮಗಳು.

ಈ ಮೇಲಿನ ಪ್ರಕ್ರಿಯೆಗಳು ಅಥವಾ ವಿದ್ಯಮಾನಗಳಿಂದ ಆರ್ಥಿಕ ಅಭಿವೃದ್ಧಿ ಹೊಂದುತ್ತಿರುವ ಸೂಚನೆಗಳು ದೊರೆಯುತ್ತವೆ. ಆದರೆ ಲಂಬಾಣಿ ಸಾಮಾಜಿಕ, ಆರ್ಥಿಕ ವ್ಯವಸ್ಥೆಯು ಕೆಲವು ಸಾಂಪ್ರದಾಯಿಕ ಸಂಸ್ಥೆಗಳ ಮೌಲ್ಯಗಳನ್ನು ಇನ್ನೂ ಹಾಗೆಯೇ ಉಳಿಸಿಕೊಂಡಿವೆ. ಉದಾಹರಣೆಗೆ, ನೆಲೆಗೊಂಡಿರುವ ಸ್ಥಳದ (ತಾಂಡದ) ಸಾಮೂಹಿಕ ಒಡೆತನ, ಸಾಂಪ್ರದಾಯಿಕ ಸಂಸ್ಕಾರಗಳು ಮತ್ತು ಧಾರ್ಮಿಕ ಆಚರಣೆಗಳನ್ನು ಸಾಮೂಹಿಕ ಸಹಕಾರದಿಂದ ನಿರ್ವಹಣೆ, ಈಗಲೂ ಕಡಿಮೆ ಪ್ರಮಾಣದಲ್ಲಿ ಕಂಡುಬರುವ ಆಹಾರ ಸಂಗ್ರಹಣೆ ಮತ್ತು ಬೇಟೆ, ಪ್ರಾಥಮಿವಾಗಿ ಹೊಟ್ಟೆ ಹೊರೆಯುವುದಕ್ಕೆ ಕೃಷಿ ಉತ್ಪನ್ನಗಳನ್ನು ಅವಲಂಬಿಸಿರುವುದು, ಸಹಕಾರಿ ಸಂಘ ಸಂಸ್ಥೆಗಳನ್ನೂ ಹಾಗೂ ಆಧುನಿಕ ಸಂಸ್ಥೆಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸದೆ ಸಾಂಪ್ರದಾಯಿಕ ಲೇವಾದೇವಿಗೆ ಹೆಚ್ಚಾಗಿ ಅಂಟಿಕೊಂಡಿರುವುದು, ಬಂಡವಾಳದ ಕೊರತೆಯ ಸಂದಿಗ್ಧ ಪರಿಸ್ಥಿತಿಗಳು, ಐತಿಹಾಸಿಕ ಮತ್ತು ಆರ್ಥಿಕ ಅನಿವಾರ್ಯ ಪರಿಸ್ಥಿತಿಯಿಂದಾಗಿ ಹೆಚ್ಚುತ್ತಿರುವ ಇತರ ಸಮುದಾಯಗಳ ಸಂಪರ್ಕದಿಂದ ಜನಾಂಗೀಯ ಅನನ್ಯತೆಯನ್ನು ಕಳೆದುಕೊಳ್ಳುತ್ತಿದ್ದೇವೆ ಎಂಬ ಭಯ ಮತ್ತು ಧಾರ್ಮಿಕ ಸಂಸ್ಕಾರಗಳ ಆಚಾರ ವಿಚಾರಗಳಿಗೆ ಹೆಚ್ಚು ಒತ್ತನ್ನು ನೀಡಿ ಅವುಗಳನ್ನು ಕಾಪಾಡಿಕೊಳ್ಳಲು ಉತ್ಸುಕರಾಗಿರುವುದು.

ಆದಾಗಿಯೂ ರೈತಾಪೀಕರಣ ಮತ್ತು ಇತರ ಬದಲಾವಣೆಗಳಿಂದಾಗಿ, ಲಂಬಾಣಿಗಳು ವಿಭಿನ್ನತೆ ಮತ್ತು ಸಮಗ್ರತೆಯ ಪ್ರಕ್ರಿಯೆಗೆ ಒಳಪಡುತ್ತಿದ್ದಾರೆ (ಡಾಲ್ಬನ್,೧೯೭೧:೨೬). ಹೊಸ ಬಗೆಯ ಚಟುವಟಿಕೆಗಳು, ಸಂಬಂಧಗಳು ಇತ್ಯಾದಿಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದಾರೆ. ಉದಾಹರಣೆಗೆ, ಲಂಬಾಣಿಗಳು ಕೃಷಿ ಭೂಮಿಯನ್ನು ಪಡೆದುಕೊಳ್ಳುತ್ತಿರುವುದು, ಕೃಷಿಯಲ್ಲಿ ನೆಲೆಗೊಳ್ಳುತ್ತಿರುವುದು ಮತ್ತು ಕೃಷಿಗೆ ಸಂಬಂಧಿಸಿದ ವೃತ್ತಿ ಮಾಡುತ್ತಿರುವುದು ಇತ್ಯಾದಿ. ಕೆಲವರು ವೈವಿಧ್ಯವಾದ ಹೊಸ ಆರ್ಥಿಕ ಚಟುವಟಿಕೆಗಳಲ್ಲಿ ಪಾಲ್ಗೊಳುತ್ತಿದ್ದಾರೆ. ಶಾಲೆ, ಸಹಕಾರಿ ಸಂಸ್ಥೆಗಳು, ಬ್ಯಾಂಕುಗಳು, ಸರ್ಕಾರದ ವಿವಿಧ ನೆರವು, ಸಹಾಯಧನ ಸೌಲಭ್ಯ ಮುಂತಾದ ಉಪಯೋಗಗಳನ್ನು ಪಡೆದುಕೊಂಡು ತಮ್ಮ ಸಾಂಪ್ರದಾಯಿಕ ಸಾಮಾಜಿಕ ಸಂಘಟನೆಯನ್ನು ಬದಲಾವಣೆಯತ್ತ ಕೊಂಡೊಯ್ಯುತ್ತಿದ್ದಾರೆ.

ಲಂಬಾಣಿಗಳ ಕುಟುಂಬಗಳು ಆರ್ಥಿಕ ಘಟಕಗಳಾಗಿ ಗಟ್ಟಿಯಾಗಿ ಬಂಧಿತವಾಗಿವೆ. ತಾಂಡಗಳಲ್ಲಿ ನೆರೆಹೊರೆಯವರ ಜೊತೆಗೆ ನಿಕಟವಾದ ಸಂಪರ್ಕದ ಜೊತೆ ಜೊತೆಗೆ ಒಂದೇ ಅನುವಂಶಿಕ ಸಂಬಂಧದ ಮತ್ತು ವಿವಾಹ ಸಂಬಂಧವುಳ್ಳ ಬಂಧುತ್ವ, ಇವೆಲ್ಲಾ ಅವರ ಪರಸ್ಪರ ಸಾಮಾಜಿಕ ಪ್ರಕ್ರಿಯೆಗಳು. ಇಲ್ಲಿ ಸ್ಪಷ್ಟವಾಗಿ ಆರ್ಥಿಕ ಸಹಕಾರ ಮತ್ತು ಪೈಪೋಟಿಗಳನ್ನು ಗುರುತಿಸಬಹುದು. ಸಂಬಂಧಗಳನ್ನು ಉಪಯೋಗಿಸಿಕೊಂಡು, ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ಕುಟುಂಬಗಳು, ಬೇರೆ ಬೇರೆ ತಾಂಡಗಳ ಕುಟುಂಬಗಳೊಂದಿಗೆ ವಿವಾಹ ಸಂಬಂಧ ಮಾಡಿ ಸಂಪರ್ಕ ಮತ್ತು ಸಂಬಂಧಗಳನ್ನು ಹೊಂದುತ್ತಿವೆ. ಇಂತಹ ಸಂಬಂಧಗಳಲ್ಲಿ ಆರ್ಥಿಕತೆಯ ಪ್ರಾಮುಖ್ಯತೆಯು ಬಹಳ ಮಹತ್ವಪೂರ್ಣವಾದದ್ದು. ಅದರಲ್ಲಿಯೂ ವಿಶೇಷವಾಗಿ ಸೂಕ್ಷ್ಮ ಹವಾಗುಣ ಮತ್ತು ಬೌದ್ಧಿಕ ಪರಿಸರದ ವ್ಯತ್ಯಾಸವುಳ್ಳ, ಬೆಟ್ಟ ಗುಡ್ಡ ಪ್ರದೇಶಗಳು, ಬಯಲು ಪ್ರದೇಶಗಳು ಹಾಗೂ ಬದಲಾವಣೆಗೆ ಒಳಪಡುತ್ತಿರುವ ತಾಂಡಗಳಲ್ಲಿ ವಾಸ ಮಾಡುವವರೊಂದಿಗೆ ಸಂಬಂಧವೇರ್ಪಟ್ಟಾಗ, ಅವರ ನಡುವಿನ ಆರ್ಥಿಕತೆ ತುಂಬಾ ಮಹತ್ವಪೂರ್ಣವಾದ ಪಾತ್ರ ವಹಿಸುತ್ತದೆ. ಸಾಮಾನ್ಯ ವಾಗಿ ತಾಂಡಗಳಲ್ಲಿ ಲಂಬಾಣಿ ಎಂಬ ಒಂದೇ ಜಾತಿ ಅಥವಾ ಸಮುದಾಯಕ್ಕೆ ಸೇರಿದ ಜನರು ವಾಸವಾಗಿರುತ್ತಾರೆ. ಕೆಲವು ಸಂದರ್ಭಗಳಲ್ಲಿ ಬೇರೆ ಜಾತಿಗಳಿಗೆ ಸೇರಿದ ಜನರೊಂದಿಗೆ ತಾಂಡಗಳ ಜನರ ಸಂಬಂಧಗಳಲ್ಲಿ ಕೆಲವು ನಿರ್ಬಂಧಗಳು ಇವೆ. ಆದರೂ ಲಂಬಾಣಿ ಹಾಗೂ ಲಂಬಾಣೇತರ ಸ್ಥಳೀಯ ಸಮುದಾಯಗಳ ನಡುವೆ ಸಾಮಾಜಿಕ ಸಂಘಟನೆಗಳಲ್ಲಿ ಕೆಲವು ವ್ಯತ್ಯಾಸಗಳಿವೆ. ಇಂತಹ ವ್ಯತ್ಯಾಸಗಳ ರಚನೆ ಇದ್ದರೂ, ಎರಡು ಕಡೆಗಳಲ್ಲಿ ಒಂದೇ ಮಾದರಿಯಲ್ಲಿರುವ ಕೆಲವು ವೈವಿಧ್ಯತೆಗಳು ಕಂಡುಬರುತ್ತವೆ. ಉದಾಹರಣೆಗೆ, ಪರಂಪರಾಗತ ವಾಗಿ ಬಂದ ಪಿತೃ ಪ್ರಧಾನ ಕೌಟುಂಬಿಕ ವ್ಯವಸ್ಥೆ ಮತ್ತು ಅವಿಭಕ್ತ ಕುಟುಂಬಕ್ಕೆ ಆದ್ಯತೆ ನೀಡುವುದು ಇತ್ಯಾದಿ. ಲಂಬಾಣಿ ಮತ್ತು ಲಂಬಾಣೇತರ ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದಂತೆ ಈ ವಿಚಾರ ವಾಸ್ತವಿಕವಾಗಿದೆ. ಅವುಗಳೆಂದರೆ ಸಾಮಾಜಿಕ ನಿಯಂತ್ರಣ, ಸಂಪತ್ತಿನ ಒಡೆತನ, ಧಾರ್ಮಿಕ ನಂಬಿಕೆಗಳು ಇತ್ಯಾದಿ. ಯಾವುದೇ ಆಚರಣೆಯನ್ನು ಎರಡು ದೃಷ್ಟಿಕೋನಗಳಲ್ಲಿ ಗಮನಿಸಿದರೆ ಪರಸ್ಪರ ಭಿನ್ನತೆ ಇರುವುದು ತಿಳಿಯುತ್ತದೆ. ಈ ವ್ಯತ್ಯಾಸಗಳ ಪ್ರವೃತ್ತಿ ಗೌಣವಾಗಿದ್ದರೂ ಈ ಪ್ರದೇಶದ ಜನರ ಜನಾಂಗೀಯ ಗಡಿಗಳನ್ನು ಗುರುತುಮಾಡುವಲ್ಲಿ ಪ್ರಮುಖ ಸ್ಥಾನ ವಹಿಸುತ್ತದೆ. ಉದಾಹರಣೆಗೆ, ಸಂಬಂಧಗಳಲ್ಲೇ ವಿವಾಹ ಸಂಬಂಧದ ವೃತ್ತಗಳನ್ನು ನಿರ್ಮಿಸುವುದು, ವಿಧವೆಯನ್ನು ಆಕೆಯ ಪತಿಯ ಅಣ್ಣನೋ ತಮ್ಮನೋ ವಿವಾಹ ಮಾಡಿಕೊಳ್ಳಬೇಕಾದ ಸಾಮಾಜಿಕ ನಿರ್ಬಂಧಗಳು, ದುಃಖದ ಸಂರ್ದಭಗಳಲ್ಲಿ ಸಾಮೂಹಿಕವಾಗಿ ಅಳುವುದು, ವಧುದಕ್ಷಿಣೆ, ವಧುಸೇವೆ ಮತ್ತು ದೂರದ ಬಂಧುತ್ವ ಸಂಬಂಧಿ ಪರಿಕಲ್ಪನೆ. ಇವು ಲಿಂಗಾಯತ ಸಮುದಾಯದ (ಅಧ್ಯಯನ ನಡೆಸಿದ ಪ್ರದೇಶದ ಪ್ರಬಲ ಜಾತಿ) ಬಂಧುತ್ವ ಸಂಬಂಧಿ ಪದ ಪ್ರಯೋಗದಿಂದ ಯಾವುದೇ ಪ್ರಭಾವಕ್ಕೊಳಗಾಗದೆ ಹಾಗೆಯೇ ಮುಂದುವರೆಯುವುದು. ಇದರಿಂದ ಲಿಂಗಾಯತರು ಪ್ರತ್ಯೇಕವಾಗಿ ಹೊರಗೆ ಇರುವುದನ್ನು ಗುರುತಿಸಲು

ಸಹಾಯಕವಾಗಿದೆ. ಅಲ್ಲಿರುವ ಅಲ್ಪಸ್ವಲ್ಪ ವ್ಯತ್ಯಾಸಗಳು, ಮಾಧ್ಯಮಿಕ, ಸಾಮಾಜಿಕ ಗುಂಪುಗಳ ಒತ್ತಡದಿಂದ ಅವುಗಳ ಕಾರ್ಯಗಳು ಮಹತ್ವವನ್ನು ಪಡೆಯುತ್ತಿವೆ. ಏಕೆಂದರೆ ಮೂಲ ಘಟಕಗಳಾದ ಕುಟುಂಬ ಮತ್ತು ಜಾತಿ/ಗುಂಪುಗಳು ಒಂದೇ ಆಗಿರುವುದು. ಲಂಬಾಣಿಗಳು ಮನೆತನ ಮತ್ತು ಗೋತ್ರಗಳಿಗೆ ಹೆಚ್ಚು ಒತ್ತನ್ನು ನೀಡುತ್ತಾರೆ. ಇತರ ಹಿಂದೂಗಳಲ್ಲಿ ಸಾಮಾನ್ಯವಾಗಿ ಅಸ್ಪಷ್ಟವಾದ ಅರಿವು ಮನೆತನ ಮತ್ತು ಗೋತ್ರಗಳ ಎಲ್ಲೆಗಳಲ್ಲಿ ಇದೆ. ಲಿಂಗಾಯತರಲ್ಲಿ ಕೆಲವು ಗುಂಪುಗಳು ಹೊರ ಬಾಂಧವ್ಯದ ಗೋತ್ರಗಳ ಬಗ್ಗೆಯೂ ಅಷ್ಟಾಗಿ ಗಮನಹರಿಸುವುದಿಲ್ಲ.

ಲಂಬಾಣಿಗಳಲ್ಲಿ ಈ ಬದಲಾವಣೆಗಳು ಉಂಟಾಗಲು ಅನೇಕ ವರ್ಷಗಳೇ ಕಳೆದವು. ಅವರ ಸಾಂಪ್ರದಾಯಿಕ ಆರ್ಥಿಕ ಮೂಲ ಕುಗ್ಗಿ, ಕೃಷಿಯನ್ನು ಅವಲಂಬಿಸಲೇಬೇಕಾದ್ದರಿಂದ, ಹೊಸ ಬಗೆಯ ವಸತಿ ವ್ಯವಸ್ಥೆ ಮುಂತಾದ ಪರಿಣಾಮಗಳಿಂದ ಬದಲಾವಣೆ ಉಂಟಾಗಿದೆ. ಆರ್ಥಿಕ ಬದಲಾವಣೆಯ ಪ್ರಭಾವಕ್ಕೆ ನೇರವಾಗಿ ಒಳಗಾಗಿದ್ದರಿಂದ ಲಂಬಾಣಿಗಳ ಬಂಧುತ್ವ ವ್ಯವಸ್ಥೆಯಲ್ಲಿ ಪ್ರಮುಖ ಬದಲಾವಣೆ ಆಗಿಲ್ಲ ಎಂಬುದೇ ನನ್ನ ಅಭಿಪ್ರಾಯ. ಸಣ್ಣ ಪುಟ್ಟ ಬದಲಾವಣೆಗಳನ್ನು ನಾವು ಗುರುತಿಸಬಹುದಾದರೂ, ಅದಕ್ಕೆ ಪ್ರಮುಖ ಕಾರಣ ಒಂದೇ ಕಡೆ ನೆಲೆಸಿ ಇತರೆ ಜಾತಿ ಗುಂಪುಗಳ ನಡುವೆ ಸಾಂಸ್ಕೃತಿಕವಾಗಿ ಬೆರೆತದ್ದು. ಆಧುನೀಕರಣದಿಂದಾಗಿ ಇಂತಹ ಬದಲಾವಣೆಗಳು ಸಮಾಜದಲ್ಲಿ ಬಹಳ ಬೇಗನೆ ಬರಬಹುದು. ಆದರೆ ಲಂಬಾಣಿಗಳಲ್ಲಿ ಆಧುನೀಕರಣ ಬಹಳ ಕಡಿಮೆ ಪ್ರಮಾಣದಲ್ಲಿ ಪ್ರವೇಶ ಪಡೆದಿದೆ. ಲಂಬಾಣಿಗಳು ಈಗಲೂ ಪ್ರಾಥಮಿಕವಾಗಿ ಸಾಂಪ್ರದಾಯಿಕ ಭಾವನೆಗಳಿಗೆ ಬದ್ಧರಾಗಿರುವುದನ್ನು ನಾವು ಗಮನಿಸಬಹುದಾಗಿದೆ. ಲಂಬಾಣಿ ಮತ್ತು ಇತರ ಜಾತಿಗುಂಪುಗಳ ಗುಣಲಕ್ಷಣದ ಅಭಿವೃದ್ಧಿಯನ್ನು ವಿಶ್ಲೇಷಿಸಲು ಪ್ರಯತ್ನಿಸಿದರೆ ವಿವಿಧ ದಾರ್ಶನಿಕ ಪದ್ಧತಿಗಳ ಸಮನ್ವಯದ ಸಂಮಿಶ್ರ ಸ್ಥಿತಿ ತಿಳಿದುಬರುತ್ತದೆ. ಆರಂಭದಲ್ಲಿ ಉತ್ತರ-ಭಾರತದ ಆಚರಣೆಗಳು, ನಂತರ ದಕ್ಷಿಣ-ಭಾರತದ ಸ್ಥಳೀಯ ಆಚರಣೆಗಳ ಪ್ರಭಾವಕ್ಕೆ ಒಳಗಾಗಿ ಬದಲಾವಣೆಗಳು ಉಂಟಾಗಿವೆ. ಇದಕ್ಕೆ ಸಂಬಂಧಿಸಿದ ವಿವರಗಳು ಮೇಲ್ನೋಟಕ್ಕೆ ಮಾತ್ರ ಸರಿಯೆಂದು ತೋರುತ್ತವೆ. ಈ ಪ್ರಕ್ರಿಯೆಗಳನ್ನು ಸರಳವಾಗಿ ಕಾಣಬಹುದು. ಬಂಧುತ್ವ, ಮಹಿಳೆಯರ ವೇಷಭೂಷಣ, ಜನಪದ ಪದ್ಧತಿಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ನಂಬಿಕೆಗಳು ಪ್ರಮುಖವಾಗಿ ಸ್ಥಳೀಯವುಗಳಾಗಿವೆ. ಅನೇಕ ಲಂಬಾಣಿಗಳಲ್ಲಿ ದಕ್ಷಿಣ ಭಾರತದ ಪ್ರಾದೇಶಿಕ ಅಡಿಗೆ, ಪ್ರಾದೇಶಿಕ ಭಾಷೆಗಳಿಂದ ತಮ್ಮ ಭಾಷೆಯ ನುಡಿಗಟ್ಟುಗಳಿಗೆ ಕೊಡು-ಕೊಳ್ಳುವಿಕೆ ನಡೆದಿದೆ. ಆರ್ಥಿಕ ಕಸುಬುಗಳು, ವೇಷಭೂಷಣಗಳಲ್ಲಿ ಆದ ಮಾರ್ಪಾಡು ಇತ್ಯಾದಿ ವಿಷಯಗಳಲ್ಲಿ ದಕ್ಷಿಣ ಭಾರತದ ಸ್ಥಳೀಯ ಪ್ರಭಾವವನ್ನು ಗುರುತಿಸಬಹುದು. ಆದರೆ ಸಾಮಾಜಿಕ ಸಂಘಟನೆಗಳಲ್ಲಿ, ಅದರಲ್ಲೂ ಮುಖ್ಯವಾಗಿ ಬಂಧುತ್ವ ಪದ ಬಳಕೆಗೆ ಸಂಬಂಧಿಸಿದಂತೆ ದಕ್ಷಿಣ ಭಾರತದ ಸಾಂಸ್ಕೃತಿಕ ಪ್ರಭಾವವು ಅಷ್ಟೇನು ಪರಿಣಾಮಕಾರಿಯಾಗಿಲ್ಲ. ೨೫೦ ಸಮುದಾಯಗಳ ಅನೇಕ ಸಂಸ್ಕೃತಿಗಳಲ್ಲಿ ಸಮೀಕ್ಷೆ ಕೈಗೊಂಡ ಮರ್ಡಾಕ್ ಅವರು ಆಶ್ಚರ್ಯಕರವಾದ ರೀತಿಯ ನಿದರ್ಶನಗಳ ಮೂಲಕ ಬಂಧುತ್ವ ಸಂಘಟನೆಯ ವಿಶಿಷ್ಟವಾದ ಗುಣಲಕ್ಷಣಗಳನ್ನು ಸ್ಪಷ್ಟಪಡಿಸಿದ್ದಾರೆ. "ವಂಶಾನುಗತವಾಗಿ ಬಂದಿರುವ ನಿಯಮದಂತೆ ಕುಟುಂಬಕ್ಕೆ ಸೇರಿದ ಬಂಧುತ್ವ ಗುಂಪುಗಳು ಮತ್ತು ಬಂಧುತ್ವ ವ್ಯವಸ್ಥೆಗಳು ಇತರೆ ಸಂಸ್ಕೃತಿಗಳ ಸಂಪರ್ಕದಿಂದ ಸಾಮಾನ್ಯವಾದ ಬದಲಾವಣೆಗಳು ನೇರವಾಗಿ ಹರಡಿವೆ. ಇವು ಆಂತರಿಕ ಮರುಹೊಂದಾಣಿಕೆ ಪ್ರಕ್ರಿಯೆಗಳಿಂದ ಮಾರ್ಪಾಡಿಸಿದ ಜೀವನ ಸ್ಥಿತಿಗಳು" ಎಂದು ಮರ್ಡಾಕ್ ಹೇಳುತ್ತಾರೆ (೧೯೬೫ : ೧೯೯-೨೦೦).

ಲಂಬಾಣಿಗಳ ಅಂದಿನ ಸಾಮಾಜಿಕ ಸಂಘಟನೆಯು ಉತ್ತರ ಭಾರತ ಅಥವಾ ದಕ್ಷಿಣ ಭಾರತದ ವೈವಿಧ್ಯಗಳಾವುದನ್ನು ನಿರ್ದಿಷ್ಟವಾಗಿ ಪ್ರತಿಬಿಂಬಿಸದೆ ವಿಶಿಷ್ಟವಾದ ರೂಪವನ್ನು ಪಡೆದಿತ್ತು. ಎರಡು ಮೂಲಗಳಿಂದ ಸಾಂಸ್ಕೃತಿಕ ಮೂಲಾಂಶಗಳನ್ನು ಈ ಸಮುದಾಯ ತನ್ನದಾಗಿಸಿಕೊಂಡು ಏಕರೂಪತೆಯ ಐತಿಹಾಸಿಕತೆಯನ್ನು ಮುರಿದಿದೆ. ಈಗ ಅಂತಿಮವಾಗಿ ಚಾಲ್ತಿಯಲ್ಲಿರುವಂತೆ ಮೂಲದಲ್ಲಿ ಗಣನೀಯವಾದ ಬದಲಾವಣೆಯಿಂದ ಗುರುತಿಸಬಹುದಾದ ರೀತಿಯಲ್ಲಿ ಭಿನ್ನವಾದ ರೂಪವನ್ನು ಪಡೆದಿರುವುದೂ ಕಂಡುಬರುತ್ತದೆ. ಈ ರೂಪದ ಮಾದರಿಗಳು ಕೇವಲ ಸಾಂಸ್ಕೃತಿಕ ಸ್ಥಾನಪಲ್ಲಟ ಪಡೆದಂತೆ ತಿಳಿದು ಬರುತ್ತದೆಯೇ ಹೊರತು, ಸಾಂಸ್ಕೃತಿಕ ಪ್ರಕ್ರಿಯೆ ಮತ್ತು ಉತ್ಸಾಹವನ್ನು ವಾಸ್ತವಿಕವಾಗಿ ವಿಶ್ಲೇಷಣೆ ಮಾಡುವುದಿಲ್ಲ. ಲಂಬಾಣಿ ಬಂಧುತ್ವ ವ್ಯವಸ್ಥೆಯಲ್ಲಾದ ಬದಲಾವಣೆಯಿಂದ ತಿಳಿಯುವ ವಾಸ್ತವ ಏನೆಂದರೆ, ಹೊಸ-ಹೊಸ ಹಂತಗಳು ಮರು ಸಂಯೋಜನೆಗೆ ಒಳಪಡುತ್ತಿರುವುದು.

ಲಂಬಾಣಿಗಳು ಮಧ್ಯಕಾಲೀನ ಅವಧಿಯಲ್ಲಿ ಸ್ಥಳೀಯ ರಾಜರ ಅಧಿಪತ್ಯವನ್ನು ಒಪ್ಪಿಕೊಂಡಿದ್ದರೂ ಅವರ ದೈನಂದಿನ ಜೀವನಕ್ರಮವು ಸಮುದಾಯದ ಮುಖ್ಯಸ್ಥನಾದ 'ನಾಯಕ'ನಿಂದ ನಿರ್ದೇಶಿಸಲ್ಪಡುತ್ತಿತ್ತು. ಇದನ್ನು ಅವರು ಸಾಂಪ್ರದಾಯಿಕ ಪಂಚಾಯತಿಯ ಸಹಾಯದಿಂದ ಸಾಧಿಸುತ್ತಿದ್ದರು. ತಮ್ಮ ಜಗಳ ಮತ್ತು ಭಿನ್ನಾಭಿಪ್ರಾಯಗಳನ್ನು ಅತ್ಯಂತ ಸಂದಿಗ್ಧ ಪರಿಸ್ಥಿತಿಗಳಲ್ಲಿ ಮಾತ್ರ ಲಂಬಾಣೇತರ ನಾಯಕರುಗಳ ಬಳಿಗೆ ತೆಗೆದುಕೊಂಡು ಹೋಗುತ್ತಿದ್ದರು. ಅಲೆಮಾರಿ ಸರಕು ಸಾಗಾಣಿಕೆದಾರರಾಗಿದ್ದಾಗ ಅಥವಾ ಅವರ ಸಾಂಪ್ರದಾಯಿಕ ವೃತ್ತಿ ನಿಂತುಹೋದಾಗ, ಅರಣ್ಯ ಕೆಲಸಗಳನ್ನು ಅವಲಂಬಿಸಿ ಬೇಟೆ ಮಾಡುತ್ತಿದ್ದ ಸಂದರ್ಭದಲ್ಲಿ ಅವರ ಜನಾಂಗೀಯ ಅಥವಾ ಜಾತಿವಾದದ ಐಕ್ಯಮತ್ಯವು ಹೆಚ್ಚು ಪ್ರಬಲವಾಗಿತ್ತು. ನಾಯಕನು ಎಲ್ಲಾ ಅಧಿಕಾರದಿಂದ ತಾಂಡದ ಎಲ್ಲಾ ಆರ್ಥಿಕ ಚಟುವಟಿಕೆಗಳನ್ನು ನಿರ್ದೇಶಿಸುತ್ತಿದ್ದನು. ಇವನು ಯಾವಾಗ ಕ್ಯಾಂಪನ್ನು ಬೇರೆ ಸ್ಥಳಕ್ಕೆ ಸ್ಥಳಾಂತರಿಸಬೇಕು ಮತ್ತು ಸರಕು - ಸಾಗಾಣಿಕೆಯ ಗುತ್ತಿಗೆ ಪಡೆಯಬೇಕು ಎಂಬುದನ್ನು ನಿರ್ದೇಶಿಸುತ್ತಿದ್ದನು. ಡಕಾಯಿತಿ, ಬೇಟೆ ಇತ್ಯಾದಿ ಚಟುವಟಿಕೆಗಳು ನಾಯಕನ ನಿರ್ದೇಶನದಂತೆ ನಡೆಯುತ್ತಿದ್ದವು. ನಾಯಕ ಮತ್ತು ಅವನ ಮಂಡಳಿಯ ಮೂಲಕ ಸಮುದಾಯವು ಆರ್ಥಿಕ ವ್ಯತ್ಯಯವಿದ್ದ ಕಾಲದಲ್ಲಿ ವ್ಯಯ ನಿಯಂತ್ರಕರಂತೆ ಕೆಲಸ ಮಾಡುತ್ತಿತ್ತೆಂಬ ವಿಷಯ ತಿಳಿದು ಬರುತ್ತದೆ. ಆರ್ಥಿಕ ದಾಸ್ಯದ ಬಿಡುಗಡೆಯಿಂದ ಸ್ವಾತಂತ್ರ್ಯವಾಗಿ ಒಂದೇ ಸ್ಥಳದಲ್ಲಿ ನೆಲೆಗೊಂಡು, ಕುಟುಂಬದ ಮಟ್ಟದಲ್ಲಿ ವೈಯಕ್ತಿಕ ಉದ್ಯೋಗಗಳು ಪ್ರಾರಂಭವಾದ ನಂತರ ನಾಯಕ ಮತ್ತು ಅವನ ಮಂಡಳಿಯ ಹಿರಿಯ ಸದಸ್ಯರುಗಳ ಸಮುದಾಯದ ಮೇಲಿನ ಸಾಂಪ್ರದಾಯಿಕ ಹಿಡಿತವು ತ್ರಾಣವಿಲ್ಲದಂತೆ ಸಡಿಲವಾಗತೊಡಗಿತು. ಆರ್ಥಿಕ ಮತ್ತು ರಾಜಕೀಯ ಸಂಪರ್ಕಗಳ ಅಭಿವೃದ್ಧಿ ಇತರ ಮುಂದುವರೆದ ಜಾತಿಗಳ ಜೊತೆ ಹೆಚ್ಚಾದುದರಿಂದ ಲಂಬಾಣೇತರ ನಾಯಕರು ಲಂಬಾಣಿ ಪಂಚಾಯಿತಿಯ ಕಾರ್ಯ ಚಟುವಟಿಕೆಗಳಲ್ಲಿ ಪ್ರಭಾವ ಬೀರತೊಡಗಿದರು. ಕೆಲವು ಪರಿಸ್ಥಿತಿಗಳಲ್ಲಿ ಅವುಗಳ ಕಾರ್ಯಚಟುವಟಿಕೆಗಳಿಗೆ ಅಡ್ಡಿಪಡಿಸಿ ಫಲಕಾರಿಯಾಗದಂತೆ ಮಾಡುತ್ತಿದ್ದರು. ಆದರೆ ಹೊಸ ವ್ಯಾಪಕ ಆರ್ಥಿಕತೆಯು ವಿಶಾಲವಾದ ರಾಜಕೀಯ ಅರಿವನ್ನು ಇವರಲ್ಲಿ ತಂದಿತ್ತು.

ನಾಯಕನ ಅಧಿಕಾರ ಕುಗ್ಗುವುದರ ಜೊತೆಗೆ ಪಂಚಾಯಿತಿಯೂ ಕೂಡ ತನ್ನ ಸಾಂಪ್ರದಾಯಿಕ ನಿಯೋಜಿತ ಅಧಿಕಾರವನ್ನು ಕಳೆದುಕೊಳ್ಳತೊಡಗಿತು. ಆದರೂ ಇದಕ್ಕೆ ವಿರುದ್ಧವಾದ ಪ್ರಕ್ರಿಯೆಯನ್ನು ಲ್ಯೊಡ್‌ಫ್ಲರೆಸ್ (೧೯೬೩: ೨೧೪-೨೧೬) ಅವರು ವಿವರಿಸುತ್ತಾ ಹೀಗೆ ಹೇಳಿದ್ದಾರೆ - ಪಾಶ್ಚಿಮಾತ್ಯ ಸಮಾಜವನ್ನು ಭಾರತದಲ್ಲಿ ನೋಡಬಹುದು. ಪಾಶ್ಚಿಮಾತ್ಯದಲ್ಲಿ ಸಾಂಪ್ರದಾಯಿಕ ಸಮಾಜಗಳು (ಪ್ರಾಚೀನ ಮತ್ತು ಉಳಿಗಮಾನ್ಯದ) ಶ್ರೇಣೀಕೃತ ರಾಜಕೀಯ ಅಧಿಕಾರದ ಗುಣಲಕ್ಷಣದಿಂದ ಕೂಡಿವೆ. ಅಲ್ಲಿ ಅಧಿಕಾರವನ್ನು ಪ್ರಾಥಮಿಕವಾಗಿ ಚಲಾಯಿಸುವವರು "ಎಲೈಟ್ ರೂಲಿಂಗ್ ಕ್ಲಾಸಸ್, ರಾಜಕೀಯ ಆಧುನೀಕರಣದ ಪ್ರಕ್ರಿಯೆಗಳು ಈಗ ಇಂತಹ ಸಮಾಜಗಳಲ್ಲಿ ತುರ್ತು ಪರಿಸ್ಥಿತಿ ಸಂದರ್ಭಗಳು ಹೆಚ್ಚಳವಾದಾಗ ರಾಜಕೀಯ ಅಧಿಕಾರದ ರಚನೆ ಸಮನಾಗಿ ಪ್ರಸರಣವಾಗಿರುವಂತೆ ಕಾಣುತ್ತದೆ" ಫ್ಲರೆಸ್ (೧೯೬೩: ೨೦ - ೨೦೨).

ಆದರೆ ರಾಜಕೀಯ ಬದಲಾವಣೆ ಉಂಟಾದ ರಾಷ್ಟ್ರಗಳಲ್ಲಿ ನಾವು ಕರೆಯುವ ನಾಗರಿಕ ಪೂರ್ವ ಅಥವಾ ಬುಡಕಟ್ಟು ಸಮಾಜಗಳಲ್ಲಿ ಈ ಪ್ರಕ್ರಿಯೆಗಳು ವಿರುದ್ಧ ದಿಕ್ಕುಗಳಲ್ಲಿ ಚಲಿಸುವುದನ್ನು ಪರಿಶೀಲಿಸಬೇಕು. ಉದಾಹರಣೆಗೆ, ಲಂಬಾಣಿಗಳ ವಿಷಯದಲ್ಲಿ ಹಿಂದಿನ ದಿನಗಳಲ್ಲಿ ನಾಯಕನ ಸ್ಥಾನವು ಅನುವಂಶಿಕವಾಗಿ ಮತ್ತು ಬುಡಕಟ್ಟು ದೇವತಾರಾಧನೆಗಳ ಮೂಲದಿಂದ ಇರುತ್ತಿತ್ತು. ಎಂದರೆ, ಪ್ರತ್ಯೇಕವಾದ ಉನ್ನತ ಆಡಳಿತವರ್ಗಕ್ಕೆ ಸೇರಿದ ನಾಯಕನನ್ನು ಬೇರೆ ಲಂಬಾಣಿಯಂತೆ ಭಾವಿಸುತ್ತಿದ್ದರು. ನಾಯಕರು ಉನ್ನತವಾದ ಅಧಿಕಾರವನ್ನು ಜನರ ಮೇಲೆ ಸಾಧಿಸಿದ್ದರಿಂದ ಮೇಲಕ್ಕೆತ್ತಿ ಹಿಡಿದ ವ್ಯಕ್ತಿಯಾಗಿದ್ದನು. ಅವನು ನಾಯಕನ ಕುಟುಂಬದಲ್ಲಿ ಹುಟ್ಟಿದವನಾಗಿ ಹಕ್ಕು ಬಾಧ್ಯತೆಗಳನ್ನು ಎಂತಹ ಪರಿಸ್ಥಿತಿಗಳಲ್ಲಿಯೂ ವಿಮರ್ಶಾತ್ಮಕವಾಗಿ ನಿರೂಪಿಸುವವನಾಗಿರಬೇಕು. ಆದರೆ, ಇಂದು ನಾಯಕನ ಸಾಮರ್ಥ್ಯವು ಅವನ ಆರ್ಥಿಕ ಸ್ಥಿತಿಯ ಜೊತೆ ಹೆಣೆದುಕೊಂಡಿದೆ. ಇತರ ರೈತಾಪಿ ಸಮುದಾಯಗಳಲ್ಲಿ ಇರುವ ಅನೌಪಚಾರಿಕ ನಾಯಕರುಗಳ ಪರಿಸ್ಥಿತಿಯಂತೆಯೂ ಇದೆ. ನಾಯಕನನ್ನು ವಾಸ್ತವಿಕವಾಗಿ ವ್ಯಾಪಕವಾದ ಅಧಿಕಾರವನ್ನು ಎಲ್ಲೂ ಹೊಂದಿಲ್ಲ. ಆದರೂ ಅವನನ್ನು ನಾಯಕನೆಂದು  ಗುರುತಿಸಲಾಗುತ್ತದೆ. ಇಂದು ಮರಿಯಮ್ಮನಹಳ್ಳಿ ಮತ್ತು ನಾಗಲಾಪುರ ತಾಂಡಗಳ ಅಸಮರ್ಥ ಮುಖ್ಯಸ್ಥನ ಸ್ಥಾನವು ಇದಕ್ಕೆ ಸಾಕ್ಷಿಯಾಗಿದೆ. ಇಂದು ವಾಸ್ತವಿಕವಾಗಿ ವ್ಯಾಪಕ ಅಧಿಕಾರವನ್ನು ಹೊಂದಿರುವವರು ಸ್ವಲ್ಪಮಟ್ಟಿಗೆ ಸುಶಿಕ್ಷಿತರು ಮತ್ತು ಹೆಚ್ಚಿನ ಮಟ್ಟಿಗೆ  ಆರ್ಥಿಕವಾಗಿ ಸ್ಥಿತಿವಂತರಾದ ಅನೌಪಚಾರಿಕ ನಾಯಕರು. ಇವರಲ್ಲಿ ಅಧಿಕಾರದ ರಚನೆಯ ಮೂಲ ಉಸ್ತುವಾರಿಯು ಏಣಿ-ಶ್ರೇಣಿ ಆರ್ಥಿಕ ನಿಲುವುಗಳಿಂದ ಕೂಡಿದೆ.

ಅಂತರ್‌ಸಮುದಾಯ ಮಾದರಿ ದೃಷ್ಟಿಕೋನದಿಂದ ಅವರು ನಡೆಸಿಕೊಂಡು ಬರುತ್ತಿರುವ ಧಾರ್ಮಿಕ ಕಾರ್ಯಗಳಿಗೆ ಸಮನಾಗಿ ಕೊಡುಗೆ ನೀಡುವ ಮೂಲಕ ಸಮುದಾಯಿಕ ಆಚರಣೆಗಳಲ್ಲಿ ಅವರ ಒಳಗೆ ಯಾವುದೇ ಸಾಮಾಜಿಕ ಸ್ಥಾನ ಅಥವಾ ಮಟ್ಟ ಇರುವುದಿಲ್ಲ. ಪಂಚಾಯಿತಿಯ ಕಾರ್ಯಚಟುವಟಿಕೆಗಳನ್ನು ಪ್ರಜಾಪ್ರಭುತ್ವದ ಮಾದರಿಯಲ್ಲಿ ನಡೆಸಿಕೊಂಡು ಹೋಗಲಾಗುತ್ತದೆ. ಆದರೆ ಒಟ್ಟು ಪ್ರಾದೇಶಿಕ ಸಾಮಾಜಿಕ ಸನ್ನಿವೇಶದಲ್ಲಿ ಒಂದು ಸಾಮಾಜಿಕ ಗುಂಪಾಗಿ, ಒಂದು ಕೆಳ ಜಾತಿಯಾಗಿ ಲಂಬಾಣಿಗಳು ಶೋಭಿಸುತ್ತಿದ್ದಾರೆ.

ಹೀಗೆ ಬದಲಾದ ಆರ್ಥಿಕತೆಯ ಪರಿಣಾಮಕಾರಿ ಚಟುವಟಿಕೆಗಳು ಮತ್ತು ರೈತಾಪೀಕರಣದ ಪ್ರಕ್ರಿಯೆಗಳು ಇವರ ಸಾಂಪ್ರದಾಯಿಕ ಯಾಂತ್ರಿಕತೆಯನ್ನು ಮತ್ತು ಸಾಮಾಜಿಕ ನಿಯಂತ್ರಣ ಪ್ರಕ್ರಿಯೆಗಳನ್ನು ಅಲ್ಪಸ್ವಲ್ಪ ಮಾರ್ಪಡಿಸಿವೆ. ಜಾತಿ ವ್ಯವಸ್ಥೆಯ ಒಳಗೆ ಇಂತಹ ಪ್ರಕ್ರಿಯೆಗಳು ಹೆಚ್ಚಾಗಿ ನಡೆಯಿತು. ಮೊದಲಿಗೆ ಇವರು ಜಾತಿ ವ್ಯವಸ್ಥೆಯ ಅಂಚಿನಲ್ಲಿದ್ದ ಗುಂಪಾಗಿದ್ದರು.

ಲಂಬಾಣಿಗಳ ಪರಿಸ್ಥಿತಿಯೂ ಕೂಡ ಆಫ್ರಿಕಾದ ಸಮುದಾಯಗಳ ಮಾದರಿಯಲ್ಲಿಯೇ "ಜೀವನೋಪಾಯದ ಮೂಲಗಳು ವಿವಿಧ ಪರಿಸ್ಥಿತಿಗಳಲ್ಲಿ ಧಾರ್ಮಿಕ ಪ್ರವೃತ್ತಿ ಮತ್ತು ಸಾಮಾಜಿಕ ಒಪ್ಪಂದದ ನೀತಿ ನಿಯಮಗಳಿಂದ ಪ್ರತಿಬಿಂಬಿಸುತ್ತವೆ" (ಫೋರ್ಡ್,೧೯೬೦: XVI). ಬೃಹದಾಕಾರದ ನಿರ್ದೇಶನದಂತೆ ಬ್ರಿಟಿಷ್ ಆಡಳಿತವು ಲಂಬಾಣಿಗಳ ಸಾಂಪ್ರದಾಯಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ ಜೀವನದಲ್ಲಿ ಮಹತ್ವದ ಬದಲಾವಣೆಗಳನ್ನು ಉಂಟುಮಾಡಿತ್ತು. ಒಂದೇ ಸ್ಥಳದಲ್ಲಿ ನೆಲೆನಿಂತು ಕೃಷಿಯನ್ನು ಸ್ವೀಕರಿಸಿದ್ದು, ಕೂಲಿಕೆಲಸಗಳು ಸಾಂಪ್ರದಾಯಿಕ ಸಾಮಾಜಿಕ ಸಂಘಟನೆಗಳಲ್ಲಿ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ ವ್ಯವಸ್ಥೆಯಲ್ಲಿ ಅಗತ್ಯವಾದ ಮಾರ್ಪಾಡುಗಳನ್ನು ತಂದಿತ್ತು. ಆರ್ಥಿಕ ಬದಲಾವಣೆಯಿಂದ ಇತರರ ಜೊತೆ ಅಗತ್ಯವಾದ ಸಂಪರ್ಕಗಳು ಹೆಚ್ಚಾದ್ದರಿಂದ, ಲಂಬಾಣಿಗಳ ಧಾರ್ಮಿಕ ನಂಬಿಕೆ ಮತ್ತು ರೂಢಿ ಸಂಪ್ರದಾಯಗಳಲ್ಲಿ ವಿಶೇಷವಾದ ಮಾರ್ಪಾಡುಗಳು ಉಂಟಾದವು. ಇದರ ಪರಿಣಾಮವಾಗಿ ಸಾಮುದಾಯಿಕವಾದ ಆಚರಣೆಗಳು ಮತ್ತು ರೂಢಿ ಸಂಪ್ರದಾಯಗಳು ಸಂಶಯವೇ ಇಲ್ಲದೆ ಕುಟುಂಬಗಳ ಮಟ್ಟದ ಸಾಂಪ್ರದಾಯಿಕ ಆಚರಣೆಗಳಲ್ಲಿ, ತಾರತಮ್ಯವು

ಹೆಚ್ಚಿತು. ಇದರಿಂದ ಅವರ ಸಂಬಂಧಿಕರಿಗೆ ಐಶ್ವರ್ಯ ತೋರ್ಪಡಿಕೆಗಾಗಿಯಾದರೂ ಅದ್ದೂರಿಯಾದ ಧಾರ್ಮಿಕ ಸಮಾರಂಭಗಳನ್ನು ತಾಂಡಗಳಲ್ಲಿ ನೆಡೆಸುತ್ತಿರುವುದು. ಇಂತಹ ಸಮಾರಂಭಗಳನ್ನು ಸಮುದಾಯ ಮಟ್ಟದಲ್ಲಿ ನಡೆಸಲು ಸಾಧ್ಯವಾಗುವುದಿಲ್ಲ. ಇತ್ತೀಚೆಗೆ ಸಮುದಾಯ ಮಟ್ಟದ ಧಾರ್ಮಿಕ ಆಚರಣೆಗಳ ಸಂಖ್ಯೆ ಕಡಿಮೆಗೊಳ್ಳುತ್ತಿದೆ. ಏಕೆಂದರೆ, ಮನಃಪೂರ್ವಕವಾದ ಆಸಕ್ತಿ ಲಂಬಾಣಿಗಳ ಒಳಗೆ ಇಂದು ಕಡಿಮೆಗೊಳ್ಳುತ್ತಿರುವುದು. ಇವುಗಳು ಸಾಮಾಜಿಕ ಐಕ್ಯತೆಯ ಅಂತಸ್ತು ಮತ್ತು ರೂಢಿ ಆಚರಣೆಗಳ ಮಟ್ಟವನ್ನು ಸೂಚಿಸುವ ಅನುರೂಪವಾದ ಘಟಕ. ಫೋರ್ಡ್ (೧೯೬೦: XVII) ಅವರು ಆಫ್ರಿಕಾ ಸಮಾಜಗಳನ್ನು ಸ್ಪಷ್ಟವಾಗಿ ಅವಲೋಕಿಸಿ, "ನಂಬಿಕೆ ಮತ್ತು ರೂಢಿ ಆಚರಣೆಗಳು ಸಾಮಾಜಿಕ ಐಕ್ಯತೆಯ ಶ್ರೇಣಿಯನ್ನು ಪ್ರತಿಬಿಂಬಿಸುತ್ತವೆ" ಆರ್ಥಿಕ ಸ್ವಾಲಂಬನೆಯ ಹೆಚ್ಚಳ ಮತ್ತು ಸ್ಥಳೀಯ ಗುಂಪುಗಳಿಗೆ ರಾಜಕೀಯ ಸ್ವಾತಂತ್ರ್ಯದಿಂದ ರೂಢಿ ಆಚರಣೆಯ ಚಟುವಟಿಕೆಗಳು ಹೆಚ್ಚಿನ ಭಾಗಗಳಾಗಿ ವಿಭಜಿತವಾಗುತ್ತವೆ. ಧಾರ್ಮಿಕ ಆಚರಣೆಗಳ ಉದ್ದೇಶಗಳಲ್ಲಿ ನಿರ್ದಿಷ್ಟತೆ, ಮತ್ತೊಂದೆಡೆ ಸಂಕುಚಿತವಾದ ಆರ್ಥಿಕ ಐಕ್ಯತೆಯು ಇಂತಹ ಗುಂಪುಗಳ ಸಾಮಾಜಿಕ ನಿಯಂತ್ರಣದ ಮೇಲೆ ಪರಿಣಾಮವನ್ನು ಉಂಟುಮಾಡಿವೆ. ಸಾಮಾಜಿಕ ವ್ಯಾಪಕತೆಯು ನಿರ್ದಿಷ್ಟವಾದ ಅಂತರ ಸಂಬಂಧಗಳ ಮೂಲಕ ಆಚರಣೆಯ ಮಾದರಿಯಲ್ಲಿದೆ ಎಂದಿದ್ದಾರೆ.

ಲಂಬಾಣಿಗಳ ಜೀವನದಲ್ಲಿ ಧರ್ಮದ ಪಾತ್ರವು ಕೇವಲ ಧಾರ್ಮಿಕ ಆಚರಣೆ ಮತ್ತು ನಂಬಿಕೆಯ ಕ್ಷೇತ್ರಕ್ಕೆ ಸೀಮಿತವಾಗಿರದೆ ಜೀವನದ ಇತರೆ ಕ್ಷೇತ್ರಗಳಿಗೂ ಸಂಬಂಧಿಸಿದ್ದಾಗಿದೆ. ಇದೇ ರೀತಿಯ ಸಮಾಜಗಳಲ್ಲಿಯೂ ಇದು ಹೆಚ್ಚಾಗಿ ಕಂಡುಬರುತ್ತದೆ. ಇವು ಸಂಯೋಜಿತ ಸಮಗ್ರ ಸಂಸ್ಕೃತಿಯ ಗುಣಲಕ್ಷಣಗಳು. ಲಂಬಾಣಿಗಳ ಸಾಮಾಜಿಕ ಸನ್ನಿವೇಶದಲ್ಲಿ ಇವು ಅವಾಸ್ತವವೆನಿಸಿದರೂ ಮುಂದುವರೆದು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ತಿರಸ್ಕರಿಸಿದರೂ ಸ್ಥಳೀಯ ಸಂಸ್ಕೃತಿಗಳ ಸಂಪರ್ಕವನ್ನು ಶತಮಾನಗಳಿಂದ ಹೊಂದಿದ್ದಾರೆ. ಲಂಬಾಣಿಗಳ ಜೀವನದಲ್ಲಿ ಧರ್ಮದ ಪಾತ್ರವು ನೆರೆಹೊರೆಯವರ ಪ್ರಭಾವಗಳಿಗೆ ಒಳಗಾಗಿದೆ. ಹುಟ್ಟು ಮತ್ತು ಸಾವಿನ ನಡುವಿನ ಸಾಮಾಜಿಕ ಬಂಧನಗಳು, ಮುಖ್ಯಸ್ಥನ ಹಿಡಿತದ ಮತ್ತು ಸಂಬಂಧಿಗಳ ಜೊತೆಗಿನ ಕುಟುಂಬದ ರೂಢಿ ಆಚರಣೆಗಳು, ಧಾರ್ಮಿಕ ಯಾತ್ರಾ ಸ್ಥಳಗಳಿಗೆ ಅಗತ್ಯವಾದ ಭೇಟಿಯಿಂದ ಹೊಸ ಅನುಭವ ಹಾಗೂ ಅಂತರ್-ತಾಂಡಗಳ ನಡುವೆ ಅನಿರೀಕ್ಷಿತ ಸಾಮಾಜಿಕ ಸಂಬಂಧವನ್ನು ಸೃಷ್ಟಿಸುತ್ತದೆ. ಧರ್ಮವೂ ಕೂಡ ಲಂಬಾಣಿಗಳಿಗೆ ಸಾಂದರ್ಭಿಕವಾಗಿ ಆಯಾ ಸಂಬಂಧಗಳಲ್ಲಿ ಗುರುತಿಸಿಕೊಳ್ಳುವವರಿಗೆ ಇನಾಮು, ಉಡುಗೊರೆಗಳ ವಿನಿಮಯ, ಭಾವನಾತ್ಮಕ ಸಂಬಂಧದ ರಕ್ಷಣೆ ಮತ್ತು ಗುಂಪಿನ ಐಕ್ಯಮತ್ಯವನ್ನು ನೀಡುತ್ತದೆ. "ಜೀವನದಲ್ಲಿ ಅನಿಶ್ಚಿತತೆ ಮತ್ತು ಆಂತಕಗಳು ಹೆಚ್ಚಾದಾಗ ಧರ್ಮವು ಕೂಡ ಧೈರ್ಯ ಮತ್ತು ಭರವಸೆಯನ್ನು ನೀಡುತ್ತದೆ" (ಓಪ್ಲರ್ ಅವರನ್ನು ಉಲ್ಲೇಖಿಸಿದ್ದಾರೆ, ಸಿಂಗರ್, ೧೯೬೧:೨೮೪).

ಧರ್ಮವು ಧಾರ್ಮಿಕ ಪವಿತ್ರತೆ ಮತ್ತು ಸಾಮಾಜಿಕ ಕ್ರಮಗಳನ್ನು ಉಳಿಸಿಕೊಳ್ಳುತ್ತದೆ. ಇದು ಪವಿತ್ರ ಕಾರ್ಯಗಳ ಸಂಬಂಧವಾಗಿ ಆಚರಿಸುವ ಧಾರ್ಮಿಕ ಕಾರ್ಯವಾಗಿದೆ. ಅವುಗಳು ಸಾಮಾಜಿಕ ಮೌಲ್ಯಗಳಿಂದ ರಚನೆಗೊಂಡ ತೀರ್ಪುಗಳ ಎರವಲಾಗಿವೆ. ಈ ದೃಷ್ಟಿಯಿಂದ ಕಡೆಗಣಿಸಲಾಗದ ಅನುಕೂಲಕರ ಮತ್ತು ಸಮುದಾಯದ ಸಾಮಾನ್ಯ ಅಸ್ತಿತ್ವವಾಗಿದೆ (ನಡೇಲ್, ೧೯೭೦:೨೦೧). ನಾವು ಗುರುತಿಸಿರುವಂತೆ ಧರ್ಮದ ಕಾರ್ಯಗಳು ಲಂಬಾಣಿಗಳ ಆರ್ಥಿಕ ಮತ್ತು ಅದಕ್ಕೆ ಸಂಯೋಜಿತವಾದ ಸಾಮಾಜಿಕ ನಡುವಳಿಕೆಗಳನ್ನು ಬದಲಾಯಿಸಿತು. ಅದಕ್ಕೆ ಬೆಂಬಲವಾಗಿರುವ ಧಾರ್ಮಿಕ ಮೌಲ್ಯದ ವ್ಯವಸ್ಥೆಗಳು ಕೂಡ ಮಾರ್ಪಡುಗಳಿಗೆ ಒಳಪಟ್ಟಿತು. ಅದಾಗ್ಯೂ ಹೆಚ್ಚಿನ ಸಾಂಪ್ರದಾಯಿಕ ಆಚರಣೆಗಳ ಒತ್ತು ಮಳೆ, ಸಂತಾನೋತ್ಪತ್ತಿ ಮತ್ತು ರೋಗದಂತಹ ಪಿಡುಗುಗಳಿಗೆ ಹಿಂದೆ ಇದ್ದ ಮಹತ್ವವು, ಇಂದು ಬಲಿಯನ್ನು

ಕೊಡುವ ಔತಣಗಳನ್ನು ವಿಶೇಷವಾದ ಧಾರ್ಮಿಕ ಸಂದರ್ಭಗಳಲ್ಲಿ ಮಾತ್ರ ವ್ಯವಸ್ಥೆಗೊಳಿಸುತ್ತಾರೆ. ಇಂತಹ ಕೆಲವು ಧಾರ್ಮಿಕ ಆಚರಣೆಗಳು ಸಾಮಾಜಿಕ, ಆರ್ಥಿಕ ಬದಲಾವಣೆಗಳಿಂದ ನಿಂತುಹೋಗಿವೆ. ಸಾಂಸ್ಕೃತಿಕ ಸಂದರ್ಭದ ದೃಷ್ಟಿಯಿಂದ ಹೆಚ್ಚು ಕಡಿಮೆ ವ್ಯತ್ಯಾಸವಿಲ್ಲದ ಒಂದೇ ರೀತಿಯ ಆಚರಣೆಗಳನ್ನು ಹಿಡಿದುಕೊಂಡಿರುವುದು ಲಂಬಾಣಿಗಳ ಆಕರ್ಷಣೆಯಾಗಿದೆ. ದೃಢತೆಯಿಂದ ಭವಿಷ್ಯಕ್ಕಾಗಿ ಎನ್ನುವಂತೆ ಹಲವಾರು ವರ್ಷಗಳಿಂದ ಕೆಲವು ಧಾರ್ಮಿಕ ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಅವುಗಳು ಭಾವನಾತ್ಮಕವಾಗಿ ಧಾರ್ಮಿಕ ಜೀವಂತಿಕೆ ಪಾತ್ರವನ್ನು ವಹಿಸುತ್ತಿವೆ. ಇವು ಕೆಲ ಮಟ್ಟಿಗೆ ನಾಟಕೀಯ ಆಡಂಬರದ ಪ್ರದರ್ಶನದಂತೆ ಕಂಡುಬರುತ್ತವೆ. ಆಚರಣಾವಾದವನ್ನು ನಿರ್ವಹಿಸುವ ಹೆಚ್ಚಿನ ಗುಂಪುಗಳು ಲಂಬಾಣಿಗಳ ಕೆಲವು ಸಾಂಪ್ರದಾಯಿಕ ಪಂಚಾಯಿತಿಗಳ ಮೇಲೆ ಭರವಸೆ ಇಟ್ಟಿವೆ. ಆದರೆ, ಪಂಚಾಯಿತಿ ಮತ್ತು ಸಾಂಪ್ರದಾಯಿಕ ಸಮಾರಂಭಗಳೆರಡು ತಮ್ಮ ಗಾಢವಾದ ಧಾರ್ಮಿಕ ಮಹತ್ವವನ್ನು ಕಳೆದುಕೊಂಡಿವೆ. ಆದಾಗ್ಯೂ ಲಂಬಾಣಿಗಳ ಕೆಲವು ಸಾಂಪ್ರದಾಯಿಕ ಆಚರಣೆಗಳು ಮುಂದುವರೆದರೂ ಅವರ ಜನಪದ ತನ್ನ ಸಾಂಪ್ರದಾಯಿಕ ಮಹತ್ವವನ್ನು ಕಳೆದುಕೊಳ್ಳುತ್ತಿದೆ ಎಂಬುದು ಹೊರನೋಟಕ್ಕೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಲಂಬಾಣಿಗಳ ಧಾರ್ಮಿಕ ಆಚರಣೆಗಳನ್ನು ಅತ್ಯಂತ ಸೂಕ್ಷ್ಮವಾಗಿ ಅವಲೋಕಿಸಿದರೆ ಅನೇಕ ಹಂತಗಳಲ್ಲಿ ಕೆಲವು ಹಿಂದಿನ ಆಚರಣೆಗಳ ಮತ್ತು ನಂಬಿಕೆಗಳ ಕೆಲವು ಲಕ್ಷಣಗಳು ಇನ್ನು ಜೀವಂತವಾಗಿವೆ (ಅವೆಂದರೆ ಬಲಿ/ಆಹುತಿಯನ್ನು ಸಾಂಕ್ರಾಮಿಕ ರೋಗ ಹರಡುವ ದೇವತೆಗಳಿಗೆ ನೀಡುವುದು) ಎಂಬುದು ತಿಳಿದು ಬರುತ್ತದೆ. ಸಾಗುವಳಿ ಭೂಮಿಯನ್ನು ಎರವಲು ಪಡೆದುಕೊಂಡ ನಂತರ ಲಂಬಾಣಿಗಳಲ್ಲಿ ರೈತಾಪೀಕರಣ ಮತ್ತು ಹಿಂದುತ್ವವಾದದ ಪ್ರಭಾವಗಳಿಂದ ಅವರ ಸರ್ವಚೇತನವಾದ (ಪ್ರಕೃತಿ ಪೂಜೆ) ಧರ್ಮವು ರೂಪಾಂತರ ಪಡೆಯಿತು. ಇದನ್ನು ತಕ್ಕಮಟ್ಟಿಗೆ ಸಹಿಸಿಕೊಂಡು ಸ್ಥಳೀಯ ಧಾರ್ಮಿಕ ವ್ಯವಸ್ಥೆಯಲ್ಲಿ ಐಕ್ಯವಾಗಿ, ಕೆಲವು ಹಿಂದು ಹಬ್ಬದ ದಿನಚರಿಯ (ಕ್ಯಾಲೆಂಡರ್) ಸಾಂಪ್ರದಾಯಿಕ ಆಚರಣೆಗಳು ಹಾಗೂ ಸರ್ವಚೇತನವಾದದ ಕೆಲವು ಆಚರಣೆಗಳು ಒಂದೇ ರೀತಿಯಲ್ಲಿ ಇದ್ದುದರಿಂದ ಅವು ನಿರಂತರತೆಯನ್ನು ಪಡೆದುಕೊಂಡವು. ಅವುಗಳು ಸಾಂಪ್ರದಾಯಿಕ ರೂಢಿ ಮತ್ತು ನಂಬಿಕೆಗಳ ಪ್ರಭಾವವನ್ನು ಕಡಿಮೆಮಾಡುವುದರ ಬದಲು, ಹಿಂದು ಮೇಲ್‌ಜಾತಿಗಳ ಪ್ರಭಾವಕ್ಕೆ ಲಂಬಾಣಿಗಳ ಸಾಂಪ್ರದಾಯಿಕ ಆಚರಣೆ ಮತ್ತು ನಂಬಿಕೆ ವ್ಯವಸ್ಥೆಯನ್ನು ಬಲಪಡಿಸಿದವು. ಲಂಬಾಣಿ ವ್ಯಕ್ತಿಯ ವೈಯಕ್ತಿಕ ಸಾಂಪ್ರದಾಯಿಕ ಆಚರಣೆಗಳು (ಸಾಂಪ್ರದಾಯಿಕ ಅಥವಾ ಮಾರ್ಪಡಿಸಿದ ರೂಪಾಂತರದ ಮಾದರಿಗಳು) ನಿರ್ಧಾರವಾಗುವುದು ಸಾಂಸ್ಕೃತಿಕ ಬದಲಾವಣೆಯ ಮಟ್ಟ, ವೃತ್ತಿ, ಆರ್ಥಿಕ ಅಂತಸ್ತು, ಶಿಕ್ಷಣ ಮತ್ತು ಅವನು/ಅವಳು ವಾಸಿಸುವ ಸಾಮಾಜಿಕ (ತಾಂಡದಲ್ಲಿ ಅಥವಾ ಅನೇಕ ಜಾತಿಯ ಜನರು ವಾಸಿಸುವ ಹಳ್ಳಿಗಳಲ್ಲಿ) ಸನ್ನಿವೇಶಗಳಿಂದ. ಹೀಗೆ ಎರವಲು ಪಡೆದ ಪುರಾಣ, ಕಥೆ, ಸಾಂಪ್ರದಾಯಿಕ ರೂಢಿಗಳು ಮತ್ತು ಆಚರಣೆಗಳು ಒಂದು ನೂರು ವರ್ಷಗಳಲ್ಲಿ ಬದಲಾವಣೆಯ ತೀವ್ರತೆಯನ್ನು ಸರ್ವಚೇತನವಾದದ ಗುಂಪುಗಳಲ್ಲಿ ಹೆಚ್ಚಿಸಿದವು. ಲಂಬಾಣಿಗಳು ಒಂದೇ ಸ್ಥಳದಲ್ಲಿ ನೆಲೆ ನಿಂತ ನಂತರ ಹಿಂದೂ ಜಾತಿಗಳ ಏಣಿ ಶ್ರೇಣಿಯ ಪ್ರತಿಬಿಂಬಗಳನ್ನು ನಿಧಾನವಾಗಿ ಪಾಲಿಸಲು ಆರಂಭಿಸಿದರು. ಮುಂದುವರಿದ ಜಾತಿಯ/ ಜಾತಿಗಳ ನಡವಳಿಕೆಗಳನ್ನು ಮತ್ತು ಚಟುವಟಿಕೆಗಳನ್ನು ಯಾಂತ್ರಿಕತೆಯ ಮಿತಿಯಲ್ಲಿ ಅನುಸರಿಸುತ್ತಿದ್ದುದರಿಂದ. ಹಿಂದೆ ಜಾತಿ ಏಣಿ ಶ್ರೇಣಿಯ ವ್ಯವಸ್ಥೆ ಹೆಚ್ಚು ಕಠಿಣವಾಗಿದ್ದ ಸಂದರ್ಭದಲ್ಲಿ ಇದು ಸ್ವಲ್ಪ ಕಷ್ಟವಾಗಿತ್ತು. ಇಂತಹುದೇ ಪ್ರಕ್ರಿಯೆಗಳು ದಕ್ಷಿಣ ಮಲಬಾರ್ ಪ್ರದೇಶದ ನಾಯರ್‌ಗಳಲ್ಲಿ ಗೋಚ್ ಅವರು ಗುರುತಿಸಿದ್ದಾರೆ (೧೯೫೨ : ೫೦). ಭಟ್ ಅವರು (೧೯೬೨ : ೨೬೦-೨೬೫) ವಡ್ಡರ ಜೀವನ ಶೈಲಿಯ ಸಾಂಪ್ರದಾಯಿಕ ರೂಢಿ, ಆಚರಣೆಗಳು, ಉತ್ಸವ, ವಿವಾಹ ಸಮಾರಂಭಗಳು ಮತ್ತು ಹಬ್ಬಗಳಲ್ಲಿ ತಕ್ಕಮಟ್ಟಿನ ಬದಲಾವಣೆಗಳು ಉಂಟಾಯಿತು ಎಂಬುದನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಆದರೆ, ಈ ವಿಷಯದಲ್ಲಿ ಲಂಬಾಣೇತರ ಸಮುದಾಯಗಳ ಸಂಪರ್ಕ ಇದ್ದರೂ ಕಡಿಮೆ ಪ್ರಮಾಣದ ಬದಲಾವಣೆಗಳು ಲಂಬಾಣಿಗಳಲ್ಲಿ ಉಂಟಾಗಿವೆ. ಐತಿಹಾಸಿಕ ದೃಷ್ಟಿಕೋನದಿಂದ ನೋಡಿದರೆ ಲಂಬಾಣಿಗಳು ಪೂರ್ಣಚಕ್ರಾಕಾರದ ರೀತಿ ಸಾಮಾಜಿಕ ಸಂಚರಣೆಗೆ ಒಳಗಾಗಿದ್ದಾರೆ.

ಲಂಬಾಣಿಗಳು ರಜಪೂತ ವಂಶಾನುಕ್ರಮದ ಮಾದರಿಯನ್ನು ಪಕ್ಕಕ್ಕೆ ಇರಿಸಿ (ಒಂದು ಹಿಂದೂ ಜಾತಿಯಂತೆ) ಸಾಮಾಜಿಕ ಅಗತ್ಯಗಳಿಗೆ ತಕ್ಕಂತೆ ಪೂರ್ಣವಾದ ಒಂದು ಜಾತಿಯಾಗಿಯೇ ಪರಿವರ್ತನೆ ಹೊಂದಿರುವುದೂ ವಿಶೇಷವಾಗಿ ಗಮನ ಹರಿಸಬೇಕಾದ ಒಂದು ಅಂಶ. ಚಿತ್ತೂರಗಢದ ರಾಜಮನೆತನ ನಶಿಸಿದ ನಂತರ ತಮ್ಮ ಮೂಲವಾಸಸ್ಥಾನಗಳನ್ನು ಬಿಟ್ಟು ದಕ್ಷಿಣ ಭಾರತದಲ್ಲಿನ ಕೆಲವು ಸೈನ್ಯಗಳಿಗೆ ಸರಕು ಪೂರೈಕೆದಾರರಾಗಿ ಕೆಲಸಮಾಡುತ್ತಿದ್ದ ಅವರು, ಸಂಚಾರಿ ವ್ಯಾಪಾರ ವೃತ್ತಿಯನ್ನು ಆರಂಭಿಸಿದರು. ಅವರು ಇಂದು ವಲಸೆ ಹೋಗದೆ ಒಂದೇ ಕಡೆ ನೆಲಸಿರುವುದರಿಂದ, ಮತ್ತೆ ಜಾತಿ ಸ್ಥಾನಗಳನ್ನು ದಕ್ಷಿಣ ಭಾರತದಲ್ಲಿ ಪಡೆದುಕೊಂಡಿದ್ದಾರೆ. ಅದೇ ಸಂದರ್ಭದಲ್ಲಿ ಹೊಸ ಆಚರಣೆಗಳು ಮತ್ತು ನಂಬಿಕೆಗಳನ್ನು ಎರವಲಾಗಿ ಇತರ ಹಿಂದೂ ಜಾತಿಗಳಿಂದ ಪಡೆದುಕೊಂಡಿದ್ದಾರೆ. ಸಮಾಜದಲ್ಲಿ ಉಂಟಾದ ಆಂತರಿಕ ಬದಲಾವಣೆಗಳ ಜೊತೆ ಜೊತೆಗೆ ಸಾಮಾಜಿಕ ಸ್ಥಿತ್ಯಂತರಗಳಿಂದ ತಮ್ಮ ಪ್ರತ್ಯೇಕ ಸಾಂಸ್ಕೃತಿಕ ಅನನ್ಯತೆಯನ್ನು ನಿಧಾನವಾಗಿ ಕಳೆದುಕೊಳ್ಳುತ್ತಿದ್ದಾರೆ.

ಹಿಂದೂ ಸಂಸ್ಕೃತಿಯು ತನ್ನದಲ್ಲದ ಗುಣಲಕ್ಷಣಗಳನ್ನು ಹೊಂದಿರುವ, ಸಂಸ್ಕೃತಿಯನ್ನು ಹೀರಿಕೊಳ್ಳುವ ಅಥವಾ ನುಂಗಿಬಿಡುವ ಸಂಘಟಿತವಾದ ಸಾಮರ್ಥ್ಯವನ್ನು ಹೊಂದಿದೆ. ಜೊತೆಗೆ ತನ್ನ ವಿಶೇಷ ಗುಣಲಕ್ಷಣಗಳನ್ನು ವಿಸ್ತರಿಸುವ (ತನ್ನ ಅಂಗ ರಚನೆಯಿಂದ ಮೀನುಗಳನ್ನು ಆಕರ್ಷಿಸಿ ತಿನ್ನುವ ಒಂದು ಜಾತಿಯ ಮೀನಿನಂತೆ) ವೈಶಿಷ್ಟ್ಯಪೂರ್ಣ ಅನನ್ಯತೆಯನ್ನು ಕೂಡ ಹೊಂದಿದೆ. ಆದರೆ, ನಾವು ಗುರುತಿಸಿರುವಂತೆ ಲಂಬಾಣಿಗಳು ಹಿಂದಿನಿಂದಲೂ ಭಾರತದ ಯಾವುದೇ ಪ್ರದೇಶಗಳಲ್ಲಿ ಅಲ್ಪಸಂಖ್ಯಾತರಾಗಿ ಮುಂದುವರೆಯುತ್ತಿದ್ದು, ಸಾಂಸ್ಕೃತಿಕವಾಗಿ ಕಡಿಮೆ ಪ್ರಮಾಣದ ಅಭಿವೃದ್ಧಿಯನ್ನು ಹೊಂದಿದ್ದಾರೆ. ಅವರ ಬುಡಕಟ್ಟು ಸಂಸ್ಕೃತಿಯ ನಿಲುವುಗಳು, ಅಭಿವೃದ್ಧಿ ಹೊಂದಿದ ಹಿಂದುತ್ವದ ಹೊಸ ಪರಿಸ್ಥಿತಿಯಲ್ಲಿ ಸಂಪರ್ಕದ ಹೆಚ್ಚಳವನ್ನುಂಟುಮಾಡಿದೆ. ಆದುದರಿಂದ, ಹಿಂದೂಗಳು ಪ್ರಜ್ಞಾಪೂರ್ವಕವಾಗಿ ಲಂಬಾಣಿಗಳ ಸಾಂಸ್ಕೃತಿಕ ವಿಶಿಷ್ಟತೆಯನ್ನು ತಮ್ಮದಾಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಲಂಬಾಣಿಗಳು ಸುಮಾರು ೧೫೦ ವರ್ಷಗಳಿಂದ ಹಿಂದೂಗಳ ಕೆಲವು ಸಾಂಸ್ಕೃತಿಕ ವಿಶಿಷ್ಟತೆಗಳನ್ನು ಅನುಸರಿಸುವ ಮೂಲಕ ಜಾತಿಯರೂಪ ಪಡೆಯುತ್ತಿದ್ದಾರೆ. ಅದೇ ಸಂದರ್ಭದಲ್ಲಿ ಕೆಲವು ಸಾಂಸ್ಕೃತಿಕ ಮೂಲಾಂಶಗಳನ್ನು ಅಥವಾ ಅವರ ಸಾಂಸ್ಕೃತಿಕ ರಚನೆಯ ಅನನ್ಯತೆಯನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಹೀಗಾಗಿ ಸ್ವಸಾಮರ್ಥ್ಯದಿಂದ ಬದುಕಬಲ್ಲ ಅಸ್ತಿತ್ವವನ್ನು ಹೊಂದಿರುವ ಸಾಂಸ್ಕೃತಿಕ ಗುಂಪು ಇದಾಗಿದೆ.

ಈ ಅಧ್ಯಯನದ ಮೂಲ ಉದ್ದೇಶ ಕೇವಲ ಲಂಬಾಣಿಗಳ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಮಾತ್ರ ಪರಿಶೀಲಿಸುವುದಲ್ಲ. ಪರಿಣಾಮಕಾರಿಯಾಗಿ ಒಟ್ಟು ಸಾಂಸ್ಕೃತಿಕ ಬದಲಾವಣೆಯ ಪ್ರಕ್ರಿಯೆಯ ಕಾರ್ಯಕಾರಣ ಸಂಬಂಧವನ್ನು ಅಧ್ಯಯನ ಮಾಡುವುದು. ಅಧ್ಯಾಯ ೨ ಮತ್ತು ೩ರಲ್ಲಿ ಸುಮಾರು ೧೫೦ ವರ್ಷಗಳ ಹಿಂದಿನ ಲಂಬಾಣಿಗಳ ಆರ್ಥಿಕ ಜೀವನವು, ಸಾಮಾಜಿಕ, ಸಾಂಸ್ಕೃತಿಕ ಚಾಲಕಗಳ ಶಕ್ತಿಯಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ ಹೇಗೆ ಉಂಟಾಗಿದೆ ಮತ್ತು ಇವುಗಳ ನಡುವಿನ ಸಂಬಂಧಗಳನ್ನು ವಿಶ್ಲೇಷಿಸುವುದು.

ಉಪಸಂಹಾರದ ಈ ಅಧ್ಯಾಯದಲ್ಲಿ ಕೆಲವು ವಿಶೇಷವಾದ ಅಥವಾ ಪ್ರಧಾನವೆನ್ನಿಸಿದ ಅಧ್ಯಯನದ ಉತ್ಪತ್ತಿಯ ರಚನಾ ಕ್ರಮಗಳನ್ನು ಒಂದರ ಹಿಂದೆ ಒಂದರಂತೆ ವ್ಯವಸ್ಥಿತವಾಗಿ ವಿಶ್ಲೇಷಣೆಮಾಡಿ ಸಾರಾಂಶವನ್ನು ನೀಡಲಾಗಿದೆ. ಮೊದಲಿಗೆ ಪ್ರಮುಖ ಸಂಬಂಧ ಜೋಡಣೆ ಮಿರುವ ಅಂಶಗಳನ್ನು ವಿವರಿಸುವ ಪ್ರಯತ್ನ ಇಲ್ಲಿದೆ. ಇದೇ ರೀತಿ ಸಂಬಂಧಗಳ ಪ್ರಾಮುಖ್ಯತೆಯು ಉಂಟು ಮಾಡಿರಬಹುದಾದ ಬದಲಾವಣೆಗಳಿಂದ ಸಾಮಾಜಿಕ ಬದಲಾವಣೆ ಹೊಂದಿರುವ ಮತ್ತು ಹೊಂದುತ್ತಿರುವ ಕ್ಷೇತ್ರಗಳನ್ನು ಗುರುತಿಸಿರುವುದು ಇಲ್ಲಿನ

ವಿಶೇಷ. ಎರಡನೆಯದಾಗಿ, ಸಾಮಾಜಿಕ - ಸಾಂಸ್ಕೃತಿಕ ಬದಲಾವಣೆಯ ಪ್ರಕ್ರಿಯೆಗಳು ಮತ್ತು ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಕೆಲವು ಸಮಸ್ಯೆಗಳ ನಡುವೆಯೂ ಲಂಬಾಣಿಗಳು ಹೇಗೆ ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು ಜೀವನದ ಒಂದು ಭಾಗದಂತೆ ನಿರ್ವಹಿಸಿಕೊಂಡು ಬರುತ್ತಿದ್ದಾರೆ ಎಂಬುದನ್ನು ಚರ್ಚಿಸಲಾಗಿದೆ. ಇಂತಹ ಪ್ರಕ್ರಿಯೆಗಳು ಎರವಲಾಗಿ ಪಡೆದ ಸಂಸ್ಕೃತಿಯ ಪರಿಣಾಮದಿಂದ, ಅವರ ಸಾಂಸ್ಕೃತಿಕ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಉಂಟಾದ ಮಾರ್ಪಾಡುಗಳಿಂದ, ಲಂಬಾಣಿಗಳ ಆರ್ಥಿಕ ಜೀವನದಲ್ಲಿ ಅನಿವಾರ್ಯವಾಗಿ ಉಂಟಾದ ಬದಲಾವಣೆಯ ಪ್ರಕ್ರಿಯೆಗಳನ್ನು ಕೂಡ ಚರ್ಚಿಸಲಾಗಿದೆ. ಸಾಂಸ್ಕೃತಿಕ ಬದಲಾವಣೆಯ ಪ್ರಕ್ರಿಯೆಗಳ ಪರಿಣಾಮದಿಂದ ಅವರ ಸಾಂಸ್ಕೃತಿಕ ಸಾಮಾಜಿಕ, ಸಂಸ್ಥೆಗಳಲ್ಲಿ ಉಂಟಾದ ಮಾರ್ಪಾಡುಗಳಿಂದ, ಲಂಬಾಣಿಗಳ ಸಾಮಾಜಿಕ, ಆರ್ಥಿಕ ವ್ಯವಸ್ಥೆಗಳಲ್ಲಿ ಅನಿವಾರ್ಯವಾಗಿ ಉಂಟಾದ ಬದಲಾವಣೆಯ ಪ್ರಕ್ರಿಯೆಗಳು ಕೂಡ ಇಲ್ಲಿ ಚರ್ಚೆಗೆ ಒಳಪಟ್ಟಿವೆ. ಅಧ್ಯಯನದಲ್ಲಿ ಶಾಶ್ವತ ಮತ್ತು ತಾತ್ಕಾಲಿಕ ಬದಲಾವಣೆ ಹೊಂದಿದ ಸಾಂಸ್ಕೃತಿಕ ಚಾಲಕಗಳ ಎರಡು ಕಡೆಗಳಿಗೆ ಬೆಳಕು ಚೆಲ್ಲುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ.

ಈ ಅಧ್ಯಯನದ ಆಸಕ್ತಿ ಕೇವಲ ಲಂಬಾಣಿಗಳು ಜೀವನೋಪಾಯದ ಅಗತ್ಯಗಳನ್ನು ಹೇಗೆ ಸಂಪಾದಿಸುತ್ತಾರೆ, ಆರ್ಥಿಕ ಕಸುಬುಗಳ ವೈವಿಧ್ಯಮಯ ಇತಿಹಾಸದಲ್ಲಿ ಅನೇಕ ಕಾರಣಗಳಿಂದ ಮೂಲಕ ಬದಲಾವಣೆ ಹೊಂದಿರುವುದರ ಜೊತೆಗೆ, ಆರ್ಥಿಕ ಚಟುವಟಿಕೆಯು ಜೀವನದ ಇತರ ಸಂಬಂಧಗಳ ಮೇಲೆ ಬೀರಿರುವ ಪ್ರಭಾವ ಮತ್ತು ಪರಿಣಾಮಗಳ ಮೇಲೆ ಬೆಳಕು ಚೆಲ್ಲುವುದು. ಇವುಗಳು ಆರ್ಥಿಕ ರೂಪದಲ್ಲಿದ್ದರೂ ಸಾಮಾಜಿಕ ನಡವಳಿಕೆ ಭಾಗವನ್ನಾಗಿ ರೂಪಿಸಿಕೊಂಡಿವೆ. ಇಂದು ಅಭಿವೃದ್ಧಿ ಸಮಾಜಶಾಸ್ತ್ರದ ದೃಷ್ಟಿಕೋನ, ಒಬ್ಬ ಅರ್ಥಶಾಸ್ತ್ರಜ್ಞನ ದೃಷ್ಟಿಕೋನಕ್ಕಿಂತ ಭಿನ್ನವಾಗಿದೆ. ಉದಾರವಾದಿ ಅರ್ಥಶಾಸ್ತ್ರಜ್ಞರು ಸಾಮಾನ್ಯವಾಗಿ ಆರ್ಥಿಕತೆಯು ಸ್ವತಂತ್ರವಾಗಿದ್ದು, ಸಾಮಾಜಿಕ ಅಂಶಗಳಿಂದ ಮುಕ್ತವಾಗಿದೆ ಎಂದು ಪ್ರತಿಪಾದಿಸುತ್ತಾರೆ. ಅಭಿವೃದ್ಧಿ ಸಮಾಜಶಾಸ್ತ್ರದ ವಿದ್ಯಾರ್ಥಿಯಾಗಿ ನಾನು ಆರ್ಥಿಕ ನಡವಳಿಕೆಗಳು, ದೃಢವಾದ ನಂಬಿಕೆ, ಮೌಲ್ಯಗಳು ಮತ್ತು ಆಚರಣೆಗಳ ಸಾಮಾಜಿಕ ಸಂಘಟನೆಗೆ ಸಂಬಂಧಿಸಿದ್ದಾಗಿದೆ ಎಂಬುದಕ್ಕೆ ಹೆಚ್ಚಿನ ಒತ್ತು ನೀಡಿದ್ದೇನೆ. ಸೂಕ್ಷ್ಮ ಅರ್ಥಶಾಸ್ತ್ರವು ಆರ್ಥಿಕ ಚಟುವಟಿಕೆಗಳಿಗೆ ಚಾಲನೆ ನೀಡುವ ಆರ್ಥಿಕೇತರ ಚಲಕಗಳ ಒತ್ತಡಗಳನ್ನು ಅರ್ಥಮಾಡಿಕೊಂಡಾಗ ಮಾತ್ರ ಅಧ್ಯಯನಕ್ಕೆ ಒಂದು ತಾತ್ವಿಕ ಚೌಕಟ್ಟು ದೊರಕುತ್ತದೆ. ಹೀಗೆ ಸಮಗ್ರವಾಗಿರುವ ಅಧ್ಯಯನ ದೃಷ್ಟಿಕೋನಗಳು, ಇಂದಿನ ದಿನದಲ್ಲಿ ಗ್ರಾಮೀಣ ಮತ್ತು ಬುಡಕಟ್ಟು ಜನರ ಉತ್ತಮೀಕರಣಕ್ಕಾಗಿ ಹೆಚ್ಚು ಪ್ರಾಮುಖ್ಯತೆ ನೀಡುವ ಅವಶ್ಯಕತೆ ಇದೆ.

## ಲಂಬಾಣಿ ಸಮಾಜದ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗಿರುವ ಅಂಶಗಳು

ಪ್ರಸಕ್ತ ಅಧ್ಯಯನದಿಂದ ಸ್ಪಷ್ಟವಾಗಿ ವ್ಯಕ್ತವಾಗಿರುವ ಅಂಶವೆಂದರೆ ಲಂಬಾಣಿಗಳ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಪ್ರಮುಖ ಬದಲಾವಣೆಗಳು ಉಂಟಾಗಿರುವುದು ಆರ್ಥಿಕ ಅಂಶಗಳಿಂದ ಎಂಬುದು. ಈ ಅಧ್ಯಯನದ ಸೈದ್ಧಾಂತಿಕ ಆಸಕ್ತಿಯ ದೃಷ್ಟಿಯಿಂದ ಆರ್ಥಿಕ ಬದಲಾವಣೆ ಪ್ರಾಥಮಿಕವಾಗಿದ್ದರೂ ಅದೊಂದೇ ಅಧ್ಯಯನಕ್ಕೆ ಒಳಪಟ್ಟಿರುವ ಅಂಶವಲ್ಲ. ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆಯನ್ನು ಉಂಟುಮಾಡಿರುವ ಅಂಶಗಳು ಬದಲಾವಣೆ ಹೊಂದಿದ ಆರ್ಥಿಕ ಅಂಶಗಳಿಂದ ವಾಸ್ತವಿಕವಾಗಿ ಪ್ರಭಾವಿತವಾಗಿವೆ. ಮುಂದುವರೆದ ಸಮುದಾಯಗಳ ಜೊತೆಗೆ ಹೆಚ್ಚು ಸಾಂಸ್ಕೃತಿಕ ಸಂಪರ್ಕ ಮತ್ತು ವಲಸೆ ಹೋಗದೆ ಒಂದೇ ಕಡೆ ನೆಲೆಸುವ ಜೀವನವನ್ನು ಲಂಬಾಣಿಗಳು ಅಳವಡಿಸಿಕೊಂಡದ್ದು ಚಾರಿತ್ರಿಕ ಮತ್ತು ಆರ್ಥಿಕ ಅವಶ್ಯಕತೆಗಳಿಂದ. ಲಂಬಾಣಿಗಳು ದಕ್ಷಿಣ-ಭಾರತಕ್ಕೆ ಬಂದದ್ದು ಮೊಗಲ್ ಸೈನ್ಯಕ್ಕೆ

ಸರಕು-ಸಾಗಾಣಿಕೆ ಪೂರೈಕೆದಾರರಾಗಿ. ಅಲ್ಲದೇ ಇತರ ಆಡಳಿತಗಾರರ ಪ್ರಭಾವದಿಂದ ಅವರ ಸಾಂಪ್ರದಾಯಿಕ ವೃತ್ತಿ ಕುಗ್ಗಿ ಕೊನೆಗೆ ದಕ್ಷಿಣ ಭಾರತದಲ್ಲಿ ಚದುರಿದಂತೆ ನೆಲೆ ನಿಂತರು. ಇವರ ಸಾಂಪ್ರದಾಯಿಕ ವೃತ್ತಿ ನಿಂತು ಹೋಗಲು ಕಾರಣ, ಬ್ರಿಟಿಷ್ ಚಕ್ರಾಧಿಪತ್ಯಗಳು ಆಡಳಿತವನ್ನು ವಿಸ್ತರಿಸಿದ್ದು, ಯಾಂತ್ರಿಕ ಸಾರಿಗೆಯನ್ನು ಪರಿಚಯಿಸಿದ್ದು, ವಿಶೇಷವಾಗಿ ರೈಲ್ವೆ ಮತ್ತು ರಸ್ತೆ ಮಾರ್ಗಗಳನ್ನು ಅಭಿವೃದ್ಧಿ ಪಡಿಸಿದ್ದು. ಇವರ ಮೂಲ ಆರ್ಥಿಕತೆಯಲ್ಲಿ ಉಂಟಾದ ಬದಲಾವಣೆಯ ಪರಿಣಾಮವಾಗಿ ಲಂಬಾಣಿಗಳು ಅನೇಕ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಅನುಭವಿಸಿದರು. ಅಲ್ಲದೆ ಸಾಮಾಜಿಕ-ಸಾಂಸ್ಕೃತಿಕ ಜೀವನ ಕ್ಷೇತ್ರದಲ್ಲಿ ಅನೇಕ ಸಮಸ್ಯೆಗಳಿಗೆ ಒಳಗಾದರು. ಪೂರ್ವದಲ್ಲಿ ಅಲೆಮಾರಿಗಳಾಗಿದ್ದ ಜನರ ಮೇಲೆ ರೈತಾಪೀಕರಣದ ಪ್ರಕ್ರಿಯೆಗಳು ಮಹತ್ವದ ಮತ್ತು ನಿಸ್ಸಂಶಯವಾದ ಆಘಾತವನ್ನು ಉಂಟುಮಾಡಿದವು.

ಅಧ್ಯಾಯ ಎರಡು ಮತ್ತು ಮೂರರಲ್ಲಿ ಲಂಬಾಣಿಗಳ ಮೂಲ ಆರ್ಥಿಕ ಆಲೋಚನಾ ಮಾರ್ಗಗಳು, ತತ್ವಗಳು ಮತ್ತು ಚಟುವಟಿಕೆಗಳನ್ನು ವಿಶೇಷವಾಗಿ ಚರ್ಚೆ ಮಾಡಲಾಗಿದ್ದು, ಅವುಗಳು ಹೇಗೆ ಪ್ರಭಾವಗಳಿಗೆ ಒಳಪಟ್ಟಿವೆ ಎಂಬುದನ್ನು ಚಿತ್ರಿಸಲಾಗಿದೆ. ಆರ್ಥಿಕೇತರ ಅಂಶಗಳಾದ ಬಂಧುತ್ವ, ಸಾಮಾಜಿಕ ನಿಯಂತ್ರಣ, ಧರ್ಮ, ನಂಬಿಕೆಗಳು ಮತ್ತು ಮೌಲ್ಯಗಳ ಮೇಲೆ ಆರ್ಥಿಕ ಅಂಶಗಳು ಹೇಗೆ ಪ್ರಭಾವ ಬೀರಿವೆ ಎಂಬುದನ್ನು ವಿಶೇಷವಾಗಿ ವಿಶ್ಲೇಷಣೆಗೆ ಒಳಪಡಿಸಿದೆ. ಇಲ್ಲಿ ಎದುರಾಗುವ ಮೂಲ ಪ್ರಶ್ನೆ ಎಂದರೆ ಲಂಬಾಣಿಗಳಲ್ಲಿ ಸಾಂಸ್ಕೃತಿಕ ಬದಲಾವಣೆಯನ್ನು ತರುವಲ್ಲಿ ಆರ್ಥಿಕ ಅಂಶಗಳು ನಿರ್ದಿಷ್ಟವಾಗಿ ಏನನ್ನು ಮಾಡಿವೆ? ಅಥವಾ ಲಂಬಾಣಿಗಳಂತಹ ಸಮುದಾಯಗಳಲ್ಲಿ ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆಗೆ, ಮೂಲ ಆರ್ಥಿಕ ಬದಲಾವಣೆಗಳೇ ಕಾರಣ ಎಂಬುದನ್ನು ಹೇಳುವುದು ಎಷ್ಟರ ಮಟ್ಟಿಗೆ ಸರಿ ? ಎಂಬುದು ಎಪ್‌ಸ್ಟೈನ್ ಅವರು ಕರ್ನಾಟಕದ ಎರಡು ಹಳ್ಳಿಗಳಲ್ಲಿ ಸಾಮಾಜಿಕ ಬದಲಾವಣೆ ಎಂಬ ತಮ್ಮ ಅಧ್ಯಯನದಲ್ಲಿ, ಆರ್ಥಿಕ ನಿರ್ಧಾರಕ ಅಂಶಗಳನ್ನು ಮತ್ತು "ಗುಣಾತ್ಮಕ ಸಹ ಸಂಬಂಧವನ್ನು ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಪ್ರದಾಯಿಕ ಸಂಘಟನೆಗಳಲ್ಲಿನ ಬದಲಾವಣೆಗಳ ನಡುವೆ ಆರ್ಥಿಕ ಬದಲಾವಣೆಯು ನಿರ್ಣಾಯಕ ವ್ಯತ್ಯಾಸಗಳನ್ನು ತರುವ ಅಂಶವಾಗಿದೆ" ಎಂದು ಪ್ರತಿಪಾದಿಸಿದ್ದಾರೆ (೧೯೬೨:೩೩೦-೩೩೪).

ಆದರೆ ನಮ್ಮ ಅಧ್ಯಯನವು ಲಂಬಾಣಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗೆ ಆರ್ಥಿಕ ಅಂಶಗಳು ಬದಲಾವಣೆಯ ಮಹತ್ವದ ನಿರ್ದೇಶನದ ಅರಿವನ್ನು ಮೂಡಿಸಿದ್ದರು ಅಥವಾ ಬದಲಾವಣೆ ಉಂಟಾಗಲು ಕಾರಣವಾದ ಅಂಶಗಳಲ್ಲಿ ಇದು ಪ್ರಮುಖವಾಗಿದ್ದರೂ, ಇದು ಒಂದೇ ಅಂಶವಲ್ಲ ಎಂಬುದನ್ನು ಕಂಡು ಕೊಂಡಿದೆ. ಸ್ವಾಭಾವಿಕವಾಗಿ ಲಂಬಾಣಿಗಳು ವಾಸ ಮಾಡುತ್ತಿದ್ದ ನೆಲೆಗಳ ಬದಲಾವಣೆಗಳು (ಮೇವಾಡದಿಂದ ಕರ್ನಾಟಕದವರೆಗೆ), ವಸತಿ ಮಾದರಿ (ಅಲೆಮಾರಿತನದಿಂದ ಒಂದೇ ಸ್ಥಳದಲ್ಲಿ ನೆಲೆಗೊಂಡದ್ದು), ಜಾತಿ ಭಾವನೆ ಬಲವಾದದ್ದು, ಇತರೆಯವರ ಸಂಪರ್ಕ ಹೆಚ್ಚಾದ ಪರಿಣಾಮದಿಂದ ಆರ್ಥಿಕ ಚಟುವಟಿಕೆಯಲ್ಲಾದ ಬದಲಾವಣೆಗಳು, ಸಾಂಪ್ರದಾಯಿಕ ಮೌಲ್ಯಗಳಲ್ಲಿ ಪರಿವರ್ತನೆ ಸಾಮಾಜಿಕ ಚಲನೆಗೆ ಪ್ರಜ್ಞಾಪೂರ್ವಕ ಪ್ರಯತ್ನ, ಔಪಚಾರಿಕ ಮತ್ತು ಅನೌಪಚಾರಿಕ ಅಭಿವೃದ್ಧಿಪರ ಯೋಜನೆಗಳು, ಸಾಮಾಜಿಕ ಸುಧಾರಣಾ ಕಾರ್ಯಕ್ರಮಗಳು ಇವುಗಳೆಲ್ಲವು ಈ ಸಮುದಾಯದ ಸಾಮಾಜಿಕ-ಸಾಂಸ್ಕೃತಿಕ ಬದಲಾವಣೆ ಉಂಟಾಗಲು ಪ್ರತ್ಯೇಕ ಮತ್ತು ಪರೋಕ್ಷವಾದ ಪಾತ್ರವನ್ನು ವಹಿಸಿವೆ. ಈ ಬದಲಾವಣೆಯು ಹೆಚ್ಚಿನ ಮಟ್ಟಿಗೆ ಅಥವಾ ಸ್ವಲ್ಪ ಹೆಚ್ಚು ಕಡಿಮೆ ವೆಬರ್‌ರವರ ದೃಷ್ಟಿಕೋನವಾದ ಅಕೌಂಟ್ ಆಫ್ ಪ್ಲುರಲಿಸ್ಟಿಕ್ ಕಾಸಸ್‌ಗೆ ಪೂರಕವಾಗಿದೆ.

ಹೀಗಿದ್ದರೂ, ಎಪ್‌ಸ್ಟೈನ್ ಅವರು ತನ್ನದೇ ಸರಿ ಎಂದು ವಾದಿಸದೆ, ಕೊನೆಯ ತೀರ್ಮಾನಕ್ಕೆ ಸೈದ್ಧಾಂತಿಕ ಸೂತ್ರಾವಲಂಬನೆ ಮತ್ತು ಅವುಗಳನ್ನು ತಾತ್ಕಾಲಿಕವಾದ ಪ್ರಯತ್ನಗಳಿಂದ ನೋಡಿ ಮಾರ್ಪಡಿಸಿಕೊಳ್ಳಲು ತೆರೆದಿಟ್ಟಿರಬೇಕು. "ಸಂಭವಿಸಬಹುದಾದ ಸಾರ್ವತ್ರಿಕ

ಸಮಂಜಸತೆಯ ಔಪಚಾರಿಕ ಸಂಬಂಧಗಳನ್ನು ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಬದಲಾವಣೆಯ ಬಗ್ಗೆ ನಡೆದ ಅನೇಕ ಅಧ್ಯಯನಗಳು ಹೆಚ್ಚಾಗಿ ಪರಿಶೀಲಿಸಿವೆ'' (೧೯೬೨ : ೩೩೫) ಎಂದು ಹೇಳಿದ್ದಾರೆ. ನಮ್ಮ ಅಧ್ಯಯನವು ಈ ಕ್ಷೇತ್ರಕ್ಕೆ ಒಂದು ಸಣ್ಣ ಕೊಡುಗೆಯಾಗಿದೆ.

ಲಂಬಾಣಿಗಳ ಜೀವನದ ವಿವಿಧ ಮಾರ್ಗಗಳನ್ನು ಖಚಿತವಾಗಿ ಕೇವಲ ಆರ್ಥಿಕ ಮಾಪಕದಿಂದ ಮಾತ್ರ ವಿಶ್ಲೇಷಿಸಲು ಸಾಧ್ಯವಿಲ್ಲ. ಅದು ತನ್ನದೇ ಆದ ಸಾಮಾಜಿಕ ರಚನೆಯನ್ನು ನಿರ್ಮಿಸಿಕೊಂಡಿದೆ ಎಂಬುದನ್ನು ಈ ಅಧ್ಯಯನ ತೋರಿಸಿಕೊಟ್ಟಿದೆ. ಮಾರ್ಪಡಿಸಿಕೊಂಡ ಆರ್ಥಿಕ ಅಂಶಗಳ ಮೂಲಕ ಅಗತ್ಯವಾದ ಸಾಮಾಜಿಕ ರಚನೆಗೆ ಸಂಬಂಧಿಸಿದ ಜೈವಿಕ (ದೈಹಿಕ, ಲಿಂಗ-ಅನುಪಾತ, ಜೀವಿತ ಅವಧಿ, ಜನನ ಮತ್ತು ಮರಣ ದರ, ಇತ್ಯಾದಿ) ಕಾರ್ಯಗಳು ಮತ್ತು ಅವುಗಳು ಹಾಕುವ ಸಾಮಾಜಿಕ ಅಸ್ತಿಭಾರದ ಮೂಲಕ ಯಾವ ರೀತಿಯ ಆರ್ಥಿಕ ಶಕ್ತಿಯನ್ನು ಭರಿಸಬಹುದು ಎಂಬುದನ್ನು ನಿರ್ಣಯಿಸಿ, ಆರ್ಥಿಕ ವ್ಯವಸ್ಥೆಗೆ ಇವುಗಳು ಆಕಾರ ಮತ್ತು ಮಾದರಿಯನ್ನು ನೀಡುತ್ತವೆ. ಆದುದರಿಂದ ಲಂಬಾಣಿಗಳ ಆರ್ಥಿಕ ವ್ಯವಸ್ಥೆ ಮತ್ತು ಅದರ ಬದಲಾವಣೆಯನ್ನು ಅರ್ಥ ಮಾಡಿಕೊಳ್ಳುವ ಉದ್ದೇಶದಿಂದ ಕುಟುಂಬಗಳು ನಿರ್ಮಿಸಿಕೊಂಡಿರುವ ಸಾಮಾಜಿಕ - ಸಾಂಸ್ಕೃತಿಕ ಚೌಕಟ್ಟನ್ನು ಅಧ್ಯಯನ ಮಾಡುವ ಅವಶ್ಯಕತೆ ಇದೆ. ಹೀಗಾಗಿ ಗೋತ್ರವ್ಯವಸ್ಥೆ, ಆಸ್ತಿಯ ಪರಿಕಲ್ಪನೆಗಳು, ಸಾಮಾಜಿಕ ನಿಯಂತ್ರಣದ ಯಾಂತ್ರಿಕ ಭಾಗಗಳು, ಅವರ ಲೌಕಿಕ ಪ್ರಪಂಚ ಮತ್ತು ಅಲ್ಲಿನ ನಂಬಿಕೆ ವ್ಯವಸ್ಥೆ ಇವುಗಳು ಆರ್ಥಿಕ ವ್ಯವಸ್ಥೆಯ ಗಣನೆಗೆ ಮತ್ತು ಕ್ರಮಬದ್ಧವಾದ ವಿಶ್ಲೇಷಣೆಗೆ ಅಗತ್ಯವಾದ ಅಂಶಗಳಾಗಿವೆ. ಸಮಾಜಶಾಸ್ತ್ರದ ವಿದ್ಯಾರ್ಥಿಯಾಗಿ ಆರ್ಥಿಕತೆ ಮತ್ತು ಸಾಂಸ್ಕೃತಿಕ ಅಂಶಗಳು ಒಂದಕ್ಕೊಂದು ಸುತ್ತಿಕೊಂಡಿವೆ ಎಂದು ಹೇಳುವುದು ನಿರ್ವಿವಾದ. ಅದು ಅಲ್ಲದೇ ವಿಜ್ಞಾನವಾದ ಆಧುನಿಕ ಅರ್ಥಶಾಸ್ತ್ರ ಕೇವಲ ಮಾನವ ಸಮಾಜದ ಆರ್ಥಿಕ ಅಂಶಗಳನ್ನು ಮಾತ್ರ ಅಧ್ಯಯನ ಮಾಡುತ್ತದೆ. ಸಮಾಜ ಮತ್ತು ಸಾಂಸ್ಕೃತಿಕ ಅಧ್ಯಯನಗಳು ಸಾಂಪ್ರದಾಯಿಕತೆಯ ಮೂಲಕ ಆರ್ಥಿಕ ಅಧ್ಯಯನಗಳಿಂದ ಪ್ರತ್ಯೇಕವಾಗಿ ಇರಲು ಸಾಧ್ಯವಿಲ್ಲ ಎಂಬ ಅಭಿಪ್ರಾಯ ಹೊಂದಿವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆರ್ಥಿಕ ಸಮಾಜಶಾಸ್ತ್ರಜ್ಞರು ಅಥವಾ ಆರ್ಥಿಕ ಮಾನವ ಶಾಸ್ತ್ರಜ್ಞರು ಎರಡು ವಿಷಯಗಳಿಗೆ ಸಂಬಂಧಿಸಿದಂತೆ ಸಾಮಾಜಿಕ ಚೌಕಟ್ಟಿನಲ್ಲಿ ಆರ್ಥಿಕ ಪ್ರಯತ್ನಗಳು ಮತ್ತು ಆರ್ಥಿಕ ಮೂಲದ ಸಾಮಾಜಿಕ ಪ್ರಕ್ರಿಯೆಗಳ ಮೂಲ ಗತಿಶೀಲತೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಈ ಅಧ್ಯಯನಕ್ಕೆ ಅಳವಡಿಸಿಕೊಂಡಿರುವ ದೃಷ್ಟಿ ಕೂಡ ಇದೆ. ಒಂದು ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಸಾಮಾಜಿಕ - ಆರ್ಥಿಕ ಅಭಿವೃದ್ಧಿಯ ಸಮಸ್ಯೆಗಳಿಗೆ ಸಂಬಂಧಿಸಿದ ವಿಷಯಗಳ ಪ್ರಸ್ತುತತೆಯನ್ನು ಮತ್ತು ಆರ್ಥಿಕ ಮತ್ತು ಆರ್ಥಿಕೇತರ ಅಂಶಗಳ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳಬೇಕು. ಯಾವುದೇ ಒಂದು ಬಗೆಯ ಬದಲಾವಣೆಯು ಮೂರನೇ ಪ್ರಪಂಚದ ನೀತಿ ನಿರೂಪಣಾಕಾರರಿಗೆ ಮಹತ್ವದ್ದಾಗಿದೆ.

ಪ್ರಾದೇಶಿಕ ಮತ್ತು ರಾಷ್ಟ್ರೀಯ ಆರ್ಥಿಕತೆಗಳು ಎಂದು ವಿಭಜಿಸದೆ, ಒಂದು ಸಮುದಾಯವನ್ನು ಕುರಿತು ಸಮಗ್ರ ಅಧ್ಯಯನವನ್ನು ಕೈಗೊಂಡರೆ ಆ ಸಮುದಾಯವು ಪ್ರಾದೇಶಿಕ ಮತ್ತು ರಾಷ್ಟ್ರೀಯ ಆರ್ಥಿಕತೆಯಿಂದ ಬೇರ್ಪಟ್ಟ ಹಾಗೆ ಕಾಣುವುದು. ಇಂತಹ ಸೂಕ್ಷ್ಮ ಅಧ್ಯಯನಗಳು, ವಾಸ್ತವಿಕವಾಗಿ ಸಮುದಾಯಗಳು ಹೇಗೆ ಕಾರ್ಯ ನಿರ್ವಹಿಸುತ್ತವೆಂಬ ಒಳನೋಟಗಳನ್ನು ನಮಗೆ ದೊರಕಿಸುತ್ತವೆ. ಇಂತಹ ವಿಶ್ಲೇಷಣೆಗಳು ಸಾಮಾಜಿಕ ಆರ್ಥಿಕತೆಗಿಂತ, ಆರ್ಥಿಕ ಅಭಿವೃದ್ಧಿ, ಸಾಮಾಜಿಕ ಬದಲಾವಣೆ ಮತ್ತು ರಾಜಕೀಯ ಸ್ಥಿರತೆಯನ್ನು ಅರ್ಥಮಾಡಿಕೊಳ್ಳಲು ಉಪಯೋಗವಾಗುತ್ತವೆ. ಆದರೆ ಈ ಪ್ರತಿಪಾದನೆಯನ್ನು ನಿರಾಕರಿಸಲಾಗದೆ ಆರ್ಥಿಕ ಅಂಶಗಳು ಅಪರಿಮಿತವಾದ ಚಲನೆಯನ್ನು ನೀಡುವ ಪ್ರೇರಣಾಶಕ್ತಿಗಳಾಗಿವೆ. ಇದಕ್ಕೆ ವಿರುದ್ಧವಾಗಿ ಪುರಾತನ ಮತ್ತು ರೈತಾಪಿ ಆರ್ಥಿಕತೆ ವ್ಯವಸ್ಥೆಗಳಲ್ಲಿ, ಸಾಮಾಜಿಕ ಸಂಸ್ಥೆಗಳಲ್ಲಿ ಯಾಂತ್ರಿಕವಾಗಿ ಬದಲಾವಣೆಗಳು ಬರಲಿಲ್ಲ. ಅವುಗಳಿಂದ ಬಂಧುತ್ವ ಪದಗಳ ಪ್ರಯೋಗಗಳು, ವಿವಾಹ

ಪದ್ಧತಿ ಮತ್ತು ಅತಿಮಾನುಷ - ಧಾರ್ಮಿಕ ಆಚರಣೆಗಳು, ಮೌಲ್ಯಗಳು, ಸಾಂಪ್ರದಾಯಿಕ ನೀತಿ ತತ್ವಗಳು ಇತ್ಯಾದಿಗಳ ಔಪಚಾರಿಕ ಅವಶ್ಯಕತೆಯ ಚಲನಶೀಲತೆಯಿಂದ ಹುಟ್ಟಿದವುಗಳು. ಇದರಿಂದ ಸಾಮಾಜಿಕ ಸ್ಥಿರತೆಗೆ ಕಾರಣವಾದುದನ್ನು ಮತ್ತು ಸಾಮಾಜಿಕ ರಚನೆಯ ಹಲವಾರು ಅಂಶಗಳು ಬದಲಾವಣೆಗೆ ಒಳಗಾಗಿರುವ ಸಾಂಸ್ಕೃತಿಕ ಚೌಕಟ್ಟು ಮತ್ತು ಸಾಂಪ್ರದಾಯಿಕ ಮೌಲ್ಯಗಳ ಜೊತೆ ಜೊತೆಗೆ ಆರ್ಥಿಕತೆಯ ಪ್ರಶ್ನೆಗಳು ಸಾಮಾನ್ಯವಾಗಿ ನಾವು ಗುರುತಿಸುವ ಹಾಗೆ ಒಂದರಮೇಲೊಂದು ವ್ಯಾಪಿಸಿವೆ. ಆರ್ಥಿಕ ಆಸಕ್ತಿಯಿಂದ, ಧರ್ಮ ಮತ್ತು ರೂಢಿ ಆಚರಣೆಗಳ ಜೀವನ ಮಾರ್ಗಗಳ 'ನೈತಿಕತೆ' ಗೌಣವಾದದ್ದು. ಏಕೆಂದರೆ, ನೈತಿಕತೆಯು ತಪ್ಪು ಮತ್ತು ಸರಿ ಪರಿಕಲ್ಪನೆಗಳನ್ನು ಒಳಗೊಂಡಿರುವುದು. ಲಂಬಾಣಿಗಳು ಹೆಚ್ಚು ಕಡಿಮೆ ಆರ್ಥಿಕ ಅಂಶಗಳಿಗೆ (ಭೌತಿಕ ವಸ್ತುಗಳಿಗೆ) ಹೆಚ್ಚಿನ ಪ್ರಾಮುಖ್ಯತೆ ನೀಡುವುದರ ಪರಿಣಾಮದಿಂದ ಘರ್ಷಣೆ ಮತ್ತು ಒಡಕುಗಳು ಸಮುದಾಯದ ಒಳಗೆ ಹುಟ್ಟಿಕೊಂಡಿವೆ. ಇವುಗಳಲ್ಲಿ ಕೆಲವು ಅಭಿವೃದ್ಧಿ ಪ್ರಕ್ರಿಯೆಗಳಿಗೆ ತಡೆ ಒಡ್ಡುತ್ತಿವೆ.

ಲಂಬಾಣಿಗಳಂತಹ ಸಮುದಾಯಗಳ ಜೀವನವನ್ನು ಸಮಾಜಶಾಸ್ತ್ರ ದೃಷ್ಟಿಕೋನದಿಂದ ನೋಡಿದಾಗ ಆರ್ಥಿಕ ಮತ್ತು ಆರ್ಥಿಕೇತರ ಅಂಶಗಳ ಸಮಗ್ರವಾದ ಕಾರ್ಯ ಚಟುವಟಿಕೆಗಳು ತಮಗೆ ತಾವೇ ಬದಲಾವಣೆಯ ಸನ್ನಿವೇಶಕ್ಕೆ ಹೊಂದಾಣಿಕೆ ಮಾಡಿಕೊಳ್ಳುತ್ತಿವೆ ಎಂಬುದು ತಿಳಿದುಬರುತ್ತದೆ. ಸರಳವಾದ ಮತ್ತು ಏಕರೂಪವಾದ 'ಆರ್ಥಿಕ' ವಿಶ್ಲೇಷಣೆಯಿಂದ ಸಾಮಾಜಿಕ ವಾಸ್ತವಿಕತೆಯನ್ನು ನಿರ್ದಿಷ್ಟಪಡಿಸಲುಸಾಧ್ಯವಿಲ್ಲ. ನಾವು ಸಮಾಜದ ಆರ್ಥಿಕ ವಕ್ರತೆಗಳ ಆಳ ಮತ್ತು ಹಿನ್ನೆಲೆಯನ್ನು ಅಗತ್ಯವಾಗಿ ನೋಡಲೇಬೇಕು. ಈ ಮಾರ್ಗದಿಂದ ಆರ್ಥಿಕ ಚಟುವಟಿಕೆಗಳು ಅಭಿವೃದ್ಧಿಯ ತಳಮಟ್ಟದ ಒಳಗೆ ಸಂಪ್ರದಾಯದಿಂದ ಹೊಸ ಅಂಶಗಳನ್ನು ಪಡೆದುಕೊಳ್ಳುವ ಹಾಗೂ ಅವುಗಳ ಜೊತೆಗೆ ವಿಲೀನ ಮಾಡಿಕೊಳ್ಳುವ ಮಹತ್ವದ ಸಾಮರ್ಥ್ಯವನ್ನು ಬಹಿರಂಗ ಪಡಿಸಲು ಸಾಧ್ಯ. ಸಾಂಪ್ರದಾಯಿಕ ಬದಲಾವಣೆಯ ಪರಿಣಾಮವಾಗಿ ಉತ್ಪಾದನಾ ಮಾದರಿಗಳಲ್ಲಿ ಉಂಟಾದ ಬದಲಾವಣೆಗಳು ಲಂಬಾಣಿಗಳ ಇತಿಹಾಸದಿಂದ ವ್ಯಕ್ತ ವಾಗುತ್ತದೆ. ಇಷ್ಟೇ ಅಲ್ಲದೇ ಸಂಪ್ರದಾಯದಿಂದ ದೃಢವಲ್ಲದ ಆಂಶಿಕ ಹೊಂದಾಣಿಕೆಯನ್ನು ಇವು ಮಾಡಿಕೊಂಡಿವೆ. ಇಂತಹ ಸ್ಥಿತಿ ಜೀವದಿಂದಿರುವ ಸಾಮರ್ಥ್ಯದ ಮೂಲಕ ಸಾಂಪ್ರದಾಯಿಕ ಹೊಂದಾಣಿಕೆ ಮಾಡಿಕೊಳ್ಳುವ ಶಕ್ತಿಯನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಭಿನ್ನ ಭಿನ್ನವಾದ ಸಮುದಾಯಗಳ ಅಧ್ಯಯನ ನಡೆಸಿ ಪ್ರಸ್ತುತ ಮತ್ತು ಅವರ ಸಂಪ್ರದಾಯಕ್ಕೆ ಹೊಂದಾಣಿಕೆಯಾಗುವ ಕಾರ್ಯಕ್ರಮಗಳನ್ನು ನೀಡುವುದು ಏಕೆಂದರೆ, ಇಂತಹ ಕಾರ್ಯಕ್ರಮಗಳು ಯಶಸ್ವಿಯಾಗಿ ಹೊರಬಂದ್ದದು ಸಾಂಪ್ರದಾಯಿಕ ಒಪ್ಪಿಗೆಯಿಂದ. ಇಂದು ಸಾಮಾಜಿಕ ಮತ್ತು ಧಾರ್ಮಿಕ ರೂಢಿ ಆಚರಣೆ ಅಭ್ಯಾಸಗಳು ಬಲತ್ಕಾರದಿಂದ ಅನುತ್ಪಾದಕ ವೆಚ್ಚವನ್ನು ಅವರ ಮೇಲೆ ಹೇರುತ್ತಿವೆ. ಆದಾಗ್ಯೂ ಸನ್ನಿವೇಶಕ್ಕೆ ತಕ್ಕಂತೆ ನವೀನತೆ ಇಲ್ಲದ ನೀತಿಗಳು ಹೆಚ್ಚಾಗಿವೆ. ಸಾಮಾಜಿಕ ಅಧ್ಯಯನಕಾರರಾದ ನಾವು ಅರ್ಥಶಾಸ್ತ್ರಜ್ಞರು ಮತ್ತು ಯೋಜನಾಕಾರರು ಪ್ರತಿಯೊಂದು ಗ್ರಾಮದ ಅಥವಾ ಸಮುದಾಯದ ಬಗ್ಗೆ ಯೋಚಿಸುವ ಕಠಿಣತೆಯ ಬಗ್ಗೆ ಅರಿವನ್ನು ಇಟ್ಟುಕೊಳ್ಳುವುದು ಅವಶ್ಯ.

ಸಣ್ಣ ಸಮುದಾಯಗಳನ್ನು ಕುರಿತು ಸಾಂಪ್ರದಾಯಿಕ ಅಧ್ಯಯನಕಾರರು ನಡೆಸಿದ ಅಧ್ಯಯನಗಳು ಬಹುಕಾಲದ ವರೆಗೆ ಪ್ರತ್ಯೇಕವಾಗಿ ಇದ್ದವು. ಅನೇಕ ಶಾಸನ ಸಭೆಯ ಮಂಡಳಿಗೆ ನಡೆಯುವ ಚುನಾವಣಾ ರಾಜಕೀಯ ಪ್ರಕ್ರಿಯೆಗಳು, ಅಭಿವೃದ್ಧಿ ಚಟುವಟಿಕೆಗಳಾದ

ಪಂಚವಾರ್ಷಿಕ ಯೋಜನೆಗಳು, ಬಹಳ ದಿನಗಳ ಕಾಲ ಇಂತಹ ಸಮುದಾಯಗಳಿಗೆ ಇಲ್ಲದಿದ್ದರೂ, ಈಗ ರಾಷ್ಟ್ರ-ರಾಜ್ಯಗಳ ಅಂಗ ಭಾಗಗಳಾಗಿವೆ. ಇದರಿಂದ ಅವರ ಹಿಂದಿನ ಅರೆ ಸ್ವಯಂ ಆಧಿಪತ್ಯ ಚೂರು ಚೂರಾಗಿ ಹೋಗಿದೆ.

**ಸಾಮಾಜಿಕ - ಸಾಂಸ್ಕೃತಿಕ ಬದಲಾವಣೆಯ ಪ್ರಕ್ರಿಯೆಗಳು ಮತ್ತು ಸಮಸ್ಯೆಗಳು**

ಪ್ರಾಚೀನವೆಂದು ಗೌರವದಿಂದ ನಡೆದುಕೊಳ್ಳುತ್ತಿರುವ ಸಂಸ್ಕೃತಿಯು ಹೊಸ ಚಾರಿತ್ರಿಕ ಘಟನೆಗಳು ಮತ್ತು ಹೊಸ ಸಾಮಾಜಿಕ ಆಲೋಚನೆಯ ಒತ್ತಡಗಳಿಂದ ಹಾಗೂ ಮಾನವ ಚಾಲನಾ ಪ್ರೇರಕಶಕ್ತಿಗಳಿಂದ ಬದಲಾವಣೆ ಹೊಂದುತ್ತಿವೆ. ಆದಾಗ್ಯೂ ಲಂಬಾಣಿಗಳಂತಹ ಸಮುದಾಯದ ಸದಸ್ಯರಲ್ಲಿ ಈ ರೀತಿಯ ಚಿಂತನೆಯ ಬದಲಾವಣೆ ತುಂಬಾ ನಿಧಾನವಾಗಿದೆ. ಸಾಮಾಜಿಕ ಸ್ಥಿತ್ಯಂತರದ ಸಂದರ್ಭಗಳಲ್ಲಿಯೂ ಕೂಡ ಹೆಚ್ಚಿನ ಸಾಂಪ್ರದಾಯಿಕ, ಸಾಂಸ್ಕೃತಿಕ, ಸಾಮಾಜಿಕ ರಚನೆಗಳು ಹಾಗೆಯೇ ಇವೆ. ಸಮುದಾಯದ ಸದಸ್ಯರು ಅವುಗಳಿಗೆ ಅರ್ಥ ನೀಡಿ, ಜೀವ ತುಂಬುವ ಮೂಲಕ ಮುಂದುವರೆಸುತ್ತಿದ್ದಾರೆ. ಈ ಕಾರಣದಿಂದ ಬದಲಾವಣೆಗೆ ಸಂಬಂಧಿಸಿದ ಯಾವುದೇ ಅಧ್ಯಯನಗಳು ಹೆಚ್ಚು ಸ್ವಾಭಾವಿಕತೆ ಪಡೆದುಕೊಳ್ಳಬೇಕಾದರೆ ಕಡ್ಡಾಯವಾಗಿ ಬದಲಾವಣೆ ಹೊಂದಿದ ಮತ್ತು ಶಾಶ್ವತವಾಗಿರುವ ಸಾಂಪ್ರದಾಯಿಕ ಅಂಶಗಳನ್ನು ಅಧ್ಯಯನ ಮಾಡಲೇಬೇಕು. ಏಕೆಂದರೆ ಬದಲಾವಣೆಯೇ ಸಂಶೋಧಕರ ಪ್ರಮುಖ ದೃಷ್ಟಿಯಾಗಿದ್ದರೂ ಶಾಶ್ವತವಾಗಿ ಉಳಿದುಕೊಂಡಿರುವ ಕೆಲವು ಸಾಂಪ್ರದಾಯಿಕ ಅಂಶಗಳನ್ನು ತಿರಸ್ಕಾರ ಮಾಡಲಾಗುವುದಿಲ್ಲ. ಕೆಲವು ಬದಲಾವಣೆಯನ್ನು ಹೇಗೆ ತಡೆಯುವುದು ಎಂಬುದನ್ನು ಪರಿಚಯಿಸಬೇಕು. ಈ ದೃಷ್ಟಿಯಿಂದ ಸಾಂಸ್ಕೃತಿಕ ಸ್ಥಿರತೆ ಅಥವಾ ಸಾಂಸ್ಕೃತಿಕ ಸ್ವಭಾವಾನುಸಾರವಾಗಿ ಬದಲಾವಣೆಯನ್ನು ಅಧ್ಯಯನ ಮಾಡುವುದು ನ್ಯಾಯಸಮ್ಮತವಾದ ಅಂಶವಾಗುತ್ತದೆ. ಸಾಮಾಜಿಕ ವ್ಯವಸ್ಥೆ ಯಾವ ರೀತಿಯಲ್ಲಿ ಒಳಗಿನ ಮತ್ತು ಹೊರಗಿನ ಸವಾಲುಗಳನ್ನು ಎದುರಿಸಿ ಸ್ಥಿರಗೊಂಡಿದೆ ಮತ್ತು ಬದಲಾವಣೆಯಾಗಿರುವ ಸಾಮಾಜಿಕ ಸನ್ನಿವೇಶದಿಂದ ವ್ಯಕ್ತವಾಗುವ ಕ್ರಮಬದ್ಧವಲ್ಲದ ಬದಲಾವಣೆಯನ್ನು ತನ್ನದಾಗಿಸಿಕೊಳ್ಳುತ್ತಿದೆ. ಇವುಗಳು ಒಂದು ಸಮಾಜದ ಐತಿಹಾಸಿಕ ವಿಭಿನ್ನ ಸಾಮಾಜಿಕ ಸಂದರ್ಭಗಳಲ್ಲಿನ ಗುಣಾತ್ಮಕ ವಿಭಿನ್ನತೆ, ಸಮಗ್ರತೆ, ವಿಘಟನೆ ಮತ್ತು ಮರು ಹೊಂದಾಣಿಕೆಯ ಪ್ರಕ್ರಿಯೆಗಳ ಬೇರೆ ಬೇರೆ ಮಟ್ಟಗಳಲ್ಲಿ ಮತ್ತು ಸಂದರ್ಭಗಳ ನಡುವಿನ ವ್ಯತ್ಯಾಸದಲ್ಲೂ ಉಂಟಾಗುತ್ತಿದೆ. ಯಾವ ನಿರ್ಣಾಯಕ ಅಂಶಗಳಿಂದ ಲಂಬಾಣಿ ಸಾಂಸ್ಕೃತಿಕ ನಿರಂತರತೆ ಮತ್ತು ಬದಲಾವಣೆ ನಡೆಯುತ್ತಿದೆ?

ಲಂಬಾಣಿಗಳ ಅಲೆಮಾರಿ ಸಂದರ್ಭದ ಸಾಂಪ್ರದಾಯಿಕ ವೃತ್ತಿಯಾದ ಸರಕು-ಸಾಗಾಣಿಕೆಯನ್ನು ಮಾಡುತ್ತಿದ್ದಾಗ ಬುಡಕಟ್ಟು ಸಂಸ್ಕೃತಿಯ ಐಕ್ಯತೆಯು ವ್ಯಾಪಕವಾದ ಮಟ್ಟದಲ್ಲಿದ್ದದ್ದು ಅಧ್ಯಯನಗಳಿಂದ ತಿಳಿಯುತ್ತದೆ. ಆದರೂ ಅವರು ಬ್ರಿಟಿಷ್ ಪೂರ್ವದಲ್ಲಿ ಮತ್ತು ಬ್ರಿಟಿಷರ ಆಡಳಿತದಲ್ಲಿ ಮುಂದುವರೆದ ಲಂಬಾಣೇತರ ಜನರ ಆರ್ಥಿಕ ಸಂಪರ್ಕ ಮತ್ತು ರಾಜಕೀಯ ದಾಸ್ಯಕ್ಕೆ ಒಳಗಾಗಿದ್ದರು. ಇತರರ ಜೊತೆ ಆರ್ಥಿಕ ಸಹಜೀವನ ನಡೆಸಿದ್ದರೂ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಏಕಸ್ವಾಮ್ಯ ಹೊಂದಿದ ಸಾಂಸ್ಕೃತಿಕ ಗುಂಪಾಗಿ ಮೂಲಭೂತ ಏಕರೂಪತೆಯನ್ನು ಉಳಿಸಿಕೊಂಡಿದ್ದರು. ಇತರ ಗುಂಪುಗಳ ಜೊತೆಗೆ ಮಿತಿಯಾದ ಸಂಪರ್ಕವನ್ನು ಹೊಂದಿ, ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣಗಳು ಲಂಬಾಣಿ ಸಂಸ್ಕೃತಿಯ ಒಳಗೆ ಇರುವಂತೆ ಕೆಲಸ ಮಾಡುವ ಮೂಲಕ ಸಾಂಸ್ಕೃತಿಕ ಏಕ -ಸ್ವಾಮ್ಯವನ್ನು ಕಾಯ್ದುಕೊಂಡಿರುವ ಸಾಮರ್ಥ್ಯ ಬೆಳೆಸಿಕೊಂಡಿದ್ದರು. ಹದಿನೆಂಟನೆಯ ಶತಮಾನದ ಕೊನೆಯ ಭಾಗದವರೆಗೆ ಮತ್ತು ಹತ್ತೊಂಬತ್ತನೆಯ ಶತಮಾನದ ಮಧ್ಯ ಭಾಗದವರೆಗೆ ಅಖಂಡವಾಗಿದ್ದ ಮೂಲಭೂತ ಸಾಂಸ್ಕೃತಿಕ ಅಂಶಗಳನ್ನು ಹೊಂದಿದ್ದರು.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗಕ್ಕೆ ಮೊದಲು ಲಂಬಾಣಿಗಳ ಸಾಮಾಜಿಕ ನಿಯಂತ್ರಣಗಳು, ನಾಯಕ ಮತ್ತು ಅವನ ಮಂಡಳಿಯ ಪ್ರಾಬಲ್ಯದ ಮಧ್ಯೆ ಸಿಕ್ಕಿಕೊಂಡಿತ್ತು. ಔಪಚಾರಿಕ ಶಿಕ್ಷಣವಿಲ್ಲದೇ ಇದ್ದುದರಿಂದ, ಸಾಂಸ್ಕೃತಿಕ ಮೌಲ್ಯಗಳನ್ನು ಮತ್ತು

ಪರಿಕಲ್ಪನೆಗಳನ್ನು ಬಲತ್ಕಾರದಿಂದ ಬಲಪಡಿಸುವ ಮೂಲಕ ಕುಟುಂಬ ಮತ್ತು ಸಮುದಾಯಗಳು ಸಮಾಜೀಕರಣದ ಪ್ರಕ್ರಿಯೆಗಳನ್ನು ಹಿಡಿದಿಟ್ಟುಕೊಂಡಿದ್ದವು. ಆಗ ಇತರೆ ಮುಂದುವರಿದ ಜಾತಿಗಳ ಪ್ರಭಾವ ಬಹಳ ಕ್ಷೀಣವಾಗಿತ್ತು. ಈ ಕಾರಣದಿಂದ ಲಂಬಾಣಿಗಳು ತಮ್ಮ ಸಾಂಪ್ರದಾಯಿಕ, ಧಾರ್ಮಿಕ ನಂಬಿಕೆಗಳ ಆಚರಣೆಗಳಿಗೆ ಬಲವಾಗಿ ಅಂಟಿಕೊಂಡು ಮುಂದುವರೆಸುತ್ತಿದ್ದರು.

ಹಿರಿಯರಿಗೆ ಗೌರವ ಸಲ್ಲಿಸುವ ಅಥವಾ ನೀಡುವ ಬೆಂಬಲವಾದ ಸಾಂಪ್ರದಾಯಿಕ ನಡವಳಿಕೆಯನ್ನು ನಾಯಕ ಮತ್ತು ಅವನ ಮಂಡಳಿಯು ನಿಯಂತ್ರಿಸುತ್ತಿತ್ತು. ಅಲ್ಲದೆ ಈ ಸಂಬಂಧವನ್ನು ಸಮುದಾಯದ ಒಳಗೆ ಬಿಗಿಗೊಳಿಸಿ ಸಮುದಾಯದಲ್ಲಿ ಸಮಗ್ರತೆಯನ್ನು ಸಾಧಿಸಿದ್ದರು. ಸಾಂಪ್ರದಾಯಿಕ ಪದ್ಧತಿಗಳನ್ನು ಅನುಸರಿಸದೆ ಇರುವವರು ಬಹಳ ಕಡಿಮೆಯಿದ್ದರೂ ಅವರನ್ನು ಸಾಮಾಜಿಕ ನೀತಿ-ನಿಯಮಗಳಿಂದ ದಂಡಿಸಿ ಸಂಪ್ರದಾಯಗಳನ್ನು ಮುರಿಯದಂತೆ ಅಥವಾ ಅನುಸರಿಸುವಂತೆ ಮಾಡುತ್ತಿದ್ದರು. ಇವುಗಳನ್ನು ಪ್ರತಿಭಟಿಸಿದವರನ್ನು ಜಾತಿಯಿಂದ ಹೊರಹಾಕಲಾಗುತ್ತಿತ್ತು. ಅಂತವರನ್ನು ಈ ಒಂದೇ ದೃಷ್ಟಿಯಿಂದ ಮುಚ್ಚು ಮರೆಯಿಲ್ಲದೆ ಒಂದು ಕೆಳಜಾತಿಗೆ ಹೋಲಿಸುತ್ತಿದ್ದರು ಅಥವಾ ಸೇರಿಸುತ್ತಿದ್ದರು. ಸಮುದಾಯದ ನೀತಿ, ಆಚರಣೆಗಳು, ಮಾಟ-ಮಂತ್ರ, ಇತ್ಯಾದಿಗಳನ್ನು ಮುರಿದ ಕೆಲವರಿಗೆ ಸಮುದಾಯದ ನಾಯಕ ಮತ್ತು ಮಂಡಳಿ ವಿಧಿಸಿದ ದಂಡಕ್ಕೆ ಹೊಣೆಯಾಗಬೇಕಿತ್ತು ( ನೋಡಿ ಅಧ್ಯಾಯ -೩.೨).

೧೮೫೦ರ ಸುಮಾರಿಗೆ ಸಾಂಪ್ರದಾಯಿಕ  ಆರ್ಥಿಕ ಮೂಲವಾಗಿದ್ದ ಸರಕು-ಸಾಗಾಣಿಕೆಯು ನಿಂತು ಹೋಗುವ ಪ್ರವೃತ್ತಿ ಪ್ರಾರಂಭವಾಯಿತು. ಸಾಂಪ್ರದಾಯಿಕ ಜೀವನದ ಒಂದೇ ವೃತ್ತಿಯನ್ನು ಕಳೆದುಕೊಂಡಾಗ ಆ ವೃತ್ತಿಗೆ ಸಮಾನವಾದ ಮತ್ತು ತೃಪ್ತಿಕರವಾದ ವೃತ್ತಿ ಸಿಗದೆ ಅವರು ತೀವ್ರವಾದ ಬಡತನಕ್ಕೆ ಒಳಗಾದರು. ಇದು ಅವರನ್ನು ಆಗಾಗ ದರೋಡೆಗಳು, ನಿಷಿದ್ಧ ಮದ್ಯ ತಯಾರಿಕೆ, ವೇಶ್ಯಾವೃತ್ತಿ, ಸಂಶಯಾಸ್ಪದವಾದ ಇತರ ದಾರಿಗಳನ್ನು ಅಳವಡಿಸಿಕೊಂಡು ಅವುಗಳ ಮೂಲಕ ಜೀವನ ನಡೆಸಬೇಕಾದಂಥ ಪರಿಸ್ಥಿತಿಗಳಲ್ಲಿ ಸಿಲುಕಿಸಿತು. ಲಂಬಾಣಿಗಳು ಅಲೆಮಾರಿ ದಿನಗಳಲ್ಲಿ ಉತ್ತಮ ಸಂಘಟನೆಯಿಂದ ಸ್ಪರ್ಧಾತ್ಮಕ ಮತ್ತು ಕಷ್ಟಪಟ್ಟು ಕೆಲಸಮಾಡುವ ಮನೋಭಾವದ ಅಲೆಮಾರಿಗಳಾಗಿದ್ದರು. ಒಂದೇ ಸ್ಥಳದಲ್ಲಿ ನೆಲೆಸಿದ ನಂತರ ಅವರು ಇಂತಹ ಕೆಲವು ಗುಣಲಕ್ಷಣಗಳನ್ನು ಕಳೆದುಕೊಂಡರು. ಇದರ ಪರಿಣಾಮವಾಗಿ ಅವರ ದೈಹಿಕ ಶಕ್ತಿಯು ಕೂಡ ಕುಂದಿತ್ತು. ಈ ಬದಲಾವಣೆಗಳು ಅವರ ಸಾಮಾಜಿಕ ವ್ಯವಸ್ಥೆಗಳಲ್ಲಿ ವಿಘಟನೆ ಮತ್ತು ಈ ಜನರ ಸ್ಪರ್ಧಾತ್ಮಕ ಮನೋಭಾವನೆಯನ್ನು ನಿಷ್ಫಲಗೊಳಿಸಿತು. ಒಂದು ಕಾಲಕ್ಕೆ ಉತ್ತಮವಾಗಿದ್ದ ಸಮುದಾಯದ ಜನರ ಸಾಂಪ್ರದಾಯಿಕ ವೃತ್ತಿಯಿಂದ ನೆಲೆನಿಂತು ಕೃಷಿಗಾರಿಕೆ ಆರಂಭಿಸುವವರೆಗಿನ ನಡುವೆ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮೌಲ್ಯಗಳಲ್ಲಿ ಉಂಟಾದ ಸ್ಥಿತ್ಯಂತರಗಳು ಇವರನ್ನು ನಿರುತ್ಸಾಹಗೊಳಿಸಿದವು.

ಈ ಎಲ್ಲಾ ಪ್ರಕ್ರಿಯೆಗಳು ಆರಂಭವಾಗಿದ್ದು ೧೯ನೇ ಶತಮಾನದ ಮೊದಲನೆಯ ಭಾಗದಲ್ಲಿ. ಅನಂತರ ಅವರು ಹೊಸ ಆರ್ಥಿಕ ಕಸುಬುಗಳೊಡನೆ ಹೊಂದಾಣಿಕೆ ಮಾಡಿಕೊಂಡರು. ಅವುಗಳೆಂದರೆ ಕೃಷಿಗಾರಿಕೆ, ಕೂಲಿಕೆಲಸ ಮತ್ತು ಬಹು ಕಡಿಮೆ ಸಂಖ್ಯೆಯಲ್ಲಿ ಸರ್ಕಾರಿ ಸೇವೆಗಳಲ್ಲಿ ಪ್ರವೇಶ. ಈ ಬದಲಾವಣೆಯ ಪರಿಣಾಮದಿಂದ ಲಂಬಾಣಿಗಳು ಕೊನೆಗೆ ರೈತೀಕರಣ ಪ್ರಕ್ರಿಯೆಗೆ ಒಳಪಡುವ ಮೂಲಕ ಒಂದು ಜಾತಿಯಾಗಿ ರೂಪ ಪಡೆದುಕೊಂಡರು. ಇಂತಹ ಬದಲಾವಣೆಗಳು ವಿಭಿನ್ನ ಮಟ್ಟದಲ್ಲಿ ಸಮುದಾಯದ ಪುನರ್‌ಸಂಘಟನೆಗೊಳ್ಳುವ ಪ್ರಕ್ರಿಯೆಯಂತೆ ಕಂಡುಬರುತ್ತವೆ. ಕೆಲವು ಇಂದಿನ ಸಾಂಸ್ಕೃತಿಕ ರಚನೆ ಮತ್ತು ಸಂಘಟನೆಯ ತತ್ವಗಳನ್ನು, ಇನ್ನೂ ಕೆಲವು ಹಿಂದಿನ ಮೌಲ್ಯಗಳು ಮತ್ತು ಸಂಘಟನಾತತ್ವಗಳನ್ನು ಅವರು ಇಂದಿಗೂ ಉಳಿಸಿಕೊಂಡಿದ್ದಾರೆ.

ಒಂದೇ ಸ್ಥಳದಲ್ಲಿ ನೆಲೆನಿಂತು ರೈತಾಪಿ ಆರ್ಥಿಕತೆಯ ಕಡೆಗೆ ಬದಲಾವಣೆ ಆರಂಭ, ವೈಯಕ್ತಿಕ ಮತ್ತು ಕುಟುಂಬದ ಆಸ್ತಿಯ ಪ್ರಜ್ಞೆ, ಹೊರಗಿನ ಪ್ರಪಂಚದ ಸಂಪರ್ಕದಲ್ಲಿ ಹೆಚ್ಚಳ ಮುಂತಾದ ಪ್ರಕ್ರಿಯೆಗಳಿಂದ ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣಗಳು ಹಿಂದಿನ ಸಾಮರ್ಥ್ಯವನ್ನು ಕಳೆದುಕೊಂಡಿತ್ತು. ಸರಕಾರಿ ಶಾಲೆಗಳ ಸ್ಥಾಪನೆ ಲಂಬಾಣೇತರ ಶಿಕ್ಷಕರಿಂದ ಔಪಚಾರಿಕ ಶಿಕ್ಷಣವನ್ನು ನಿರ್ವಹಿಸಿದ್ದು, ಅಲ್ಲದೇ ಲಂಬಾಣಿಗಳ ಸಂಸ್ಕೃತಿ ಮತ್ತು ಅವರು ಎದುರಿಸುತ್ತಿರುವ ಸಮಸ್ಯೆ ಕುರಿತ ಪಠ್ಯಕ್ರಮ ಇಲ್ಲದಿರುವ ಶಿಕ್ಷಣ ಪ್ರಾರಂಭಿಸಲಾಯಿತು. ಕೆಲವು ಕೂಲಿ ಕೆಲಸಗಾರರು, ಆಧುನಿಕ ಶಿಕ್ಷಣ ಪಡೆದವರು ಸರಕಾರಿ ನೌಕರಿಯಲ್ಲಿದ್ದವರು ತಾಂಡಗಳನ್ನು ಬಿಡಲು ಪ್ರಾರಂಭಿಸಿದರು. ಅವರು ಜಾತಿ ಪಂಚಾಯಿತಿಯ ನಾಯಕನ ಪ್ರಾಬಲ್ಯದಿಂದ ಮತ್ತು ಸಮುದಾಯದ ಧಾರ್ಮಿಕ ನಾಯಕರುಗಳಿಂದ ಸ್ವತಂತ್ರರಾದರು. ಕೃಷಿ ಸಾಗುವಳಿ ಮತ್ತು ಕೃಷಿಕೂಲಿಗಳನ್ನು ಅವಲಂಬಿಸಿ ತಾಂಡಗಳಲ್ಲಿಯೇ ಉಳಿದುಕೊಂಡವರು ಸ್ಥಳೀಯ ಸಮುದಾಯದ ಅಭಿಮತದಿಂದ ಅದರ ಕಾರ್ಯಕ್ರಮಗಳಿಗೆ ಮತ್ತು ಸಾಂಪ್ರದಾಯಿಕ ನೀತಿಗಳನ್ನು ಮುರಿದು ಸ್ವತಂತ್ರವಾಗಿ, ಅವುಗಳಿಗೆ ಬೆಂಬಲವಾಗಿ ನಡೆದುಕೊಳ್ಳದೇ ಇದ್ದುದರಿಂದ ಪಂಚಾಯಿತಿಗಳ ಅಧಿಕಾರ ಕ್ಷೀಣಿಸತೊಡಗಿತು. ನಾಯಕನ ಪ್ರಬಲವಾದ ಸಾಂಪ್ರದಾಯಿಕ ಸಾಮಾಜಿಕ ಮತ್ತು ಆರ್ಥಿಕ ತೀರ್ಪುಗಳು ಕೂಡ ಕ್ಷೀಣಿಸಿದವು.

ಲಂಬಾಣಿಗಳ ಸಾಂಪ್ರದಾಯಿಕ, ಸಾಮಾಜಿಕ ನಿಯಂತ್ರಣಗಳ ವಿಷಯಗಳು ೧೯೩೦ರ ಸುಮಾರಿಗೆ ವೈಯಕ್ತಿಕ ಜೀವನದ ಮೇಲೆ ತಮ್ಮ ಹಿಡಿತವನ್ನು ಕಳೆದುಕೊಂಡಿದ್ದವು. ಅಲ್ಲದೇ ಆಮೂಲಾಗ್ರ ಬದಲಾವಣೆಗಳು ಕಣ್ಣಿಗೆ ಕಾಣುವಂತೆ ಉಂಟಾದವು. ಮೂಲ ಆರ್ಥಿಕ ಚಟುವಟಿಕೆಗಳ ಮಾದರಿಯಲ್ಲಾದ ಬದಲಾವಣೆಯು ಪ್ರತಿಬಿಂಬಗಳಿಂದ ನಿಸ್ಸಂಶಯವಾಗಿ ಬದಲಾವಣೆಗಳನ್ನು ತಡೆಯುವ ಶಕ್ತಿ ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣಗಳಿಗೆ ಇಲ್ಲವಾಯಿತು. ಅಂತಹ ಬದಲಾವಣೆಗಳಲ್ಲಿ ಪ್ರಮುಖವಾದುವೆಂದರೆ ಅವಿಭಕ್ತ ಕುಟುಂಬಗಳಲ್ಲಿ ವಿಘಟನೆ ಮತ್ತು ವ್ಯಾಜ್ಯಗಳನ್ನು ಸಾಂಪ್ರದಾಯಿಕ ಪಂಚಾಯಿತಿಗೆ ಬದಲಾಗಿ ಸರ್ಕಾರಿ ನ್ಯಾಯಾಲಯಗಳಲ್ಲಿ ಬಗೆಹರಿಸಿಕೊಳ್ಳುವುದು ಇತ್ಯಾದಿ.

ಲಂಬಾಣಿಗಳ ಸಾಂಪ್ರದಾಯಿಕ ವೃತ್ತಿಯಲ್ಲಿ ಉಂಟಾದ ಮೂಲಭೂತ ಬದಲಾವಣೆಗಳ ಪರಿಣಾಮದಿಂದ ಸಾಮಾಜಿಕ ನಿಯಂತ್ರಣಗಳ ತೀವ್ರತೆ ಕಡಿಮೆಗೊಂಡಿತು. ಬಹುಕಾಲದ ಹಿಂದಿನ ಧಾರ್ಮಿಕತೆಯಲ್ಲಿ ಇತರ ಧಾರ್ಮಿಕ ಗುಣಲಕ್ಷಣಗಳ ಪ್ರಭಾವದಿಂದ ಮಹತ್ವದ ಬದಲಾವಣೆಯಾಗಿದೆ ಎಂದು ತೋಚುವುದಿಲ್ಲ. ಅವೆಂದರೆ ಅವರ ರಹಸ್ಯವಾದ ಧಾರ್ಮಿಕ ನಂಬಿಕೆಯ ಅಭ್ಯಾಸಗಳು, ಗೋತ್ರ ಪದ್ಧತಿ, ಪ್ರತ್ಯೇಕವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆ ಹೊಂದಿವೆ ಎಂಬ ಪ್ರಬಲ ಪ್ರಜ್ಞೆ, ಆಧುನಿಕ ಶಿಕ್ಷಣದ ಬಗ್ಗೆ ಜಿಗುಪ್ಸೆ, ಇವುಗಳು ಬದಲಾದ ಭೌಗೋಳಿಕ ಸಾಮಾಜಿಕ ಪರಿಸರದಲ್ಲಿ ನಿರಂತರವಾಗಿ ಉಳಿದುಕೊಂಡಿವೆ. ಹೀಗೆ ಸರಿಯಲ್ಲವೆಂದು ಕಾಣುವ ಕೆಲವು ವಿಚಿತ್ರ ನಮೂನೆಯ ಸಾಂಸ್ಕೃತಿಕ ತೀರ್ಮಾನದ ಅಂಶಗಳು ಅನಿವಾರ್ಯವಾಗಿ ಉಳಿದುಕೊಂಡಿವೆ. ಅವುಗಳಲ್ಲಿ ಕೆಲವು ದಿಗ್ಭ್ರಮೆಯನ್ನುಂಟುಮಾಡುತ್ತವೆ. ಇಂತಹ ಕೆಲವು ಪರಿಸ್ಥಿತಿಗಳಿಂದ ಶಾಶ್ವತವಾದ ವಿಮೋಚನೆಯನ್ನು ಪಡೆಯಬೇಕಾಗಿದೆ. ಸುತ್ತಮುತ್ತಲಿನ ಸಮುದಾಯಗಳು (ಪಿಗ್ಮಿಸ್ ಜನರು ಕಾಂಗೋ ರಾಜ್ಯದ ಇಟುರಿ ಅರಣ್ಯಗಳಲ್ಲಿ ಮತ್ತು ದಕ್ಷಿಣ ಭಾರತದಲ್ಲಿನ ಮಾರ್‌ವಾರಿಸ್) ಜನಾಂಗೀಯ, (ಅಮೇರಿಕದಲ್ಲಿನ ನೀಗ್ರೋಗಳು) ಭಾಷಿಕ ಮತ್ತು ಜನಾಂಗೀಯ ಅಲ್ಪಸಂಖ್ಯಾತರು (ಭಾರತದಲ್ಲಿರುವ ಬುಡಕಟ್ಟುಗಳು) ಸಂಪೂರ್ಣವಾಗಿ ನುಂಗಿಬಿಡುವ ಇತರ ಸ್ಥಳೀಯ ಪ್ರಬಲ ಸಂಸ್ಕೃತಿಗಳ ನಡುವೆಯೂ ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯುತ ಸಾಮರ್ಥ್ಯ ಹೊಂದಿರುವುದು ಇವುಗಳಿಗೆ ನಿರ್ದಶನವಾಗಿದೆ. ಇಂತಹ ಸನ್ನಿವೇಶದಲ್ಲಿ ಅನೇಕ ಹೊಸ ಕ್ರಮಬದ್ಧ

ವಾದ ವರ್ಗೀಕರಣದ ಮಾದರಿಗಳು ಮತ್ತು ಪ್ರಾಯೋಗಿಕ ಕಾರ್ಯರೂಪದ ಪ್ರಶ್ನೆಗಳಿಂದ ನಡವಳಿಕೆಗಳ ಪ್ರಕ್ರಿಯೆಯನ್ನು ಅಗತ್ಯವಾಗಿ ಅಧ್ಯಯನ ಮಾಡಿದಾಗ ಬದಲಾವಣೆಯ ಪ್ರಕ್ರಿಯೆಯಲ್ಲಿ ಅಡಕವಾಗಿರುವ ಅಂಶಗಳನ್ನು ಗ್ರಹಿಸಬಹುದು. ಬದಲಾವಣೆಯ ಅಧ್ಯಯನಗಳನ್ನು ಪರಿಣಾಮಕಾರಿಯಾಗಿ ಕೈಗೊಳ್ಳಬೇಕಾದರೆ ಅದರ ರಚನೆ ಮತ್ತು ಕಾರ್ಯಗಳನ್ನು ಪಾರದರ್ಶಕ ಚೌಕಟ್ಟಿನಲ್ಲಿ ವಿಶ್ಲೇಷಿಸಿ, ಉಲ್ಲೇಖ ಮಾಡಿದಾಗ ಮಾತ್ರ ಸಾಧ್ಯವಾಗುತ್ತದೆ.

ಲಂಬಾಣಿಗಳಲ್ಲಿ ಉಂಟಾಗಿರುವ ಕೆಲವು ಬದಲಾವಣೆಯ ಪ್ರಕ್ರಿಯೆಗಳನ್ನು ಸಮಗ್ರವಾಗಿ ಮತ್ತೊಂದು ಬದಲಾವಣೆಗೆ ಸಂಬಂಧಿಸಿದಂತೆ ಪರಿಕಲ್ಪನೆಯ ಚೌಕಟ್ಟಿನ ಒಳಗೆ ಇಟ್ಟು ಕೂಡ ನೋಡಬಹುದು. ಇದನ್ನು ಡಾಲ್ಬನ್ ಅವರು (೧೯೭೧ : ೨೦೧-೨೦೫) ಈ ಕೆಳಕಂಡಂತೆ ಸೂಚಿಸಿದ್ದಾರೆ: ೧. ಸಾಗಾಣಿಕೆ ಕೆಲಸವು ಉನ್ನತಿಯಲ್ಲಿದ್ದಾಗ ಅಭಿವೃದ್ಧಿ ಇಲ್ಲದೇ ನಗದು ಆದಾಯದಲ್ಲಿ ಬೆಳವಣಿಗೆ, ೨. ಉನ್ನತ ಸ್ಥಿತಿಯಲ್ಲಿದ್ದ ಸಾಂಪ್ರದಾಯಿಕ ವೃತ್ತಿಯ ಅವನತಿಯಿಂದ ಆದಾಯ ಕಡಿಮೆಯಾದ ಸಮಯದಲ್ಲಿ ಲಂಬಾಣಿಗಳು ಗುಂಪು ಗುಂಪಾಗಿ ದರೋಡೆ ನಡೆಸುವುದು, ಕಳ್ಳ ಭಟ್ಟಿ ತಯಾರಿಸುವುದು, ಮಾರಾಟ ಮಾಡುವುದು, ವೇಶ್ಯಾವೃತ್ತಿ ಮತ್ತು ನಾಯಕರುಗಳ ಸಾಂಪ್ರದಾಯಿಕ ಅಧಿಕಾರ ಕ್ಷೀಣಿಸತೊಡಗಿತು; ೩. ಲಂಬಾಣಿಗಳು ಇತ್ತೀಚೆಗೆ ನಿಧಾನವಾಗಿ ಕೃಷಿಯನ್ನು ಅಳವಡಿಸಿಕೊಂಡು ರೈತಾಪಿ ಜೀವನ ಪ್ರಾರಂಭಿಸಿದಾಗ ಸ್ಥಳೀಯವಾಗಿ ಮುಂದುವರೆದ ಸಮುದಾಯಗಳ ಜೊತೆ ಹೆಚ್ಚಳವಾದ ರಾಜಕೀಯ ಸಂಪರ್ಕ, ಸರ್ಕಾರಿ ನಿಯೋಗಗಳು, ಸಾಮಾಜಿಕ ಸುಧಾರಕರುಗಳಿಂದ ಉಂಟಾದ 'ಸಾಮಾಜಿಕ-ಆರ್ಥಿಕ ಅಭಿವೃದ್ಧಿ, ಈ ಮೂರು ಪ್ರಕ್ರಿಯೆಗಳು ಸಹಜವಾಗಿ ಒಂದಕ್ಕೊಂದು ಪ್ರತ್ಯೇಕವಾಗಿ ಮತ್ತು ಒಂದಕ್ಕೊಂದು ಆಡ್ನೆಯಿಸುವ ಮೂಲಕ, ವಿಶೇಷ ಸ್ಥಿತ್ಯಂತರ ಒಂದು ಹಂತದಿಂದ ಮುಂದುವರೆದು ಮತ್ತೊಂದು ಹಂತದ ಬದಲಾವಣೆಯ ಸಂದರ್ಭದಲ್ಲಿ ವಿಶೇಷವಾಗಿತ್ತು. ಉದಾಹರಣೆಗೆ - ಸಾಂಪ್ರದಾಯಿಕ ಸರಕು ಸಾಗಾಣಿಕೆಯ ಕೆಲಸವು ನಿಂತುಹೋದ ನಂತರವು ನಾಯಕ ಮತ್ತು ಅವನ ಮಂಡಳಿಯು ಪ್ರಬಲವಾದ ಹಿಡಿತವನ್ನು ಹೊಂದಿದ್ದು ಲಂಬಾಣಿಗಳು ವಿಂಗಡನೆಗೊಂಡು ಡಕಾಯಿತಿ ನಿಷೇಧಿತ ಸಾರಾಯಿ ಭಟ್ಟಿ ಇಳಿಸುವುದು ಮತ್ತು ಮಾರಾಟ, ವೇಶ್ಯಾವಾಟಿಕೆಯನ್ನು ನಡೆಸುತ್ತಿದ್ದಾರೆ. ಸಾಮಾಜಿಕ-ಆರ್ಥಿಕ ಅಭಿವೃದ್ಧಿಯ ಕೆಲವು ಘಟನೆಗಳು ಶಾಶ್ವತವಾಗಿ ಮುಂದಿನ ಹಂತದವರೆಗೆ ಮುಂದುವರೆದು ಕೊಂಡು ಬಂದಿವೆ.

ಆರಂಭಿಕ ರೈತಾಪಿ ಜೀವನ ಶೈಲಿಯನ್ನು ಸಮೀಪದಿಂದ ಅಧ್ಯಯನಕ್ಕೆ ಒಳಪಡಿಸಿದಾಗ ನಾವು ಲಂಬಾಣಿಗಳ ಪರಿಸ್ಥಿತಿಯನ್ನು ಹೆಚ್ಚು ರೈತಾಪಿ ಗುಣಲಕ್ಷಣಗಳು ನಿರ್ಣಯಿಸಿರುವ ಅಭಿವೃದ್ಧಿ ಹೊಂದಿದ ಹಂತಗಳ ದೃಷ್ಟಿಕೋನದಿಂದ ಅರ್ಥಮಾಡಿಕೊಳ್ಳಬಹುದು. ಇದಕ್ಕೆ ಸಂಬಂಧಿಸಿದ ಸಮಸ್ಯೆಯಿರುವುದು ಆಫ್ರಿಕಾದ ಸಾಗುವಳಿದಾರರನ್ನು ರೈತರು ಎಂದು ಕರೆದದ್ದು ಸುಳ್ಳು, ಅವರು ರೈತಾಪಿ ಜನರ ಮೂಲಕವಾಗಿ (ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ) ರೈತಾಪಿ ಜನರಾಗುತ್ತಾರೆ (೧೯೬೧;೧೦೫-೧೧೦). ಈ ಮೂರು ವಿಶ್ಲೇಷಣಾತ್ಮಕ ಅಂಶಗಳು ಲಂಬಾಣಿಗಳ ರೈತಾಪಿ ಜೀವನ ಶೈಲಿಯು ವಿಕಾಸಗೊಂಡಿರುವುದನ್ನು ಅರ್ಥಮಾಡಿಕೊಳ್ಳಲು ಅನ್ವಯಿಸಬಹುದು. ಇದರಿಂದ ಲಂಬಾಣಿಗಳಲ್ಲಿ ರೈತಾಪೀಕರಣದ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಸರಳವಾಗುತ್ತದೆ.

ಲಂಬಾಣಿ ಆರ್ಥಿಕತೆಯು ಹಿಂದೆ ಸರಕು-ಸಾಗಾಣಿಕೆದಾರರಾಗಿದ್ದ ಸಂದರ್ಭದಲ್ಲಿ ಸ್ವಲ್ಪಮಟ್ಟಿಗೆ ರೈತಾಪಿ ಆರ್ಥಿಕತೆಯನ್ನು ಗರ್ಭೀಕರಿಸಿಕೊಂಡಿತ್ತು. ಅಷ್ಟೇನೂ ಅಭಿವೃದ್ಧಿ ಹೊಂದದ ರೈತಾಪಿ ರಾಜಕೀಯ ಏಕಸ್ವಾಮ್ಯವನ್ನು ಹೊಂದಿದ್ದರು. ಸ್ಥಳೀಯ, ರಾಜ್ಯ-ಪ್ರಭುತ್ವವು ಇವರ ನಿರ್ಬಂಧಿತ ಜೀವನದಲ್ಲಿ ಹೆಚ್ಚಾಗಿ ತಲೆಹಾಕುತ್ತಿರಲಿಲ್ಲ. ಆದರೆ ಸ್ಥಳೀಯ ಪುರಾತನ ಸಂಸ್ಕೃತಿಯ ಜೊತೆಗೆ ಲಂಬಾಣಿಗಳು ಆರ್ಥಿಕ ಮತ್ತು ರಾಜಕೀಯ ಸಂಪರ್ಕವನ್ನು ಮುಂದುವರಿದ ಜಾತಿ ಗುಂಪುಗಳು ಹಾಗೂ ಆಡಳಿತಗಾರರ ಜೊತೆ ಸಂಪರ್ಕವನ್ನು ಹೊಂದಿದ್ದರು. ಲಂಬಾಣಿಗಳು ಹಿಂದೂ ಮೇಲ್‌ಜಾತಿಗಳ ಸಂಬಂಧದಿಂದ ಉಂಟಾಗಬಹುದಾದ ಪ್ರಭಾವದಿಂದ ಸ್ವಲ್ಪಮಟ್ಟಿನ ಪ್ರತ್ಯೇಕತೆಯನ್ನು ಕಾಯ್ದುಕೊಂಡು ತಮ್ಮದೇ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿಕೊಂಡರು. ತಮ್ಮ ಸಾಂಪ್ರದಾಯಿಕ ಸಾಗಾಣಿಕೆಯ ಕೆಲಸವನ್ನು ಕಳೆದುಕೊಂಡ ನಂತರವೂ ಪುರಾತನ ಆರ್ಥಿಕ ಕುರುಹು ಮತ್ತು ಗುಣಲಕ್ಷಣಗಳ (ಬೇಟೆ, ಅರಣ್ಯಗಳಿಂದ ಆಹಾರ ಸಂಗ್ರಹಣೆ, ದರೋಡೆ ನಡೆಸುವುದು, ಕಾನೂನು ಮತ್ತು ಸುವ್ಯವಸ್ಥೆಯಲ್ಲಿ ಸಮಸ್ಯೆಗಳನ್ನು ಹುಟ್ಟು ಹಾಕುವುದು, ಇತ್ಯಾದಿ) ಪುರಾತನ ಧಾರ್ಮಿಕ ಶಕ್ತಿಗಳ ಬಗ್ಗೆ ನಂಬಿಕೆ ಮತ್ತು ಆಚರಣೆಗಳನ್ನು, ಜೀವನದ ಮುಂದಿನ ಹಂತದವರೆಗೆ ಮುಂದುವರಿಸುತ್ತಿದ್ದರು. ಆದರೆ ಲಂಬಾಣಿಗಳು ಒಂದೇ ಸ್ಥಳದಲ್ಲಿ ನೆಲೆನಿಂತ ನಂತರ, ವಿಶೇಷವಾಗಿ, ಕೃಷಿಕೂಲಿ ಮತ್ತು ಕೃಷಿ ಸಾಗುವಳಿಯನ್ನು ಅಳವಡಿಸಿಕೊಂಡನಂತರ, ರೈತಾಪಿ ಗುಣಲಕ್ಷಣ ಹೊಂದಿದ ಆರ್ಥಿಕತೆ, ಸ್ವಲ್ಪಮಟ್ಟಿನ ಏಕಸ್ವಾಮ್ಯದ ರಾಜಕೀಯ ಪ್ರತಿನಿಧಿತ್ವವು ಕ್ರಮಾನುಗತಿಯ ಪರಿಣಾಮವನ್ನು ಮುಂದುವರಿದ ಹಂತದ ಸಾಮಾಜಿಕ-ಸಾಂಸ್ಕೃತಿಕ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಉಂಟುಮಾಡಿತು. ಲಂಬಾಣಿಗಳಲ್ಲಿ ಕೆಲವರು ಇಂದು ಕೃಷಿಯನ್ನು ಅವಲಂಬಿಸಿ ಸಾಗುವಳಿ ಮಾಡುತ್ತಿದ್ದಾರೆ. ಹೆಚ್ಚಿನ ಜನರು ಕೃಷಿ ಸಮಾಜದ ಮೌಲ್ಯಗಳು ಮತ್ತು ನಡವಳಿಕೆಯ ಪ್ರವೃತ್ತಿಗಳನ್ನು ಹೊಂದದೆ ಇರುವವರು ತಮ್ಮ ಸುತ್ತ ಮುತ್ತಲಿನಿಂದ ರೈತಾಪಿ ಸಂಸ್ಕೃತಿಯನ್ನು ಹೆಚ್ಚು ಕ್ರಿಯಾಶೀಲತೆಯಿಂದ ಎರವಲಾಗಿ ಪಡೆದುಕೊಳ್ಳುತ್ತಿದ್ದಾರೆ. ಇದು ಮೊದಲನೆ ಮತ್ತು ಎರಡನೆಯ ಹಂತಗಳಲ್ಲಿ ಕ್ರಮವಾಗಿ ಲಂಬಾಣಿ ಸಂಸ್ಕೃತಿಯು 'ರೈತಾಪಿ' ಸಂಸ್ಕೃತಿಯ ವಿಕಾಸವನ್ನು ಹೊಂದಿತು. ಮೊದಲನೆ ಹಂತದಲ್ಲಿ ಅವರ ಸಾಂಪ್ರದಾಯಿಕ ಆರ್ಥಿಕತೆಯು ರೈತಾಪಿಯಾಗಿ ವಿಕಾಸಗೊಂಡರೆ, ಎರಡನೇ ಹಂತದಲ್ಲಿ ಅವರ ಸಾಂಪ್ರದಾಯಿಕತೆಯು ಉನ್ನತಿಯಿಂದ ಅವನತಿಯನ್ನು ಹೊಂದಿತು. ಯಾವುದೇ ಸಂಸ್ಕೃತಿಯು ಮುಂದುವರಿದ ಹಂತಕ್ಕೆ ವಿಕಾಸಗೊಳ್ಳುವಾಗ ಕೆಲವು ಅಸಮರ್ಥತೆಗಳು ಕಂಡುಬರುತ್ತವೆ. ಆದರೆ ಈಗಾಗಲೇ ವಿಕಾಸ ಹೊಂದ್ದಿದ ಸಾಂಸ್ಕೃತಿಕ ಸಂಘಟನೆಯನ್ನು ಅನುಸರಿಸುವಾಗ ಸಮಸ್ಯೆಗಳು ವಿಸ್ತರಣೆಯಾಗುವ ಮೂಲಕ ಬದಲಾಗುವ ಸನ್ನಿವೇಶವನ್ನು ಕೂಡ ಸಾಂಸ್ಕೃತಿಕ 'ವಿಕಾಸ' ಎಂದು ಕರೆಯಲಾಗುತ್ತದೆ (ಗ್ರಿಟ್ಸ್ ೧೯೭೧).

ಮೇಲಿಂದ ಮೇಲೆ ಸಂಸ್ಕೃತಿಯು ವಿಕಾಸ ಹೊಂದಿದಾಗ ಅನೇಕ ಅಂಶಗಳು ಹೆಚ್ಚಳವಾದವು. ಇದರಿಂದ ಹೆಚ್ಚಿದ ಸಾಂಸ್ಕೃತಿಕ ಸಂಘಟನೆಯು ಇನ್ನೂ ಹೆಚ್ಚು ಮುಂದುವರಿದ ಸಾಂಸ್ಕೃತಿಕ ಅಂಶಗಳನ್ನು ಹೀರಿಕೊಳ್ಳುವ (ಗ್ರಹಿಸಿಕೊಳ್ಳುವ) ಸಾಮರ್ಥ್ಯವನ್ನು ಪುನರ್ ಸ್ಥಾಪಿಸಿ, ಐಕ್ಯತೆಯನ್ನು ಹೊಂದುವ ಪ್ರಕ್ರಿಯೆಯ ಮೂಲಕ ಪಡೆಯಿತು. ಮೂರನೆ ಹಂತದಲ್ಲಿ ಲಂಬಾಣಿಗಳು ಅವರ ಹಿಂದಿನ ಸಂಸ್ಕೃತಿಯು ಪ್ರತ್ಯೇಕ ಐಕ್ಯತೆಗೆ ವಿರೋಧವಾಗಿ ಬರುವ ಸಾಂಸ್ಕೃತಿಕ ಸಂಘಟನೆಯಿಂದ ಅವನತಿ ಹೊಂದಿತು. ಎರಡನೆಯ ಹಂತದ ವಿಸ್ತರಣೆಯನ್ನು ಮುಂದೆ ತಿಳಿಸಿದ್ದೇನೆ.

ಆದಾಗ್ಯೂ ಸಮುದಾಯದ ಸಮಗ್ರತೆಯು ಎಲ್ಲಾ ಭಾಗದಲ್ಲಿ ಒಂದೇ ಎಂದು ಭಾವಿಸುವುದು ಅವಾಸ್ತವಿಕ. ಸ್ಥಳೀಯ ರೈತಾಪಿ ಜನರ, ಕೃಷಿ ಭೂಮಿಯ ದರ್ಜೆ, (ಸಾಗುವಳಿಗೆ ಉತ್ತಮ, ಬಂಜರು, ಇತ್ಯಾದಿ) ಸಾಮಾಜಿಕ, ಆರ್ಥಿಕ, ಅಭಿವೃದ್ಧಿಯಿಂದ ಲಂಬಾಣಿ ಜನರ, ಕೃಷಿ ಭೂಮಿಯ ದರ್ಜೆ... 

ಗುಂಪುಗಳ ಶೈಕ್ಷಣಿಕ ಮಟ್ಟದಲ್ಲಿ ವಿಭಿನ್ನತೆ, ವೃತ್ತಿ, ಆದಾಯ ಮತ್ತು ಸಮಾಜೀಕರಣದ ಮಟ್ಟ ಇವೆಲ್ಲವುಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಸ್ಪಿಂಡ್ಲರ್(೧೯೭೦ : ೨೮೫-೨೮೬) ಅವರು ಅನುಸರಿಸಿರುವಂತೆ ವಿಭಿನ್ನ ವೈಯಕ್ತಿಕ ಹಿನ್ನಲೆಯ ಕುಟುಂಬಗಳು ಮತ್ತು ಗುಂಪುಗಳು ಪ್ರಮುಖವಾಗಿ ಸಾಮಾಜಿಕ-ಆರ್ಥಿಕ ವಿಭಿನ್ನತೆಯ ಮೂಲಗಳಿಂದ, ಅಳವಡಿಸಿಕೊಳ್ಳಬಹುದಾದ ಸಾಂಸ್ಕೃತಿಕ ಮುಂದುವರಿಕೆಯನ್ನು ನೋಡಬಹುದು. ಆರ್ಥಿಕ ವಿಭಿನ್ನತೆಗಳು ನಾನು ವಾದಿಸಿದ (ಉತ್ತಮ, ಮಧ್ಯಮ ಮತ್ತು ಕೆಳಮಟ್ಟ ಆದಾಯದ ಗುಂಪುಗಳ) ಸಹಾಯದಿಂದ ಸಾಂಸ್ಕೃತಿಕ ವರ್ಗವನ್ನಾಗಿ ವಿಸ್ತರಿಸುವ ಮೂಲಕ ಮುಂದುವರಿಕೆಯ ಒಳಗೆ ಸಾಮಾಜೀಕರಣದಿಂದ ಸಂಪೂರ್ಣ ಆಧುನಿಕತೆಯವರೆಗೆ ವಿಸ್ತರಿಸಬಹುದು. ಈ ಹೋಲಿಕೆಯ ಮೂಲಕ ಲಂಬಾಣಿಗಳಲ್ಲಿ ಯಾರು ಹೆಚ್ಚಾಗಿ ಸಾಂಸ್ಕೃತಿಕ ಬದಲಾವಣೆ ಹೊಂದಿದ್ದಾರೆ ಎಂಬುದನ್ನು ಗುರುತಿಸಬಹುದು. ಈ ಮೂಲಕ ಯಾರು ಆರ್ಥಿಕವಾಗಿ ಉತ್ತಮ ಸ್ಥಿತಿ ಸಾಧಿಸಿದ್ದಾರೆ ಅಥವಾ ಇದಕ್ಕೆ ವಿರುದ್ಧವಾದ ಸ್ಥಿತಿಯಲ್ಲಿ ಇದ್ದಾರೆ ಎಂಬುದನ್ನೂ ಸಹ ಗುರುತಿಸಬಹುದು.

ಲಂಬಾಣಿ ಸಮುದಾಯದ ಬಗ್ಗೆ ಮಹಾಪ್ರಬಂಧದಲ್ಲಿ ಪ್ರಸ್ತುತ ಪಡಿಸಿರುವ ಮಾಹಿತಿಯನ್ನು ಉತ್ತರ ಕರ್ನಾಟಕದ ಇತರ ಜಿಲ್ಲೆಗಳು ಮತ್ತು ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಹೋಲಿಕೆ ಮಾಡಿದಾಗ ಲಂಬಾಣಿ ಸಮುದಾಯದ ಒಳಗೆ ಇರುವ ವ್ಯತ್ಯಾಸ ಮತ್ತು ವಿಭಿನ್ನತೆಗಳು ಸ್ಪಷ್ಟವಾಗಿ ತಿಳಿದುಬರುತ್ತವೆ. ಇದು ಆರ್ಥಿಕತೆ, ವೃತ್ತಿ, ಗೋತ್ರ ವ್ಯವಸ್ಥೆಗಳಲ್ಲಿ, ಧರ್ಮ ಮತ್ತು ನಂಬಿಕೆ ವ್ಯವಸ್ಥೆಯಲ್ಲಿ, ಉಡುಪು ತೊಡುವ ಮಾದರಿ, ಮುಂತಾದವುಗಳಲ್ಲಿ ವ್ಯತ್ಯಾಸಗಳು ತಿಳಿದುಬರುತ್ತವೆ. ಆಧುನಿಕ ಶಿಕ್ಷಣ ಪಡೆದುಕೊಳ್ಳುವುದು, ಆಧುನಿಕ ವೃತ್ತಿಗಳು ಮತ್ತು ಸರಕಾರಿ ಸೇವೆಗಳನ್ನು ಪಡೆದುಕೊಳ್ಳುವುದರಲ್ಲಿ ಧಾರವಾಡ, ಬಿಜಾಪುರ, ಗದಗ ಮತ್ತು ಬೆಳಗಾವಿ ಜಿಲ್ಲೆಯ ಲಂಬಾಣಿಗಳು ಬಳ್ಳಾರಿ ಜಿಲ್ಲೆಯ ಲಂಬಾಣಿಗಳಿಗಿಂತ ಮುಂದೆ ಇದ್ದಾರೆ. ಈ ವ್ಯತ್ಯಾಸವನ್ನು ವಿಶ್ಲೇಷಿಸುವಾಗ ಅಥವಾ ಗುರುತಿಸುವಾಗ ಕೇವಲ ಜಿಲ್ಲೆಗಳ ಆರ್ಥಿಕ, ಭೌಗೋಳಿಕ ವ್ಯತ್ಯಾಸವನ್ನು ಮಾತ್ರ ತೆಗೆದುಕೊಳ್ಳದೆ, ಅವರ ಲೋಕದೃಷ್ಟಿಯನ್ನೂ ಕೂಡ ಗುರುತಿಸಲಾಗಿದೆ. ಸಂಕುಚಿತವಾದ ಲೋಕದೃಷ್ಟಿಯಲ್ಲಿ ಸಣ್ಣ ಸಣ್ಣ ಗುಂಪುಗಳಾದ ನಾಗಲಾಪುರ ಮತ್ತು ಮರಿಯಮ್ಮನಹಳ್ಳಿ ತಾಂಡಗಳು ಪ್ರಬಲವಾದ ಸಾಮುದಾಯಿಕ ಪ್ರಜ್ಞೆಯು ಅವರ ವೃತ್ತಿ ಸಂಚರಣೆಗೆ ಮಾರಕವಾಗಿ ಸ್ಥಳ ಸಂಬಂಧದ ಕಾರ್ಯವಾಗಿ ಕೆಲಸ ಮಾಡುತ್ತಿವೆ. ಕೆಲವೇ ಕೆಲವರು ಉನ್ನತ ಶಿಕ್ಷಣ, ಆಧುನಿಕ ವೃತ್ತಿ ಮತ್ತು ಉನ್ನತ ರಾಜಕೀಯ ಸ್ಥಾನಗಳನ್ನು ಏರಿರುವವರು ಹೆಚ್ಚಾಗಿ ಧಾರವಾಡ, ಬಿಜಾಪುರ, ಗದಗ, ಬೆಳಗಾವಿ ಜಿಲ್ಲೆಗಳಿಗೆ ಸೇರಿದ್ದಾರೆ.

ಇಂತಹ ವ್ಯತ್ಯಾಸಗಳನ್ನು ಒಂದೇ ಸಮಾಜದ ಒಳಗೆ, ಒಂದೇ ಮಾದರಿಯ ಆರ್ಥಿಕತೆಯಲ್ಲಿ ಮತ್ತು ಒಂದೇ ಲೋಕದೃಷ್ಟಿಯನ್ನು ಹೊಂದಿರುವಲ್ಲಿಯೂ ಕೂಡ ಊಹಿಸಬಹುದಾಗಿದೆ. ಇದು ವಿಭಿನ್ನವಾದ ಸಾಮಾಜಿಕ ಬದಲಾವಣೆಗೆ ಅವಕಾಶವನ್ನು ಸಹ ನೀಡಬಹುದು. ಈ ವ್ಯತ್ಯಾಸಗಳು ಸಾರ್ವತ್ರಿಕ ಮೌಲ್ಯ ಹೊಂದಿದ ಆರ್ಥಿಕತೆಯ ಉದ್ದೇಶಗಳನ್ನು ನಿರಾಕರಿಸುತ್ತವೆ. ಇದಲ್ಲದೆ ಒಂದೇ ತಾಂಡದ ಒಳಗೆ ಇರುವ ಗುಂಪುಗಳ ನಡುವೆಯು ವ್ಯತ್ಯಾಸ ಹಾಗೂ ವಿಭಿನ್ನತೆಗಳು ಇವೆ. ಅವೆಂದರೆ ನಿಶಿದ್ಧ ಸಂದರ್ಭಗಳಲ್ಲಿ ಮದ್ಯ ಸೇವನೆ ಮತ್ತು ಮಾರಾಟ ಮಾಡುವವರು, ಅನೈತಿಕ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿರುವವರು ಒಂದು ಕಡೆಯಾದರೆ, ಮತ್ತೊಂದು ಕಡೆ ಕೃಷಿಯನ್ನು ಅವಲಂಬಿಸಿ ಸಾಗುವಳಿಯನ್ನು ಹಾಗೂ ಸ್ಥಳೀಯ ರೈತಾಪಿ ಸಂಸ್ಕೃತಿಯ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತಿರುವವರ ಸಂಖ್ಯೆ ಹೆಚ್ಚಳವಾಗುತ್ತಿರುವುದು ಮತ್ತೊಂದು ಕಡೆ (ಈ ಭಿನ್ನತೆಯನ್ನು ಅಧ್ಯಯನಕ್ಕೆ ಒಳಪಡಿಸಿದ ಎರಡು ತಾಂಡಗಳಲ್ಲಿ ಗುರುತಿಸಬಹುದು). ಈ ರೀತಿ ಸಾಮಾಜಿಕ ನಡವಳಿಕೆಗಳಲ್ಲಿನ ವ್ಯತ್ಯಾಸ ಮತ್ತು ವಿಭಿನ್ನತೆಯು ಇನ್ನೂ ಹಲವಾರು ವರ್ಷಗಳವರೆಗೆ

ಮುಂದುವರಿಯುವ ಮೂಲಕ ಸಾಮಾಜಿಕ ವಿಭಿನ್ನ ಸ್ಥಿತಿಯು ತಮ್ಮದೆ ಆದಂಥ ವಿಭಿನ್ನವಾದ ಪರಿಣಾಮವನ್ನು ತಾಂಡಗಳ ನಡುವೆ ಮತ್ತು ವೈಯಕ್ತಿಕ ನೆಲೆಯಲ್ಲಿ ಹುಟ್ಟು ಹಾಕುವುದು. ಅದು ಅಲ್ಲದೆ ಇಂದು ಒಂದೇ ಬಗೆಯ ಸಾಮಾಜಿಕ ಗುಂಪುಗಳ ನಡುವೆಯು ಬಿರುಕುಗಳನ್ನು ಹುಟ್ಟು ಹಾಕುತ್ತಿದೆ. ಈ ಮೇಲಿನ ಸೂಕ್ಷ್ಮ ವಿಭಿನ್ನತೆಗಳನ್ನು ಅಧ್ಯಯನಕ್ಕೆ ಒಳಪಡಿಸಿದ ಎರಡು ತಾಂಡಗಳ ನಡುವೆ ತುಲನಾತ್ಮಕವಾಗಿ ವಿಶ್ಲೇಷಣೆ ಮಾಡಿದಾಗ ವಿಭಿನ್ನತೆಯು ತಿಳಿದುಬರುತ್ತದೆ. ಮರಿಯಮ್ಮನಹಳ್ಳಿ ತಾಂಡವು ಸ್ವಲ್ಪ ಮಟ್ಟಿನ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದರೆ, ನಾಗಲಾಪುರ ತಾಂಡವು ಹೆಚ್ಚಿನ ರೈತಾಪೀಕರಣ ಪ್ರಕ್ರಿಯೆಗೆ ಒಳಪಟ್ಟಿದ್ದರೂ, ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸುವಲ್ಲಿ ಹಿಂದುಳಿದಿದೆ. ಇದರ ಜೊತೆಗೆ ಆಧುನಿಕ ಶಿಕ್ಷಣದ ಬಗ್ಗೆ ಕಡಿಮೆ ಆಸಕ್ತಿ, ಆರ್ಥಿಕ ಮತ್ತು ಸಾಮಾಜಿಕ ವಿಭಿನ್ನತೆಗಳು, ಅತ್ಯಂತ ಕಡಿಮೆ ಹೊರಗಿನ ಸಂಪರ್ಕ ಇತ್ಯಾದಿಗಳನ್ನು ನಾಗಲಾಪುರ ತಾಂಡದ ಲಂಬಾಣಿಗಳು ಹೊಂದಿದ್ದಾರೆ. ಇದಕ್ಕೆ ವಿರುದ್ಧವಾದ ಆರ್ಥಿಕ ಮತ್ತು ಸಾಮಾಜಿಕ ಸನ್ನಿವೇಶವನ್ನು ಮರಿಯಮ್ಮನಹಳ್ಳಿ ತಾಂಡದಲ್ಲಿ ನಾವು ಗುರುತಿಸಬಹುದು. ನಾಗಲಾಪುರ ತಾಂಡವು ಹತ್ತಿರದ ಪಟ್ಟಣದ ಜೊತೆ ಅತ್ಯಂತ ಕಡಿಮೆ ಮಟ್ಟದ ಸಂಪರ್ಕವನ್ನು ಹೊಂದ್ದಿದರೂ ಒಂದಕ್ಕಿಂತ ಹೆಚ್ಚಿನ ಆರ್ಥಿಕ ಚಟುವಟಿಕೆಗಳನ್ನು ಅವಲಂಬಿಸಿರುವ ಕುಟುಂಬಗಳು ಸ್ವಲ್ಪ ಹೆಚ್ಚಿನ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಳನ್ನು ಸಾಧಿಸಿವೆ. ಕೃಷಿಯೇತರ ವೃತ್ತಿಗಳಲ್ಲಿ ತೊಡಗಿರುವವರಿಗೂ ಕೃಷಿಯು ಅತ್ಯಂತ ಮೌಲ್ಯಯುತವಾದ ವೃತ್ತಿ. ಈ ವೃತ್ತಿಯ ಬಗ್ಗೆ ಎರಡು ತಾಂಡಗಳಲ್ಲಿರುವ ಲಂಬಾಣಿಗಳು ಒಂದೇ ರೀತಿಯ ಆದರ್ಶವನ್ನು ಹೊಂದಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಇಂದು ಕೆಲವರು ಉತ್ತಮ ಕೃಷಿ ಸಾಗುವಳಿದಾರರಾಗಿದ್ದಾರೆ. ಇಂದು ಈ ಪ್ರವೃತ್ತಿಯು ಲಂಬಾಣಿಗಳಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆಯನ್ನು ಉಂಟುಮಾಡಿದೆ. ಇದನ್ನು ಈ ಕೆಳಗಿನ ಅಂಶಗಳಿಂದ ಸಾಬೀತು ಪಡಿಸಬಹುದು.

ಸರಕಾರಿ ವೃತ್ತಿಗಳಲ್ಲಿ ಮತ್ತು ಆಧುನಿಕ ವೃತ್ತಿಗಳಲ್ಲಿ ತೊಡಗಿಸುವ ಹಿನ್ನೆಲೆಯಲ್ಲಿ, ಕೂಲಿ ದುಡಿಮೆ ಮತ್ತು ಕೃಷಿ ಇವೆರಡೂ ಕೂಡ ಇಂದು ಹೆಚ್ಚಿನ ಲಂಬಾಣಿಗಳಿಗೆ ಬೆಂಬಲಯುತವಾಗಿದೆ. ಕೃಷಿ ಚಟುವಟಿಕೆಗಳು ಒಂದು ಆಕೃತಿಯ ಸುತ್ತಲೂ ಮತ್ತೊಂದು ಆಕೃತಿಯನ್ನು ರೂಪಿಸುವ ಕೃಷಿ ಸೌಲಭ್ಯಗಳಾದ, ನೀರಾವರಿ ಸೌಲಭ್ಯಗಳು ಭೂಮಿಯನ್ನು ದೊರಕಿಸಿಕೊಳ್ಳಲು ಸಹಾಯ ನೀಡಿತು. ಕೆಲವು ಕೃಷಿಕರು ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳ ಸೌಲಭ್ಯಗಳನ್ನು ಉಪಯೋಗಿಸಿಕೊಂಡಿದ್ದಾರೆ.

ಉತ್ತಮ ಸರಕಾರಿ ವೃತ್ತಿ ಮತ್ತು ಆಧುನಿಕ ವೃತ್ತಿಗಳಲ್ಲಿ ಇರುವವರ ಆದಾಯ ಮತ್ತು ಜೀವನ ಶೈಲಿಯನ್ನು ಗಮನಿಸಿ ಕೆಲವು ಲಂಬಾಣಿಗಳಲ್ಲಿ ಉನ್ನತ ಶಿಕ್ಷಣದ ಬಗ್ಗೆ ಆಸಕ್ತಿ ಹೆಚ್ಚಿತು. ಉತ್ತಮ ಜೀವನ ಶೈಲಿಯನ್ನು ಹೊಂದಿದ ಲಂಬಾಣೇತರ ಮುಂದುವರಿದವರು ಇವರುಗಳ ನಡುವೆ ವ್ಯತ್ಯಾಸ ೧೯೭೦ರವರೆಗೆ ಇಲ್ಲದೆ ಇದ್ದುದರ ಪರಿಣಾಮವಾಗಿ ಇದನ್ನು ಕ್ರಮಬದ್ಧವಾಗಿ ಸಾಧಿಸಲು ಸಾಧ್ಯವಾಗಲಿಲ್ಲ. ಇತ್ತೀಚಿನ ಸರಕಾರಿ ನೀತಿಗಳು ಇವರನ್ನು ಪರಿಶಿಷ್ಟ ಜಾತಿ (೧೯೭೭ರಲ್ಲಿ) ಎಂದು ಗುರುತಿಸಿರುವುದರಿಂದ ಸ್ವಲ್ಪಮಟ್ಟಿನ ಸರಕಾರಿ ಸೌಲಭ್ಯಗಳು, ಸರಕಾರಿ ನೌಕರಿಗಳು, ಶೈಕ್ಷಣಿಕ ಸೌಲಭ್ಯಗಳು, ಇತ್ಯಾದಿ ಅಭಿವೃದ್ಧಿ ಕಾರ್ಯಕ್ರಮಗಳ ಸೌಲಭ್ಯಗಳು ಇವರಿಗೆ ದೊರಕುತ್ತಿವೆ.

ಇವರಲ್ಲಿಯೇ ಇರುವ ಕೆಲವು ಸಾಂಪ್ರದಾಯಿಕ ವೃತ್ತಿಗಳಾದ ಕೂಲಿ ಕೆಲಸ, ಕರಕುಶಲತೆ, ಮುಂತಾದವುಗಳು ಲಂಬಾಣಿಗಳ ಹಿಂದಿನ ಜೀವನ ಶೈಲಿಯ ಮಾರ್ಗಗಳನ್ನು ಮತ್ತು ಮೌಲ್ಯಗಳನ್ನು ನಿಯಮಿತವಾಗಿ ಮುಂದುವರೆಸಲು ಮತ್ತು ಶಾಶ್ವತವಾಗಿ ಉಳಿಸಿಕೊಳ್ಳಲು ಪೂರಕವಾಗಿವೆ. ಇವರ ಕೆಲವರಿಗೆ ತಾಂಡಗಳನ್ನು ಬಿಡುವ ಆಸಕ್ತಿ ಇದ್ದರೂ ತಮ್ಮ ಸಾಂಪ್ರದಾಯಿಕ ಮೌಲ್ಯಗಳನ್ನು ಕೈಬಿಡುವ, ಇಲ್ಲವೇ ಸಾಂಪ್ರದಾಯಿಕ ಜೀವನ ಶೈಲಿಯ ನಡವಳಿಕೆಯ ಮಾದರಿಯನ್ನು ಬದಲಾಯಿಸಿಕೊಳ್ಳುವ ಆಸಕ್ತಿಯನ್ನು ಹೆಚ್ಚಾಗಿ ಹೊಂದಿಲ್ಲ. ಆದರೆ

ದೊಡ್ಡ ಪ್ರಮಾಣದ ಬದಲಾವಣೆಗಳಿಂದ ಈ ಸಮುದಾಯದ ಜನರು ಬದಲಾವಣೆಗೆ ಒಳಗಾಗುತ್ತಿದ್ದಾರೆ. ವಿಶೇಷವಾಗಿ ತಮ್ಮ ಸಂಸ್ಕೃತಿಯ ಕೆಲವು ಆದರ್ಶದ ಮೌಲ್ಯಗಳನ್ನು ಹಾಗೂ ತಮ್ಮ ಲೋಕದೃಷ್ಟಿಯ ಅನೇಕ ಅಂಶಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಈ ವಿಷಯಕ್ಕೆ ಪೂರಕವಾದಂತೆ ಇದನ್ನು ಉತ್ತಮವಾಗಿಸುವ ಕಾರ್ಯಕ್ರಮಗಳನ್ನು ನಿಯೋಜಿಸಬೇಕು. ಆದರೆ ಇಂದು ಇವರು ಭೂಮಿಯನ್ನು ಪಡೆದುಕೊಂಡು ಕೃಷಿ ಸಾಗುವಳಿ ಮಾಡುವುದು ಸಾಧ್ಯವಾಗುತ್ತಿಲ್ಲ.

## ಲಂಬಾಣಿಗಳ ಸಾಂಸ್ಕೃತಿಕ ಅನನ್ಯತೆ : ಕೆಲವು ದೃಷ್ಟಿಕೋನಗಳು

ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಕಾಯ್ದುಕೊಂಡು ಬರುವಲ್ಲಿ ಇರುವ ಸಮಸ್ಯೆಯ ಮಾದರಿಗಳು ಸಾಮಾಜಿಕ ಪ್ರಕ್ರಿಯೆಯ ಒಂದು ಪ್ರಮುಖ ಅಂಗ. ಸಮಾಜದಲ್ಲಿ ಬದಲಾವಣೆಗಳನ್ನು ಉಂಟುಮಾಡುವ ಒತ್ತಡಗಳು ಮತ್ತು ವಿಶೇಷವಾಗಿ ಇತರ ಜಾತಿ-ಗುಂಪುಗಳ ನಡುವೆ ಸಂಪರ್ಕಗಳು ಹೆಚ್ಚಳಗೊಂಡರೆ ಕೆಲವು ಮೂಲ ಅಂಶಗಳಲ್ಲಿ ಬದಲಾವಣೆ ಮಾಡಿಕೊಳ್ಳಬೇಕು. ಆದರೂ ಸಾಮಾಜಿಕ ಮತ್ತು ಸಾಂಸ್ಕೃತಿಕ ರಚನೆಯ ಅನನ್ಯತೆಯನ್ನು ಸುರಕ್ಷಿತವಾಗಿಡುವ ಪ್ರಯತ್ನ ಮಾಡಬೇಕು.

ಲಂಬಾಣಿಗಳು ಅವರ ಸಾಮಾಜಿಕ-ಸಾಂಸ್ಕೃತಿಕ ಅನನ್ಯತೆಯನ್ನು ಪ್ರಜ್ಞಾಪೂರ್ವಕವಾಗಿ ಕಾಯ್ದುಕೊಳ್ಳುವುದು ನಿಜವಾಗಿಯು ಸಮಸ್ಯೆ ಆಗಿದೆ. ಲಂಬಾಣಿಗಳು ತಮ್ಮ ವಾಸಸ್ಥಳವನ್ನು ರಾಜಸ್ಥಾನದ ಮೇವಾರದಿಂದ ದಕ್ಷಿಣ ಭಾರತಕ್ಕೆ ಬದಲಾವಣೆ ಮಾಡಿದ ಪರಿಣಾಮವಾಗಿ ವೃತ್ತಿಗಳನ್ನು ಅಗತ್ಯವಾಗಿ ಬದಲಾವಣೆ ಮಾಡಬೇಕಾಯಿತು. ದಕ್ಷಿಣದ ಮೇಲೆ ದಂಡೆತ್ತಿ ಬಂದ ದೆಹಲಿ ಆಡಳಿತಗಾರರು ಲಂಬಾಣಿಗಳ ಸೇವೆಯನ್ನು ಪಡೆದುಕೊಂಡರು. ನಂತರ ಅತಿಕ್ರಮಣಕಾರರ ಸೈನ್ಯಗಳು ಉತ್ತರಕ್ಕೆ ಮರಳಿದ ನಂತರವು ಕೆಲವು ಲಂಬಾಣಿಗಳು ಉತ್ತರಕ್ಕೆ ಮರಳಿ ಹೋಗದೆ, ಸಣ್ಣ ಪ್ರಮಾಣದ ಮಾರಾಟ ಮತ್ತು ಸಾಗಾಣಿಕೆಯನ್ನು ಸ್ವಯಂಪ್ರೇರಿತವಾಗಿ ಮಾಡತೊಡಗಿದರು. ತರುವಾಯ, ಇವರನ್ನು ಸರಕು ಸಾಗಾಣಿಕೆ ಮತ್ತು ಸಂಪರ್ಕ ವ್ಯವಸ್ಥೆಗೆ ಡೆಕ್ಕನ್ ಆಡಳಿತಗಾರರು ನೇಮಿಸಿಕೊಂಡರು. ಅವರ ಸಾಂಪ್ರದಾಯಿಕ ವೃತ್ತಿ ನಿಂತು ಹೋದುದರಿಂದ ಲಂಬಾಣಿಗಳು ತಮ್ಮ ವಸತಿ ಮಾದರಿಯನ್ನು ಅಲೆಮಾರಿತನದಿಂದ ಒಂದೇ ಸ್ಥಳದಲ್ಲಿ ನೆಲೆನಿಲ್ಲಿಸಲು ಪ್ರಾರಂಭಿಸಿದರು. ಇದರಿಂದ ಲಂಬಾಣಿ ಮತ್ತು ಲಂಬಾಣೇತರ ಸಮುದಾಯಗಳ ನಡುವೆ ಸಂಪರ್ಕ ಹಿಂದಿಗಿಂತ ಹೆಚ್ಚಾಗಿ ವಿಸ್ತರಣೆಗೊಂಡಿತು. ಈ ಐತಿಹಾಸಿಕ ಸಂಯೋಜನೆಯ ವಿಶ್ಲೇಷಣೆಗಳು ದಕ್ಷಿಣ ಭಾರತದ ಸಾಮಾಜಿಕ, ಸಾಂಸ್ಕೃತಿಕ ಪರಿಸರವು ಲಂಬಾಣಿಗಳ ನಡವಳಿಕೆಗಳು, ಸಂಪ್ರದಾಯಗಳು, ಆಚರಣೆಗಳು ಮತ್ತು ನಂಬಿಕೆಗಳ ಮೇಲೆ ಹೇರಳವಾದ ಪರಿಣಾಮವನ್ನು ಉಂಟುಮಾಡಿದೆ ಎಂದು ತಿಳಿಸುತ್ತದೆ. ಹೀಗಿದ್ದರೂ ಅವರು ತಮ್ಮ ಎಲ್ಲಾ ಸಾಂಸ್ಕೃತಿಕ ಅನನ್ಯತೆಯನ್ನು ಕಳೆದುಕೊಂಡಿಲ್ಲ. ಹಿಂದೆ ಅಲೆಮಾರಿ ಬುಡಕಟ್ಟು ಆಗಿದ್ದಾಗ ಅಥವಾ ಇತ್ತೀಚೆಗೆ ನೆಲೆನಿಂತು ರೈತಾಪಿ ಮತ್ತು ಕೂಲಿ-ಕೆಲಸಗಳನ್ನು ಅಳವಡಿಸಿಕೊಂಡ ಲಂಬಾಣಿಗಳು ತಮ್ಮ ಒಳಗೆ ವಿಭಜನೆ ಮಾಡಿಕೊಂಡು ಪ್ರತ್ಯೇಕವಾದ ಸಮುದಾಯವಾಗಿ ನೆಲೆಗೊಂಡಿದ್ದಾರೆ. ಇದು ಹೆಚ್ಚಿನ ಬುಡಕಟ್ಟು ಸಮುದಾಯಗಳಲ್ಲಿ ವಾಸ್ತವವೆನಿಸುತ್ತದೆ (ಸಕ್ಸೇನಾ, ೧೯೬೪ :೨೮೦ ಭಟ್ಟ್, ೧೯೮೭ : ೨೮೩).

ಅಧ್ಯಾಯ ೩ರಲ್ಲಿ ವಿಶ್ಲೇಷಿಸಿರುವಂತೆ, ಲಂಬಾಣಿಗಳು ಇಲ್ಲಿಯವರೆಗೆ ತಮ್ಮ ಜನಾಂಗೀಯ ಪ್ರತ್ಯೇಕತೆಯನ್ನು ವಿಶೇಷ ಕಾಳಜಿಯ ಮೂಲಕ ಜೋಪಾನವಾಗಿ ಕಾಪಾಡಿಕೊಂಡಿದ್ದಾರೆ. ಸಾಮಾಜಿಕ ಸಾಂಸ್ಕೃತಿಕ ಅನನ್ಯತೆಯನ್ನು ಅವರ ದೈಹಿಕ ಚಹರೆಯ ಗುಣಲಕ್ಷಣಗಳು, ನಡವಳಿಕೆಗಳು, ಆಚರಣೆಗಳು, ಮಹಿಳೆಯರ ಉಡುಗೆ, ಆಭರಣ, ವಿಶಿಷ್ಟ ಭಾಷೆ, ಸಮುದಾಯ ಐಕ್ಯತೆಯ ಪ್ರಬಲವಾದ ಮನೋಭಾವನೆ,

ಗೋತ್ರ ರಚನೆಯಲ್ಲಿನ ಅನನ್ಯತೆ ಮುಂತಾದವುಗಳಿಂದ ಗುರುತಿಸಬಹುದು. ಅವರ ಈ ಅನನ್ಯ ಸೂಚಕಗಳು ಲಂಬಾಣೇತರ ಜಾತಿಗಳ ಸಂಪರ್ಕದ ಜೊತೆಗಿನ ಆರ್ಥಿಕ ಸಂಬಂಧಗಳು ರಾಜಕೀಯ ಸಂಪರ್ಕಗಳು, ಧಾರ್ಮಿಕ ನಂಬಿಕೆಗಳು, ಪ್ರಾದೇಶಿಕ ಭಾಷೆಯಲ್ಲಿ (ಕನ್ನಡ)ನ ಆಲೋಚನಾ ವ್ಯವಸ್ಥೆಗಳು ಮಹತ್ವಾಕಾಂಕ್ಷೆಗಳಿಂದ ಅವರ ಹವ್ಯಾಸಗಳು ಸ್ವಲ್ಪ ಮಟ್ಟಿನ ಬದಲಾವಣೆ ಹೊಂದಿದ್ದರೂ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದಾರೆ.

ಕೆಲವು ಸಾಮಾಜಿಕ-ಸಾಂಸ್ಕೃತಿಕ ಪ್ರತ್ಯೇಕತೆಯಿಂದ ಲಂಬಾಣಿಗಳನ್ನು 'ಎನ್‌ಕ್ಲೇವ್' ಪರರಾಜ್ಯ ಸುತ್ತುಗಟ್ಟಿದ ದೇಶ (ಪಿಡಿಂಗ್‌ಟನ್, ೧೯೫೭ : ೧೫೬-೧೫೯) ಎಂದು ಕರೆಯಬಹುದು. ದಕ್ಷಿಣ ಭಾರತದ ಸಾಮಾಜಿಕ ಸನ್ನಿವೇಶದಲ್ಲಿ ಅವರು ಸಾಮಾಜಿಕ ಅಂಚಿನಲ್ಲಿರುವ ಸಮುದಾಯವಾಗಿದ್ದು, ಇತರ ಮುಂದುವರಿದ ಸಾಮಾಜಿಕ ಗುಂಪುಗಳ ಜೊತೆ ಅವಶ್ಯಕವಾಗಿ ಸಂಪರ್ಕವನ್ನು ಇಟ್ಟುಕೊಳ್ಳಬೇಕಾಗಿದೆ. ಈ ಸಾಮಾಜಿಕ ಪ್ರಕ್ರಿಯೆಯ ಒಳಗೆ, ಅವರು ಅನೇಕ ವರ್ಷಗಳಿಂದ ವಿಶಿಷ್ಟವಾದ ಕೆಲವು ಗುಣಲಕ್ಷಣಗಳನ್ನು ಕಳೆದುಕೊಳ್ಳುತ್ತಿದ್ದಾರೆ (ಈ ಪ್ರಕ್ರಿಯೆಯು ಹಿಂದೆ ನಿಧಾನವಾಗಿತ್ತು, ಆದರೆ ಇಂದು ಹೆಚ್ಚು ವೇಗವಾದ ಬದಲಾವಣೆಯಾಗುತ್ತಿದೆ). ಅನೇಕ ಗುಣಲಕ್ಷಣಗಳನ್ನು ಸ್ಥಳೀಯ ಪ್ರಬಲ ಜಾತಿ ಸಮಾಜದಿಂದ ಎರವಲಾಗಿ ಪಡೆದುಕೊಂಡು ಪ್ರಾದೇಶಿಕ ಐಕ್ಯತೆಯನ್ನು ಹೊಂದುತ್ತಿದ್ದಾರೆ. ಇದು ಏಕೆಂದರೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಅಂತರ್‌ಸಂಪರ್ಕ ಮತ್ತು ಅವಲಂಬನೆಯು ಇಂದು ಅವಶ್ಯಕವಾಗಿದೆ.

ಲಂಬಾಣಿಗಳು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಇರುವ ಅಂತರ್ ಸಾಂಸ್ಕೃತಿಕ ಪರಿಣಾಮಗಳು ಯಾವುವು (ನ್ಯಟೂರಲ್ ೧೯೬೪ : ೨೮೩) ? ಅವರು ಜನಾಂಗೀಯ ಗುರುತಿಸುವಿಕೆಗೆ ಆರು ಮಾನದಂಡಗಳನ್ನು ಪಟ್ಟಿಮಾಡಿದ್ದಾರೆ. ಅವುಗಳೆಂದರೆ - ವಿಶಿಷ್ಟ ಚಿನ್ಹೆ ಅಥವಾ ವಿಶೇಷ ಈ ಸಾಮಾಜಿಕ ಗುಣಲಕ್ಷಣದ ಹಂಚಿಕೆ, ಪ್ರಾದೇಶಿಕ ನಿಕಟತೆ, ರಾಜಕೀಯ ಸಂಘಟನೆ, ಭಾಷೆ, ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಹೊಂದಾಣಿಕೆ ಮತ್ತು ಸ್ಥಳೀಯ ಸಮುದಾಯ ರಚನೆಯಲ್ಲಿ-ಪ್ರಜಾಪ್ರಭುತ್ವ ಮಾದರಿಯ ಜನಾಂಗೀಯ ಅಸ್ತಿತ್ವದ ಸ್ಥಾನವನ್ನು ಪ್ರತ್ಯೇಕ ಜನಾಂಗೀಯ ಘಟಕವೆಂದು ಕರೆದುಕೊಳ್ಳುವ ಮೂಲಕ ಸ್ವಂತ ಪ್ರಾದೇಶಿಕ ಗಡಿ ಹೊಂದಿವೆ. ಲಂಬಾಣಿಗಳು ದೇಶದ ಎಲ್ಲಾ ಪ್ರದೇಶಗಳಲ್ಲಿ ಚದುರಿ ಹೋಗಿರುವುದರಿಂದ ಅವರಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಗಡಿಯ ಅಪರಿಮಿತತೆಯಿಂದ ಈ ಸಮಸ್ಯೆ ಹುಟ್ಟಿಕೊಳ್ಳಲಾರದು. ಅವರ ಅನನ್ಯತೆಯು ಪ್ರಾದೇಶಿಕ ಅಂತರದ ಗಡಿಗಳಿಗಿಂತ ಹೆಚ್ಚಾಗಿ ವಿಸ್ತೃತಗೊಂಡಿರುವುದು ಸಾಮಾಜಿಕ ಸಾಂಸ್ಕೃತಿಕ ವಿಶಿಷ್ಟ ಲಕ್ಷಣದಿಂದ. ಆದಾಗ್ಯೂ ಉಪಯುಕ್ತವಾದ ಮತ್ತು ಒಂದೇ ತರದ ಮಾನದಂಡಗಳು ಸಾಕಷ್ಟು ಇಲ್ಲದೆ ಇರುವ "ಸಾಂಸ್ಕೃತಿಕ ಸಂಬಂಧದ ನಿರ್ಣಾಯಕ ಘಟಕಗಳು" (ಮೋರ್‌ಮ್ಯಾನ್ ೧೯೬೫ : ೧೨೧೫), ಈ ದೃಷ್ಟಿಯಿಂದ ಪ್ರತಿಯೊಂದು ಸಹ-ಸಂಬಂಧವು ಸಂಪೂರ್ಣವಾಗಿಲ್ಲ. ನಿರ್ಣಾಯಕ ಘಟಕಗಳು ಒಂದು ಮಾನದಂಡದ ಜೊತೆ ಮತ್ತೊಂದನ್ನು ನಿರ್ಣಯಿಸುವ ಘಟಕಗಳು ಸಮೀಕರಿಸುವುದಿಲ್ಲ.

ಈ ದೃಷ್ಟಿಯಿಂದ ಜನಾಂಗೀಯ ಅಸ್ತಿತ್ವವನ್ನು ನಿರ್ಣಯಿಸುವ ಅಂಶಗಳಾದ "ಭಾಷೆ ಮತ್ತು ಸಾಂಸ್ಕೃತಿಕ ಆಚರಣೆಗಳ ಉದ್ದೇಶ ಮತ್ತು ಗುಣಲಕ್ಷಣಗಳನ್ನು ಉಪಯೋಗಿಸುವ ಮೂಲಕ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ಕಷ್ಟ (ಅದೇ: ೧೨೧೬). ಹೆಚ್ಚು ಸಾಮಿಪ್ಯದ ಮತ್ತು ಗುಣಲಕ್ಷಣಗಳನ್ನು ಉಪಯೋಗಿಸುವ ಮೂಲಕ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ಕಷ್ಟ ರೀತಿಯಲ್ಲಿ ಪುರಾತನ ಸಮಾಜದ ಕೆಲವು ಜನಾಂಗೀಯ ನಿರ್ಣಾಯಕಗಳನ್ನು ಹೊಂದಿದ್ದರೂ ಗುಂಪುಗಳಲ್ಲಿನ ವೈವಿಧ್ಯತೆ, ಸಂಕೀರ್ಣವಾದ ನಾಗರಿಕತೆಯಿಂದ ಇವುಗಳು ಅಗತ್ಯ ಅಥವಾ ಅವಶ್ಯಕವೆನಿಸಿಲ್ಲ. ಜ್ಯೂಸ್, ಲ್ಯೂ, ಥೈಲಾಂಡಿನಲ್ಲಿರುವ ಚೀನದ ಮೂಲ ನಿವಾಸಿಗಳು, ಭಾರತದಲ್ಲಿ ಇರುವ ಲಂಬಾಣಿಗಳು ಮತ್ತು ಇದೇ ರೀತಿಯ ಇತರ ಸಮುದಾಯಗಳ ಗುಂಪುಗಳು ಖಚಿತವಾದ ಸಾಮಾಜಿಕ ಗಡಿಗಳನ್ನು,

ವಿಶಿಷ್ಟವಾದ ಪ್ರಾದೇಶಿಕ ನಿಕಟತೆಯನ್ನು, ರಾಜ್ಯಗಳಲ್ಲಿ ಅಥವಾ ವಾರ್ಡ್‌ಗಳ ಮಾದರಿಯಲ್ಲಿ ಗುರುತಿಸಬಹುದು. ಈ ವಿಷಯದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ನಿರ್ಣಾಯಕ ಅಂಶಗಳು ಮೇಲಿನ ಅಂಶಗಳಿಗಿಂತ ಹೆಚ್ಚು ಮಹತ್ವವನ್ನು ಪಡೆದಿವೆ. ಆದಾಗ್ಯೂ ಕೆಲವು ನಿರ್ದಿಷ್ಟ ನಿಯಮಿತ ಸಂಖ್ಯೆಯ ವಿಶಿಷ್ಟ ಲಕ್ಷಣಗಳು ಮತ್ತು ಸಂಸ್ಥೆಗಳು ವಿಶೇಷವಾದ ಸೈದ್ಧಾಂತಿಕ ಪ್ರಾಮುಖ್ಯತೆ ಹೊಂದಿರುವಂತೆ ಕಂಡುಬರುತ್ತವೆ. ಏಕೆಂದರೆ ವಿಶೇಷ ಲಕ್ಷಣಗಳನ್ನು ಜನರು ಗುರುತಿಸಿ ಅವುಗಳನ್ನು ಅರ್ಥ ಮಾಡಿಕೊಂಡು ಅವರು ತಮ್ಮ ನೆರೆಹೊರೆಯವರು ಎಂದು ಗುರುತಿಸಿಕೊಳ್ಳುತ್ತಾರೆ. ಇಂತಹ ಪ್ರಯತ್ನಗಳು ಸಮಾಜದಲ್ಲಿ ಉದ್ದೇಶಪೂರ್ವಕ ಅನನ್ಯತೆಯ ಅನುಭವಗಳನ್ನು ಬಹಿರಂಗ ಪಡಿಸುತ್ತವೆ. ಇಂತಹ ಕೌಶಲ್ಯಗಳ ಮೂಲಕ ವ್ಯಕ್ತಿ-ವ್ಯಕ್ತಿಗಳ ನಡುವಿನ ಸಂಬಂಧ, ನಡವಳಿಕೆಯನ್ನು ವಿಶೇಷ ಚರ್ಚೆಗಳ ಮೂಲಕ ಗುರುತಿಸುವುದನ್ನು "ಸಬ್ಜೆಕ್ಟಿವ್ ಅಪ್ರೋಚ್" ಎಂದು ಕರೆಯಬಹುದು. ನಮ್ಮ ಆಸಕ್ತಿ ಜನರು ತಮ್ಮ ಸಾಮಾಜಿಕ ಪ್ರಪಂಚದ ತತ್ವಗಳು ತನ್ನದೇ ಆದ ವ್ಯವಸ್ಥೆಗಳಿಂದ ಸಮರ್ಥಿಸಿಕೊಳ್ಳುವ ಮಹತ್ವಗಳನ್ನು, ತಮ್ಮದೇ ಆದ ಆಯ್ಕೆಗಳ ಮೂಲಕ ಸ್ವಯಂಪ್ರೇರಿತವಾಗಿ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ.

ಅಧ್ಯಾಯ ೩-೩ರಲ್ಲಿ ವಿಶ್ಲೇಷಿಸಿರುವಂತೆ ಲಂಬಾಣಿಗಳ ದೃಷ್ಟಿಯಲ್ಲಿ ಸಾಮಾಜಿಕ ಪಂಗಡಗಳು ಮತ್ತು ಸಾಮಾಜಿಕ ಅನನ್ಯತೆ ಪ್ರಮುಖವಾಗಿ ಎರಡು: ಲಂಬಾಣಿ ಮತ್ತು ಲಂಬಾಣೇತರರು. ಆದರೂ ಎರಡನೆಯ ಪಂಗಡದಲ್ಲಿ ಅವರ ಅನೇಕ ಉಪ-ಪಂಗಡಗಳನ್ನು ಕಾಣಬಹುದು. ಲಂಬಾಣಿಗಳು ಪ್ರತ್ಯೇಕವಾದ ತಾಂಡಗಳಲ್ಲಿ ನೆಲೆಸುವ ಮೂಲಕ ತಮ್ಮನ್ನು ತಾವು ಪ್ರತ್ಯೇಕವಾಗಿ ಕೆಲವು ಶಾಶ್ವತವಾದ ವಿಶಿಷ್ಟ ಗುಣಲಕ್ಷಣಗಳ ಮೂಲಕ ಗುರುತಿಸಿಕೊಂಡಿದ್ದಾರೆ. ಅಧ್ಯಯನ ನಡೆಸಿದ ಪ್ರದೇಶದಲ್ಲಿ ಇರುವ ಲಂಬಾಣಿ ತಾಂಡಗಳು ಸಾಮಾನ್ಯವಾಗಿ ನೂರು ವರ್ಷಗಳಿಗಿಂತ ಹಳೆಯದಾಗಿವೆ. ಇವರಲ್ಲಿ ಕೆಲವರು ಶಾಶ್ವತವಾಗಿ ವಾಸಸ್ಥಾನ ಹೊಂದಿರುವ ಹಳ್ಳಿ ಮತ್ತು ಪಟ್ಟಣಗಳಲ್ಲಿಯು ವಾಸವಾಗಿದ್ದಾರೆ. ಈ ದ್ವಂದ್ವದಿಂದ ಎಲ್ಲಾ ಭಿನ್ನತೆಗಳು ಲಂಬಾಣಿ ಮತ್ತು ಲಂಬಾಣೇತರರ ನಡುವೆ ಇವೆ. ಹೆಚ್ಚು ಅನುಭವಾತ್ಮಕ ಸೂಕ್ಷ್ಮ ಸಮೀಕ್ಷೆಯಿಂದ ಎರಡು ವರ್ಗಗಳೂ ತನ್ನದೆ ಆದ ಪ್ರತ್ಯೇಕ ಹಾಗೂ ಪರಸ್ಪರ ವಿರೋಧವಾದ ಪ್ರವೃತ್ತಿಗಳನ್ನು ಅಥವಾ ವಿಶಿಷ್ಟ ಗುಣಲಕ್ಷಣಗಳನ್ನು ಹೊಂದಿವೆ.

ಲಂಬಾಣಿಗಳು ತಮ್ಮನ್ನು ತಾವು ಇತರರಿಂದ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವಾಗ ಅನುಸರಿಸುವ ಮಾರ್ಗಗಳು ಮತ್ತು ಸಂದರ್ಭಗಳು ಹೀಗಿವೆ. "ಲಂಬಾಣಿ" ಎಂಬ ಹೆಸರು ಹಾಗೂ ವಿಶಿಷ್ಟವಾದ ಗುಣಲಕ್ಷಣಗಳು, ಮಾನಸಿಕ ಮತ್ತು ದೈಹಿಕ ಶೌರ್ಯ, ದೈಹಿಕ ಚಹರೆಗಳು, ಹವ್ಯಾಸಗಳು ಮತ್ತು ದುರಭ್ಯಾಸಗಳು, ಪ್ರತ್ಯೇಕವಾದ ತಾಂಡಗಳಲ್ಲಿ ವಾಸವಾಗಿರುವುದು ಮತ್ತು ಗೋತ್ರ ವ್ಯವಸ್ಥೆ. ವಿಶೇಷ ಸಾಮಾಜಿಕ ನಿರ್ದೇಶಕಗಳಾದ ಭಾಷೆ, ಉಡುಗೆ-ತೊಡುಗೆ, ಆಭರಣಗಳು, ನಡವಳಿಕೆಗಳು, ಜೀವನ ಶೈಲಿ, ತಮ್ಮದೇ ಮಾದರಿಯಲ್ಲಿ ಸಾಂಪ್ರದಾಯಿಕ ಔಷಧಿಗಳ ಬಳಕೆ, ಇತ್ಯಾದಿ. ಎದ್ದು ಕಾಣುವ ವಿಶಿಷ್ಟ ಗುರುತು ಸೂಚಕಗಳಾದ ಭಾಷೆ, ಮಹಿಳೆಯರ ಉಡುಗೆ-ತೊಡುಗೆಗಳು, ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳಿಂದ ಸ್ವಲ್ಪಮಟ್ಟಿನ ಬದಲಾವಣೆಯನ್ನು ಹೊಂದಿತ್ತು. ಮೊದಲಿಗೆ ಲಂಬಾಣಿ ಮಹಿಳೆಯರು ಮಾರವಾಡಿ ಮಹಿಳೆಯರು ತೊಟ್ಟುಕೊಳ್ಳುವ ಮಾದರಿಯಲ್ಲಿ ಸೀರೆಗಳನ್ನು ಉಟ್ಟುಕೊಳ್ಳುತ್ತಿದ್ದರು. ನಂತರದಲ್ಲಿ ದಕ್ಷಿಣ ಭಾರತದ ಶೈಲಿಗೆ ಬದಲಾಯಿತು.

ಒಂದೇ ತೆರನಾದ ವಿಶಿಷ್ಟ ಗುಣಲಕ್ಷಣ ಹೊಂದಿದ ಸಾಂಸ್ಕೃತಿಕ, ಸಾಮಾಜಿಕ ರಚನೆಯಲ್ಲಿ ಸಾಂಕೇತಿಕ ಗುರುತುಗಳ (ಸಮಾರಂಭಗಳು, ಕಥೆಗಳು, ನಂಬಿಕೆಗಳು, ಬಂಧುತ್ವ ವ್ಯವಸ್ಥೆ, ಸಾಮಾಜಿಕ ಸಂಘಟನೆಯ ತತ್ವಗಳು, ಸಾಂಪ್ರದಾಯಿಕ ವೃತ್ತಿ, ದೇವತೆಗಳಿಗೆ ನೀಡುವ ಆದ್ಯತೆಗಳು, ಇತ್ಯಾದಿ ನೋಡಿ : ಅಧ್ಯಾಯ ೩-೧ ಮತ್ತು ೨) ಅಂತರ್‌ಕ್ರಿಯೆಗಳು ಕೂಡ ಜನಾಂಗೀಯ ಅನನ್ಯತೆಯನ್ನು ಗುರುತಿಸುವಾಗ

ಉಪಯೋಗಿಸುವ ಪ್ರಮುಖ ಸಾಮಾಜಿಕ ಸೂಚಕಗಳು. ಇದನ್ನು ಪ್ರಮುಖವಾಗಿ ಎರಡು ಆಲೋಚನೆ ಕ್ರಮಗಳ ಚೌಕಟ್ಟಿನ ಮೂಲಕ ಸಾಮಾಜಿಕ ಅಂತರ್‌ಕ್ರಿಯೆಯ ಸಂಬಂಧವನ್ನು ಉಲ್ಲೇಖಿಸಬಹುದು. ೧. ಲಂಬಾಣಿಗಳು ತಮ್ಮ ಒಳಗೆ ಸಮಾನವಾಗಿ ಬಂಜಾರಿ ಬಾಷೆಯನ್ನು ಉಪಯೋಗಿಸುವಾಗ ಜೋರಾಗಿ (ಏರು ಧ್ವನಿಯಲ್ಲಿ) ಮಾತನಾಡುವುದು ಅವರು ವಾಸವಾಗಿರುವುದಕ್ಕೆ ವಿಶಿಷ್ಟ ಚಿನ್ಹೆಯಂತಿರುತ್ತದೆ. ಲಂಬಾಣಿಗಳು ಲಂಬಾಣೇತರರ ಜೊತೆ ವ್ಯವಹರಿಸುವಾಗ ಮತ್ತು ಕನ್ನಡ ಭಾಷೆಯನ್ನು ಉಪಯೋಗಿಸುವಾಗ ಸಾಮಾನ್ಯ ಧ್ವನಿಯನ್ನು ಉಪಯೋಗಿಸುತ್ತಾರೆ. ಅಲ್ಲದೆ ಸ್ಥಳೀಯ ರೈತಾಪಿ ಜಾತಿಗಳ ಪದವಿನ್ಯಾಸವನ್ನು ಆಶ್ಚರ್ಯಕರವಾದ ರೀತಿಯಲ್ಲಿ ಬಳಸುತ್ತಾರೆ. ಜಾತಿಯ ಸಾಂಪ್ರದಾಯಿಕ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿ ಕೆಳಮಟ್ಟದ ಸ್ಥಾನ ಹೊಂದಿದ್ದೇವೆ ಎಂಬುದನ್ನು ಲಂಬಾಣಿಗಳು ಅತ್ಯಂತ ಸೂಕ್ಷ್ಮವಾಗಿ ಬಲ್ಲವರಾಗಿದ್ದಾರೆ. ಹೀಗಾಗಿ ಜನಾಂಗೀಯ ಅನನ್ಯತೆ, ಸಾಮಾಜಿಕ ಏಣಿ-ಶ್ರೇಣಿ ಮತ್ತು ಸಾಮಾಜಿಕ ಪ್ರತ್ಯೇಕತೆಯನ್ನು ಸಾಮಾಜಿಕ ಗುಂಪುಗಳ ನಡುವೆ ಉಂಟಾಗುವ ಸಾಮಾಜಿಕ ಅಂತರ್‌ಕ್ರಿಯೆ ಹಾಗೂ ಸಂಬಂಧಗಳ ಮೂಲಕ ನೋಡಬಹುದು.

ಈ ಕಾರಣದಿಂದ ಅನನ್ಯತೆಯನ್ನು ನಿರ್ದೇಶಿಸುವ ಹೆಚ್ಚಿನ ಸಾಮಾಜಿಕ ಸೂಚಕಗಳು ಸ್ವಲ್ಪ ಮಟ್ಟಿಗೆ ವೈಯಕ್ತಿಕ ಮತ್ತು ಗುಂಪುಗಳ ನಿಯಂತ್ರಣಕ್ಕೆ ಒಳಪಟ್ಟಿರುತ್ತವೆ. ಸಮುದಾಯದ ಸದಸ್ಯರು ಹಳೆಯ ಅನನ್ಯತೆಯನ್ನು ಇಟ್ಟುಕೊಳ್ಳುವ ಅಥವಾ ಹೊಸದೊಂದನ್ನು ಅಳವಡಿಸಿಕೊಳ್ಳುವ ಆಯ್ಕೆಯ ಸ್ವಾತಂತ್ರ್ಯವಿಲ್ಲದೆ ದ್ವಂದ್ವತೆಯಿಂದ ಅತ್ಯಲ್ಪ ಕಾಲದಲ್ಲಿ ಪ್ರಾದೇಶಿಕ ಮತ್ತು ಸಾಮಾಜಿಕ ಚಲನೆಯಿಂದ ಹೊರಗೆ ಉಳಿಯುತ್ತಾರೆ. ಇಂದು ಪಟ್ಟಣ ಪ್ರದೇಶಗಳಲ್ಲಿ ಇರುವ ಸುಶಿಕ್ಷಿತ ಲಂಬಾಣಿ ಕುಟುಂಬಗಳು ಕಣ್ಣಿಗೆ ಕಾಣುವ ಹಾಗೆ ಮುಂದುವರಿದ ಹಿಂದೂ ಜಾತಿ ಗುಂಪುಗಳ ಜೊತೆ ತಕ್ಕಮಟ್ಟಿಗೆ ಸೇರಿಕೊಂಡಿದ್ದಾರೆ. ಹಾಗೆಯೇ ಗ್ರಾಮೀಣ ಸಮುದಾಯಗಳ ಒಳಗೆ ಕೂಡ, ಸಾಂಪ್ರದಾಯಿಕ ಸಾಮಾಜಿಕ ನಿಯಂತ್ರಣಗಳ ಮಹತ್ವ ಕಡಿಮೆಯಾಗುತ್ತಿದೆ. ಅನೇಕ ಬಗೆಯ ಸ್ವಾತಂತ್ರ್ಯದಿಂದ ಜೀವನಾನುಭವ ಮಾರ್ಗಗಳು ಮಾರ್ಪಾಡುಗೊಳ್ಳುತ್ತಿವೆ. ಮರಿಯಮ್ಮನಹಳ್ಳಿ ತಾಂಡದ ಕೆಲವು ಮಹಿಳೆಯರು ಆಧುನಿಕ ಮಾದರಿಯ ಬಟ್ಟೆಗಳನ್ನು ಅಳವಡಿಸಿಕೊಂಡು ಹೆಚ್ಚು ಪಟ್ಟಣ ಮತ್ತು ನಗರ ಸಂಪರ್ಕ ಹೊಂದಿದ್ದರಿಂದ ತಮ್ಮಲ್ಲಿ ದೊರಕುವ ಆರ್ಥಿಕ ಅಂಶಗಳಿಂದ ಬದಲಾವಣೆಯ ಮಹತ್ವಾಕಾಂಕ್ಷೆಯನ್ನು ಹೊಂದಿದ್ದಾರೆ ಎಂಬುದು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಸಾಮಾಜಿಕ ಅನನ್ಯತೆಯನ್ನು ಗುರುತಿಸುವ ಹೊಸ ಮಾನದಂಡಗಳು ಪ್ರಮುಖವಾಗಿ ಅಧಿಕಾರ ಮತ್ತು ಸೌಲಭ್ಯಗಳು ದೊರಕುವಿಕೆಯಿಂದ ಎಂದು ವಿಶಾಲವಾಗಿ ಭಾವಿಸಿಕೊಳ್ಳಬಹುದು.

ನಾವು ಈಗ ಬದಲಾವಣೆಯಾಗಿರುವ ಲಂಬಾಣಿಗಳ ಅನನ್ಯತೆಯ ಕೆಲವು ಸಮಸ್ಯೆಗಳನ್ನು ನೋಡೋಣ. ನಮಗೆ ತಿಳಿದಿರುವಂತೆ ಅವರ ಸಮಾಜ ತಕ್ಕಮಟ್ಟಿನ ಬದಲಾವಣೆಗೆ ಒಳಗಾಗಿದೆ. ಪ್ರತಿಯೊಂದು ಸಮಾಜವೂ ಅದರ ಮಟ್ಟಿಗೆ ಅದು ಸಮಗ್ರತೆಯನ್ನು ಹೊಂದಿದೆ. ಅಲ್ಲದೆ ವಿಭಿನ್ನ ಸಮಾಜಗಳಲ್ಲಿ ವಿಭಿನ್ನ ಮಟ್ಟದ ಒಳ ಸಂಬಂಧಗಳು ಮತ್ತು ಅಂತರ್ ಅವಲಂಬನೆ ಇರುತ್ತದೆ (ರೆಡ್‌ಫೀಲ್ಡ್, ೧೯೫೬: ೮). ಹಲವಾರು ವರ್ಷಗಳಿಂದ ಲಂಬಾಣಿಗಳು ಸ್ಥಳೀಯ ಲಂಬಾಣೇತರ ಸಮುದಾಯಗಳ ಮೇಲೆ ಅವಲಂಬನೆಯಾಗುವುದನ್ನು ಹೆಚ್ಚು ಅಭಿವೃದ್ಧಿಪಡಿಸಿಕೊಂಡಿದ್ದಾರೆ. ಆದುದರಿಂದ ಅವರು ಪ್ರತ್ಯೇಕವಾಗಿ ಬೇರ್ಪಟ್ಟಿರುವ ದೃಷ್ಟಿಯನ್ನು ಹೊಂದಿಲ್ಲ. ನಾವು ಹೀಗೆ ಮಾಡುವಾಗ ಅವರ 'ಲಂಬಾಣಿಯತ್ವ' ವನ್ನು ನಿರ್ಣಯಿಸಿಕೊಳ್ಳಬೇಕು ಅಥವಾ ಹೇಗೆ ಲಂಬಾಣಿಗಳು ಆಧುನಿಕ ಭಾರತದಲ್ಲಿ ಇನ್ನು ಪ್ರತ್ಯೇಕವಾಗಿ ಬದುಕುತ್ತಿದ್ದಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ಅವರನ್ನು ಬುಡಕಟ್ಟು ಶಿಥಿಲೀಕರಣಗೊಂಡ ಸಮುದಾಯವಾಗಿ ಗುರುತಿಸಬೇಕು. ಈ ಉದ್ದೇಶಕ್ಕಾಗಿ ಲಂಬಾಣಿಗಳು ವಿಸ್ತಾರವಾದ ಸಾಮಾಜಿಕ ವ್ಯವಸ್ಥೆಯ ಒಂದು ಭಾಗ. ಇದು ನೆರೆಹೊರೆಯವರನ್ನು ಒಳಗೊಂಡಿರುತ್ತದೆ. ಅಲ್ಲದೇ ಇದು ಸಾಮಾಜಿಕ ಅಸ್ತಿತ್ವದ ದೃಷ್ಟಿಯಿಂದ ಅವಶ್ಯ ಕೂಡ. ಒಂದು ಸಂಪೂರ್ಣ ಅಸ್ತಿತ್ವ ಪಡೆದ ಗುಂಪಿನ

ಸದಸ್ಯರಾಗಲು ಮತ್ತು ಅದರ ಒಳಗೆ ಸಂಯೋಜಿಸಿಕೊಳ್ಳುವಾಗ, ಅವಲಂಬಿತರ ಅಸ್ತಿತ್ವವನ್ನು ಹೊರಹಾಕುವ 'ಹೊರಗಿನವರು' ಎಂಬ ಭಾವನೆ ಇರುತ್ತದೆ. ಇದು ಒಂದು ಸಮಾಜ ವ್ಯಾಖ್ಯಾನ ಮಾಡಲು ಪ್ರಮುಖವಾಗಿದೆ. ಸಾಮಾಜಿಕವಾಗಿಯೇ ಅಲ್ಲದೆ ಇದು ಸಾಂಸ್ಕೃತಿಕ ಗಡಿಗಳನ್ನು ನಿರ್ಣಯಿಸಲೂ ಮಿತಿಗಳನ್ನು ಕಲ್ಪಿಸುತ್ತದೆ. ಲಂಬಾಣಿಗಳು ಸಂಪೂರ್ಣ ಅಸ್ತಿತ್ವ ಪಡೆದ ಸ್ವಯಂ ಆಧಿಪತ್ಯದ ಅನನ್ಯತೆಯನ್ನು ಹೊಂದಿದ್ದಾರೆ ಎಂಬ ಭಾವನೆಯಿಂದ ಯಾವಾಗಲೂ ಗುರುತಿಸಲಾಗಿಲ್ಲ.

ಲಂಬಾಣಿಯೊಬ್ಬನು ತನ್ನನ್ನು ತಾನು ಶ್ರೇಷ್ಠ ಅಥವಾ ಸ್ವಚಾರಿತ್ರನೆಂದು ಕರೆದುಕೊಳ್ಳುವ ಜೊತೆಗೆ ಹಲವು ಜೀವನ ಶೈಲಿಯ ನಡವಳಿಕೆಗಳಲ್ಲಿ ಲಂಬಾಣಿಯತ್ವ ಕ್ರಮಬದ್ಧವೆಂದು ಭಾವಿಸುತ್ತಾನೆ. ಆದರೆ ಲಂಬಾಣಿಯತ್ವವು ಹಲವಾರು ವರ್ಷಗಳಿಂದ ತನಗೆ ತಾನೇ ಅತಿ ಸೂಕ್ಷ್ಮವಾದ ಬದಲಾವಣೆಗೆ ಒಳಗಾಗುತ್ತಿದೆ. ಕರ್ನಾಟಕದಲ್ಲಿ ಇರುವ ಲಂಬಾಣಿಗಳನ್ನು ರಾಜಸ್ಥಾನದ ಲಂಬಾಣಿಗಳ ಜೊತೆಗೆ ಹೋಲಿಸಿ ನೋಡಿದಾಗ ಇದು ಸ್ಪಷ್ಟವಾಗಿ ಕಂಡುಬರುತ್ತದೆ. ಇವರ ಭಾಷೆಯ ಬಗ್ಗೆ ಗ್ಯಾರಿಯರ್‌ಸನ್ ಅವರು "೧೯೦೭ಕ್ಕೆ ಮೊದಲು ಗುರುತಿಸಿರುವಂತೆ ಬಂಜಾರ ಭಾಷೆಯು ಒಂದು ಪರಿಶುದ್ಧ ಭಾಷೆ (ಬಹುಶಃ ಇದು ಬಂಜಾರಿ ಮನೆಗಳಲ್ಲಿ ಮಾತ್ರ ಕಂಡುಬಂದಿತ್ತು) ಎಂದು ಹೇಳುತ್ತಾರೆ. ಇಂದು ಈ ಭಾಷೆ ಎಲ್ಲಾ ಕಡೆಗಳಲ್ಲಿ ಮಿಶ್ರಣಗೊಂಡು (ಪ್ರಾದೇಶಿಕ ಭಾಷೆಗಳಿಂದ) ಅತ್ಯಂತ ಸಣ್ಣ ಗುಂಪಿನ ಜನರು ಮಾತನಾಡುವ ಭಾಷೆಯಾಗಿದೆ" (೧೯೭೮ : ೨೭೦).

ಈ ಕೆಳಗಿನವು ಅಲ್ಪ ಸ್ವಲ್ಪ ಮಾರ್ಪಡಿಸಿದ ಅನನ್ಯತೆ ಸೂಚಕ ಚಿನ್ಹೆಗಳಾಗಿವೆ : ದಕ್ಷಿಣ ಭಾರತದ ಲಂಬಾಣೇತರ ಮಹಿಳೆಯರು ಧರಿಸುತ್ತಿದ್ದ ಸೀರೆಯು ಲಂಬಾಣಿ ಮಹಿಳಾ ಪ್ರಪಂಚದಲ್ಲಿ ಭೇದಿಸಿಕೊಂಡಂತೆ ಸೇರಿಕೊಂಡಿದೆ. ಹಿಂದೂ ಮಹಿಳೆಯರು ಸಾಂಪ್ರದಾಯಿಕವಾಗಿ ಧರಿಸುವ ತಾಳಿಯನ್ನು ಸಾಂಪ್ರದಾಯಿಕ ಆಭರಣದಂತೆ ವಿವಾಹಿತ ಲಂಬಾಣಿ ಮಹಿಳೆಯರು ಕೂಡ ಇತ್ತೀಚೆಗೆ ಧರಿಸಿಕೊಳ್ಳುತ್ತಿದ್ದಾರೆ. ಲಂಬಾಣಿಗಳು ತಮ್ಮ ಜೊತೆಯಲ್ಲಿ ತಂದಂತಹ ಉತ್ತರ ಭಾರತದ ಬಂಧುತ್ವ ವ್ಯವಸ್ಥೆಯು ದಕ್ಷಿಣ ಭಾರತದ ಬಂಧುತ್ವ ಪದಗಳಿಂದ ಪ್ರಭಾವಿತಗೊಂಡಿದೆ. ಹಿಂದೂ ದೇವತೆಗಳನ್ನು ಮತ್ತು ಕೃಷಿ ಆಧಾರಿತ ಧಾರ್ಮಿಕ ಆಚರಣೆಗಳನ್ನು ಲಂಬಾಣಿಗಳು ಅಳವಡಿಸಿಕೊಂಡು ತಮ್ಮ ಸಾಂಪ್ರದಾಯಿಕ ಆಚರಣೆಯಂತೆ ಆಚರಿಸುತ್ತಿದ್ದಾರೆ.

ಲಂಬಾಣಿಗಳು ಲಂಬಾಣೇತರ ರೈತಾಪಿ ಸಾಮಾಜಿಕ ಸನ್ನಿವೇಶಗಳನ್ನು ಎದುರಿಸಿದ್ದು ಕೃಷಿ ಭೂಮಿಯನ್ನು ಪಡೆದುಕೊಂಡರು. ಕೃಷಿ ಸಾಗುವಳಿಯ ಜೊತೆಗಿನ ಸಂಬಂಧಗಳು ಇಂದು ನೆರೆಹೊರೆಯವರು ಒಟ್ಟಿಗೆ ಒಂದೇ ಸ್ಥಳದಲ್ಲಿ ನೆಲೆನಿಂತಿದ್ದು ಆಸಕ್ತಿಯುತವಾದ ವಿಷಯಗಳಾಗಿವೆ. ಇಂದು ಲಂಬಾಣಿಗಳು ಸ್ಥಳೀಯ ಆರ್ಥಿಕತೆಯ ಒಂದು ಭಾಗವಾಗಿದ್ದಾರೆ. ಇದು ಅವರನ್ನು ಆಗಿಂದಾಗೆ ನೆರೆಹೊರೆಯವರ ಜೊತೆ ಅಂತರ್ ಅವಲಂಬನೆಯಿಂದ ಬಂಧಿಸಿದೆ ಮತ್ತು ಸ್ವಲ್ಪಮಟ್ಟಿಗೆ ವೆಚ್ಚದಾಯಕವೂ ಆಗಿದೆ. ಈ ಎಲ್ಲಾ ಪ್ರಕ್ರಿಯೆಗಳ ಪರಿಣಾಮಗಳು ಲಂಬಾಣಿಗಳ ಸಾಮಾಜಿಕ ಜೀವನಶೈಲಿಯ ಮೇಲೆ ಉಂಟಾಗಿದ್ದರೂ ಲಂಬಾಣಿಗಳು ತಮ್ಮ ವಿಶಿಷ್ಟ ವಾತಾವರಣದ ಸಾಮಾಜಿಕ, ಜನಾಂಗೀಯ ಅನನ್ಯತೆಗಳನ್ನು ಉಳಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ. ಹೀಗಿದ್ದರೂ ಲಂಬಾಣಿಗಳು ಲಂಬಾಣೇತರ ರೈತಾಪಿ ಗುಂಪುಗಳ ಸಾಂಪ್ರದಾಯಿಕ ಆಚರಣೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ರೂಪಾಂತರ ಹೊಂದುತ್ತಿದ್ದಾರೆ.

ಇಂತಹ ಬದಲಾವಣೆಯ ಪ್ರಕ್ರಿಯೆಗಳು ವಿರಳವಾಗಿ ಯಾವ ಗುಂಪುಗಳಿಗೂ ತೊಂದರೆಯನ್ನು ಉಂಟುಮಾಡದ ಸಮತೋಲನದವುಗಳಾಗಿವೆ. ಲಂಬಾಣಿಗಳಂತಹ ಅಲ್ಪಸಂಖ್ಯಾತ ಸಮುದಾಯಗಳು ಯಾವಾಗಲೂ ಉತ್ತಮ ಮತ್ತು ಕೀಳು ಎಂದು ಪರಿಗಣಿಸಲಾದ ಸಾಂಸ್ಕೃತಿಕ ಅಂಶಗಳ ಆಯ್ಕೆಯಲ್ಲಿ ದ್ವಂದ್ವತೆಯನ್ನು ಹೊಂದಿರುತ್ತವೆ. ಇಂತಹ ಸಮುದಾಯಗಳು ತಮ್ಮ ಸಾಮಾಜಿಕ,

ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಬಲಿಷ್ಠವಾಗಿ ಇಟ್ಟುಕೊಳ್ಳುವ ಸಾಕಷ್ಟು ಸಾಧ್ಯತೆಗಳು ಹಿಂದೆ ಇದ್ದಿರಬಹುದು. ಇದೇ ಸಂದರ್ಭದಲ್ಲಿ ಹಲವು ಜನರು ತಮ್ಮ ಸಂಸ್ಕೃತಿಯನ್ನು ಸಮಗ್ರವಾಗಿ ಮತ್ತೊಂದು ಬೇರೆ ಜೀವನ ಶೈಲಿಯಲ್ಲಿ ಲೀನವಾಗುತ್ತಿದೆ ಎಂಬ ಮಾನಸಿಕ ಆತಂಕವನ್ನು ಹೊಂದಿದ್ದಾರೆ. ಇದರ ಪರಿಣಾಮವಾಗಿ ಲಂಬಾಣಿಗಳು ತಮ್ಮ ಸಾಮಾಜಿಕ, ಸಾಂಸ್ಕೃತಿಕ ಮತ್ತು ಜನಾಂಗೀಯ ಅನನ್ಯತೆಯನ್ನು ನಿಧಾನವಾಗಿ ಕಳಚಿಕೊಳ್ಳುತ್ತಿದ್ದಾರೆ. ಲಂಬಾಣಿಗಳ ಪರಿಸ್ಥಿತಿಯಲ್ಲಿ ಎರಡು (ಲಂಬಾಣಿ ಮತ್ತು ಲಂಬಾಣೇತರ) ಜೀವನ ಶೈಲಿಯಗಳಲ್ಲಿ ರಾಜಿಮಾಡಿಕೊಂಡಿರುವುದರಿಂದ ಸಮ್ಮಿಶ್ರಣ ಉಂಟಾಗಿದೆ. ಆದರೆ ಇಗು ಲಂಬಾಣಿಗಳ ಮೂಲ ಅನನ್ಯತೆಯ ರಚನೆಯಲ್ಲಿ ಯಾವುದನ್ನು ಕಳೆದುಕೊಂಡಿಲ್ಲ. ಪ್ರಾಯಶಃ ಪ್ರತಿಯೊಂದು ಸಂಪರ್ಕ ಮತ್ತು ಬದಲಾವಣೆಯ ಪರಿಸ್ಥಿತಿಗಳು ಸ್ವಯಂಪ್ರೇರಿತ ಪರಿಹಾರಗಳನ್ನು ಹುಡುಕಿಕೊಳ್ಳುತ್ತಿವೆ ಮತ್ತು ವಿಶಾಲವಾದ ವಿವಿಧ ಬಗೆಯ ಸಂಪರ್ಕದ ಪರಿಸ್ಥಿತಿಯಿಂದ ಉಂಟಾದ ಪರಿಣಾಮಗಳಿಗೆ ತಕ್ಕಂತಹ ಸಲಹೆಗಳನ್ನು ನೀಡುತ್ತವೆ. ಬೋಸ್ ಅವರು ಬಿರ್‌ಹೊ ಅಂತಹ ಸಮುದಾಯಗಳು ಬದಲಾವಣೆ ಪ್ರಕ್ರಿಯೆಗಳಿಗೆ ಹೆದರಿ ತಮ್ಮ ಮೂಲ ಅನನ್ಯತೆಯನ್ನು ಕಳಚಿಕೊಳ್ಳುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸಿ ಎರಡು ಕವಲು ಪ್ರಕ್ರಿಯೆಗಳನ್ನು ಸೂಚಿಸಿದ್ದಾರೆ. ''ಒಂದು ಇಷ್ಟವಿರಲಿ, ಇಲ್ಲದಿರಲಿ ತಂತ್ರಜ್ಞಾನ ಬದಲಾವಣೆಯಲ್ಲಿ ಹೆಚ್ಚಾಗಿ ಭಾಗವಹಿಸುವುದನ್ನು ಸೂಚಿಸಿದ್ದಾರೆ. ಮತ್ತೊಂದು, ಅವರ ಪ್ರತ್ಯೇಕ ಅನನ್ಯತೆಯನ್ನು ಪುನರ್‌ಸ್ಥಾಪಿಸುವ ಒಡಂಬಡಿಕೆ ಮಾಡಿಕೊಳ್ಳುವುದು ಮತ್ತು ತಮ್ಮ ಮೂಲ ಸಂಸ್ಕೃತಿಯಲ್ಲಿ ವಿಶೇಷ ಗುಣಲಕ್ಷಣದ ಅಂಶಗಳನ್ನು ದಿಟ್ಟತನದಿಂದ ಹುಡುಕುವುದು'' (೧೯೬೯ : ೨೨೮).

ಲಂಬಾಣಿಗಳ ಜೊತೆಗೆ ಸಾಮಾಜಿಕ ಅಂತರ್‌ಸಂಬಂಧ ಹೊಂದಿರುವ ಎರಡು ರೈತರ ಉಲ್ಲೇಖಗಳನ್ನು ಅಥವಾ ಆಕಾರಗಳನ್ನು ಈ ಅಧ್ಯಯನದಲ್ಲಿ ಉಪಯೋಗಿಸಿಕೊಳ್ಳಲಾಗಿದೆ (ಅಂತರ್ ಸಮುದಾಯದ ಮಟ್ಟದಲ್ಲಿ ಮತ್ತು ಒಂದೇ ಸಮುದಾಯದ ಒಳಗೆ). ಕೋಲಿನ್ ಟೊರ್ನ್ಬ್ ಬುಲ್ ಅವರು ಕಾಂಗೊ ರಾಷ್ಟ್ರದ ಇಟೋರಿ ಅರಣ್ಯದಲ್ಲಿ ಇರುವ ಪಿಗ್ಮಿ ತೀಕ್ಷ್ಣವಾದ ಮಹತ್ವಾಕಾಂಕ್ಷೆ ಹೊಂದಿದ ಎರಡು ಗುಂಪಿನ ಕೃಷಿಕರು ತಮ್ಮ ವಿರೋಧಾಭಾಸಗಳಿಂದ ಒಟ್ಟು, ಜೀವನವನ್ನು ಎರಡು ಗುಂಪುಗಳನ್ನಾಗಿ ಮಾಡಿಕೊಂಡಿದ್ದಾರೆ ಎಂದು ಗುರುತಿಸಿದ್ದಾರೆ. ಇಲ್ಲಿ ಅವರು ಮಹತ್ವಕಾಂಕ್ಷೆಗಳ ದ್ವಂದ್ವ ರೀತಿಯ ಪರಿಹಾರಗಳು, ಭಾಷಾ ಸಂಕೇತಗಳ ಉಪಯೋಗ ಮತ್ತು ಭಾಷೆಗೆ ಸೇರಿದ ಸನ್ನಿವೇಶಗಳಲ್ಲಿ ಸಾಂಸ್ಕೃತಿಕ ಅನನ್ಯತೆಯನ್ನು ನಿರ್ವಹಿಸುವ ಯಾಂತ್ರಿಕತೆಯನ್ನು ಉಲ್ಲೇಖಿಸಿದ್ದಾರೆ (೧೯೬೮ : ೨೭೬-೨೭೭). ಇದೇ ರೀತಿ ಲಂಬಾಣಿಗಳು ಯಶಸ್ವಿಯಾಗಿ ಹೆಚ್ಚಿನ ಸಂಪರ್ಕ ಹೊಂದುವ ಇತರ ಸಾಂಸ್ಕೃತಿಕ ಸನ್ನಿವೇಶವನ್ನು ಅಳವಡಿಸಿಕೊಂಡರೂ ತಮ್ಮದೇ ಮಾದರಿಯಲ್ಲಿ ಬದುಕಬಲ್ಲ ಮತ್ತು ಅಲ್ಪ ಸ್ವಲ್ಪ ಮಾನಸಿಕ ತೃಪ್ತಿಯನ್ನು ನೀಡುವ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ.

# References


Bhat, Chandrasekhar. "Social Adjustment and Change among the Wadders" in Misra, P.K. and K.C. Malhotra (eds.) ***Indian Nomads***, Calcutta : Anthropological Survey of India, 1982.

Berreman, G.D."Social Categories and Social Interaction in Urban India," ***American Anthropologist,*** Vol. 74, No. 3, 1972.

Bose, N.K.. "The Scheduled Castes and Tribes and Their Present Condition" (B.C. Mazumdar Memorial Lectures 1969: University of Calcutta), 1969.

Craufurd, Q. "***Sketches Chiefly relating to the History, Religion, Learning, and Manners of the Hindus,***" London: Printed for T.Cadale, in the Strand, Second Edn. Vol. II, 1742.

Dalton, George.(ed.). ***Economic Development and Social Change.*** New York : Natural History Press, 1971.

Dalton, George. ***Economic Anthropology and Development,*** New York : Basic Books I no., 1971.

Epstein, T.S. ***Economic Development and Social Change in South India,*** Bombay: Oxford University Press, 1962.

Fallers, L.A. "Are African Cultivators to be called Peasants?" ***Current Anthropology,*** Vol. II, 1961.

Fallers, L.A. " Equality, Modernity, and Democracy in the New States" in C. Geertz (ed.) ***Old Societies and New Status,*** New Delhi : Amerind Publishing Co., 1963.

Forde, C.D.(ed.). ***African Worlds*** (Studies in the Cosmological Ideas and Social Values of African Peoples) Oxford : Oxford University Press, 1960.

Geertz C. "The Dutch Colonial Period in Indonesia: Agricultural Involution" in George Dalton (ed.) ***Economic Development and Social Change,*** New York : Natural History Press, 1971.

Gough E.K. "Changing Kinship Usages in the Setting of Political and Economic Change among the Nayaras of Malabar," ***J.R.A.I.*** Vol.82, 71-88, 1952.

Grierson, G.A. ***Linguistic Survey of India.*** Vol. IX Part III (First Edn. 1907) Delhi : Motilal Banarasidas, Report, 1968.

Malhotra, S.P. & A.B. Bose. "Problems of Rehabilitation of Nomadic Banjaras of Western Rajasthan," ***Annals of Arid Zone,*** Vol.2, No. 1, 1963.

Moerman, Michael. "Ethnic Identification in a Complex Civilization..." ***American Anthropoligist,*** Vol. 67, No.5, Part I., 1965.

Merdock, G.P. ***Social Structure***, New York: The Free Press, (First Free press Paperback edn.), 1965.

Nadel, S.F. Malinowski on Magic and Religion in R. Firth (ed.) ***Man and Culture,*** London: Routledge & Kegan Paul (Routledge first Paperback; orig. 1957), 1970.

Naroll, Raoul. "On Ethnic Unit Classification" ***Current Anthropology,*** Vol. 5, 1964.

Orans, M. The Santal: ***A Tribe in Search of a Great Tradition***, Detroit: Wayne State University Press, 1965.

Piddington, R. ***Introduction to Social Anthropology***, Vol.II. London: Oliver and Boyd, 1957.

Pradhan, M.C. ***The Political System of the Jats of Northern India***,Bombay: Oxford University Press, 1966.

Redfield, R. ***A Village that Chose Progress. Chan Kom Revisited,*** Chicago : Chicago University Press, 1957.

Saxena, Rabir Prakash. ***Tribal Economy of Central India***, Calcutta: Firma K.L. Mukhopadhyaya, 1964.

Singer, Milton. "Text and Context in the Study of ContemporaryHinduism" in Brahma Vidya: ***The Adyar Library Bulletin***, Vol.XXV, 1961.

Spicer, E.H.(ed.). ***Perspectives in American Indian Culture Change,*** Chicago: The University of Chicago Press, 1961.

Spindler, G.D.(ed.). ***Being an Anthropologist: Field Work in Eleven Cultures,*** New York: Holt Rinehart & Row, 1970.

Turnbull, Colin M, "The Lesson of the Pigmies" in Samuel Rapport and Helen Wright (eds.) ***Anthropology***, New York: Washington Square Press, 1968.

# ಗ್ರಂಥ ಋಣ


ಕೃಷ್ಣಶರ್ಮ ಬೆಟಗೇರಿ. *ನಮ್ಮ ಸಂಸ್ಕೃತಿ ಪರಂಪರೆ*, ಸಮಾಜ ಪುಸ್ತಕಾಲಯ, ಧಾರವಾಡ: ೧೯೬೬.

ಖಂಡೋಬಾ. ಪಿ.ಕೆ. *ಕರ್ನಾಟಕದ ಲಂಬಾಣಿಗಳು; ಒಂದು ಸಾಂಸ್ಕೃತಿಕ ಅಧ್ಯಯನ*, ದಿ ತೇಜಸಿಂಗ್ ರಾಥೋಡ ಸ್ಮಾರಕ ಟ್ರಸ್ಟ್, ಗುಲ್ಬರ್ಗಾ: ೧೯೯೧.

ಚಿದಾನಂದ ಮೂರ್ತಿ, ಎಂ. *ಸಂಶೋಧನ ತರಂಗ*, ಭಾಗ-೨, ಬೆಂಗಳೂರು: ಬೆಂಗಳೂರು ವಿಶ್ವವಿದ್ಯಾಲಯ, ೧೯೭೦.

ನಾಯಕ ಡಿ.ಬಿ. *ಲಂಬಾಣಿ ಸಂಸ್ಕೃತಿ*, ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೪.

ಬಸವರಾಜ, ನೆಲ್ಲಿಸರ. *ಲಂಬಾಣಿಗರು*, ಬೆಂಗಳೂರು: ಐ.ಬಿ.ಎಚ್. ಪ್ರಕಾಶನ, ೧೯೮೦.

ಬಸವರಾಜ ನೆಲ್ಲಿಸರ. *ಲಂಬಾಣಿಗರು ಮತ್ತು ಬಗ್ಗರು*, ಮೈಸೂರು:ಯಕ್ಷ ಪ್ರಕಾಶನ, ೧೯೭೭.

ಬೆನಕನಹಳ್ಳಿ ಜಿ. ನಾಯಕ. *ಲಂಬಾಣಿಗರ ಜನಪದ ಗೀತೆಗಳು*, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೧೯೮೧.

ಸಣ್ಣರಾಮ, *ಲಂಬಾಣಿ ಗಾದೆಗಳು*, ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್, ೧೯೮೨.

ಸಣ್ಣರಾಮ, *ಲಂಬಾಣಿ ಸಂಸ್ಕೃತಿ*, ಶಿವಮೊಗ್ಗ: ಮಲೆನಾಡು ಪ್ರಿಂಟರ್ಸ್ ಮತ್ತು ಪ್ರಕಾಶಕರು, ೧೯೯೯.

# Bibliography

Aiyer, C.P.R.*Foreword' to Chamanlal's Gypsies* (Forgotten Children of India), New-Delhi; Publications Division, Government of India, 1962.

Bhat, Chandrasekhar. "Social Adjustment and Change among the Wadders" in Misra, P.K. and K.C. Malhotra (eds.) ***Indian Nomads***, Calcutta : Anthropological Survey of India, 1982.

Bailey, F.G. ***Caste and the Economic Frontier,*** Bombay: Oxford University Press, 1958.

Bailey, F.G. ***Tribe, Caste and the Nation***, Bombay: Oxford University Press, 1960.

Belshaw, C.S. ***Traditional Exchange and Modern Markets***, Englewood Cliffs:Prentice-Hall, 1965

Berreman, G.D."Social Categories and Social Interaction in Urban India," ***American Anthropologist,*** Vol. 74, No. 3, 1972.

Bose, N.K. "***The Scheduled Castes and Tribes and Their Present Condition*** (B.C. Mazumdar Memorial Lectures 1969: University of Calcutta), 1969.

Bottomore, T.B. (Newly Translated by) Karl Marx: ***Selected Writings in Socialogy & Social Philosophy,*** London : 1964.

Briggs, John. "An Account of the Origin, History and Manners ... of Banjaras" in ***Transactions of the Literary Society of Bombay,*** Vol. I, Bombay: Education Society Press (Orig. edn. 1819), 1877.

Buchanan, Francis.***A Journey from Madras through the Country of Mysore, Canara and Malabar,*** Vols. II and III: London: W.Blumer and Co., 1807.

Campbell, James M. ***Bombay Gazetteer- Karnataka (Kanara),*** Bombay: Government of Bombay Presidency, 1883.

Campbell, James M , ***Bombay Gazetteer- Karnataka (Dharwar),*** Bombay: Government of Bombay Presidency, 1884.

Campbell, James M. ***Bombay Gazetteer- Karnataka (Bijapur),*** Bombay: Government of Bombay Presidency, 1884.

Chamanlal, B. ***Gypsies (Forgotten Children of India),*** New-Delhi : Publications Division, Government of India, 1962.

Committe on Plan Projects (nd.): ***Report of the Study Team on Tribal Development Programmes (Mysore),*** New Delhi: Planning Commission, Government of India,

Craufurd, Q. "*Sketches Chiefly relating to the History, Religion, Learning, and Manners of the Hindus,*" London: Printed for T.Cadale, in the Strand, Second Edn. Vol. II.,1742.

Dalton, George."Economic Theory and Primitive Society", *American Anthropologist, Vol 63,* 1961.

Dalton, George.(ed.). *Tribal and Peasant Economics,* New York : Natural History Press, 1967.

Dalton, George.(ed.). *Economic Development and Social Change*. New York : Natural History Press, 1971.

Dalton, George. *Economic Anthropology and Development,* New York : Basic Books, 1971.

Dubois,A,J.A. *Hindu Manners, Customs and Ceremonies,* Oxford : Clarendon Press, 1936.

Eggan, Fred. " Social Anthropology: Methods and Results," in Eggan (ed.) *Social Anthropology of North American Tribes,* Chicago: University of Chicago Press, 1955.

Enthoven, R.E. *The Tribes and Castes of Bombay*, Vol. II Bombay : Government of Bombay Presidency, 1922.

Epstein, T.S. *Economic Development and Social Change in South India*, Bombay: Oxford University Press, 1962.

Epstein, T.S. "Productive Efficiency and Customary Systems of Rewards in Rural South India" in R. Firth (ed.) *Themes in Economic Anthropology,* London: Tavistock Publications, 1967.

Evans-Pritchard, E.E. "Kinship and the Local Community among the Nuer" in A.R. Radcliffe-Brown and D.Forde (ed.) *African Systems of Kinship and Marriage*, Oxford University Press, 1950.

Fallers,L.A. " Are African Cultivators to be called Peasants?" *Current Anthropology,* Vol. II, 1961.

Fallers,L.A." *Equality, Modernity, and Democracy in the New States"* in C. Geertz (ed.) Old Societies and New Status, New Delhi : Amerind Publishing Co. 1963.

Ferishta, M.K. *Tarikh-e-Khan, Jahan Lodi-e-Miamatulla* (A History of the Rise and Progress of Mohammedan Faith in the Countryof Hind) Translated from Persian into English (in 4 Vols.) by John Briggs, Calcutta: R.Cambrey and Co. 1909,1912.

Feuchtwang,S. Investigating Religion", in *Marxist Analysis and Social Anthropology London :* ASA Studies, 1975.

Firth, Raymond. *Malaya Fishermen: Their Peasant Economy,* London: Kegan Paul, Trench, Trubner and Co., 1946.

Firth, Raymond. *Economics of the Newzealand Maori,* Wellington : R.E. Owen, 1959.

Firth, Raymond. *Social Change in Tikopia: Restudy of a Polynesian Community after a generation,* London: Allen & Unwin, 1959.

Firth, Raymond. "Problem and Assumption in an Anthropological Study of Religion". *J.R.A.I.* Vol. 89: 129-148, 1959.

Firth, Raymond. *Primitive Polynesian Economy, London*: Routledge & Kegan Paul (Orig. edn. 1939), 1965.

Firth, Raymond. "The Sceptical Anthropologist? Social Anthropology and Marxist Views on Society", in *Marxist Analyses and Social Anthropology, London :* ASA Studies, 1975.

Firth, Raymond.(ed). *Themes in Economic Anthropology* (A.S.A.monograph No. 6). London : Tavistock, 1967.

Firth, Raymond. & B.S. Yamey (eds), *Capital, Savings and Credit in Peasant Societies,* London: Allen and Unwin, 1964.

Forde, C.D. *Habitat, Economy, and Society*, London: Mathuen, 1934.

Forde, C.D.(ed.). *African Worlds* (Studies in the Cosmological Ideas and Social Values of African Peoples) Oxford : Oxford Unuiversity Press, 1960.

Forde, C.D. & M. Douglas. *Primitive Economics* in H.L. Shapiro (ed.) Man, Culture, and Society, Oxford : Oxford Unuiversity Press, 1956.

Fortes, M. *The Dynamics of Clanship among the Tallens.* Oxford : Oxford Unuiversity Press, 1945.

Foster,G.M. "The Dyadic Contract: a Model for the Social Structure of a Mexican Peasant Village" in Potter, et. al. (eds.) *Peasant Society* (A Reader), Boston: Little Brown & Co., 1967.

Furer-Haimendorf, Christoph Von. *The Gonds of Andhra Pradesh*,New Delhi: Vikas, 1979.

Gautam, Mohan K. "Itinerant Camping Life to Settled Basti Alliances: The Mechanism of Ethnic Maintenance and Social Organization of the Ranjars of North India" *Eastern Anthropologist,* 36-1, 1983.

Geertz C. "The Dutch Colonial Period in Indonesia: Agricultural Involution" in George Dalton (ed.) ***Economic Development and Social Change,*** New York : Natural History Press, 1971.

Glazer, Nathan & Daniel P. Moyninhan, ***Beyond the Melting Pot***. Cambridge (Mass) : The M.I.T. Press Sec. edn. 4th ptg., 1970.

Grierson, G.A.***Linguistic Survey of India.*** Vol. IX Part III (First Edn. 1907) Delhi : Motilal Banarasidas, Report, 1968.

Gunda, Bella. "The Cultural Ecology and Service Nomads," ***Eastern Anthropologist,*** 34 - 4, 1981.

Haldipur. S.G. ***Distribution of ABO Gena Frequency among the Lambani,*** M.Sc. Dissertation, Karnataka University, Dharwad, 1983.

Herskovits M.J. ***Economic Anthropology***, New York : Norton & Co. (The Norton Library edn.) 1965.

Holmberg A.R. "***Nomads of the Long Bow. The Siriono of Eastern Bolivia*** (Simthsonian Institution, Institute of Social Anthropology, Publication No. 10), Chicago : The University of Chicago Press, 1960.

Hsu, Francis, L.K. "Dominant Kinship Relationship". ***American Anthropologist,*** Vol. 67, No. 3, -1965.

Ibbetson, D.C. ***Report of the Census of Punjab 1881***, 1883.

Jay, Edward J. "The Anthropologists and Tribal Welfare Hill Maria - A Case Study" in L.P. Vidyarthi (ed.) ***Anthropology and Tribal Welfare in India*** (Special Issue of the ***Journal of Social Research***, Ranchi), 1959.

Keesing, R.M. ***New Perspectives in Anthropology***, New York : Holt, Rinehart & Winston, 1971.

Lange, C.H. "The Role of Economics in Cochiti Pueblo Culture Change" in ***American Anthropologist,*** Vol.55, No.5. 674-94, 1953.

LeClaire, E.E. "Economic Theory and Economic Anthropology", ***American Anthropologist,*** Vol. 64, 1962.

LeClaire, E.E. & H.K. Schheider, ***Economic Anthropology (A Reading in Theory and Analysis),*** New York - Holt, 1968.

Lewis, Oscar. ***Life in a Maxican Village. Tepotzlan Restudied,*** Urbana : University of Illinois Press, 1951.

Lewis, Oscar. ***Five Families: Mexican Case Studies in the Culture of Poverty,*** New York : New American Library, 1959

Lewis, Oscar. Pedro Mertinez, ***Mexican Peasant and His Family***, 1964.

Lewis, Oscar, "***Tepoztlan (Village in Maxico)," in Cultural Anthropology*** New York : Holt, Rinehart & Winston, 1967.

Lewis, Oscar, ***La Vida, Peurto Rican Family in the Culture of Poverty,*** New York : Wintage Books, 1968.

Lopreato, ***How would you like to be a peasant*** ? in Potter et. al. (eds.)Peasant Society (A Reader),Boston: Little Brown and Co., 1967.

Lurie, Nancy "Culture Change" in James A. Cliffton (ed). ***Introduction to Cultural Anthropology*** (Essays in the Scope & Methods of the Science of Man), Boston : Houghton Mifflin, 1968.

Malhotra,S.P. & A.B. Bose "Problems of Rehabilitation of Nomadic Banjaras of Western Rajasthan," ***Annals of Arid Zone***, Vol.2, No. 1, 1963.

Malinowski, B. "***Argonauts of the Western Pacific,"*** London : Routledge and Kegan Paul, 1922.

Malinowski, B. "***A Scientific Theory of Culture***,". Chapel Hill: NorthCarolina University Press.

Marriott, Mckim. "***Little Communities in an Indigenous Civilization"*** in Marriott (ed.) Village India, Chicago: University of Chicago Press, 1955.

Mead, Margaret. "***New Lives for Old: Trasformation,*** Manus 1928-53," London : Gollancz, 1956.

Mead, P.J. and G.L. MacGregor. ***Census of India***- 1911, (Bombay), Bombay: Government of Bombay, 1912.

Moerman, Michael. "Ethnic Identification in a Complex Civilization..." ***American Anthropoligist,*** Vol. 67, No.5, Part I, 1965.

Montagu, Ashley. ***Man: His First Million Years,*** New York: TheNew American Library, Third ptg., 1960.

Merdock, G.P. ***Social Structure,*** New York: The Free Press, (First Free press Paperback edn.), 1965.

Nadel, S.F. Malinowski on Magic and Religion" in R. Firth (ed.) ***Man and Culture,*** London: Routledge & Kegan Paul (Routledge first Paperback; orig. 1957), 1970.

Nanjundayya, H.V.& L.K. Ananthakrishna Iyer. ***The Mysore Tribes and Castes, Vol.II,*** Mysore: University of Mysore Press, 1928.

Narasimhaiyengar,V.N. ***Census of India- 1891,*** Vol. XXV, Mysore Part I-Report, Bangalore: Superintendent, Printing and Stationery, Government of Mysore, 1893.

Naroll, Raoul."On Ethnic Unit Classification" ***Current Anthropology,*** Vol. 5, 1964.

Nash, Manning. ***Primitive and Peasant Economic Systems,*** San Francisco: Chandler, 1966.

Neale, Walter, C."Reciprocity and Redistribution" in P.B. Hammond (ed.) ***Cultural and Social Anthropology,*** New York: Macmillan & Co., Seventh Prtg, 1968.

Orans, M. The Santal: ***A Tribe in Search of a Great Tradition,*** Detroit: Wayne State University Press, 1965.

Otterbein,K.F. ***Comparative Cultural Analysis (An Introduction to Anthropology)*** New York: Holt, Rinehart and Winston, 1972.

Piddington,R. ***Introduction to Social Anthropology,*** Vol.II. London: Oliver and Boyd, 1957.

Polanyi, Karl. "The Economy as the instituted process" in Polanyi et.al. (eds.) ***Trade and Markets in Early Empires,*** Glencoe: Free Press, 1957.

Pradhan, M.C.***The Political System of the Jats of Northern India,*** Bombay: Oxford University Press, 1966.

Radcliffe-Brown, A.R. ***Structure and Function in Primitive Society***, London: The English Language Book Society and Cohen & West Ltd., 1964.

Rao, P.K.M. "The Mythological Origin and Clan System of the Banjaras of Hyderabad," ***Man in India,*** Vol.XXX, No.1, 1950.

Redfield, R. ***Folk Culture of Yucatan***, Chicago: Chicago University Press, 1941.

Redfield, R. ***A Village that Chose Progress*** : Chan Kom Revisited, Chicago : Chicago University Press, 1957.

Redfield, R. ***The Primitive World and Its Transformation*** Ithaca, New York: Cornel University Press (Cornel Paperbacks, tenth ptg., orig.1953.), 1968.

Risley,H. ***The People of India,*** London:W.and Thacker & Co., 1915.

Row,T.A. ***Census of India 1901 : Mysore,*** Bangalore: Government of Mysore, 1903.

Ruhela, Satyapal. ***The Gadulia Lohars of Rajasthan,*** New Delhi: Impex., 1970.

Russel, R.V. & Hiralal. ***The Tribes and Castes of Central Provinces of India*** (in four vols.), Vol. II, London: Macmillan & Co, 1916

Sahlins, Marshall,D. "Tribal Economics" in George Dalton (ed.) ***Economic Development and Social Change,*** New York: Natural History Press, 1971.

Saxena, Rabir Prakash. ***Tribal Economy of Central India,*** Calcutta: Firma K.L. Mukhopadhyaya, 1964.

Shanin,T. "Peasantry: Delineation of Concept and a field of Study"***European Journal of Sociology,*** Vol. XII, 1971.

Sharp, Louriston. "Steel Axes for Stone Age Australians" ***Human Organisation,*** Vol.2, 1952.

"Sher", Sher Singh. ***The Sikligars of Punjab (A Gypsy Tribe),*** Delhi: Sterling Publishers, 1966.

Shyama Rao, M. ***Modern Mysore, Bangalore:*** Higgin Bothams, 1955.

Siddiqui, M.K.A. "Peasantization of the Banjara in a village in Adilabad," Paper presented at the Seminar on Agrarian Situation in India organized by the Southern Regional Office, A.S.I.Mysore, 1982.

Singer, Milton. "Cultural Pattern of Indian Civilization," ***The Far Eastern Quarterly,*** Vol. XV, No.1, 1955.

Singer, Milton. "Text and Context in the Study of Contemporary Hinduism" in Brahma Vidya: ***The Adyar Library Bulletin,*** Vol.XXV, 1961.

Slotkin,J.S. "***Social Anthropology***," New York: Macmillan, 1950.

Spicer, E.H.(ed.). "***Perspectives in American Indian Culture Change,***" Chicago: The University of Chicago Press, 1961.

Spindler, G.D.(ed.). "***Being an Anthropologist: Field Work in Eleven Cultures,***" New York: Holt Rinehart & Row, 1970.

Spoehr, A. "Changing Kinship Systems (**Anthropological Series,** ***Field Mus.Nat. Hist.*** XXXIII," No.1- 4), 1947.

Swanson, G.E. "***The Birth of the Gods,"*** Ann Arbor: The University of Michigan Press, 1960.

Tax, Sol. "***Penny Capitalism: 'A Guatemalan Indian Economy,"*** Washington D.C. : U.S. Government Print. Office, 1953.

Terry, E. "Classes and Class Consciousness in the Abron Kingdom of Gyaman", in ***Marxist Analyses and Social Anthropology,*** London : Malaby Press, 1975.

Thurston, Edgar. "***Ethnographic Notes in Southern India,"*** Madras: Government Press (Second Issue), 1907.

Thurston, Edgar. "***Castes and Tribes of Southern India,"*** Vol. IV, Madras : Government of Madras Press, 1909.

Titiev, Mischa. "A Fresh approach to the Problem of Magic and Religion" in Peter B.Hammand (ed.) ***Cultural and Social Anthropology,*** New York: Collier and MacMillan Co., 1968.

Turnbull, Colin M. "***The Lesson of the Pigmies" in Samuel Rapport and Helen Wright (eds.) Anthropology,*** New York: Washington Square Press, 1968.

Vogt, E.Z. "On the Concept of Structure and Process in Cultural Anthropology," ***American Anthropologist:*** Vol. 62, 1960.

Weber, Max. ***The Theory of Economic and Social Organization*** (Tr.by A.M. Henderson and Talcott Parsons). Glencoe: Free Press, 2nd Edn, 1947.

Wolf, E.R. ***Peasants.*** Englewood Cliffs: Prentice Hall, 1966.